ಸ್ವಂತ ಉದ್ಯೋಗ
ಮಾಡುವವರಿಗಾಗಿ
ಆರ್ಥಿಕ ಸಹಾಯ
ಯೋಜನೆಯ
ಪ್ರಕಟಣೆ

# ಈಗ, ಸ್ವತಃ ಉದ್ಯೋಗಮಾಡುವ ಜನರು ಬ್ಯಾಂಕ್ ಆಫ್ ಇಂಡಿಯಾದೊಂದಿಗೆ ಒಂದಾಗುವರು !

ವಿವಿಧ ಕ್ಷೇತ್ರಗಳಲ್ಲಿ ಸ್ವತಂತ್ರ ಉದ್ಯೋಗ ಮಾಡುವವರಿಗಾಗಿ ಬ್ಯಾಂಕ್ ಆಫ್ ಇಂಡಿಯಾ ಹೆಚ್ಚಿನ ಆರ್ಥಿಕ ಸಹಾಯವನ್ನು ನೀಡುವ ಯೋಜನೆ ಒಳ್ಳೆ ಉಪಯುಕ್ತವಾಗಿದೆ.
ಶಿಲ್ಪಿ, ಕಲಾಕಾರ, ತಂತ್ರಜ್ಞ, ಸಿಂಪಿ, ಬಡಿಗರು, ಧೋಬಿ, ಹೇರ ಡ್ರೆಸ್ಸರ್ಸ, ಫೋಟೋಗ್ರಾಫರರು, ಫ್ರೇಮು ಮೇಕರರು, ಶೇಕರರು, ಅಫ್ಪಿಸಿಯನ್ ರು ಈ ಯೋಜನೆಯ ಉಪಯೋಗ ಪಡೆಯಬಲ್ಲರು.

■ ತಮ್ಮ ನಿಪುಣತೆಯಿಂದ ತಮ್ಮ ಉದ್ಯೋಗವನ್ನು ಬೆಳೆಸಲು, ಸಮಯವಿದ್ದು ಹಣದ ಕೊರತೆಯಿಂದ ಅಸಫಲರಾದವರಿಗೆ ಸಹಾಯ ಸಲ್ಲಿಸುವದೇ ಈ ಯೋಜನೆಯ ಉದ್ದೇಶವಾಗಿದೆ.

**ಆಕರ್ಷಕ ಶರ್ತುಗಳು :** ಸಾಲದ ಮುಂಪಾವತಿ ೩ ವರ್ಷಗಳಿಂದ ೫ ವರ್ಷಗಳ ವರೆಗೆ ಸುಲಭ ಕಂತುಗಳಲ್ಲಿ. ವಿವರಗಳಿಗೆ ನಿಮ್ಮ ಸಮೀಪದ ಶಾಖೆಯನ್ನು ಸಂದರ್ಶಿಸಿರಿ.








# ಕ್ಲಿಕ್ ಅಂಡ್ ಕಂಪನಿ

ಲೈನ್, ಹಾಫ್‌ಟೋನ್ ಮತ್ತು ಟ್ರೈಕಲರ್

ಬ್ಲಾಕುಗಳ ತಯಾರಕರು.

೨, ರಸಿಡನ್ಸಿ ರಸ್ತೆ, ಬೆಂಗಳೂರು-೨೫




ನಮ್ಮ ಎಲ್ಲಾ

ಗ್ರಾಹಕರಿಗೂ,

ಹಿತೈಷಿಗಳಿಗೂ

ದೀಪಾವಳಿಯ

ಹಾರ್ದಿಕ

ಶುಭಾಶಯಗಳು



# KLIC & CO

PHONE: 73307

2. RESIDENCY ROAD

BANGALORE-25

# INDEX TO ADVERTISERS

## INDEX TO ADVERTISERS







# ಪರಿವಿಡಿ



## ಕನ್ನಡ ಕಥೆಗಳು :



## ಒಲವೆ ನಮ್ಮ ಬದುಕು



## ಭಾರತೀಯ ಇತರ ಭಾಷಾ ಕಥೆಗಳು



## ಬೆಡಗಿನ ಲೋಕದಲ್ಲಿ

# ಕರ್ಮವೀರ ದೀಪಾವಳಿ ಲೇಖಕರ ಬಳಗ

## ಪಿ. ಬಿ. ದೇಸಾಯಿ



ಪಾಂಡುರಂಗ ಭೀಮರಾವ ದೇಸಾಯಿಯವರು ಎಂ. ಎ. ಡಿ. ಲಿಟ್ ಪದವೀಧರರು ಕರ್ನಾಟಕ ವಿಶ್ವ ವಿದ್ಯಾಲಯದಲ್ಲಿ ಇತಿಹಾಸದ ಪ್ರಾಧ್ಯಾಪಕರಾಗಿರುವ ಅವರು ಕರ್ನಾಟಕ ಇತಿಹಾಸದ ಬಗೆಗೆ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ವಿಜಯನಗರ ವೈಭವವನ್ನು ಕುರಿತು ಒರೆದ ವಿಜಯನಗರ ಸಾಮ್ರಾಜ್ಯ ಅವರ ಮೊದಲ ಕೃತಿ ೧೯೩೬ ರಲ್ಲೇ ಪ್ರಕಟವಾಗಿದೆ. ಕುಂತಲೇಶ್ವರ. ಶಾಸನ ಪರಿಚಯ. ಕನ್ನಡ ಅರಸರು ಮಿಂಚಿದ ಮಹಿಳೆಯರು ಇತ್ಯಾದಿ ಇಪ್ಪತ್ತರಷ್ಟು ಗ್ರಂಥಗಳನ್ನು ಅವರು ಬರೆದಿದ್ದಾರೆ ಪ್ರಾಚ್ಯ ವಸ್ತು ಸಂಶೋಧನಾ ಶಾಖೆಯಲ್ಲಿ ಕೆಲಸ ಮಾಡಿದ ಅವರು ಅನೇಕ ಶಿಲಾಶಾಸನಗಳನ್ನು ಸಂಗ್ರಹಿಸಿ ಸಂಪಾದಿಸಿದ್ದಾರಲ್ಲದೆ ಅವುಗಳಕುರಿತು ಅಭ್ಯಾಸ ಪೂರ್ಣ ಲೇಖಗಳನ್ನು ಪ್ರಕಟಿಸಿರುವದುಂಟು

## ಶಂಕರ ಮೊಕಾಶಿ (ಪುಣೇಕರ)



ಶಂಕರ ಮೊಕಾಶಿಯವರು ಕನ್ನಡ ಇಂಗ್ಲೀಷ ಉಭಯಭಾಷಾಕವಿಗಳು, ವಿದ್ವಾಂಸರು. ಕಾಲೇಜಿನಲ್ಲಿರುವಾಗಲೇ ಸಾಹಿತ್ಯರಚನೆಯನ್ನು ಪ್ರಾರಂಭಿಸಿದ ಅವರು ಕನ್ನಡ ಹಾಗು ಇಂಗ್ಲೀಷ ಎರಡಕ್ಕೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ 'ಗಂಗವ್ವ ಮತ್ತು ಗಂಗಾಮಾಯಿ' ಅವರ ಕಾದಂಬರಿ ಬೇಂದ್ರೆಯವರ ಕಾವ್ಯವನ್ನು ಆಳವಾಗಿ ಅಭ್ಯಾಸ ಮಾಡಿದ ಡಾ ಮೊಕಾಶಿಯವರು 'ಬೇಂದ್ರೆಯವರ ಕಾವ್ಯ ಮೀಮಾಂಸೆ'ಯನ್ನು ಮಾಡಿದ್ದಾರೆ. ಅವರ 'ಮಾಯಿಯ ಮೂರು ಮುಖಗಳು 'ಅಚ್ಚಿನಲ್ಲಿದೆ ಇಂಗ್ಲೀಷಿನಲ್ಲಿ The captive, Pientender The later phase in the development of W. B. Yeats ಹಾಗು P Lal An Apprecicat on ಮೊದಲಾದ ಕೃತಿಗಳಿಂದ ಭಾರತೀಯ ಆಂಗ್ಲಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ ಮುಂಬಯಿ, ಉಡಿಪಿಗಳಲ್ಲಿ ಇಂಗ್ಲೀಷ ಪ್ರಾಧ್ಯಾಪಕ ಪ್ರಾಚಾರ್ಯರಾಗಿದ್ದ ಮೊಕಾಶಿಯವರು ಇದೀಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ ಪ್ರಾಧ್ಯಾಪಕರಾಗಿದ್ದಾರೆ.

## ಕೃಷ್ಣಮೂರ್ತಿ ಪುರಾಣಿಕ

ಕೃಷ್ಣಮೂರ್ತಿ ಪುರಾಣಿಕರು ಕನ್ನಡದ ಹಿರಿಯ ಕಾದಂಬರಿಕಾರರಲ್ಲೊಬ್ಬರು. ಐವತ್ತಕ್ಕಿಂತ ಹೆಚ್ಚು ಕಾದಂಬರಿಗಳು ಅವರ ಲೇಖನಿಯಿಂದ ಹೊರಬಂದಿವೆ ಕೌಟುಂಬಿಕ ಸಮಸ್ಯೆ. ಸ್ತ್ರೀಗೌರವ, ಆದರ್ಶ ಚಿತ್ರಣ, ಸುಖಾಂತ್ಯ ಸಹಜ ಸಂಭಾಷಣೆ ಅವರ ವೈಶಿಷ್ಟ್ಯ. ಕಾದಂಬರಿಕಾರ ಪುರಾಣಿಕರು ಕಥೆ ನಾಟಕ ಕಾವ್ಯ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಯಶಸ್ವೀ ಲೇಖಕರೆನಿಸಿದ್ದಾರೆ. ಅವರ ಕಾದಂಬರಿಗಳಲ್ಲಿ ಹಲವು (ಭಾಗೀರಥಿ) ಕನ್ನಡ ಚಲಚ್ಚಿತ್ರಗಳಿಗೆ ಕಥಾಸಾಮಗ್ರಿಯನ್ನೊದಗಿಸಿವೆ ಪುರಾಣಿಕರ ಮಂದಾರ ಮಂದಾಕಿನಿ ಈ ಮೊದಲು ಕರ್ಮವೀರದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿದೆ ಪುರಾಣಿಕರು ಗೋಕಾಕದಲ್ಲಿ ಶಿಕ್ಷಕವೃತ್ತಿಯೊಂದಿಗೆ ಸಾಹಿತ್ಯಸೇವೆಯನ್ನೂ ಮಾಡುತ್ತ ಬಂದಿದ್ದಾರೆ ದೊರೆ ಸಾನಿ



(ಗೀತ ನಾಟಕ) ರಾಧೇಯ (ನಾಟಕ) ರಾಮಾಯಣ ಕತೆಗಳು (ಕಥಾಸಂಕಲನ) ಬಾಳ ಕನಸು (ಕವನಸಂಕಲನ) ಮೊದಲಾದವು ಅವರ ಇನ್ನುಳಿದ ಕೃತಿಗಳು

## ಕಯ್ಯಾರ ಕಿಞ್ಞಣ್ಣರೈ

ಕಯ್ಯಾರ ಕಿಞ್ಞಣ್ಣ ರೈಗಳು ಕಾಸರಗೋಡಿನ ಕನ್ನಡ ಶಕ್ತಿ. ಕನ್ನಡ ಸಾಹಿತ್ಯ ಸರಸ್ವತಿಯ ಉಪಾಸನೆಯೊಂದಿಗೆ ಕರ್ನಾಟಕ ಏಕೀಕರಣದ ಆಂದೋಲನವನ್ನೂ ಅವರು ಸಾಗಿಸಿದ್ದಾರೆ. ಹೈಸ್ಕೂಲಿನಲ್ಲಿ ಶಿಕ್ಷಕರಾಗಿರುವ ರೈಗಳು ಶಿಕ್ಷಣ ಸಾಹಿತ್ಯ ಕರ್ನಾಟಕ ಏಕೀಕರಣ ಈ ಮೂರರಲ್ಲಿ ಹೆಸರು ಗಳಿಸಿಕೊಂಡಿದ್ದಾರೆ. ಶ್ರೀಮುಖ ಅವರ ಮೊದಲ ಕಾವ್ಯ ಸಂಗ್ರಹ. ೧೯೪೩ ರಲ್ಲಿ ಪ್ರಕಟವಾಗಿದೆ. ಅವರ 'ಪುನರ್ನವ' ಕವನ ಸಂಕಲನಕ್ಕೆ ರಾಜ್ಯ ಸಾಹಿತ್ಯ ಅಕೆಡೆಮಿಯ ಪ್ರಶಸ್ತಿ ದೊರೆತಿದೆ ಐಕ್ಯಗಾನ ಚೇತನ, ರತ್ನರಾಶಿ, ರಾಷ್ಟ್ರಕವಿ ಗೋವಿಂದ ಪೈ, ವಿರಾಗಿಣಿ, ಅನ್ನದೇವರು ಮತ್ತು



ಗೀತ- ಕಥೆಗಳು ಇತ್ಯಾದಿ ಅವರ ಹಲವು ಕೃತಿಗಳು.

## ಎನ್. ಕೆ. ಕುಲಕರ್ಣಿ



'ಎನ್ಕೆ' ನಾನಿ ಎಂದು ಬಾನುಲಿ ಹಾಗು ಕನ್ನಡಸಾಹಿತ್ಯ ಲೋಕದಲ್ಲಿ ಪರಿಚಿತರಾಗಿರುವ ಕುಲಕರ್ಣಿ"ಯವರು ಕನ್ನಡ ಏಕಾಂಕ ಹಾಗು ಕಾದಂಬರಿಗಳಿಗೆ ವಿಶಿಷ್ಟ ಸೇವೆ ಸಲ್ಲಿಸಿದವರು. ಕುಮಾರವ್ಯಾಸನ ಬಗೆಗೆ ಆಳವಾಗಿ ಅಭ್ಯಾಸಮಾಡಿದ ಕುಲಕರ್ಣಿಯವರು ತುಂಬ ಸುಂದರವಾದ 'ಕುಮಾರವ್ಯಾಸ' ಹಾಗು ಕೃಷ್ಣನಕಥೆ' ಪ್ರಕಟಿಸಿದ್ದಾರೆ. ಸಾವಿನ ಉಡಿಯಲ್ಲಿ ಎರಡನೆಯ ಸಂಬಂಧ ವೈನಿ ಅವರ ಶ್ರೇಷ್ಠ ಕಾದಂಬರಿಗಳು. ಕನ್ನಡ ಸಾಹಿತ್ಯವಾಹಿನಿಯು ಕನ್ನಡ ಸಾಹಿತ್ಯದ ಪರಿಚಯಾತ್ಮಕ ಗ್ರಂಥ ನಡುಮನೆಯಲ್ಲಿ ಹಾಗು ಮಂದಿರ ಪ್ರವೇಶ ಅವರ ನಾಟಕಗಳು ಅವರ ಬೃಹದ್ ಗ್ರಂಥ ಗದುಗಿನ ಭಾರತ ಇಷ್ಟರಲ್ಲಿ ಪ್ರಕಟವಾಗಲಿದೆ ಧಾರವಾಡ ಆಕಾಶವಾಣಿಯಲ್ಲಿ ಅವರು ಸೇವೆ ಸಲ್ಲಿಸುತ್ತಿದ್ದಾರೆ.

## ಗುಂಡ್ಮಿ ಚಂದ್ರಶೇಖರ ಐತಾಳ



ಐತಾಳರು ವಿದ್ಯಾರ್ಥಿಯಾಗಿದ್ದಾಗಿನಿಂದಲೇ ಸಾಹಿತ್ಯದ ಸೇವೆಯನ್ನು ಕೈಕೊಂಡವರು ಅವರು ಬಿ. ಎ ದಲ್ಲಿದ್ದಾಗ ಅವರ ಕವನಕ್ಕೆ ಬಿ. ಎಂ. ಶ್ರೀಯವರು ಸ್ಥಾಪಿಸಿದ ರಜತ ಮಹೋತ್ಸವ ಸ್ವರ್ಣಪದಕ ದೊರೆತಿತ್ತು. ಐತಾಳರ 'ಸೌಂದರ್ಯದ ಸಾನ್ನಿಧ್ಯದಲ್ಲಿ (ಪ್ರವಾಸ ಸಾಹಿತ್ಯ) ಎಂಬ ಗ್ರಂಥ ದೇವರಾಜ ಬಹಾದ್ದೂರ ಸಾಹಿತ್ಯ ಪ್ರಶಸ್ತಿಯನ್ನು ಪಡೆದಿದೆ. ಬೆಳಗಾಯಿತು ಗುಂಡು ಸೂಜಿ ಮೊದಲಾದವು ಅವರ ಕವನಸಂಕಲನಗಳು ರುದ್ರಭಟ್ಟ ವಿಮರ್ಶಾತ್ಮಕ ಗ್ರಂಥ ಐತಾಳರ. ಈಗ ಮೈಸೂರ ವಿಶ್ವವಿದ್ಯಾನಿಲಯದ ಮಂಗಳೂರಿನ ಸ್ನಾತಕೋತ್ತರ ಕೇಂದ್ರ ಮಂಗಳಗಂಗೋತ್ರಿಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ

## ದಾಮೋದರ ಬಾಳಿಗ

ಅರವತ್ತೆರಡರ ದಾಮೋದರ ಬಾಳಿಗರು ಜೀವನದ ಹಲವು ರಂಗಗಳಲ್ಲಿ ಅನುಭವ ಪಡೆದವರು. ಕಾಲೇಜಿನಲ್ಲಿ ಕಲಿಯುವಾಗ ಸ್ವಾತಂತ್ರ್ಯಾಂದೋಲನದಿಂದ ಆಕರ್ಷಿತರಾದ ಅವರು ಸ್ವಾನಬದ್ಧತೆ ಕಾರಾಗೃಹಗಳ ಸವಿಸವಿದಿದ್ದಾರೆ. ಪ್ರಕಾಶನ ಪತ್ರ್ಯಪುಸ್ತಕ ಸಂಪಾದನೆ ಲೇಖನ ರಂಗಗಳಲ್ಲಿ ಅವರು ಸಾಕಷ್ಟು ದುಡಿದಿದ್ದಾರೆ. ದ. ಕನ್ನಡದ ಹಿರಿಯ ಸಾಹಿತಿಗಳ ನಿಕಟ ಸಂಪರ್ಕವಿಟ್ಟುಕೊಂಡ ಅವರು ಗೋವಿಂದ ಪೈಗಳ ಗೊಲ್ಗೊಥಾವನ್ನು ಇಂಗ್ಲೀಷಿಗೆ ಅನುವಾದಿಸಿರುವದುಂಟು. ಅವರ "ನವಭೂಮಿ" ಪುಸ್ತಕಕ್ಕೆ ಭಾರತ ಸರಕಾರದ ಪುರಸ್ಕಾರ ದೊರೆತಿದೆ. "ಉದ್ಘೋಷ" ಅವರ ಕವನ ಸಂಕಲನ. ಅವರ ಗೀತಗಳಲ್ಲಿ ಗೇಯತೆ ಒಂದು ವೈಶಿಷ್ಟ್ಯ.



## ಕೃಷ್ಣ ಚಂದರ

ಶ್ರೀ ಕೃಷ್ಣ ಚಂದರ್ ಉರ್ದು ಭಾಷೆಯ ಖ್ಯಾತ ಸಾಹಿತಿ ನೂರೈವತ್ತಕ್ಕೂ ಹೆಚ್ಚು ಕೃತಿಗಳು ಅವರ ಲೇಖನಿಯಿಂದ ಹೊರ ಬಂದಿವೆ ಅವರ ಕೃತಿಗಳಲ್ಲಿ ಸಾಮಾಜಿಕ ವಿಡಂಬನೆ ಮಾನವೀಯ ಅನುಕಂಪ ಅಂತಃಕರಣ ಒತ ಪ್ರೋತವಾಗಿರುವನ್ನು ಕಾಣಬಹುದು ಸೋವಿಯತ್ ದೇಶದ ನೆಹರೂ ಪಾರಿತೋಷಕ ವಿಜೇತರಾದ ಶ್ರೀಕೃಷ್ಣಚಂದರಿಗೆ ಭಾರತ ಸರಕಾರವು "ಪದ್ಮಭೂಷಣ" ಪ್ರಶಸ್ತಿಯನ್ನಿತ್ತು ಗೌರವಿಸಿದೆ ಅವರ ಕೃತಿಗಳು ಭಾರತದ ಅನೇಕ ಭಾಷೆಗಳಲ್ಲಿ ಅನುವಾದ ಹೊಂದಿವೆ



## ಜಿ. ಡಿ. ನಾಡಕರ್ಣಿ



ಪ್ರಾಧ್ಯಾಪಕ ನಾಡಕರ್ಣಿಯವರ ವಿಮರ್ಶೆ ವಿಡಂಬನೆ ಲೇಖನಗಳು ಪ್ರಕಟವಾಗದ ಕನ್ನಡ ಪತ್ರಿಕೆಗಳಿಲ್ಲ ಅವರ ಹಾಸ್ಯ ವಿಡಂಬನಾತ್ಮಕ ಲೇಖನಗಳನ್ನೋದದ ಕನ್ನಡ ಓದುಗರಿಲ್ಲ ಅವರ ಹಾಸ್ಯ ಲೇಖನಗಳ ಸಂಕಲನವೊಂದು ಇಷ್ಟರಲ್ಲಿ ಬೆಳಕಿಗೆ ಬರಲಿದೆ. ಧಾರವಾಡದ ಜನತಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಜಿ. ಡಿ. ನಾಡಕರ್ಣಿಯವರ ಶಿಕ್ಷಣ ರಂಗದಲ್ಲಿ ಇಪ್ಪತ್ತು ವರುಷಗಳಿಗಿಂತ ಹೆಚ್ಚು ಕಾಲದಿಂದ ಸೇವೆ ಸಲ್ಲಿಸುತ್ತಿದ್ದಾರೆ.

## ವಿಭೂತಿ ಭೂಷಣ ವಂದ್ಯೋಪಾಧ್ಯಾಯ



ಪಥೇರ ಪಾಂಚಾಲಿ, ಅಪರಾಜಿತಾ, ಅರಣ್ಯಕ ಮೊದಲಾದ ಖ್ಯಾತ ಕಾದಂಬರಿಗಳನ್ನು ಬರೆದ ವಂದ್ಯೋಪಾಧ್ಯಾಯರು ಸಣ್ಣ ಕಥೆಗಳಲ್ಲೂ ಸಿದ್ಧಹಸ್ತರು ಸಾಮಾನ್ಯ ಮನುಷ್ಯನ ನಿತ್ಯ ಜೀವನದ ವಿಷಯಗಳನ್ನು ಸವಿವರವಾಗಿ ನಿರೂಪಿಸುವ ಕಲೆ ಅವರದು. ಕಷ್ಟದಿಂದ ವ್ಯಾಸಂಗ ನಡೆಸಿ ಬಿ. ಎ. ಪದವೀಧರರಾಗಿ ಅವರು ಶಿಕ್ಷಕ ವೃತ್ತಿ ಮತ್ತು ಸಾಹಿತ್ಯ ಸೇವೆಯಲ್ಲಿ ತಮ್ಮ ಜೀವ ಸವೆಸಿದರು. ಇಪ್ಪತ್ತಕ್ಕಿಂತ ಹೆಚ್ಚು ಕಾದಂಬರಿಗಳನ್ನು ಹಾಗು ನೂರಾರು ಕಥೆಗಳನ್ನು ಅವರು ಬಂಗಾಲಿ ಸಾಹಿತ್ಯಕ್ಕೆ ಸಮರ್ಪಿಸಿದ್ದಾರೆ. ಅವರ ಕಾದಂಬರಿಗಳನ್ನಾಧರಿಸಿಯೇ ಸತ್ಯಜಿತರಾಯ ತಮ್ಮ ಚಿತ್ರಗಳನ್ನು ನಿರ್ಮಿಸಿದ್ದಾರೆ.

## ಪೊನ್‌ಕುನ್ನಂ ವರ್ಕಿ

ಮಲಯಾಲಂ ಸಣ್ಣ ಕಥೆಗಾರರಲ್ಲಿ ಶ್ರೇಷ್ಠರಾದ ವರ್ಕಿ ಯಥಾರ್ಥ ಚಿತ್ರಣದಲ್ಲಿ ಎತ್ತಿದ ಕೈ. ಸಾಮಾನ್ಯ ಕ್ಯಾಥೊಲಿಕ್ ರೈತ ಕುಟುಂಬದಲ್ಲಿ ಹುಟ್ಟಿದ ವರ್ಕಿಯವರು ತಮ್ಮ ಮೊದಲ ಕೃತಿ "ತಿರ ಮಾಲ ಕಾಳ್ಚ" ದಿಂದ ಸಾಹಿತ್ಯ ರಂಗವನ್ನು ಪ್ರವೇಶಿಸಿದರು. ಮದ್ರಾಸ ವಿಶ್ವವಿದ್ಯಾನಿಲಯದ ಬಹುಮಾನ ಪಡೆದ ಅದು ಕ್ರೈಸ್ತ ಪುರೋಹಿತರ ಕೋಪವನ್ನು ಕೆರಳಿಸಿತು. ವರ್ಕಿ ತಮ್ಮ ಲೇಖನಿಯಿಂದ ಆಳರಸರ ಆಗ್ರಹಕ್ಕೆ ಪಾತ್ರರಾಗಿ ಸೆರೆವಾಸವನ್ನು ಕಂಡಿದ್ದೂ ಉಂಟು. ರಾಜಕಾರಣದಲ್ಲಿದ್ದರೂ ಅವರು ಮೂವತ್ತೈದಕ್ಕೂ ಹೆಚ್ಚು ಕಥಾ ಸಂಗ್ರಹ ನಾಟಕ ಮೊದಲಾದವನ್ನು ಬರೆದಿದ್ದಾರೆ. ಅನೇಕ ಚಲಚ್ಚಿತ್ರಗಳ ತೆರೆಕಥೆ ಸಂಭಾಷಣೆಗಳನ್ನೂ ಅವರು ರಚಿಸಿರುವರು.

## ಅಖಿಲನ್



ಶ್ರೀ ಅಖಿಲನ್‌ರ ಪೂರ್ಣ ಹೆಸರು ಅಖಿಲಾಂಡಂ. ತಮಿಳು ನಾಡಿನ ವಿಖ್ಯಾತ ಸಾಹಿತಿಗಳೆನಿಸಿರುವ ಅಖಿಲನ್‌ರು ೨೫ಕ್ಕೂ ಹೆಚ್ಚು ಐತಿಹಾಸಿಕ ಹಾಗೂ ಸಾಮಾಜಿಕ ಕಾದಂಬರಿಗಳನ್ನು ಬರೆದಿದ್ದಾರೆ. ಅವರ ಒಂದೆರಡು ಕಥೆಗಳು ಚಲಚ್ಚಿತ್ರವಾಗಿವೆ. ಅವರ ಇತ್ತೀಚಿನ "ಪೊನ್ ಮಲರ್" (ಬಂಗಾರದ ಹೂ) ಕಾದಂಬರಿ ಕ್ಷೇತ್ರದಲ್ಲಿ ಕ್ರಾಂತಿ ಎಬ್ಬಿಸಿದೆ. ಅದರ ಒಂದು ಲಕ್ಷ ಪ್ರತಿಗಳು ಒಂದೇ ದಿನದಲ್ಲಿ ಮಾರಾಟವಾದವು.

ಸಾಹಿತ್ಯ ಅಕಾಡೆಮಿಯ ಸದಸ್ಯರಾದ ಅಖಿಲನ್ ಈಗ ಮದ್ರಾಸ ಆಕಾಶವಾಣಿಯಲ್ಲಿರುವರು. ಅಖಿಲನ್ ಗಾಂಧೀವಾದಿ, ಖಾದಿಧಾರಿ ಹಾಗೂ ಸ್ವಾತಂತ್ರ್ಯ ಸಮರದ ಹೋರಾಟಗಾರರು. ಅವರ ದೀಪಧಾರಿಣಿ, ಹೃದಯ ತರಂಗ ಕನ್ನಡದಲ್ಲಿ ಪ್ರಕಟವಾಗಿವೆ.

## ಪುರುಷೋತ್ತಮ ಭಾಸ್ಕರ ಭಾವೆ

ಶ್ರೀ ಭಾವೆಯವರು ಬಹುಮುಖ ಪ್ರತಿಭಾ ಶಾಲಿಗಳು. ಪತ್ರಿಕೋದ್ಯಮ ಕಾದಂಬರಿ, ನಾಟಕ ಸಣ್ಣಕತೆ ಇತ್ಯಾದಿ ಎಲ್ಲ ರಂಗಗಳಲ್ಲಿ ದುಡಿದ ಅವರು 'ಆದೇಶ' ನಿಯತಕಾಲಿಕದ ಸಂಪಾದಕರಾಗಿದ್ದರು. ಪಹಿಲಾ ಪಾವುಸ ಸತರಾವೇ ವರ್ಷ ಸ್ವಪ್ನ ಫುಲವಾ ಅಕುಲೀನಾ ಹಿಂಜರಾ ಸಾಡೇತೀನ ಅಕ್ಷರೇ ವಿಷಕನ್ಯಾ, ಸ್ವಾಮಿನಿ ಮೊದಲಾವು ಅವರ ಪ್ರಸಿದ್ಧ ಕೃತಿಗಳು. ಶ್ರೀ ಭಾವೆಯವರು ತಮ್ಮ ಕಥೆಗಳಲ್ಲಿ ವಿವಿಧ ಸಾಮಾಜಿಕ ಸಮಸ್ಯೆಗಳನ್ನು ವ್ಯಕ್ತಿಗಳನ್ನು ಕುರಿತು ಸುಂದರವಾಗಿ ಚಿತ್ರಿಸಿದ್ದಾರೆ. ಶ್ರೀ ಭಾವೆ ಭಾವನಾತ್ಮಕ ಕಲಾವಿದರು. ಅವರ ಶೈಲಿಯಲ್ಲಿ ವೇಗ, ಶಕ್ತಿ ಕಂಡಿತಗಳಿವೆ.



ಮರಾಠಿ ಸಾಹಿತ್ಯ ಸಮ್ಮೇಳನವು ಅವರನ್ನು ಮರಾಠಿ ನಾಟ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿದೆ.

## ಶ್ರೀಮತಿ ಐ. ವಿ. ಎಸ್. ಅಚ್ಯುತವಲ್ಲಿ



ತೆಲುಗಿನ ಮಹಿಳಾ ಲೇಖಿಕೆಯರಲ್ಲಿ ಶ್ರೀಮತಿ ಅಚ್ಯುತವಲ್ಲಿಯವರು ವಿಶೇಷ ಜನಪ್ರಿಯರಾದವರು. ಅವರ ಕಥೆಗಳೆಂದರೆ ಸಾಮಾಜಿಕ ರಾಜಕೀಯ ಓರೆಕೋರೆಗಳ ಮೇಲೆ ಕ್ಷಕಿರಣಗಳಿದ್ದಂತೆ. ಶ್ರೀಮತಿಯವರು ಅನೇಕ ಕಥೆ ಕಾದಂಬರಿಗಳನ್ನು ಬರೆದಿದ್ದಾರಾದರೂ ಕಥೆಗಳೆಂದರೆ ಅವರಿಗೆ ಹೆಚ್ಚು ಮೆಚ್ಚಿಗೆ. ಅವರ ಅನೇಕ ಕಥಾ ಸಂಕಲನಗಳು ಪ್ರಕಟವಾಗಿವೆ.

## ಕಮಲೇಶ್ವರ



ಆಧುನಿಕ ಹಿಂದಿ ಕಥಾ ಸಾಹಿತ್ಯದ ನಿರ್ಮಾಪಕರಲ್ಲಿ ಕಮಲೇಶ್ವರರೂ ಒಬ್ಬರು. ಅವರ ಕಥೆಗಳಲ್ಲಿ ಯಥಾರ್ಥ ಚಿತ್ರಣ, ಸಾಂಕೇತಿಕತೆ ರೂಪಕತೆಗಳನ್ನು ನಾವು ಕಾಣಬಹುದು. ಅವರ 'ನೀಲಿ ಝೀಲ' ಕಾಲ್ಪನಿಕವಾಗಿದ್ದರೂ ವಾಸ್ತವಿಕವೆಂಬಂತೆ ಚಿತ್ರಿತವಾಗಿದೆ.

ಕಮಲೇಶ್ವರರು ಎಂ. ಎ. ಆಗುತ್ತಲೆ ಅಲಹಾಬಾದಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಕೆಲ ಕಾಲ ಪ್ರಾಧ್ಯಾಪಕರಾಗಿದ್ದರು. ಅನಂತರ ದಿಲ್ಲಿ ಆಕಾಶವಾಣಿಯಲ್ಲಿ ಹಾಗೂ ನಯೀ ಕಹಾನಿಯಾದ ಸಂಪಾದಕರಾಗಿ ಕೆಲಸ ಮಾಡಿದರು. ಈಗ ಹಿಂದಿಯ ಕಥಾ ಮಾಸಿಕ 'ಸಾರಿಕಾ'ದ ಸಂಪಾದಕರಾಗಿದ್ದಾರೆ. ಕಮಲೇಶ್ವರರ ನೂರಾರು ಕಥೆಗಳು ಐದು ಕಾದಂಬರಿಗಳು ಮೂರು ನಾಟಕಗಳು ಪ್ರಕಟವಾಗಿವೆ.

## ಎಂ. ಜಿ. ಭೀಮರಾವ



ಭೀಮರಾಯರು ಬೆಂಗಳೂರಿನ ಬಿನ್ನಿ ಮಿಲ್ಸ್ ಕಂಪೆನಿಯ ಆಯಾತ ವಿಭಾಗದಲ್ಲಿ ಕೆಲಸ ಮಾಡುತ್ತಿರುವರಾದರೂ ಸಾಹಿತ್ಯದಲ್ಲಿ ಅವರಿಗೆ ಹೆಚ್ಚು ಆಸಕ್ತಿ. ತಮ್ಮ ತಂದೆಯ ವಲಂದ ಅವರು ವಿಶೇಷವಾಗಿ ಪ್ರೇರಣೆ ಪಡೆದಿದ್ದಾರೆ. ಅನೇಕ ಸಣ್ಣ ಕಥೆಗಳನ್ನು ಅವರು ತೆಲುಗಿನಿಂದ ಭಾಷಾಂತರಿಸಿದ್ದಾರೆ. ಕಾದಂಬರಿಗಳ ಸಂಖ್ಯೆಯೂ ಇಪ್ಪತ್ತನ್ನು ಮೀರಿದೆ. ಬೇರೆ ಬೇರೆ ಪತ್ರಿಕೆಗಳಲ್ಲಿ ಅವರ ಅನುವಾದಿತ ಕಥೆಗಳು ಆಗಾಗ ಪ್ರಕಟವಾಗುತ್ತಲಿವೆ.

## ಎಚ್. ಎನ್. ರಂಗರಾವ



ಎಚ್. ಎನ್. ರಂಗರಾವ್ ಬಾಲ್ಯದಲ್ಲೆ ಸಾಹಿತ್ಯದತ್ತ ಆಕರ್ಷಿತರಾದವರು. ಕಾಲೇಜಿನಲ್ಲಿದ್ದಾಗ ಕೈಬರಹದ ಪತ್ರಿಕೆಯ ಸಂಪಾದನೆಯನ್ನೂ ಅವರು ಮಾಡಿದ್ದುಂಟು. ಅವರ ಅನೇಕ ಲೇಖಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವರು ಕರ್ಮವೀರದ ದಿಲ್ಲಿಯ ಪ್ರತಿನಿಧಿಗಳು.

## ಎಸ್. ಎಸ್. ಬ್ಯಾತನಾಳ



ಮುಂಬೈ ಪಾರ್ಲೆ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಎಸ್. ಎಸ್. ಬ್ಯಾತನಾಳರು ಒಳ್ಳೆಯ ಲೇಖಕರು, ವಿದ್ವಾಂಸರು. ವಿಮರ್ಶಾತ್ಮಕ ಹಾಗು ಸಂಶೋಧನಾತ್ಮಕ ಲೇಖಗಳನ್ನು ಬರೆಯುವದರಲ್ಲಿ ಅವರಿಗೆ ಹೆಚ್ಚು ಅಭಿರುಚಿ. ಪಂಚಕನ್ಯೆಯರ ಕುರಿತು ಅವರು ಬರೆದ ಲೇಖವು ದೊಡ್ಡದೊಂದ ಕೋಲಾಹಲವನ್ನೆ ಎಬ್ಬಿಸಿತು. ಬ್ಯಾತನಾಳರು ಕನ್ನಡ ಇಂಗ್ಲೀಷುಗಳಲ್ಲದೆ ಅನೇಕ ಭಾರತೀಯ ಭಾಷೆಗಳನ್ನು ಬಲ್ಲರು. ಬೇರೆ ಬೇರೆ ಭಾಷೆಗಳಿಂದ ಅವರು ಕನ್ನಡಕ್ಕೆ ಲೇಖನ ಮೊದಲಾದವನ್ನು ಅನುವಾದಿಸಿ ಕನ್ನಡದ ಸೇವೆ ಮಾಡುತ್ತಿದ್ದಾರೆ.

## ಮತ್ತೂರ ಕೃಷ್ಣಮೂರ್ತಿ



ಮತ್ತೂರ ಕೃಷ್ಣಮೂರ್ತಿಗಳು ತರುಣ ಲೇಖಕರು, ಪರಿಚಿತ ಪತ್ರಿಕೋದ್ಯಮಿಗಳು. ಬಾನುಲಿ, ಪತ್ರಿಕೋದ್ಯಮಗಳಲ್ಲಿ ಸೇವೆಯನ್ನು ಸಲ್ಲಿಸಿದ ಅವರು ಇದೀಗ ಭಾರತೀಯ ವಿದ್ಯಾಭವನದ ಬೆಂಗಳೂರ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ದೀಪಧಾರಿಣಿ ಮೊದಲಾದ ತಮಿಳು ಕಾದಂಬರಿಗಳನ್ನು ಇವರು ಕನ್ನಡಕ್ಕೆ ಯಶಸ್ವಿಯಾಗಿ ಅನುವಾದಿಸಿದ್ದಾರೆ. ಕಲ್ಕಿ, ಅಖಿಲನ್ ಅನುತ್ತಮಾ, ಕೌಸಲ್ಯಾ ನಾರಾಯಣನ್‌ರ ಹಲವು ಕೃತಿಗಳು ಇವರಿಂದ ಕನ್ನಡಕ್ಕೆ ಬಂದಿವೆ. ಅಖಿಲ ಭಾರತ ತಮಿಳು ಸಾಹಿತ್ಯ ಸಮ್ಮೇಲನವು ಸೋದರಿ ಭಾಷೆಗೆ ತಮಿಳು ಸಾಹಿತ್ಯವನ್ನು ಪರಿಚಯ ಮಾಡಿ ಕೊಟ್ಟುದಕ್ಕಾಗಿ ೧೯೬೬ ರಲ್ಲಿ ಇವರಿಗೆ ಸ್ವರ್ಣಪದಕ ನೀಡಿ ಗೌರವಿಸಿದೆ.

## ಕಿಶೋರ ಜಾಧವ

ಗುಜರಾತಿ ಆಧುನಿಕ ಸಣ್ಣ ಕತೆಗಾರರೆಂದು ಹೆಸರು ಪಡೆದ ಕಿಶೋರ ಜಾಧವರು ನಾಗಾಲ್ಯಾಂಡಿನ ಸರಕಾರಿ ಹುದ್ದೆಯೊಂದರಲ್ಲಿದ್ದವರು, ಆದರೂ ಅವರೊಲವು ಸಾಹಿತ್ಯದೆಡೆಗೆ. ಜಾಧವರು ಸಣ್ಣ ಕತೆಗಳ ಮಾಧ್ಯಮದಲ್ಲಿ ಹೊಸ ಹಾದಿಯನ್ನು ತುಳಿದವರು. ಇವರು ಗುಜರಾತಿ ಸಣ್ಣ ಕತೆಗಳನ್ನು ಕೇವಲ ಭಾವಚಿತ್ರದ ಸ್ವಾಭಾವಿಕತೆಯಿಂದ ಸ್ವಪ್ನ ಸತ್ಯತೆಗೆ ಎತ್ತಿದವರು. ಇವರ ಪ್ರಾಗೈತಿಹಾಸಿಕ ಅನೆ ಶೋಕಸಭಾ ಎಂಬ ಪ್ರಸಿದ್ಧ ಕತೆಯು ಈ ಸ್ವಪ್ನ ಸತ್ಯತೆಗೆ ಉತ್ತಮ ಉದಾಹರಣೆಯಾಗಿದೆ

## ಕೆ. ಎಸ್. ಕರುಣಾಕರನ್



ಕೊಡಗು ಜಿಲ್ಲೆಯ ವೀರಾಜಪೇಟೆಯಲ್ಲಿ ಜನಿಸಿದ ಕರುಣಾಕರನ್‌ರ ಮಾತೃಭಾಷೆ ಮಲಯಾಳಂ. ಅವರು ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಬಿ. ಎ., ಎಂ.ಎ. ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಈಗ ತಿಪಟೂರಿನ ಕಲ್ಪತರು ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

ಕನ್ನಡದಿಂದ ಮಲಯಾಳಂ ಭಾಷೆಗೆ ಮಲಯಾಳಂದಿಂದ ಕನ್ನಡಕ್ಕೆ ಅನೇಕ ಕಥೆ ಕಾದಂಬರಿಗಳನ್ನು ಅವರು ಭಾಷಾಂತರಿಸಿದ್ದಾರೆ

## ಅಹೋಬಲ ಶಂಕರ

ಅಹೋಬಲ ಶಂಕರರು ಪರಿಚಿತ ಪತ್ರಿಕೋದ್ಯಮಿಗಳು ಮುಂಬಯಿಯ ಫ್ರೀಪ್ರೆಸ್ ಜರ್ನಲ್‌ದ ಸಹಾಯಕ ಸಂಪಾದಕರಾಗಿದ್ದಾರವರು. ಆದರೆ ಅವರು ಕನ್ನಡವನ್ನು ಮರೆತಿಲ್ಲ. ಬಂಗಾಲಿ ಸಾಹಿತ್ಯವನ್ನು ವಿಶೇಷವಾಗಿ ಅಭ್ಯಸಿಸಿದ ಅವರು ಬಂಗಾಲಿಯಲ್ಲಿಯ ಒಳ್ಳೆಯ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡ ಸೇವೆ ಮಾಡಿದ್ದಾರೆ. 'ರವೀಂದ್ರರ ಕಥಾಮಂಜರಿ' 'ಸಾಹೇಬ, ಬೀಬಿ ಮತ್ತು ಗುಲಾಮ' 'ಇನ್ನೂ ದೂರದ ದಾರಿ' ಮೊದಲಾದವು ಅವರು ಕನ್ನಡಿಸಿದ ಕೃತಿಗಳು. ಕೆಲವು ಏಕಾಂಕಗಳನ್ನೂ ಅವರು ಬರೆದಿದ್ದಾರೆ.

## ಪಂಚಾಕ್ಷರಿ ಹಿರೇಮಠ



ಪಂಚಾಕ್ಷರಿ ಹಿರೇಮಠರು ಕನ್ನಡದ ಉತ್ಸಾಹಿ ತರುಣ ಸಾಹಿತಿಗಳು. ಕಥೆ, ಕಾದಂಬರಿ, ಕವನ ವಿಮರ್ಶೆ ಅನುವಾದ ಮೊದಲಾದ ಎಲ್ಲ ರಂಗಗಳಲ್ಲಿ ಅವರು ಹುರುಪು ಹುಮ್ಮಸ್ಸಿನಿಂದ ಕೆಲಸ ಮಾಡಿದ್ದಾರೆ. ಚೈತ್ರಾಕ್ಷಿ, ರುದ್ರನಾಗು, ಬಯಲ ಬಾನಿನಲ್ಲಿ ಗಾಳಿ ಗಂಧ ಅವರ ಕವನ ಸಂಕಲನಗಳು. ಹಿಂದಿ ಉರ್ದು ಭಾಷೆಗಳಲ್ಲಿ ಪರಿಣತರಾದ ಹಿರೇಮಠರು ಆ ಭಾಷೆಗಳಲ್ಲಿಯ ಅನೇಕ ಕಥೆ ಕಾದಂಬರಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಅವರ ಸಾಹಿತ್ಯದ ಮೇಲೂ ಆ ಭಾಷಾ ಸಾಹಿತ್ಯಗಳು ಪ್ರಭಾವ ಬೀರಿವೆ. ಹದಿನೈದು ಕೃತಿಗಳನ್ನು ಪ್ರಕಟಿಸಿರುವ ಹಿರೇಮಠರು ಈಗ ಕ. ವಿ. ವಚನ ವಾಙ್ಮಯ ಸಂಶೋಧನ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

## ವಾಸು. ಬಿ. ಪುತ್ರನ್



ಪ್ರಯತ್ನ ಹಾಗು ನಿಷ್ಠೆಗಳಿಂದ ಮಾನವನು ಏನನ್ನೂ ಸಾಧಿಸಬಲ್ಲನೆನ್ನುವದಕ್ಕೆ ಡಾ। ವಾಸು. ಬಿ. ಪುತ್ರನ್ ಒಂದು ನಿದರ್ಶನ, ಚಿಕ್ಕ ಸ್ಥಾನವೊಂದರಿಂದ ಮೇಲಿನ ಹುದ್ದೆಗೆ ಏರಿದ ಪುತ್ರನ್ ತುಂಬ ಸಾಹಸಿಗಳು ಹಾಗು ಮಹತ್ವಾಕಾಂಕ್ಷಿಗಳು. ಎಂ. ಎ, ಪಿ. ಎಚ್‌ಡಿ ಪದವೀಧರರಾದ ಪುತ್ರನ್‌ರು ಮುಂಬೈಯ ಬ್ರಿಟಿಶ್ ಇನ್‌ಫಾರ್ಮೇಶನ್ ಕಚೇರಿಯಲ್ಲಿ ಪ್ರೆಸ್ ಲಾಯೆಶನ್ ಆಫೀಸರರಾಗಿದ್ದಾರೆ.

ಕನ್ನಡಸಾಹಿತ್ಯ,ಕಲಾವಿದರ ಬಗೆಗೆ ಹಿಂದಿ ಓದುಗರಿಗೆ ಪರಿಚಯ ಮಾಡಿ ಕೊಡುತ್ತಿರುವ, ಅವರು ಡಾ। ಭೈರಪ್ಪನವರ 'ವಂಶ ವೃಕ್ಷ'ವನ್ನು ಹಿಂದಿಗೆ ಅನುವಾದಿಸಿದ್ದಾರೆ. ಡಾ। ಪುತ್ರನ್ ಹಿಂದಿ ಮತ್ತು ಕನ್ನಡ ಭಾಷೆಗಳ ನಡುವಣ ಸ್ನೇಹ ಸೇತುವಾಗಿ ಕಾರ್ಯ ಮಾಡುತ್ತಿದ್ದಾರೆ.

## ಸೌ। ಗೀತಾ ಕುಲಕರ್ಣಿ



ಸೌ। ಗೀತಾ ಕುಲಕರ್ಣಿಯವರು ಕನ್ನಡದ ಉತ್ತಮ ಕಥೆಗಾರ್ತಿಯರು, ಸುತ್ತಮುತ್ತಲು ಕಾಣಿಸುವ ವ್ಯಕ್ತಿ ಘಟನೆಗಳು ಅವರ ಲೇಖನಿಯ ವಸ್ತು. ಯಥಾರ್ಥ ಚಿತ್ರಣದಲ್ಲಿ ಅವರು ಹೆಸರುವಾಸಿ. ಅವರ ಭಾಷೆ ಸರಳ ಸುಂದರ. ಸೌ। ಗೀತಾರವರ 'ಸ್ವಪ್ನ ಮಂದಿರ ವು ಕರ್ಮವೀರದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿದೆ. ಎರಡು ಕಾದಂಬರಿ ಮೂರು ಕಥಾಸಂಕಲನಗಳ ಲೇಖಿಕೆಯರಾದ ಅವರು ಇವಲ್ಲದೆ ಇನ್ನನೇಕ ಕಥೆಗಳನ್ನು ಲೇಖಗಳನ್ನು ಬರೆದುದುಂಟು.

## ಶ್ರೀನಿವಾಸ ಕುಲಕರ್ಣಿ

ಕನ್ನಡ ಎಂ. ಎ. ಪದವೀಧರರಾದ ಶ್ರೀನಿವಾಸ ಕುಲಕರ್ಣಿಯವರು ವಿದ್ಯಾರ್ಥಿ ದಸೆಯಲ್ಲಿಯೇ ಸಾಹಿತ್ಯ ಸೇವೆ ಪ್ರಾರಂಭಿಸಿದವರು. ವಿಶ್ವವಿದ್ಯಾಲಯ ಬಾನುಲಿ ನಾಟಕಗಳ ಸ್ಪರ್ಧೆಯಲ್ಲಿ ೧೯೫೯ ರಲ್ಲಿ ಪ್ರಥಮ ೧೯೬೦ ರಲ್ಲಿ ದ್ವಿತೀಯ ಪ್ರಶಸ್ತಿಯನ್ನು ಪಡೆದ ಅವರು ಈಗ ಧಾರವಾಡ ಬಾನುಲಿಯಲ್ಲಿ ಪ್ರಸಾರ ನಿರ್ವಹಣಾಧಿಕಾರಿಯಾಗಿದ್ದಾರೆ. ನವ್ಯಕಾವ್ಯ, ನವ್ಯ ಸಾಹಿತ್ಯದೊಲವುಗಳಿಂದ ಸ್ಫೂರ್ತಿ ಪಡೆದ ಅವರು ಸಾಹಿತ್ಯ ರಂಗದಲ್ಲಿ ಪ್ರಯೋಗಶೀಲರಾಗಿದ್ದಾರೆ. ಅವರ ಕಥಾ ಸಂಕಲನ 'ಬಾಳು ನಂಜು ಬಯಕೆ ನಂಜು' ಈಗಾಗಲೇ ಪ್ರಕಟವಾಗಿದೆ. ಕರ್ಮವೀರದ ದೀಪಾವಳಿ ಸಂಚಿಕೆಯಲ್ಲಿ ಅವರ 'ನೆಳಲು ನೆನಪು' ಕಾದಂಬರಿ ಪ್ರಕಟವಾಗಿದೆ.



## ಶೇಷನಾರಾಯಣ

ಶೇಷನಾರಾಯಣರು ಕೊಯಿಮುತ್ತೂರು ಜಿಲ್ಲೆಯ ಪಾಳ್ಯದಲ್ಲಿ ಜನಿಸಿದರೂ ಅವರ ಸೇವೆ ಕನ್ನಡಕ್ಕೆ ಮೀಸಲು. ಮೂಲಾನಕ್ಷತ್ರ, ಕಪಿಲೆ, ಪದ್ಮರಂಗು ಮೊದಲಾದವುಗಳು ಅವರ ಕಾದಂಬರಿಗಳು. ಅವರ ಅನೇಕ ಕಥೆಗಳು ನಾಡಿನ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿ ಓದುಗರ ಮನಸ್ಸನ್ನು ಸೆಳೆದಿವೆ. ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದೆಡೆ ಕಾರ್ಯ ನಿರ್ವಹಿಸಿದ ಅವರೀಗ ತಮ್ಮದೇ ಆದ ಮುದ್ರಣಾಲಯವನ್ನು ತೆಗೆದು ಬೆಂಗಳೂರಲ್ಲಿ ಸಾಹಿತ್ಯ ಸೇವೆಯನ್ನು ಮುಂದುವರಿಸಿದ್ದಾರೆ.



## ಶ್ರೀನಿವಾಸ ಉಡುಪ



ಶ್ರೀನಿವಾಸ ಉಡುಪರು ಉತ್ಸಾಹಿ ತರುಣ ಲೇಖಕರು. ಮೂವತ್ತು ಕಾದಂಬರಿಗಳನ್ನು ನೂರಕ್ಕೂ ಹೆಚ್ಚು ಕಥೆಗಳನ್ನು ಅವರು ಬರೆದಿದ್ದಾರೆ. ಅವರ ಅನೇಕ ಲೇಖಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ ಉಡುಪರ ಕಾದಂಬರಿ 'ಒಲಿದು ಬಂದವಳು' ೧೯೬೯ರಲ್ಲಿ ಮೈಸೂರ ರಾಜ್ಯ ಸಾಹಿತ್ಯ ಅಕೆಡೆಮಿಯ ದ್ವಿತೀಯ ಪ್ರಶಸ್ತಿಯನ್ನು ಪಡೆದಿದೆ. ಅಖಿಲ ಭಾರತ ಆಕಾಶವಾಣಿ ನಾಟಕ ಸ್ಪರ್ಧೆಯಲ್ಲಿ ಅವರ 'ಅಮೃತ ಹೃದಯ ನಾಟಕಕ್ಕೆ ೧೯೬೨ ರಲ್ಲಿ ಪ್ರಥಮ ಬಹುಮಾನ ದೊರೆತಿದೆ.

## ಗೋವಿಂದಮೂರ್ತಿ ದೇಸಾಯಿ



ಸ್ಟೇಟಬ್ಯಾಂಕಿನ ಉಚ್ಚ ಹುದ್ದೆಯಲ್ಲಿರುವ ಶ್ರೀ ಜಿ ಡಿ. ದೇಸಾಯಿಯವರು ಕನ್ನಡ ಬಿ. ಎ. ಪದವೀಧರರು. ಒಳ್ಳೆಯ ಕಥಾ ಲೇಖಕರು ಕಥೆ ಲೇಖಗಳ ಮೂಲಕ ನಾಡಿನ ಓದುಗರಿಗೆಲ್ಲಾ ಅವರು ಪರಿಚಿತರು 'ಶಿಲಾಮುಖ' ಅವರ ಸಣ್ಣ ಕಥೆಗಳ ಸಂಕಲನ ಐತಿಹಾಸಿಕ ಕಥೆಗಳಲ್ಲ ಸಿದ್ಧಹಸ್ತರಾದ ದೇಸಾಯಿಯವರು ಕುಂತಲೇಶ್ವರ ವಿಕ್ರಮಾದಿತ್ಯನ ಕುರಿತು ಕಾದಂಬರಿಯನ್ನು ಬರೆದಿದ್ದಾರೆ. 'ತೇಜಸ್ವಿನಿ' ಚಿತ್ರದ ಕಥೆಯು ದೇಸಾಯಿಯವರದೇ. ದೇಸಾಯಿಯವರು 'ಬಾಪೂಜಿಯ ಬದುಕನ್ನು ಚಿತ್ರಿಸಿದ್ದಾರೆ.

## ಪಿ. ಕೆ. ದೀಕ್ಷಿತ



ದೀಕ್ಷಿತರು ಬಿ. ಎ. ಎಂ ಎ ಎರಡರಲ್ಲೂ ಕನ್ನಡ ವಿಷಯವನ್ನು ತೆಗೆದುಕೊಂಡು ಪ್ರಥಮಶ್ರೇಣಿ ಪಡೆದ ಪ್ರತಿಭಾವಂತರು. ಅವರ ಕವನಸಂಗ್ರಹ 'ಮುಂಬೆಳಗು' ೧೯೪೬ ರಲ್ಲೇ ಪ್ರಕಟವಾಗಿದೆ. ಸೆರೆಯಾಳು ಖಂಡ ಕಾವ್ಯ. ಮಾಡರೆ ಪತ್ರೋತ್ಸವವು ಕಥಾ ಸಂಕಲನ. ಅವರು ಬರೆದ ಅನೇಕ ಕಥೆಗಳು ಕವನಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆಯಾದರೂ ಪುಸ್ತಕ ರೂಪದಲ್ಲಿ ಹೊರಬಂದುದು ಕಡಿಮೆ. ಮುಂಬಯಿಯ ರೂಪರೇಲ ಕಾಲೇಜನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಅವರು ಮುಂಬಯಿ ನಗರ ಹಾಗು ವಿಶ್ವವಿದ್ಯಾಲಯದ ಕನ್ನಡ ಚಟುವಟಿಕೆಗಳ ಕೇಂದ್ರಬಿಂದುವಾಗಿದ್ದಾರೆ. ಕನ್ನಡ ಪಿ. ಎಚ್. ಡಿಗೆ ಮಾರ್ಗದರ್ಶಕರಾಗಿದ್ದಾರೆ.

## ಬಿ. ಎ ಸನದಿ



ಸನದಿಯವರು ಅರ್ಥಶಾಸ್ತ್ರ ಹಾಗು ಶಿಕ್ಷಣದಲ್ಲಿ ಪದವೀಧರರು. ಪತ್ರಿಕೋದ್ಯಮ ಮತ್ತು ವಾರ್ತಾಪ್ರಚಾರ ಶಾಖೆಯಲ್ಲಿ ಅವರ ಕೆಲಸ ಸಂದಿದೆ. ಈಗ ಪಶ್ಚಿಮ ವಿಭಾಗದ ಕ್ಷೇತ್ರ ಪ್ರದರ್ಶನಾ ಅಧಿಕಾರಿಗಳಾಗಿ ಅಹಮ್ಮದಾಬಾದದಲ್ಲಿರುವ ಅವರು ಕನ್ನಡ ಸೇವೆಯನ್ನು ಬಹು ವಿಧವಾಗಿ ಮಾಡಿದ್ದಾರೆ. ಅವರ ತಾಜಮಹಲು, ಪ್ರತಿಬಿಂಬ (ಕವನ ಸಂಕಲನಗಳು) ರಾಜ್ಯ ಸಾಹಿತ್ಯ ಅಕೆಡೆಮಿಯಿಂದ ಪಾರಿತೋಷಕ ಪಡೆದಿದ್ದರೆ 'ಧ್ರುವಬಿಂದು' (ಕವನ ಸಂಕಲನ) ಭಾರತ ಸರಕಾರದಿಂದ ಗೌರವಿತವಾಗಿದೆ. ಶಿಶು ಸಾಹಿತ್ಯಕ್ಕೂ ಅವರು ವಿಶೇಷ ಕಾಣಿಕೆ ನೀಡಿದ್ದಾರೆ. 'ಉಗ್ರ'ರ ಹಿಂದಿ ಕಾದಂಬರಿಯನ್ನು 'ರಕ್ತ ಮಾಂಗಲ್ಯ' ಕನ್ನಡಕ್ಕೆ ಅನುವಾದಿಸಿದ್ದಲ್ಲದೆ ಅನೇಕ ಪುಸ್ತಕಗಳನ್ನು ಅವರು ಸಂಪಾದಿಸಿದ್ದೂ ಉಂಟು.

## ಕೆ. ರಾಘವೇಂದ್ರರಾವ



ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಎಂ ಎ ಪರೀಕ್ಷೆಯಲ್ಲಿ ಕನ್ನಡವನ್ನೂ ಪ್ರಧಾನ ವಿಷಯವಾಗಿ ತೆಗೆದುಕೊಂಡು ಪ್ರಪ್ರಥಮರಾಗಿ ಉತ್ತೀರ್ಣರಾದ ರಾಘವೇಂದ್ರರಾಯರು ಈಗ ಮೈಸೂರಿನ ಮಹಾರಾಜಾಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ದಿ. ಡಿ. ಕೆ. ಭೀಮಸೇನರಾಯರ ಶಿಷ್ಯರೂ ಅಳಿಯಂದಿರೂ ಆದ ರಾಘವೇಂದ್ರರಾಯರು ತಮ್ಮ ಗುರುಗಳ ಗ್ರಂಥ ಸಂಪಾದನಾ ಕಾರ್ಯಗಳಲ್ಲಿ ಸಹಾಯಕರಾಗಿ ಕೆಲಸ ಮಾಡಿದ್ದಾರೆ. ಭೀಮಸೇನರಾಯರು ಅರ್ಧದಲ್ಲೇ ಬಿಟ್ಟುಹೋದ ಕೆಲಸಗಳನ್ನು ಪೂರ್ಣ ಮಾಡುವ ಗುರುತರ ಜವಾಬ್ದಾರಿಯನ್ನೂ ರಾಘವೇಂದ್ರರಾಯರು ವಹಿಸಿಕೊಂಡಿದ್ದಾರೆ. ಇದೀಗ ಅವರ ೧೯ನೆಯ ಶತಮಾನದ ಕನ್ನಡ ಗದ್ಯ ಸಾಹಿತ್ಯವನ್ನು ಪಿ. ಎಚ್. ಡಿಗೆ ವಿಷಯವನ್ನಾಗಿ ಆರಿಸಿಕೊಂಡಿದ್ದಾರೆ.

## ಸಂತೋಷಕುಮಾರ ಗುಲ್ವಾಡಿ



ಸಂತೋಷಕುಮಾರರು ಹೆಸರಿನಂತೆ ಮಾತಿನಲ್ಲೂ ಸಂತೋಷಪ್ರದರು. ಸ್ನೇಹಶೀಲರು. ಅವರ ಕಥೆ ಲೇಖನಗಳು ಕನ್ನಡ ಇಂಗ್ಲೀಷ ಭಾಷೆಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹಿಂದಿ ಮರಾಠಿಗೆ ಅನುವಾದ ಹೊಂದಿವೆ. ಲಲಿತ ಕಲೆ ಹಾಗು ಸಾಹಿತ್ಯದಲ್ಲಿ ಅವರಿಗೆ ಬಹಳಷ್ಟು ಅಭಿರುಚಿ. ಪತ್ರಿಕೋದ್ಯಮದಲ್ಲಿ ಪದವೀಧರರಾದ ಅವರು ಕರ್ನಾಟಕದ ಪತ್ರಿಕೆಗಳು ಅದರಲ್ಲೂ ಕರ್ಮವೀರದೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದಾರೆ. ಹೃದಯದ ನೋವು ಹಾಗು ಶಸ್ತ್ರ ಚಿಕಿತ್ಸೆಯ ಕುರಿತು ಕಸ್ತೂರಿಯಲ್ಲಿ ಅವರು ಸ್ವಾನುಭವವನ್ನು ನಿವೇದಿಸಿದ ರೀತಿ ತುಂಬ ಅಪೂರ್ವವಾದುದು. ಮುಂಬೈಯ ಸಿಂಗರ್ ಸೂಯಿಂಗ್ ಮಶಿನ್ ಕಂಪನಿಯಲ್ಲಿ ಜಾಹೀರಾತು ಪ್ರಚಾರ ವಿಭಾಗದಲ್ಲಿರುವ ಅವರು ಇಷ್ಟರಲ್ಲಿ ತಮ್ಮೆರಡು ಪುಸ್ತಕಗಳನ್ನು ಹೊರಗೆ ತರಲಿದ್ದಾರೆ.

## ಎಂ. ಗೋವಿಂದ



ವೈದ್ಯಕೀಯವು ವೃತ್ತಿಯಾದರೂ ಸಾಹಿತ್ಯವು ಅವರ ಹವ್ಯಾಸ. ಚುಟುಕುಗಳಿಂದ ಸಾಹಿತ್ಯ ರಂಗವನ್ನು ಪ್ರವೇಶಿಸಿದ ಎಂ. ಗೋವಿಂದರು ಈಗಾಗಲೇ 'ಕರ್ ಮಾಮಾ' ಕವನಸಂಕಲನವನ್ನು ಪ್ರಕಟಿಸಿದ್ದಾರೆ. ಅವರ ಅನೇಕ ಲೇಖನ ಸಂದರ್ಶನ ನಿರೂಪಣೆಗಳು ಕರ್ಮವೀರದ ಓದುಗರನ್ನು ರಂಜಿಸಿವೆ. ಹಲವು ಚಟುವಟಿಕೆಯ ವ್ಯಕ್ತಿಯಾದ ತರುಣ ಗೋವಿಂದರು ಸಾಹಿತ್ಯಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ವಿಶೇಷ ಆಸ್ಥೆಯಿಂದ ಭಾಗವಹಿಸುವದುಂಟು.

## ಶಂ. ಗು. ಬಿರಾದಾರ



ವಿಜಾಪುರ ಜಿಲ್ಲೆಯ ತಿಕೋಟಾದಲ್ಲಿ ಅಧ್ಯಾಪನದೊಂದಿಗೆ ಸಾಹಿತ್ಯ ಸೇವೆ ಮಾಡುತ್ತಿರುವ ಶಂ. ಗು. ಬಿರಾದಾರರು ಶಿಶು ಸಾಹಿತ್ಯಕ್ಕೆ ವಿಶೇಷ ಸೇವೆ ಸಲ್ಲಿಸಿದ್ದಾರೆ. ಅವರ ಎರಡು ಮಕ್ಕಳ ಕವನಸಂಕಲನಗಳು ನನ್ನ ಹಾಡು ಮತ್ತು ಕಾರಂಜಿ ರಾಜ್ಯ ಸರಕಾರದ ಪುರಸ್ಕಾರ ಪಡೆದಿವೆ. 'ಬೆಳಕಿನೆಡೆಗೆ' ಸಾಮಾಜಿಕ ಕಾದಂಬರಿ, ಬಸವ ಶತಕ ಕಾವ್ಯ 'ಭಾವ ಸಂಗಮ' ಅವರ ಇನ್ನು ಕೆಲ ಕೃತಿಗಳು. ಬಿರಾದಾರರ ಕಥಾ ಸಂಕಲನ 'ಇಂದ್ರಪುರ' ೧೯೬೯ರಲ್ಲಿ ರಾಜ್ಯ ಸರಕಾರದ ಬಹುಮಾನ ಪಡೆದಿದೆ.

## ಜಿ. ಎಸ್. ಭಟ್ಟ



ಇಪ್ಪತ್ತೇಳರ ತರುಣ ಗಜಾನನ ಸುಬ್ರಾಯ ಭಟ್ಟರು ಉತ್ತರ ಕನ್ನಡದ ಶಿರ್ಶಿಯವರು. ತುಂಬ ಉತ್ಸಾಹಿಗಳು ಕಾರ್ಯಚತುರರು ಇತಿಹಾಸದಲ್ಲಿ ಎಂ ಎ ಪದವೀ ಪಡೆದ ಭಟ್ಟರು ಡ್ರಾಮೆಟಿಕ್ಸ ಟ್ರಾನ್ಸಲೇಶನ್‌ಗಳಲ್ಲಿ ಡಿಪ್ಲೊಮಾ ಪಡೆದಿದ್ದಾರೆ ಒಂದು ವರ್ಷ ಕಾಲ ಶಿರ್ಶಿಯ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದ ಅವರು ಕಸ್ತೂರಿ ಮಾಸ ಪತ್ರಿಕೆಯಲ್ಲಿ ಎರಡು ವರ್ಷ ಉಪ ಸಂಪಾದಕರಾಗಿದ್ದರು ಈಗ ಮಾನಸ ಗಂಗೋತ್ರಿಯಲ್ಲಿ ಕನ್ನಡ ವಿಶ್ವಕೋಶದ ಉಪ ಸಂಪಾದಕರು ಸಾಹಿತಿಗಳ ಸಂದರ್ಶನ ಕಥೆ ಲೇಖನಗಳಿಂದ ಅವರ ಕನ್ನಡ ಓದುಗರಿಗೆ ಈಗಾಗಲೇ ಪರಿಚಿತರಾಗಿದ್ದಾರೆ

## ಸೌ। ಸರಿತಾ ಕುಸುಮಾಕರ ದೇಸಾಯಿ



ಕರ್ಮವೀರದ ಮಹಿಳಾ ಲೇಖಿಕೆಯರಲ್ಲಿ ಒಬ್ಬರಾದ ಶ್ರೀಮತಿ ದೇಸಾಯಿಯವರು ಕರ್ಮವೀರದ ೧೯೬೭-೬೮ ರ ಮಹಿಳಾ ರಂಗದ ಉತ್ತಮ ಲೇಖಿಕೆಯರೆಂದು ಗೌರವಿತರಾದವರು ಅವರ ಅನೇಕ ಕಥೆ ಲೇಖನಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿ ಓದುಗರ ಮೆಚ್ಚುಗೆ ಗಳಿಸಿವೆ. ರೇಡಿಯೋ ಪ್ರಹಸನ ಲೇಖನಗಳನ್ನು ಅವರು ಬರೆದಿರುವದುಂಟು ಮನಸ್ಸನಾಳದ ಭಾವನೆಗಳು ದಿನನಿತ್ಯದಲ್ಲಿ ಅನುಭವಕ್ಕೆ ಬರುವ ಚಿಕ್ಕ ಪುಟ್ಟ ಘಟನೆಗಳೇ ಅವರ ಕಥೆಗಳ ವಸ್ತು ವಕೀಲರ ಮಡದಿಯಾದ ಅವರು ಸಾಹಿತ್ಯದಲ್ಲಿ ವಿಶೇಷ ಅಭಿರುಚಿಯಿಟ್ಟುಕೊಂಡ ಸುಸಂಸ್ಕೃತ ಮಹಿಳೆಯಾಗಿದ್ದಾರೆ.

## ಕೈಪು ಲಕ್ಷ್ಮೀನರಸಿಂಹ ಶಾಸ್ತ್ರಿ

ಶಾಸ್ತ್ರಿಗಳು ಕೈವಾರದಲ್ಲಿ ಶಿಕ್ಷಕರಾದರೂ ತಮ್ಮ ಲೇಖಗಳಿಂದ ಕರ್ನಾಟಕದಲ್ಲೆಲ್ಲ ಪರಿಚಿತರು ಅವರ ಬೋಧಸುಧಾ ಕಥಾವಳಿ ಮರ್ಯಾದೆ ರಾಮಣ್ಣನ ಕತೆಗಳು ಮೊದಲಾದವು ಕರ್ಮವೀರದಲ್ಲಿ ಪ್ರಕಟವಾಗಿ ಹಿರಿ-ಕಿರಿಯರ ಮೆಚ್ಚಿಗೆಗಳಿಸಿವೆ ಅವರ ಶೈಲಿ ಸರಳ ಅವರ ಕಥೆಗಳು ಸುಂದರ ಹಾಗು ನೀತಿಬೋಧಕ ಕನ್ನಡ ಸಂಸ್ಕೃತಗಳಲ್ಲಿ ಬಲ್ಲಿದರಾದ ಶಾಸ್ತ್ರಿಗಳು ಸರಸ ಹಾಗು ವಿಮರ್ಶಾತ್ಮಕ ಅನೇಕ ಲೇಖಗಳನ್ನು ಬರೆದಿದ್ದಾರೆ ಅವರ 'ಬೋಧಸುಧಾ ಕಥಾವಳಿ'-೧ ಇತ್ತೀಚೆ ಪ್ರಕಟವಾಗಿದೆ.



## ಜಿ. ವ್ಹಿ. ಕುಲಕರ್ಣಿ

'ಹುಚ್ಚು ಹುಚ್ಚಿ' ಮಧುರ ಪ್ರಣಯದ ಕವನಸಂಕಲನವನ್ನು ಕನ್ನಡಿಗರಿಗೆ ನೀಡಿದ ಪ್ರಾ। ಜಿ ವ್ಹಿ. ಕುಲಕರ್ಣಿಯವರು ಕನ್ನಡದ ಉತ್ಸಾಹಿ ತರುಣ ಲೇಖಕರಲ್ಲೊಬ್ಬರು ನಾಟಕ ಕಥೆಗಳಲ್ಲದೆ ವರದಿ ಸಂದರ್ಶನ ಪತ್ರಿಕೋದ್ಯಮದಲ್ಲೂ ಅವರ ವಿಶೇಷ ಅಭಿರುಚಿ 'ಮಧುವನ ಅವರ ಏಕಾಂಕಗಳ ಸಂಗ್ರಹ ಎಂ ಎ. ಎಲ್ ಎಲ್ ಬಿ. ಪದವೀಧರರಾದ ಅವರು ಅಂಧೇರಿಯ ಎಂ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವರು

## ಅಮೃತ ಸೋಮೇಶ್ವರ

ಅಮೃತ ಸೋಮೇಶ್ವರರು ಪುತ್ತೂರಿನ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರು. ಜಾನಪದ ಸಾಹಿತ್ಯದಲ್ಲಿ ಅವರಿಗೆ ವಿಶೇಷ ಅಭಿರುಚಿ ತುಳುನಾಡಿನ ಜಾನಪದ ಕಥೆಗಳನ್ನು ಅವರು ಪ್ರಕಟಿಸಿದ್ದಾರೆ ಅವರ ಅನೇಕ ಕಥೆ ಲೇಖಗಳು ಕನ್ನಡದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿ ಓದುಗರನ್ನು ಮೆಚ್ಚಿಸಿವೆ

ಬೆಳಕಿನ ಹಬ್ಬವಾದ ದೀಪಾವಳಿ ಸಂತಸ ಮತ್ತು
ಐಕ್ಯತೆಯ ಭಾವನೆಯನ್ನು ಪಸರಿಸುತ್ತದೆ.
ಹತ್ತಿರದಲ್ಲಿ ಹಾಗೂ ದೂರದಲ್ಲಿ
ಇರುವ ಗೆಳೆಯರಿಗೆ ಮತ್ತು ಪ್ರೀತಿ
ಪಾತ್ರರಾದವರಿಗೆ ವಂದಿಸುವ ಕಾಲವಿದು.
ನೀವು ನಿಮ್ಮ ಶುಭಾಶಯದ ಸಂದೇಶವನ್ನು
ಟೆಲಿಗ್ರಾಂ, ಟೆಲಿಫೋನ್ ಅಥವಾ
ಟ್ರಂಕ್‌ಕಾಲ್– ಮೂಲಕ ಹೇಗೆ
ಕಳುಹಿಸಿದರೂ ಸರಿಯೇ ಐಟಿಐ ಪರೋಕ್ಷವಾಗಿ
ಭಾಗವಹಿಸುತ್ತದೆ. ರಾಷ್ಟ್ರಾದ್ಯಂತ
ಸಂಪರ್ಕವನ್ನು ತೀವ್ರಗೊಳಿಸಲು
ಮತ್ತು ಸುಲಭಗೊಳಿಸಲು ಬೇಕಾಗುವ
ಸಾಮಗ್ರಿಗಳನ್ನು ಐಟಿಐ
ತಯಾರಿಸುತ್ತದೆ.

# ದೀಪಾವಳಿ ಶುಭಾಶಯಗಳು

ಇಂಡಿಯನ್ ಟೆಲಿಫೋನ್
ಇಂಡಸ್ಟ್ರೀಸ್ ಲಿಡ್.,
ಬೆಂಗಳೂರು-16.



Communication
is our business



ASP-ITI-128 KAN

# ಕರ್ಮವೀರ

## ದೀಪಾವಳಿ ಸಂಚಿಕೆ

೧೯೭೦

ಸಂಪಾದಕರು :

**ರಂಗನಾಥ ದಿವಾಕರ**

ಸಹಾಯಕ ಸಂಪಾದಕರು :

**ಎಸ್. ವಿ. ಪಾಟೀಲ**

## ನಮ್ಮ ನುಡಿ

'ಕರ್ಮವೀರ'ನ ನೆಚ್ಚಿನ ಓದುಗರೇ, ಇದೋ ಈ ದೀಪಾವಳಿಯ ಶುಭಸಂದರ್ಭದಲ್ಲಿ ನಿಮಗೆಲ್ಲ ನಮ್ಮ ನಮನಗಳು. ನಮ್ಮ ಮನೆಯಂಗಳದಿ ಬೆಳೆಸಿದ ಈ ನೆಚ್ಚಿನ ಶಿಶುವನ್ನು ನಿಮ್ಮ ಮಾನಸಾಂಗಳದಿ ವಿಹರಿಸಲು ಇದೊ ನಿಮ್ಮ ಕೈಲಿ ಇರಿಸುತ್ತಿದ್ದೇವೆ. ನೀವು ಕೊಳ್ಳಿರಿ; ಮನಸ್ಕೆ ಮುದವ ತಂದುಕೊಳ್ಳಿರಿ.

ನಿಮಗೆ ಮುದವ ತರಲೆಂದು ನಾಡಿನ ನಾನಾ ಮೂಲೆಗಳ ಕಥಾವಾಹಿನಿಯನ್ನು ಹರಿಸಿ ಇಲ್ಲಿಗೈತಂದಿದ್ದೇವೆ. ಆಸಾಮುದಿಂದ ತಮಿಳುನಾಡಿನ ವರೆಗೆ ಹತ್ತು ಭಾಷೆಗಳ ಶ್ರೇಷ್ಠ ಕತೆಗಾರರು ತಮ್ಮ ಶ್ರೇಷ್ಠ ಕತೆಗಳನ್ನು ನಿಮಗರ್ಪಿಸಲು ನಮಗೆ ನೀಡಿದ್ದಾರೆ; ಭಾಷೆ-ಭಾವಗಳ ಸಂಗಮಕ್ಕೆ ನಮಗವರು ಅನುವು ನೀಡಿದ್ದಾರೆ. ಆ-ಆ ಪ್ರದೇಶಗಳ ಜೀವನದ ಪರಿಯನ್ನು ಬಿಚ್ಚಿ ತೋರಲು ಇಲ್ಲವರು ಹವಣಿಸಿದ್ದಾರೆ. ನಿಮ್ಮ ಮನವನ್ನು ಈ ಕಥಾವಾಹಿನಿ ತಣಿಸಿದರೆ ಅವರ ಈ ಹವಣಿಕೆ, ನಮ್ಮ ಈ ನೀಡಿಕೆ ಸಫಲವೆನಿಸೀತು; ಸಾರ್ಥಕವಾದೀತು.

ಈ ಕಥಾವಾಹಿನಿಯ ಜೊತೆಗೆ ನಿಮಗರ್ಪಿತವಾಗಿದೆ: ಭಾರತೀಯ ಭಾಷೆಗಳಲ್ಲಿ ಕಥಾಸಾಹಿತ್ಯ ಪಲ್ಲವಿಸಿದ ಬಗೆಗಿನ ಲೇಖನ ಮಾಲೆ. ಅಲ್ಲಲ್ಲಿ ಹರಿದು ಬಂದ, ಹರಿಯುತ್ತಿರುವ ಕಥಾವಾಹಿನಿ ತಳೆಯುತ್ತಿರುವ ರೂಪ ವೈಶಿಷ್ಟ್ಯಗಳನ್ನು ನಿಮಗಿದು ನಿರೂಪಿಸುತ್ತಿದೆ. ಮನಸ್ಕೆ ರಂಜನೆಯಾದರೆ ಬುದ್ಧಿಗೆ ಆಹಾರವೂ ಬೇಕು ಅಲ್ಲವೆ? ಈ ಎರಡು ವಿಶೇಷಗಳಿಂದ ನಿಮಗೆ ತೃಪ್ತಿಯಾದರೆ ನಮಗೂ ಅದರಿಂದ ತೃಪ್ತಿ.

ನೀವು ಕಲಾಭ್ಯಾಸಿಗಳಿಗೆ "ದಕ್ಷಿಣ ಭಾರತದಲ್ಲಿಯ ಗೋಪುರಗಳು" ಒಳ್ಳೇ ಅಭ್ಯಾಸವಾಗಿರುವುದು. ರಸಿಕರಿಗೆ, ನಮ್ಮ ತಾರಾಮಣಿಗಳು ತಮ್ಮ ಅಭಿನಯ ಕುರಿತು ನಿಮ್ಮೊಂದಿಗೆ ಬಿಚ್ಚು ಮನಸ್ಸಿನ ಚರ್ಚೆ ನಡೆಸಿದ್ದಾರೆ. ಮೂವರು ಗೃಹಿಣಿಯರು ತಮ್ಮ ವಿವಾಹದ ಸಿಹಿಕಹಿಗಳನ್ನು ನಿಮಗೆ ಉಣಬಡಿಸಿದ್ದಾರೆ. ಬಾಲಕರಿಗಾಗಿ ಬೋಧಪ್ರದ ಬಾಲಪ್ರಪಂಚವೂ ಕಾದಿದೆ. ನಿಮ್ಮ ಆಗುಹೋಗು ಅರಿಯಲು ಇದೀ ಒಂದು ವರುಷದ ಭವಿಷ್ಯದ ಗರ್ಭದಲ್ಲೇನಡಗಿದೆಯೆಂಬುದನ್ನು ನಮ್ಮ ಜ್ಯೋತಿಷ್ಯಕಾರರು ನಿಮಗೆ ವಿದಿತಪಡಿಸಿದ್ದಾರೆ. ಜೊತೆಗೆ ಅನೇಕ ವ್ಯಂಜನೆಗಳೂ ಇವೆ.

ಈ ವಿಷಯ ವಿಶೇಷಗಳನ್ನು ನಿರುಕಿಸಲು ಕೊಂಡು ಓದುವ ನಿಮಗೆ ಅವನ್ನೆಲ್ಲ ನೀಡಲು ನಮ್ಮ ನೆರವಿಗೆ ಬಂದ ಕನ್ನಡದ ಹಿರಿಕಿರಿಯ ಲೇಖಕ ಬಳಗಕ್ಕೆ, ಚಿತ್ರಕಲಾವಿದರಿಗೆ, ಈ ವಿಶೇಷಗಳನ್ನು ಸುಂಭದಲ್ಲಿ ನಿಮಗೆ ನೀಡಲು ಅನುವಾಗುವಂತೆ ಜಾಹೀರಾತುಗಳನ್ನು ನೀಡಿದ ನಮ್ಮ ಜಾಹೀರಾತುದಾರರಿಗೆ, ಈ ಸಂಚಿಕೆ ತುಂಬ ಸುಂದರ ರೂಪ ತಳೆದು ನಿಮ್ಮೆದುರು ನಿಲ್ಲುವಂತೆ ಬಹು ಪರಿಶ್ರಮಿಸಿದ ನಮ್ಮೆಲ್ಲ ಸಹಕಾರಿಗಳಿಗೆ ಮೊದಲಿಗೆ ವಂದಿಸಿ, ನಮಗೆ ಆಶ್ರಯ ನೀಡಿ ಮೆಚ್ಚುಗೆ ಸೂಚಿಸುವ ನಿಮಗೂ ಇದೊ ವಂದನೆಗಳು.

ಈ ದೀಪಾವಳಿ ಎಂದಿನಂತೆ ನಿಮಗೂ ನಮಗೂ ಹರುಷವನ್ನುಂಟು ಮಾಡಲಿ. ಶುಭದಾಯಕವಾಗಿ ಪರಿಣಮಿಸಲಿ ಎಂಬ ಹಾರೈಕೆಯೊಂದಿಗೆ ಈ ಸರ್ವಾಂಗ ಸುಂದರ ಸಚಿತ್ರ ಸಂಚಿಕೆಯನ್ನು ನಿಮ್ಮ ಕೈಯಲ್ಲಿರಿಸುವೆವು,





ಒಂದು ವಿವೇಚನೆ

# ಹಿಂದು ಧರ್ಮ - ಏನು ಮತ್ತು ಏಕೆ?

—ರಂಗನಾಥ ದಿವಾಕರ

ನಮ್ಮ ದೇಶದ ಸುಮಾರು ೪೭ ಕೋಟಿ ಅಂದರೆ ನೂರರಲ್ಲಿ ೮೫ ಪಾಲು ಜನರ ಧರ್ಮವನ್ನು ನಾವೆಲ್ಲ ಹಿಂದು ಧರ್ಮವೆಂದು ಕರೆಯುತ್ತೇವೆ. ಭಾರತದ ಹೊರಗಡೆ ಪಾಕಿಸ್ತಾನದಲ್ಲಿ ಸುಮಾರು ಒಂದು ಕೋಟಿ ಹಿಂದು ಧರ್ಮೀಯರಿರುವರಾದರೆ ಇನ್ನರ್ಧ ಕೋಟಿಯಷ್ಟು ಹಿಂದುಗಳು ಜಗತ್ತಿನಾದ್ಯಂತ ಇತರ ದೇಶಗಳಲ್ಲಿ ಹರಡಿಕೊಂಡಿದ್ದಾರೆ.

ಆದರೆ ಹಿಂದು ಎಂಬುದು ಈ ಧರ್ಮದ ಮೂಲ ಹೆಸರಲ್ಲ. ಅದು ತೀರ ಇತ್ತೀಚೆಗೆ ವಾಯುವ್ಯದಿಂದ ಭಾರತಕ್ಕೆ ಬಂದ ವಿದೇಶಿಯರು ಇಟ್ಟ ಹೆಸರೆನ್ನಬೇಕು. ಹಾಗೆ ಬಂದವರು ಮೊದಲು ತಲುಪುವುದು ಸಿಂಧು ನದಿಯನ್ನು. ಆ ನದಿಯನ್ನು ಅವರು ಹಿಂದು, ಇಂದು ಎಂದೆಲ್ಲ ಕರೆದರು. ಅಂತೆಯೇ ಸಿಂಧು ನದಿಯ ನಾಡಿನವರೆಲ್ಲ ಹಿಂದುಗಳಾದರು; ಈ ನಾಡು ಇಂಡಿಯಾ ಆಯಿತು. ಆದರೆ ಭಾರತೀಯರು ಮಾತ್ರ ಇದನ್ನು ಹಿಂದು ಧರ್ಮವೆಂದು ಕರೆದಿಲ್ಲ. ಈ ಧರ್ಮದ ಮೂಲ ಹಾಗೂ ಅತಿ ಪ್ರಾಚೀನ ಹೆಸರುಗಳು ಆರ್ಯ ಧರ್ಮ, ಸನಾತನ ಧರ್ಮ ಅಥವಾ ಮಾನವ ಧರ್ಮ.

ಹಾಗೆ ನೋಡಿದರೆ ಜಗತ್ತಿನ ಇತರ ಧರ್ಮಗಳನ್ನು ಗುರುತಿಸುವ ಅರ್ಥದಲ್ಲಿ ಹಿಂದು ಧರ್ಮ ಒಂದು ಧರ್ಮವೇ ಅಲ್ಲ. ಇದರರ್ಥ ಹಿಂದುಗಳೆನಿಸಿಕೊಳ್ಳುವವರಿಗೆಲ್ಲ ಸೈದ್ಧಾಂತಿಕವಾಗಿಯಾಗಲಿ ಸಂಸ್ಥಾಪನ ದೃಷ್ಟಿಯಿಂದಾಗಲಿ ಒಂದೇ ಒಂದು ಧರ್ಮವೆಂಬುದಿಲ್ಲ. ಸಕಲ ಹಿಂದುಗಳ ಮೇಲೆಯೂ ಸಮಾನಾಧಿಕಾರವುಳ್ಳ ಅಥವಾ ಇದೇ ಧರ್ಮವೆಂದು ಅಧಿಕೃತವಾಗಿ ಸಾರುವಂತಹ ಒಂದು ಗುರುಪೀಠವೆಂಬುದಿಲ್ಲ. ಇಲ್ಲವೆ ಮುಸಲ್ಮಾನರಿಗೆ ಮಕ್ಕಾ, ಕ್ರೈಸ್ತರಿಗೆ ಜೆರೂಸಲೇಮ್ ಇರುವಂತೆ ಏಕಮೇವಾದ್ವಿತೀಯವೆನಿಸುವಂತಹ ಧರ್ಮಕ್ಷೇತ್ರವೂ ಹಿಂದುಗಳಿಗಿಲ್ಲ. ಇದೇ ರೀತಿ ಬೈಬಲ್, ಕುರಾನ್ ಅಥವಾ ಧಮ್ಮಪದಗಳಂತೆ ಆಯಾ ಧರ್ಮದವರಿಗೆ ಏಕೈಕವೆಂದು ಹೇಳಬಹುದಾದಂತಹ ಒಂದೇ ಒಂದು ಧರ್ಮಗ್ರಂಥವೂ ಹಿಂದುಗಳಿಗಿಲ್ಲ.

ಇಂತಿರುವಾಗ ಹಿಂದು ಧರ್ಮವನ್ನು ನಾವು ಧರ್ಮವೆಂದು ಕರೆಯಬೇಕಾದರೂ ಏಕೆ ಎಂಬ ಪ್ರಶ್ನೆ ತಂತಾನೆ ಉದ್ಭವಿಸುತ್ತದೆ. ನಿಜ, ಈ ಮಾತು ಅನೇಕ ಹಿಂದುಗಳನ್ನು ಕೆರಳಿಸಬಹುದಾದರೂ ಇದರಲ್ಲಡಗಿದ ಸತ್ಯಾಂಶವನ್ನು ಅಲ್ಲಗಳೆಯಲಿಕ್ಕಾಗದು.

## ತೀರ ಭಿನ್ನ

ಇತರ ಧರ್ಮಗಳಿಂದ ಹಿಂದು ಧರ್ಮ ತೀರ ಭಿನ್ನವಾಗಿದೆ ಎಂದೆನ್ನುವುದಕ್ಕೆ ಒಂದು ವಿಶಿಷ್ಟ ಕಾರಣವಿದೆ. ಯಾಕೆಂದರೆ ಆಧ್ಯಾತ್ಮಿಕ ಅಭಿವೃದ್ಧಿ ಸಾಧನೆಯಲ್ಲಿ ತನ್ನದೇ ಆದ ಸ್ವಾತಂತ್ರ್ಯಪೂರ್ಣ ಮಾರ್ಗವನ್ನು ತೋರುವ ಒಂದು ಪದ್ಧತಿ ಹಿಂದು ಧರ್ಮ. ಪ್ರತಿಯೊಬ್ಬ ಸ್ತ್ರೀ-ಪುರುಷರೂ ಪರಮ ಸತ್ಯವನ್ನೇ ಅರಸುವಂತೆ, ಅದರ ಶೋಧನೆಯ ದಾರಿಯಲ್ಲಿ ಮುನ್ನಡೆಯುವಂತೆ ಅದು ಮಾರ್ಗದರ್ಶಿಯಾಗಿದೆ. ಆತ್ಮದ ಸತ್ಯದ ಶೋಧನೆಗಾಗಿ ರೂಪುಗೊಂಡಿರುವ ಮಾರ್ಗಗಳಲ್ಲಿಯೇ ಇದು ಅತ್ಯಂತ ಸಹಿಷ್ಣುವೂ ಪ್ರಗತಿಪರವೂ ಆದುದಾಗಿದೆ. ಇಲ್ಲಿ ಪ್ರತಿಯೊಬ್ಬನೂ ತನ್ನ ತನ್ನ ಶಕ್ತ್ಯಾನುಸಾರವಾಗಿಯೇ ಪ್ರಯತ್ನಿಸಿ ಸಿದ್ಧಿಯತ್ತ ಸಾಗಬಹುದಾಗಿದೆ. ದೇವರನ್ನು ಅಥವಾ ಸತ್ಯವನ್ನು ಯಾವುದೇ ರೀತಿಯಲ್ಲಿ ಅರಸುವವರಿಗೂ ಹಿಂದು ಧರ್ಮದಲ್ಲಿ ಸ್ಥಾನವಿದೆ. ಒಬ್ಬನು ದೇವರನ್ನು ಸಗುಣ ಸಾಕಾರನೆಂದು ಪೂಜಿಸಿದರೆ ಮತ್ತೊಬ್ಬನು ನಿರ್ಗುಣ ನಿರಾಕಾರನೆಂದು ಆತನನ್ನು ಕುರಿತು ತಪಸ್ಸು ಮಾಡಬಹುದು. ಹಿಂದು ಧರ್ಮದಲ್ಲಿ ಇಬ್ಬರಿಗೂ ಅಷ್ಟೇ ಸ್ಥಾನವಿದೆ, ಅವಕಾಶವಿದೆ. ಈ ಕಾರಣಕ್ಕಾಗಿಯೇ ಇದು ಎಂಥ ಪರಿಸ್ಥಿತಿಗೂ ಹೊಂದಿಕೊಳ್ಳಬಲ್ಲದು. ಎಲ್ಲದಕ್ಕೂ ತನ್ನಲ್ಲಿ ಅವಕಾಶ ಕಲ್ಪಿಸಿಕೊಡಬಲ್ಲದು; ಯಾರನ್ನೂ ಎಂಥವರನ್ನೂ ಒಳಗೊಳ್ಳಬಲ್ಲದು. ಆದರೆ, ಅದೇ ಸಮಯಕ್ಕೆ ಅದು ಇತರ ಕೆಲವು ಧರ್ಮಗಳಂತೆ ಆಕ್ರಮಣಶೀಲವಾಗಿಲ್ಲ; ಇತರರನ್ನು ಮತಾಂತರದ ಮೂಲಕ ತನ್ನ ಒಳವಿನಲ್ಲಿ ಸೆಳೆಯಲೆಳಸುತ್ತಿಲ್ಲ.

ಸಾಮಾನ್ಯವಾಗಿ ಸಂಸ್ಕೃತ ಶಬ್ದ 'ಧರ್ಮ' ಅಥವಾ ಪಾಲಿ 'ಧಮ್ಮ'ಕ್ಕೆ ಇಂಗ್ಲೀಷಿನಲ್ಲಿ ಸಮಾನ ಶಬ್ದ religion ಎಂದು ಹೇಳುವುದರಿಂದ ಅನೇಕ ಸಲ ಗೊಂದಲಕ್ಕೆ ಸಿಕ್ಕಿಕೊಳ್ಳುತ್ತೇವೆ. ಆದರೆ ಇಂಗ್ಲೀಷಿನ religionಗೂ ಸಂಸ್ಕೃತ ಧರ್ಮಕ್ಕೂ ಮಹದಂತರವಿದೆ. ಧರ್ಮವೆಂದರೆ ಜೀವನ ನಿಯಮ. ವಿಶ್ವದ ಪ್ರತಿ ಕಣವನ್ನು ಅದು ಒಳಗೊಳ್ಳುತ್ತದೆ. ಪೃಥ್ವಿಯ ಧರ್ಮವೆಂದರೆ ತನ್ನ ಮೈಸುತ್ತಲೂ ತಿರುಗುತ್ತ, ಸೂರ್ಯನಿಗೆ ಪ್ರದಕ್ಷಿಣೆ ಹಾಕುವುದು. ಧರ್ಮವೆಂದರೆ ಸತ್ಯ ಎಂದೂ ಹೇಳಬಹುದು.

## ಸತ್ಯಕ್ಕಿರುವ ಸ್ಥಾನ

ಋಗ್ವೇದವು ಹಿಂದುಗಳ ಅತ್ಯಂತ ಪವಿತ್ರತಮ ಗ್ರಂಥಗಳಲ್ಲೊಂದು. ಮಾನವಕುಲದ ಬಹುಶಃ ಅತಿ ಪ್ರಾಚೀನ ಧಾರ್ಮಿಕ ಕಾವ್ಯವೇ ಋಗ್ವೇದವೆಂದು ಹೇಳಬಹುದು. 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ' ಎಂಬ ಋಗ್ವಾಕ್ಯವನ್ನು ನೋಡಿದರೆ ಹಿಂದು ಧರ್ಮದಲ್ಲಿ ಸತ್ಯಕ್ಕಿರುವ ಸ್ಥಾನದ ಕಲ್ಪನೆ ಬಂದೀತು. ಜನರು ಅದನ್ನು ಬೇರೆ ಬೇರೆ ಹೆಸರುಗಳಿಂದ ಕರೆದರೂ ಸತ್ಯ ಮಾತ್ರ ಒಂದೇ ಎನ್ನುತ್ತದೆ ಈ ಋಗ್ವಾಕ್ಯ. ಇನ್ನೊಂದು ಧರ್ಮಗ್ರಂಥ 'ಸತ್ಯಾನ್ನಾಸ್ತಿ ಪರೋ ಧರ್ಮಃ' — ಸತ್ಯಕ್ಕಿಂತ ಮಿಗಿಲಾದ ಧರ್ಮವಿಲ್ಲವೆಂದು ಸಾರುತ್ತಿದೆ. 'ಸತ್ಯಮ್ ವದ, ಧರ್ಮಮ್ ಚರ — ಸತ್ಯವನ್ನು ನುಡಿ, ಧರ್ಮವನ್ನು ಆಚರಿಸು' ಎನ್ನುತ್ತಿದೆ ಉಪನಿಷತ್ತು. ತನ್ನನ್ನು ಅಸತ್ಯದಿಂದ ಸತ್ಯದೆಡೆ ಕರೆದೊಯ್ಯು - 'ಅಸತೋಮಾ ಸದ್ಗಮಯ' ಎಂಬುದು ದೇವರಲ್ಲಿ ಮನುಷ್ಯನ ಪ್ರಾರ್ಥನೆ. ನಮ್ಮ ಪುರಾತನರು ಸೂರ್ಯನನ್ನು ಪ್ರಾರ್ಥಿಸುವ ಬಗೆಯನ್ನು ನೋಡಿ. 'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಮ್ ಮುಖಮ್ — ತತ್ವಮ್ ಪೂಷನ್ ಅಪಾವೃಣು ಸತ್ಯ ಧರ್ಮಾಯ ದೃಷ್ಟಯೇ' - ಸತ್ಯವು ಚಿನ್ನದ ಮುಚ್ಚಳದಿಂದ ಮುಚ್ಚಲ್ಪಟ್ಟಿದೆ; ಓ ಸೂರ್ಯದೇವನೆ, ನಾನು ಸತ್ಯವನ್ನು ನೋಡುವಂತೆ ಅದನ್ನು ತೆಗೆದು ಹಾಕು. 'ಸತ್ಯಮೇವ ಜಯತೇ ನಾನೃತಮ್' - ಸತ್ಯಕ್ಕೆ ಜಯ ಅಸತ್ಯಕ್ಕಲ್ಲ ಎಂದು ನಮ್ಮ ಧರ್ಮಗ್ರಂಥಗಳು ಸಾರಿ ಸಾರಿ ಹೇಳುತ್ತಿವೆ.

ಏಕಕಾಲಕ್ಕೆ ಅತೀತವೂ ಅಂತಸ್ಥವೂ ಆಗಿರುವಂತಹ ಏಕಮೇವ ಪರಮ ಶಕ್ತಿಯನ್ನು ಹಿಂದು ಧರ್ಮ ನಂಬುತ್ತದೆ. ಗೋಚರ ಅಗೋಚರವಾದುದೆಲ್ಲವೂ ವಾಸ್ತವಿಕ ಕಾಲ್ಪನಿಕವಾದುದೆಲ್ಲವೂ ಆ ಪರಮ ಶಕ್ತಿಯ ಲೀಲೆ ಮಾತ್ರ. ಆ ಶಕ್ತಿಯು ಅನಾದಿ ಅನಂತವೂ ಚಿದಾನಂದಮಯವೂ ಆಗಿರುವ ಪ್ರಜ್ಞೆಯ ಸ್ವರೂಪ. ಪ್ರತಿ ವ್ಯಕ್ತಿಯೂ ಆ ದೈವೀ ಶಕ್ತಿಯ ಒಂದೊಂದು ಕಣ. ವ್ಯಕ್ತಿ ತನ್ನ ಅಹಂಕಾರದಿಂದ ಮುಕ್ತನಾಗಿ ಆ ದೈವೀ ಶಕ್ತಿಯನ್ನರಿತು ಅದರೊಂದಿಗೆ ತನ್ಮಯನಾಗಿ ಆ ಶಕ್ತಿಯ ಸೇವಕ ಮಾತ್ರನಾಗಿ ಬಾಳುವುದೇ ಮಾನವ ಜೀವನದ ಗುರಿಯಾಗಿದೆ.

ಹಿಂದುಗಳು ಕರ್ಮಕಾಂಡವನ್ನು ದೃಢವಾಗಿ ನಂಬುತ್ತಾರೆ. ಕರ್ಮಸಿದ್ಧಾಂತವೆಂದರೆ ನಿಜವಾಗಿಯೂ ಕಾರ್ಯ ಕಾರಣ ನಿಯಮವೇ ಆಗಿದೆ. ಕ್ರಿಯೆ-ಪ್ರತಿಕ್ರಿಯೆಗಳು ಪರಸ್ಪರ ವಿರುದ್ಧವೂ ಸಮಾನವೂ ಆಗಿರುವವೆಂಬುದು ಈ ನಿಯಮದ ಅನುಸಿದ್ಧಾಂತವೇ ಸರಿ. ಆದರೆ ಕರ್ಮವೆಂಬುದು ಒಬ್ಬ ವ್ಯಕ್ತಿಗತ ಮಾತ್ರವಾದುದಲ್ಲ. ವಿಶ್ವಕರ್ಮವೆಂಬುದೂ ಇದೆ. ವ್ಯಕ್ತಿಗತ ಕರ್ಮವು ಈ ವಿಶ್ವಕರ್ಮದ ಸೂಕ್ಷ್ಮಾತಿಸೂಕ್ಷ್ಮ ಅಂಶವೊಂದು. ತನ್ನ ಕರ್ಮದ ಬಗೆಗೆ ತನಗಿರುವ ಅಹಂಭಾವವನ್ನು ಮೀರಿ ಅಂತಹ ದೈವೀ ಪ್ರಜ್ಞೆಯಲ್ಲಿಯೇ ತಾನು ಲೀನನಾಗುವುದರೊಂದಿಗೆ ವ್ಯಕ್ತಿಯು ತನ್ನ ಪ್ರಜ್ಞೆಯನ್ನು ಕರ್ಮಬಂಧನದಿಂದ ಮುಕ್ತಗೊಳಿಸಬಹುದಾಗಿದೆ.

## ಜೀವನ ಪದ್ಧತಿ

ಹಿಂದು ಧರ್ಮವು ಮನುಷ್ಯನ ವಿಕಾಸದೊಂದಿಗೆಯೇ ಬೆಳೆಯುವ ಜೀವನ ಪದ್ಧತಿ. ಹಿಂದುಗಳಿಗೆ ಬಳುವಳಿಯಾಗಿ ದೊರೆತಿರುವ ಪವಿತ್ರ ಸಾಹಿತ್ಯ ವಿಪುಲವಾಗಿರುವಂತೆಯೆ ವೈವಿಧ್ಯಪೂರ್ಣವೂ ಆಗಿದೆ.

# ಚೆಲ್ಲಾಟದ ಚದುರೆ

ಕೈಪು ಲಕ್ಷ್ಮೀನರಸಿಂಹ ಶಾಸ್ತ್ರೀ

ರಸಿಕತೆ ಸುಖ ಸಂತೋಷಗಳ ಕನ್ನಡಿ. ಚೆಲ್ಲಾಟವು ರಸಿಕತೆಯ ಒಂದು ಅಂಗ. ಆದ್ದರಿಂದಲೇ ಸಮಾಜವನ್ನು ರೂಪಿಸುವ ಸಾಹಿತ್ಯಕ್ಕೆ ಶೃಂಗಾರ ಬೇಕಾಯಿತು. ಕವಿಯು ಶೃಂಗಾರಿಕನಾಗಬೇಕಾಯಿತು. ಅಗ್ನಿಪುರಾಣದಲ್ಲಿ ಹೇಳಿದ

ಶೃಂಗಾರೀ ಚೇತ್ಕವಿಃ ಕಾವ್ಯೇ ಜಾತಂ ರಸ-
ಮಯಂ ಜಗತ್
ಸ ಚೇತ್ ಕವಿರ್ವೀತರಾಗೋ ನೀರಸಂ
ವ್ಯಕ್ತಮೇವ ತತ್ ॥
(೩೩೯।೧೧)

ಅಂದರೆ ಕವಿಯು ಶೃಂಗಾರಿಕನಾಗಿದ್ದರೆ ಮಾತ್ರ ತನ್ನ ಕಾವ್ಯದಿಂದ ಲೋಕವನ್ನು ರಸಮಯವನ್ನಾಗಿ ಮಾಡುತ್ತಾನೆ; ಇಲ್ಲದಿದ್ದರೆ ನೀರಸ

ಇನ್ನು ವಿಶ್ವದ ಆಧಾರಸ್ತಂಭಗಳೆಂದರೆ ಸ್ತ್ರೀ-ಪುರುಷರು ಚೆಲ್ಲಾಟಕ್ಕೆ ಸೊಗಸೆಂದರೆ ಚದುರೆಯಿಂದ. ಕನ್ನಡದ ಜಾಣರೂ ರಸಿಕರೂ ಆದ ಕಬ್ಬಿಗರು ಚೆಲ್ಲಾಟದ ಚದುರೆಯ ಸೊಗಸನ್ನು ಸೂರೆ ಮಾಡಿದ್ದಾರೆ ದಾಂಪತ್ಯ ಜೀವನದಲ್ಲಿ ಒಲವಿನ ಅಡಿಗಲ್ಲಾದ ಚೆಲ್ಲಾಟವು ಹೇಗೆ ಮಾನವರ ಮೈಗುಣವಾಯಿತೆಂದು ನಿರೂಪಿಸಿದ್ದಾರೆ

## ಜಾಣ ದಂಪತಿಗಳ ಚುರುಕು

ಜಾಣೆಯ ನುಡಿ ವೀಣೆಯ ಸ್ವರದ ಹಾಗೆ. ಅವಳು ಚದುರೆಯೆನಿಸಿದ್ದರಂತೂ ಮಾತೆಲ್ಲಾ ಮಧುರವಾದ ಹಾಡು ಅಂತಹವಳಿಗೆ ಪ್ರಾಯವೊಂದೇ ಸಾಲದು. ಚೆಲ್ಲಾಟವೂ ಬೇಕು ಬಿಲ್ಲು ಶಬರಗೆ ಲೇಸು ಬೆಲ್ಲ-ದಂಬಲಿ ಲೇಸು ಚೆಲ್ಲಾಟ ಹರೆಯದಲ್ಲಿ ಲೇಸು. ಆದರೆ ಅದಕ್ಕೆ ನಲ್ಲನೂ ಬಲ್ಲ ರಸಿಕನಾಗಿರಬೇಕು. ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ ಸೊಗಸುತ್ತದೆ. ಮಾತು ಬಲ್ಲಾತಂಗೆ ಯಾತವು ಸುರಿದಂತೆ ಇಲ್ಲದವನಿಗೆ ಬರಿ ಯಾತ ನೇತಾಡಿದಂತೆ - ಎಂದನು ಸರ್ವಜ್ಞ ಕವಿ

ಜಾಣ ದಂಪತಿಗಳು ಒಡಾಡುತ್ತ ಕೊಳದ ಬಳಿಗ ಬಂದರು. ಕೊಳದಲ್ಲಿನ ಪದ್ಮದ ಕಡೆಗೆ ಬೆರಲು ತೋರಿ ನಕ್ಕು ನಲ್ಲೆಗೆ ನುಡಿದನಾತ - "ನೋಡಿದೆಯಾ ಈ ಪದ್ಮಿನಿಯನ್ನು ! ಇವಳಿಗೆ ರಾಜಹಂಸಗಳ ಕ್ರೀಡೆ. ಮಧುಪ( ದುಂಬಿ )ಗಳ ಗೋಷ್ಠಿಯಲ್ಲಿ ಇಷ್ಟ ಇಷ್ಟದ್ದೂ ತಾನು ರವಿಯ ಅರಸಿಯೆಂದು ಹೇಳಿಕೊಳ್ಳುತ್ತಾಳೆ. ಹುಂ. ಹೆಣ್ಣಿನ ಗುಣವೇ ಹಾಗೆ ಕೆಸರಿನಲ್ಲಿ ಹುಟ್ಟಿದ ಚಂಚಲೆಯಿವಳು. ಗಂಡನು ಯಾವ ಲೆಕ್ಕ ?"

"ಛೇ ಛೇ, ಹೀಗಾಡಬೇಡಿ"– ಆ ಜಾಣೆ ಅರಿತು ಉತ್ತರ ಕೊಟ್ಟಳು. " ರಾಜಹಂಸ- ಮಧುಪಗಳನ್ನು ಬರಿಸುವುದು ತಪ್ಪೇ ? ತಾಯಿಯು ಮಕ್ಕಳೊಡನೆ ಇರಬಾರದೇ ? ಗಂಡನ ಬಗ್ಗೆ ಭಯಭಕ್ತಿಗಳನ್ನಿಟ್ಟುಕೊಂಡು ನಡುಗಿದ ಮಾತ್ರಕ್ಕೇನೇ ಚಂಚಲೆಯೆನ್ನುವುದು ಯಾವ ನ್ಯಾಯ ? ಹೆಣ್ಣಿನ ಪವಿತ್ರ ನಿಮಗೆ ಗೊತ್ತಿಲ್ಲವೇ ? ಗಂಗೆಯನ್ನು ಶಿವನು



ತಲೆಯ ಮೇಲಿಟ್ಟುಕೊಂಡು ಆದರಿಸಿದಾನೆಂಬುದನ್ನು ಮರೆಯಬೇಡಿ !"

ಕೃಷ್ಣ - ರುಕ್ಮಿಣಿಯರ ಈ ಲಲಿತವಾದ ಚೆಲ್ಲಾಟವನ್ನು ನಿರೂಪಿಸಿದವನು ಕವಿಚೂತನ ಚೈತ್ರನಾದ ಲಕ್ಷ್ಮೀಶ (ಜೈ.ಭಾ. : ೬।೧೧)

## ಬೆಳುದಿಂಗಳಲ್ಲಿ ಬೆಳುಕು

ಚದುರೆಯರೊಡನೆ ಚೆಲ್ಲಾಟವಾಡಿದರೆ ತಪ್ಪಲ್ಲ ಆದರೆ ಅಂತಸ್ತು ಮೀರಬಾರದು. ಒಲ್ಲದವಳೊಡನೆ ಚೆಲ್ಲವಾಡಲು ಹೋದರೆ ಕಲ್ಲುಬೊಂಬೆಯನ್ನು ಚುಂಬಿಸಿ ಹಲ್ಲು ಮುರಿದುಕೊಂಡಂತಾಗುತ್ತದೆ. ಚೆಲ್ಲಾಟವಾಡಲು ಬಂದ ಒಬ್ಬನು ಮಾತಿಗೆ ತೊಡಗಿದನಂತೆ

"ಸರಸಿಜಾನನೆ ಹೇಳು !"

ಅವನನ್ನು ಒಳ್ಳೆಯ ಮಾತಿನಲ್ಲೇ ಎಬ್ಬಿಸಿ ಕಳುಹಿಸಬೇಕೆಂದುಕೊಂಡಳಾಕೆ -

" ಪೂರ್ಣಚಂದ್ರನ, ಕೇಳು " ( ಸರಸಿಜಕ್ಕೆ ಚಂದ್ರನು ವೈರಿ ತಾನೇ ?)

"ಆಹಾ ! ಸೈದಿಲೆಗಣ್ಣವಳೆ !"
"ಕೇಳಯ್ಯಾ. ಬಾಲಭಾಸ್ಕರ"
"ಕರಿಕುಂಭಕುಚೆ ಪೇಳ್"
"ಮಹಾಪುರುಷಸಿಂಹ ಕೇಳ್"

......ಅವನು ಸ್ವಲ್ಪ ಹೊತ್ತಿನಲ್ಲೇ ಇದ್ದಲ್ಲಿಂದ ಜಾರಿಕೊಂಡು ಎದ್ದು ಹೋದ

ಸಮಯ ಇಂಗಿತಗಳನ್ನರಿತರೆ ಮಾತ್ರ ಚೆಲ್ಲಾಟದಲ್ಲಿ ಸಿಕ್ಕೀತು !

ಅದೊಂದು ಬೆಳ್ದಿಂಗಳ ರಾತ್ರಿ. ಚಪ್ಪರದ ಕೆಳಗೆ ದಂಪತಿಗಳು ಕುಳಿತಿದ್ದಾರೆ. ನಲ್ಲೆಯ ಸಿಂಗರದೊಡನೆ ಸರಸದ ಬುಗ್ಗೆಯೂ ನಗೆಯಾಗಿ ಕೆನ್ನೆಯಲ್ಲಿ ಚಿಮ್ಮುತ್ತಿದೆ ನಲ್ಲನಿಗೆ ಆಕೆಯ ಮಿದುವ ತುಟಿಯನ್ನು ಕಂಡು ಮೈ ಪುಳಕಗೊಂಡಿತು. ಆದರೆ ಸಭ್ಯತೆಯನ್ನು ಮೀರಿ ಸರಸಕ್ಕೆ ಒರಟುತನ ತರಬಾರದು. ಮೆಲ್ಲನೆ ಅವನೆಂದ —

"ನೋಡು ಆ ಚಂದ್ರಬಿಂಬವನ್ನು ! ಆದರೂ ನಿನ್ನ ಮೊಗದ ಸೌಂದರ್ಯಕ್ಕೆ ಸಮನಲ್ಲ. ನಿನ್ನ ಮೊಗ ನಿಷ್ಕಳಂಕ. ಅವನ ಮೊಗವೆಲ್ಲಾ ಬಿಳುಪಾಗಿದ್ದರೂ ಮಧ್ಯದಲ್ಲಿ ಸ್ವಲ್ಪ ಕಪ್ಪು !"

— ಆಕೆ ತನ್ಮಯತೆಯಿಂದ ಚಂದ್ರನನ್ನು ನೋಡತೊಡಗಿದಳು. ಹಾಗೆ ಮೈಮರೆಸಿ ಅಧರವನ್ನು ಚುಂಬಿಸಿದ ಆ ಚದುರನು ಸೀ- ಎಂಬ ಸೀತ್ಕಾರ ಶಬ್ದ ಕೇಳದ ಹಾಗೆ ಅವಳ ಬಳೆಗಳನ್ನು ಗಲಗಲನೆ ಅಲ್ಲಾಡಿಸಿದನು !

(ಚೆನ್ನಬಸವ ಪುರಾಣ : ೧।೧೦।೫೫,೨೭)

ತನ್ನ ಚೆಲ್ಲಾಟಕ್ಕೆ ಚದುರೆ ಬಯಸುವುದೇನಿದೆ ? ದಾಂಪತ್ಯದ ಸೌಖ್ಯ ನಲ್ಲನಿಂದ ಒಲವು, ಒಲಿದವನು ವಶನಾಗುವುದಕ್ಕಿಂತ ಬೇರೆ ಭಾಗ್ಯವೇ ಅವರಿಗೆ ಬೇಕಿಲ್ಲ

ಈತನು ಅಂತಹವನೇ ನಲ್ಲಳು ಚುಂಬಿಸಿಕೊಟ್ಟ ತಾಂಬೂಲವೇ ಬೇಕು ಆತನಿಗೆ ಆಕೆಯ ಮೈ ಮುಟ್ಟಿದ ಹೊದಿಕೆಯೇ ಬೇಕು ಆಕೆಯ ಸಿರಿಮುಡಿಯಿಂದ ಉದುರಿದ ಹೂವೇ ಬೇಕು, ಆಕೆಯ ಅಪ್ಪುಗೆಯಿಂದ ಎದೆಗಂಟಿದ ಗಂಧವೇ ಬೇಕು. ಇಂತಹವನ ಬಗ್ಗೆ ಆಕೆಗೂ ಹೆಮ್ಮೆ—

"ಗೆಳತೀ. ನಮಗಾವ ಕೊರತೆ ತಾನೇ ಇದೆ ? ಒಂದೇ ನೋಟ ಒಂದೇ ಬೇಟ ಒಂದೇ ಮಾತು, ಒಂದೇ ಗುಣ. ಯೌವನ. ಸೌಖ್ಯ! ನಮಗೆ ಸಮಾನರಾರು ?" (ರಾಜಶೇಖರ ವಿಲಾಸ : ೧೧।೧೩೧)

## ಜಳಕದಲ್ಲಿ ಕುಲುಕು

ಈ ವಿಲಾಸ ವಿಭ್ರಮಗಳ ಚೆಲ್ಲಾಟದ ಹಬ್ಬ ಉಪ್ಪರಿಗೆಗಳಲ್ಲೇ ಕಾಣಬೇಕೆಂದೇನೂ ಇಲ್ಲ

ಅದೋ ಗದ್ದೆಯಲ್ಲಿ ಮುಗ್ಧೆಯ ಚೆಲ್ಲಾಟ ! ಭತ್ತದ ತೆನೆಗಳಿಗೆ ಮುಸುರಿದ ಗಿಳಿಗಳನ್ನು ಓಡಿಸಲೆಂದು ಆಕೆ ಬೀಸಿದ ಕವಣೆಕಲ್ಲು ಪಕ್ಕದ ಗದ್ದೆಯ

"ಆಹಾ ! ಆಶ್ಚರ್ಯ, ಜೇಬಿಯಲ್ಲಿ ಅಭಿವ್ಯಕ್ತಿಯಂತೆ ಪಡೆದು ಸಾಮರ್ಥ್ಯವಾದ ಚತುರೋಪಾಯಗಳಿದ್ದರೂ ಸಿಂಹವು ಮುಗ್ಧೆಯ ಅಂಗವನ್ನು ಆಶ್ರಯಿಸಿದೆಯಲ್ಲ !"

ಆ ನೀರೆ ನಗುತ್ತಾ ಹೇಳಿದಳು— "ಅಯ್ಯೋ ಮರುಳೆ ಆಟಲೆಯನ್ನು ಆಶ್ರಯಿಸಿದ ಮೇರು ಪರ್ವತವು ಸಹ ಮಾನವನ ಕೈಯ ಹಿಡಿಯಷ್ಟಾ ಗುತ್ತದೆಂದು ನಿನಗಿನ್ನೂ ಗೊತ್ತಿಲ್ಲ !"

( ಜೈ. ಭಾ. : ೬।೨೪ )

## ರಸಿಕತೆಯತಿ ತುಳುಕು

ಹಲವರು ಚದುರೆಯರು ಒಟ್ಟುಗೂಡಿದರಂತೂ ಚೆಲ್ಲಾಟದ ಮಾತುಗಳು ಮತ್ತೂ ಸೊಗಸು. ಹೊಸ ವಧು ಅಲಂಕರಿಸಿಕೊಂಡು ನಿಂತಳಂತೆ ಅವಳ ಸ್ತನಭಾಗದ ಮೇಲೆ ಕಂಠಹಾರ ಓಲಾಡುತ್ತಿದೆ. ಹತ್ತಿರದಲ್ಲಿದ್ದ ಒಬ್ಬಳು ಆ ವಧುವಿನ ಕುಚಗಳನ್ನೇ ನೋಡುತ್ತಾ ಮತ್ತೊಬ್ಬಳೊಡನೆ ಹೇಳಿದಳು—

"ಆಶ್ಚರ್ಯವನ್ನು ಕಂಡೆ ! ಎಂದೆಂದಿಗೂ ಅರಳಿದ ತಾವರೆಯ ಮೊಗ್ಗುಗಳನ್ನು ನೀನು ಕಂಡಿದ್ದೀಯಾ?"

ಅದಕ್ಕೆ ಮತ್ತೊಬ್ಬಳು ಉತ್ತರ ಹೇಳಿದಳು—



"ಇದು ಆಶ್ಚರ್ಯವೇನೂ ಅಲ್ಲ. ಹೀಗೆ ಯಾವಾಗಲೂ ನಕ್ಷತ್ರಗಳ ನಡುವೆ ಚಂದ್ರನು ಪ್ರಕಾಶಿಸುತ್ತಿದ್ದರೆ ಅವು ಅರಳುವುದಾದರೂ ಹೇಗೆ ಸಾಧ್ಯ ಹೇಳು"

—ಎನ್ನುತ್ತಾ ವಧುವಿನ ಮುಖಚಂದ್ರವನ್ನೂ ಹಾರದ ಮುತ್ತುಗಳನ್ನೂ ತೋರಿಸಿದಳು.

( ಚಿ. ಬ. ಪು. : ೨೧।೪೭ )

ಆದರೆ ಈ ಚೆಲ್ಲಾಟ ಜೀವನದ ಸೌಖ್ಯಕ್ಕೆ ಮದ್ದು. ಎಂತಹ ಕಷ್ಟ-ದುಃಖಗಳನ್ನೂ ಈ ಚೆಲ್ಲಾಟ ಮರೆಸುತ್ತದೆ.

ರಾಜ್ಯಕ್ಕೆ ಹೋರಾಡುವ ಆಪತ್ತು ಸಂಭವಿಸಿದೆ ನಗರದ ಗಂಡಸರೆಲ್ಲರೂ ಪಟುಭಟರಾಗಿ ಹೋಗ ಬೇಕಾಯಿತು. ಮಂಗಳೆಯರೆಲ್ಲರೂ ನಲ್ಲರ ಹಣೆಗೆ ತಿಲಕವನ್ನಿಟ್ಟು ಬೀಳ್ಕೊಟ್ಟರು ಅಗಲಿಕೆಯ ವೇದನೆಯನ್ನು ಹೃದಯದಲ್ಲಿಟ್ಟುಕೊಂಡರೂ. ದೇಶ ರಕ್ಷಣೆಗಾಗಿ ಅವರ ತ್ಯಾಗ ಒಂದು ಹೆಮ್ಮೆ. ಎಲ್ಲರೂ ಉಪ್ಪರಿಗೆಗಳನ್ನು ಹತ್ತಿದರು. ರಸಿಕಳಾದ ಒಬ್ಬ ಪ್ರೌಢೆ ಪಕ್ಕದ ಚದುರೆಯೊಡನೆ ಚೆಲ್ಲಾಟದ ಮಾತನ್ನಾಡಿದಳು—

"ಇದೇನೇ ಅಮ್ಮ ಈ ವೀರರು ಇಂಥ ರಥಗಳನ್ನು ಆರಿಸಿಕೊಂಡಿದ್ದಾರೆ ! ಚಕ್ರ ಸಡಿಲವಾಗಿ ಕಳಚುವಂತಿದೆ. ಇದರಿಂದ ಏನು ಸುಖ ? ಇದನ್ನು ಹತ್ತಿದರೆ ವೇಗ ಮಂದವಾಗುವುದಿಲ್ಲವೆ ?"

ಚದುರೆಯು ನಕ್ಕು ನುಡಿದಳು—

"ಎಲ್ಲಾದರೂ ಉಂಟೆ ? ಹೊಸ ರಥವನ್ನೇರಿದರೆ ಕಿರ್ರೋ ಎಂದು ಕೂಗುತ್ತದೆ. ಆದ್ದರಿಂದಲೇ ಹಲವು ಸಲ ಹತ್ತಿ ಹೋರಾಡಿ ಪಳಗಿದ ರಥಗಳನ್ನೇ ಇವರು ಪತ್ತೆ ಹಚ್ಚಿ ಹತ್ತಿದ್ದಾರೆ. ಬಹಳ ಹೊತ್ತು ಹೋರಾಡಲು ಇವೇ ಅನುಕೂಲವೆಂದು ನಿನಗೆ ಗೊತ್ತಿಲ್ಲವೇನೋ !"

( ರಾಮಾಶ್ವಮೇಧ : ೬ ನೇ ಆಶ್ವಾಸ )

## ಒಲುವಿನ ನೆಲಕು

"ಅಮ್ಮಾ, ಎಷ್ಟಾದರೂ ನೀನೇ ಚತುರೆ ಲೋಕದಲ್ಲಿ ಕೃಷ್ಣನನ್ನು ಮೆಚ್ಚಿಸಲು ಹದಿನಾರು ಸಾವಿರ ಸತಿಯರಿಗೂ ಆಗಲಿಲ್ಲ ಅಂತಹವನನ್ನು ಒಲಿಸಿಕೊಂಡವಳು ನೀನು. ಇನ್ನು ಐದು ಜನರನ್ನು ಮರುಳು ಮಾಡುವುದು. ನಿನ್ನಂತಹ ಪತಿವ್ರತೆಗೆ ಕಷ್ಟವೇ ?..."

—ಸತ್ಯಭಾಮೆ ಆಡಿದ ಈ ಚೆಲ್ಲುಮಾತಿಗೆ ದ್ರೌಪದಿ ಏನೆಂದು ಉತ್ತರ ಹೇಳಬೇಕು ? ಹೇಳಿದಳು—

"ಅಮ್ಮಾ, ಆತನು ಕಾರುಣ್ಯನಿಧಿ ಅಮರನಾಥ ನನಗೆ ಇರುವ ದಿಕ್ಕು ಆತನಲ್ಲದೆ ಇನ್ನಾರು ? ಅಂದು ಕೌರವನ ಸಭೆಯಲ್ಲಿ ನನ ಮಾನವನ್ನು ಕಾಪಾಡಿದ್ದು ನನ್ನ ಐದು ಜನ ಗಂಡರಲ್ಲ. ಇಷ್ಟು ನಿನ್ನ ಮಾತು. ನಿನಗೆ ಹೇಗೆ ಒಲಿದಾನು ಆತ ? ಅಂದು ನಾರದ ಮುನಿಗೆ ಬಹು ಸುಲಭವಾಗಿ ಗಂಡನನ್ನು ದಾನ ಮಾಡಿದವಳಲ್ಲವೇ ನೀನು ?"

(ಜೈ. ಭಾ. : ೬।೨೬ )

"ಸರಿಯಮ್ಮಾ, ಪತಿಗಳನ್ನೊಲಿಸಲು ಏನಾದರೂ ಮದ್ದು ಇಟ್ಟಿದ್ದೀಯೋ ?"

"ಅದೆಲ್ಲಾ ನನಗೆ ಗೊತ್ತೆ, ಇಲ್ಲಮ್ಮಾ ! ಇಂಗಿತವನ್ನರಿತು ಮೆಚ್ಚಿಸುವುದಷ್ಟೇ ನನಗೆ ಗೊತ್ತಿರುವುದು."

( ಗದುಗು ಭಾರತ : ೧೫।೨೪ )

ಇದು ಚೆಲ್ಲಾಟದ ಒಲಿವಿನ ಮೇಳಕು

ಚದುರೆಯ ಚೆಲ್ಲಾಟ ನಲ್ಲನ ಒಲವಿಗಾಗಿ; ದಾಂಪತ್ಯ ಜೀವನದ ಸಫಲತೆಗಾಗಿ; ಚಪಲದ ಪ್ರದರ್ಶನಕ್ಕಾಗಿ ಅಲ್ಲ.

## ಉಪಾಹಾರ ಮಂತ್ರಿ



ಆಹಾರಶಾಖೆಯ ಉಪಮಂತ್ರಿಯನು ಒಬ್ಬ

ಬುದ್ಧಿವಂತನು ಹೀಗೆ ಹೆಸರಿಟ್ಟ ಕರೆದ

'ಉಪಾಹಾರ ಮಂತ್ರಿ' ಆ ಮಂತ್ರಿ ಎಂದೆನಲು

ಉಪಮಂತ್ರಿ ಕಣ್ಣೀರು ಬಿಟ್ಟು ದುಃಖಿಸಿದ!

— ಗುಂಡ್ಮಿ ಚಂದ್ರಶೇಖರ ಐತಾಳ

"ಕಾಡುವ ಗಂಡ ಹೆಂಡಿರನು ಆ ಬ್ರಹ್ಮ ಏಕೆ ಸೃಷ್ಟಿಸಿದನೋ ! ಹೇಗೆ ನಡೆದರೆ ಪತಿಗೆ ಇಂಪು ತೋರುವುದೋ ಹಾಗೆ ಚೆಲ್ಲಾಟವಾಡುವುದು ಮಾತ್ರ ಕುಲಸತಿಯ ಧರ್ಮ"— ಎನ್ನುತ್ತಾ ಹಬ್ಬಿಗಿತಿ ಹೊನ್ನಕ್ಕ ಹೇಳುತ್ತಾಳೆ—

ಇಂತು ನಡೆದು ಪತಿಗಂತರಂಗೆಯಾದವ್ವ ।

ಕಾಂತೆಯರಿಗೆ ಕೈಯೊಡತಿ ।

ಸಂತಾನ ಸಂಪತ್ತು-ಸೌಭಾಗ್ಯಗಳೆಮ್ಮ ಶ್ರೀ ।

ಕಾಂತನು ಕೈಸೇರಿಸುವನು ।

( ಹದಿಬದೆಯ ಧರ್ಮ : ೩।೫೬ )



# ದೀಪಾವಳಿ ಸ್ಫೋಟಗಳು!




" ಇದು ಆಕಾಶಬಾಣವಲ್ಲ.
ಸಾದಾ ದೀಪ ವಳಿ ಬಾಣ ಕಣೆ!"






" ಪಟಾಕ್ಷಿಹಾರಿ ಮನೆಗೆ ಬೆಂಕಿ ಹತ್ತಿದೆ.
ಅಗ್ನಿಶ್ಯಾಮಕ ದಳದವರಿಗೆ ಬರಹೇಳಿರಿ. "

ವವತು ಸಹನೌಭುನಕ್ತು' ಎಂಬ ಮಂತ್ರದ ರಹಸ್ಯವಲ್ಲವೆ ? ದೀಪಾವಳಿಯ ಹಬ್ಬ ಜೀವನದಲ್ಲಿ ಸಿಂಗಾರ ನಗೆ ನಲಿವು. ಗೆಲವುಗಳನ್ನು ತರುವಂತಹ ಒಂದು ಪ್ರಸಂಗ. ನಮ್ಮ ಭೂಮಿತಾಯಿ ಕರುಣಿಸಿದ ಧಾನ್ಯಲಕ್ಷ್ಮಿ ಮನೆಯ ಕಣಜವನ್ನು ತುಂಬಿರುವಾಗ ತುಂಬಿ ಬಳಗವು ಒಂದುಗೂಡಿಕೊಂಡು 'ಮಕರಂದವನು ಸವಿಯುವಂತೆ ಬಂಧುಬಳಗ ಸೇರಿಕೊಂಡು ಜೀವನ ಮಕರಂದವನ್ನು ಸವಿಯುವ ಸೊಗಸುಗಾರಿಕೆ ನಮ್ಮ ಒಂದು ಸಂಪ್ರದಾಯವಾಗಿದೆ,...

ಬಂಧುಗಳ ದರುಶನ ಪಡೆಯಲು ದೀಪಾವಳಿ ಒಂದು ರಸಸಮಯ ಹೆಣ್ಣುಮಕ್ಕಳು ಅಳಿಯಂದಿರು, ಮೊಮ್ಮಕ್ಕಳು ಹೀಗೆ ಕರಳು-ಬಳ್ಳಿ ದಾಂಗೂಡಿ ಬಿಟ್ಟಂತೆ ಶೋಭಿಸುತ್ತದೆ ದೀಪಾವಳಿ.

ಬಲಿ ಪ್ರತಿಪದೆ! ಲಕ್ಷ್ಮೀಪೂಜೆ! ಮನೆಗೆ ಭಾಗ್ಯವನ್ನು ಬರಮಾಡಿಕೊಳ್ಳುತ್ತೇವೆ.

ಭಾವಬಿದಿಗೆ. ಅಕ್ಕನ ತದಿಗೆಗಳು ಸೋದರ್ಯಕ್ಕೆ ಸವಿ, ಕಂಪು ತರುವ ಸಂದರ್ಭಗಳು. ಭಾವ ಬಿದಿಗೆಯಂದು ಸೋದರ ತನ್ನ ಸೋದರನಿಗೆ ಆರತಿ ಬೆಳಗಿ ಉಡುಗೊರೆ ನೀಡುತ್ತಾಳೆ. ಅಕ್ಕನ ತದಿಗೆಯೆಂದು ಸೋದರನು ಸೋದರಿಗೆ ಕಾಣಿಕೆ ಸಲ್ಲಿಸಿ ಭಾವರಾಗವನ್ನು ಬೆಳಸುತ್ತಾನೆ.

ಭಾವೈಕ್ಯ, ಸದ್ಭಾವನೆಗಳನ್ನು ಪ್ರಕಟಿಸಿ, ಪಸರಿಸಲು ದೀಪಾವಳಿ ಸುಂದರ ಸಂದರ್ಭ. ಅಳಿಯದೇವರೂ ನರಕಚತುರ್ದಶಿಯಂದು ಆರತಿ ತಟ್ಟೆಯಲ್ಲಿ ಪರ್ಸ್ ಬಿಚ್ಚಬೇಕಾಗುವುದು. ಆದರೂ ತುಪ್ಪ ಪಾಯಸದಲ್ಲಿ ಚೆಲ್ಲುವ ಹಾಗೆ ಆ ಪರ್ಸ್ ಮುಟ್ಟುವುದು ಪ್ರಿಯಕರವೇ ಅನ್ನಿ.

ಆದರೆ ಪಾಪ-ಮಾವನಿಗೆ ಮಾತ್ರ ಕಾಣಿಕೆ ಉಡುಗೊರೆ ಸಲ್ಲಿಸುವವರು ಯಾರೂ ಇಲ್ಲ! 'ಅಳಿಯನಿಗೆ ಹೋಳಿಗೆ, ಮಾವಯ್ಯನಿಗೆ 'ಜೋಳಿಗೆ' ಎಂಬುದು ಮಾತ್ರ ಸುಳ್ಳಲ್ಲ

... ಆಗಿನ ಆ ಸಂಪ್ರದಾಯ, ಆ ಸೊಗಸುಗಾರಿಕೆಯನ್ನು ನೆನೆದಾಗ 'ತೇ ಹಿನೋ ದಿವಸಾ ಗತಾ:' ಎಂಬ ಒಂದು ವಿಚಾರ ಮನಸ್ಸನ್ನು ಕೆಣಕುತ್ತದೆ. ಒಟ್ಟು ಕುಟುಂಬದ ದಿನಗಳಲ್ಲ ಇವು. ಮುಂಬಯಿಯಂತಹ ಮಹಾನಗರದಲ್ಲಿ ಗಂಡ ಹೆಂಡಿರಿಬ್ಬರೂ ಬದುಕಿಗಾಗಿ ಉಪಜೀವನ ಮಾಡಬೇಕಾಗುತ್ತದೆ. ಮಧ್ಯಾಹ್ನದ ಲಂಚ್ ವೇಳೆಯಲ್ಲಿ ಊಟಕ್ಕೆ ಹೋಟೆಲ್ ಡಬ್ಬಿಯಿಂದು ತಣ್ಣನೆ ಚೀಲ ತುಂಬಿಕೊಂಡು ದಿನದ ಗಾಣ ತಿರುಗುತ್ತಿರುವ ಔದ್ಯೋಗಿಕ ಯುಗ ಇದು. ಮೊದಲು 'ಹು ದೋ'! ಅಮೇಲೆ 'ಹಮಾರೇ ದೋ' ! ಮೊದಲಿನ ಅದ್ದೂರಿಯ ಅಳಿಯತನ ಇಂದು ಕತೆಯಾಗಿದೆ...

ಯಾವುದು ಹೆಚ್ಚು ಇಷ್ಟ ? ಮೊದಲಿನ ಹುಡುಗುತ್ತಿಗೆಯ ಹೊಟ್ಟೆಬಾಕತನವೆ ? ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಸಿರಿ—ಸಿಂಗಾರವೆ ? ಅಥವ ಪ್ರಪಂಚ ಕಿರಿದುಗೊಳ್ಳುತ್ತಿರುವ ಇಂದಿನ ವೈಜ್ಞಾನಿಕ ಯುಗದಲ್ಲಿ ಅಮೇರಿಕೆಯಲ್ಲಿ ತಂಗಿರುವ ಭಾರತೀಯನೊಬ್ಬ ಸತ್ಯನಾರಾಯಣ ಪೂಜೆಯ ಟೇಪ್ ರೆಕಾರ್ಡಿಂಗ್ ಹಚ್ಚಿ ಕೇಕ್ ತಿಂದು ಸಂತಪ್ತಿಗೊಳ್ಳುವ ಅಂತರರಾಷ್ಟ್ರೀಯ ತಿಳುವಳಿಕೆಯೆ ? ಪ್ರಪಂಚ ಕಿರಿದಾಗಿ, ಕೆಟ್ಟೋಟ ವಿಶ್ವ ವಿಶಾಲವಾಗಿ ಬೆಳೆಯುತ್ತಿರುವ ಈಗಿನ ಯುಗದಲ್ಲಿ ಬಲಿ ಪಾಡ್ಯಮಿಯೆಂದರೆ ವಿಜ್ಞಾನ ಪುರುಷನು ಅಂತರಿಕ್ಷವನ್ನು ಈಸಿ ಚಂದ್ರನ ಮೇಲೆ ತನ್ನ ಪಾದವನ್ನಿರಿಸಿದ ತ್ರಿವಿಕ್ರಮ ಹದವೆನ್ನಬಹುದೆ ? ಏನೇ ಅನ್ನಿ. ನನಗೇನೂ ನನ್ನ ಬಾಲ್ಯದ ದೀಪಾವಳಿಯ ನೆನಹು ಇನ್ನೂ ಬಾಯೊಳಗೆ ಹಿಡಿದ ಪೆಪ್ಪರಮಿಂಟಿನಂತೆ ನನಗೆ ಸವಿ ಮರುಕಳಿಸುವಂತೆ ಮಾಡುತ್ತಿದೆ...

... ಆಗ ನನಗಿನ್ನೂ ಇಪ್ಪತ್ತರ ಚಿಗುರು ಮೀಸೆಯ ಪ್ರಾಯ. ಆಗಲೆ ನನಗೊಬ್ಬ ಸಂಗಾತಿ ! ಜೀವನದ ಕ್ರೀಡಾರಂಗದ ಆಟಗಾತಿ ! ಮಾಟಗಾತಿ ! ನನ್ನ ಮೊದಲ ಅಳಿಯತನ ! ಮನೆಯಲ್ಲಿ ಹಿರಿಯರಿಂದ ಬೈಸಿಕೊಳ್ಳುತ್ತಿದ್ದ ನನ್ನನ್ನು ಮಾವನ ಮನೆಯಲ್ಲಿ ಹಿರಿಯ ಅಧಿಕಾರಿಯಂತೆ ನನ್ನನ್ನು ಗೌರವ ಮರ್ಯಾದೆಗಳಿಂದ ಸ್ವಾಗತಿಸಿದ್ದರು ! ನಮ್ಮ ಭಾವ ಕಚೇರಿಯ ಇನ್ಸಪೆಕ್ಟರಿಗೆಂದು ಮೇಲಧಿಕಾರಿಗಳು ಬಂದಾಗ ಜೀ ಎಂದು ಕೈಮುಗಿದುಕೊಂಡು ಓಡಾಡುತ್ತಿದ್ದ. ಹಾಗೆ ನಮ್ಮ ಮಾವ, ನಮ್ಮ ಬೀಗ ಎಲ್ಲರೂ ನನಗೆ ಕೈಮುಗಿದುಕೊಂಡು ಓಡಾಡುವುದೇನು ? ನಾನು ಬಚ್ಚಲಿಗೆ ಹೋಗಿ ಕೈಕಾಲು ತೊಳೆದುಕೊಂಡು ಹೊರಗೆ ಬರುತ್ತಲೆ ಟಾವೆಲ್ ಹಿಡಿದುಕೊಂಡು ನಿಂತಿರುತ್ತಿದ್ದರು. ಎಲೆ ಮಣೆ ಸಿದ್ಧವಾದಾಗ ಬಂದು ಕೂಡುವುದೊಂದೆ ತಡ. ನಮ್ಮತ್ತೆ ಬೆಳ್ಳಿಯ ತಾಟನಲ್ಲಿ ರಸ ಪಾಕಗೊಂಡ ಜಿಲೇಬಿಗಳನ್ನು ಬಡಿಸುತ್ತಿರು ನಮ್ಮಕ್ಕ ತುಪ್ಪದ ಮಿಳ್ಳೆಯನ್ನು ನನ್ನ ಎಲೆಗೇ ಬರಿದು ಮಾಡುವಳು.



ಇಷ್ಟೆಲ್ಲ ಗೌರವ ಇಷ್ಟೆಲ್ಲ ಮರ್ಯಾದೆ ಯಾಕೆ ? ನಾನು ಅವರ ಮಗಳನ್ನು ಮದುವೆಯಾಗಿ ಅವರನ್ನು ಉಪಕರಿಸಿದ್ದುದಕ್ಕಾಗಿ ! ಅವರ ಮಗಳ ಉದ್ಧಾರ ಮಾಡಿದುದಕ್ಕಾಗಿ ! ಅವರಿಂದ ಮೂರು ಸಾವಿರ ಹಣದೊಂದಿಗೆ ಅವರ ಮಗಳನ್ನು ಕೈಹಿಡಿದ ನನ್ನ ಮೌಲ್ಯ ನನಗೇ ತಿಳಿದಿರಲಿಲ್ಲ ! ಮನೆಯಲ್ಲಿ ಎಲ್ಲರಿಂದಲೂ ಏನಾದರೊಂದು ರೀತಿಯಾದಿ ಬೈಗುಳ ತಿಂದು ಅಪಮೌಲ್ಯ ಹೊಂದಿದ್ದ ನಾನು ಮಾವನ ಮನೆಯಲ್ಲಿ ನನ್ನ ಮೌಲ್ಯ ಹೆಚ್ಚಿಸಿಕೊಂಡಿದ್ದೆ.

ಅಂದು ಉರುಟಣೆ ! ನನ್ನಾಕೆ ಕಂಠಪಾಠ ಮಾಡಿದ ಹತ್ತಾರು ಒಗಟುಗಳನ್ನು ರಿಪೀಟಿಂಗ್ ಗ್ರೂಪ್‌ವುಳ್ಳ ಮುದ್ರಿಕೆಯಂತೆ ಪುನರುಚ್ಚರಿಸಿ ನನಗೆ ಅತ್ತರ ಹಚ್ಚಿ, ಕೈಯಲ್ಲಿ ವೀಳ್ಯ ಕೊಟ್ಟು, ಕೊರಳಿಗೆ ಮಾಲೆ ಹಾಕಿ, ತುರಾಯಿ ಕೊಟ್ಟು ನಮಸ್ಕರಿಸಿದಾಗ ನಮ್ಮ ಮಾವ ತಲೆದೊಪ್ಪಿಗೆ ಧರಿಸಿ,



ನನ್ನ ಹಣೆಗೆ ಕುಂಕುಮವಿಟ್ಟು ವೀಳ್ಯದೆಲೆ ಅಡಿಕೆಯೊಂದಿಗೆ ಒಂದು ಫೇವರಲ್ಯೂಬಾ ವಾಚ್, ಒಂದು ಚಿನ್ನದ ಚೇನು ಸಹಿತ ನನಗೆ ಉಡುಗೊರೆ ಸಲ್ಲಿಸಿದ್ದರು !

ಇನ್ಸಪೆಕ್ಟರಿಗೆ ಬಂದ ಮೇಲಧಿಕಾರಿಗಳಂತೆ ನಾವೆಲ್ಲ ಗಂಡಿನ ಬೀಗರು ನಾಲ್ಕು ದಿನ ಹೆಣ್ಣಿನ ಬೀಗರ ಮನೆಯ ಉಗ್ರಾಣವನ್ನೆಲ್ಲ ಫಡಚೆಮಾಡಿ ಮರುಳೈಲು ಹತ್ತಿದ್ದೆವು.

ಈಗ ? ಅಂತಹ ಅಳಿಯತನ ಔಷಧಕ್ಕೂ ಸಿಗಲಾರದು. ಎಲ್ಲೋ ಹೋಟೆಲ್‌ನಲ್ಲಿ ಹನಿಮೂನ್ ಮಾಡಿಕೊಳ್ಳುವ ಆಧುನಿಕ ದಂಪತಿಗಳಿಗೆ ಆ ನಮ್ಮ ಹಿಂದಿನ ಪರಂಪರೆಯ ಅಳಿಯತನದ ಸಂಪತ್ತು ಲಭಿಸೀತೆ ? ಇಂದಿನ ಸಂಸ್ಕೃತಿ ಎಂದರೆ 'ಹೋಟೆಲ್‌ನಲ್ಲಿ ಉಣ್ಣೋದು, ಹಾಸ್ಪಿಟಲ್‌ನಲ್ಲಿ ಕಣ್ಣು ಮುಚ್ಚೋದು'— ಎಂದು ಯಾರೋ ವಿನೋದಪೂರ್ವಕವಾಗಿ ಹೇಳಿದ್ದರು. ಅದು ನಿಜ ಎನ್ನಿಸುತ್ತದೆ. ನೀವೇನಂತೀರಿ ?

ಅಂತೂ ನಮ್ಮ ಹಿಂದಿನ ಅಳಿಯತನ ಎಂದರೆ ಅದೇನೋ ಅಂತಾರಲ್ಲ ಯಾರೋ ಏನೋ ನೆನಸಿಕೊಂಡಂತೆ ಹಾದಿ 'ತೇಹಿನೋ ದಿವಸಾ ಗತಾ: !




ದೀಪಾವಳಿಯು ಸರ್ವರಿಗೂ ಶುಭದಾಯಕವಾಗಲಿ !!

# ಹೊಟೆಲ್ ಗೋಕುಲ

ಉಪಹಾರ, ಊಟ ಮತ್ತು ವಸತಿ
ಸ್ಟೇಶನ್ ರೋಡ,
ಕೊಲ್ಹಾಪುರ
ಫೋನ್ : ೨೪೫೫



# HOTEL GOKUL

Restaurant, Boarding & Lodging Station Road,
KOLHAPUR
Phone : 2455

ಕೊಲ್ಹಾಪುರದ ಕೇಂದ್ರಸ್ಥಳದಲ್ಲಿದ್ದು, ಉಳಿದುಕೊಳ್ಳಲು ಎಲ್ಲ ಬಗೆಯ ಅತ್ಯಾಧುನಿಕ ಸಲಕರಣಗಳಿಂದ ಸುಸಜ್ಜಿತ ಏಕಮೇವ ಹೊಟೆಲ್

- ಶುಚಿ, ರುಚಿಯುಳ್ಳ ವೈಶಿಷ್ಟ್ಯಪೂರ್ಣ ಊಟ ಮತ್ತು ಉಪಹಾರ
- ಉತ್ಕೃಷ್ಟ ಕಾಫಿ, ಟೀ ಮತ್ತು ಇತರ ಮಧುರ ಪಾನೀಯಗಳು
- ಆದರ್ಶನೀಯ ಸೇವೆ




ನಮ್ಮ ಗ್ರಾಹಕರು, ಹಿತಚಿಂತಕರು ಮತ್ತು ಸರ್ವರಿಗೂ ದೀಪಾವಳಿಯ ಶುಭಾಶಯಗಳು

ಫೋನ್ ನಂ. : 256 ಟೆಲಿಗ್ರ್ಯಾಮ್ : ಟ್ರೇಡರ್ಸ್

# ಇಂಟರ್ ನ್ಯಾಶನಲ್ ಟಾಯರ ಸರ್ವ್ಹಿಸ್

ಫೋರ್ಟ್ ರೋಡ, :: ಬೆಳಗಾವಿ

ವಿತರಕರು




ಮೋಟಾರ್ ಸಾಯಕಲ್




ವಿಜಾಪುರ, ಧಾರವಾಡ ಮತ್ತು ಬೆಳಗಾವಿ ಜಿಲ್ಹೆಗಳಿಗೆ




60 ಸಿ. ಸಿ. ಹಜರ ಸ್ಟಾಕದಲ್ಲಿಂದ ಸಿಗುತ್ತದೆ.

ವಿತರಕರು : — ಅಟೋ ಸ್ಪೇರ್ಸ್, ಬ್ಯಾಟರಿ, ಲೂಬ್ರಿಕೇಟಿಂಗ್ ಎಣ್ಣೆ ಮತ್ತು ಟಾಯರ್–ಟ್ಯೂಬ ಮುಂತಾದವುಗಳು

# ತೊಡಕು

ತೊಡಕಾಗಿರುವ ಧಾರವನ್ನು
ಸರಿಪಡಿಸಲಿಕ್ಕೆ ಹೊರಟೆ !
ಮತ್ತಿಷ್ಟು ಗುಂಜಾಯಿತು;
ತುದಿ ಯಾವುದು ?
ಮೊದಲಾವುದು ?
ತಿಳಿಯಲೂ ಇಲ್ಲ, ಕೈಗೆ ಸಿಗಲೂ ಇಲ್ಲ.

ಈ ಕೆಲಸ ನಾನೇಕೆ ಕೈಕೊಂಡೆ ?
' ಉದ್ಯೋಗಂ ಪುರುಷ ಲಕ್ಷಣಂ ' ಎಂದೇ ?
ಅಥವಾ—ಮಾಡಲು ಬೇರೆ ಯಾವುದೇ ಕೆಲಸ
ಧಂದೆ ಇಲ್ಲವೆಂದೇ ?
" ಉದ್ಯೋಗಿಲ್ಲದ ಬಡಿಗ
ಮಗನದೇನೋ ಕೆತ್ತಿ
ಮೂರು ಮಣೆ ಮಾಡಿದನಂತೆ- ?
ಅದಕ್ಕಿಂತ ವಾಸಿಯಲ್ಲವೇ ಶ್ರೀಸಾಮಾನ್ಯನ ಕೆಲಸ ?

* * * *

ಕವಿತಾ ಓದಬಹುದಾಗಿತ್ತೋ ಏನೋ!
ಆದರೆ, ಅಲ್ಲಿಯೂ ತೊಡಕು.
ಬೊಮ್ಮನ ರಾಣಿಯ ಡಿಂಗರಿಗ
ಇಂದಿನ ಕವಿ, ನಾಳಿನ ಕಿವಿ
ನಿನ್ನಿನ ಗವಿ. ಅಲ್ಲವೆ ಮತ್ತೆ!
ವಿಮರ್ಶಕರು ಕೆಳಗೆ ಜಾಳಿಗೆ ಹಾಕಿದ್ರೆ ಸಾಕು
ಯಾವ ಜೋಕರನೂ ಶಬ್ದದ ಸರ್ಕಸ್ ಆಡಬಲ್ಲ
ಜೋಕಾಲಿಯಿಂದ ಲಾಗಾ ಹೊಡೀಬಲ್ಲ.
ಶಬ್ದ—ಧಾರದ ಮೊದಲು
ಅರ್ಥ—ಧಾರದ ಕೊನೆಯು
ಒಂದು ಸಿಕ್ಕರ, ಇನ್ನೊಂದು ಸಿಗೋಹಾಂಗಿಲ್ಲ.

* * * *

ಹೊಕ್ಕಳದಲ್ಲೇ ಧಾರವ ಇಟಗೊಂಡು
ಅದನ್ನು ಬಿಟಗೊಂಡೇ ಜಾಲವ ರಚಿಸಿ
ಅದರ ಮೇಲೆಯೆ ಲಾಗವ ಹೊಡೆಯುವ
ರಾಜಕಾರಣಿ—ಊರ್ಣನಾಭ!
ಹೋಟನು ಪಡೆಯಲು ನೋಟನು ಕೊಟ್ಟೆ
ನಂತರ ಆಶ್ವಾಸನಗಳ ಮರೆತೆ,
ನಿನ್ನ ಪುತ್ಥಳಿಯ ನೀನೇ ಸ್ಥಾಪಿಸಿ,
ನಿನ್ನ ' ಮಕಬರಾ ' ನೀನೇ ಕಟ್ಟಿಸಿದೆ;
ನಿನ್ನ ಲೀಲೆಗೆ ಕೊನೆಯಾವುದು ?
ನಿನ್ನ ಜಾಲಕೆ ಮೊದಲಾವುದು ?
ನಿನ್ನ ಪ್ರಪಂಚಕ್ಕೆ ನೀನೇ ಬ್ರಹ್ಮ
ನಡುವೆ ಸಿಕ್ಕ ಜನತೆಯದೇ ಕರ್ಮ !

* * * *

ಈ ಹುರಿ-ಧಾರ ಇಂದಿನದಲ್ಲ
ಹಿಂದೆಲ್ಲೋ ಇತ್ತು; ಮುಂದೆಲ್ಲೋ ಬರುಂದು
ಆದರೆ,
ಇಂದು ಇಲ್ಲಿ ಕತ್ತರಿಸಿಹರು ಮಧ್ಯೆ
ಪಡೆದಿರಬೇಕವರು ಬೇರ್ಪಡಿಸುವ ವಿದ್ಯೆ
ಇಲ್ಲಿಯೂ ತೊಡಕು,
ಇದರ ತುದಿಯ ಯಾರೂ ಕಂಡಿಲ್ಲ
ಇದರ ಮೊದಲು ಯಾರೂ ಅರಿತಿಲ್ಲ
ಹೊಕಳ ಬಳ್ಳಿಗೆ ಬೇರಿಲ್ಲ
ಚಿಪ್ಪಟಿದಲ್ಲೇ ಹುಟ್ಟುವದು
ಹೊರಳಿದಲ್ಲೇ ಫಲಿಸುವುದು
ಕಂಡಲ್ಲೆ:
ತಳ್ಕೆ, ಮೊಳಕೆ, ಭಳಕೆ,
ಹರಿದಷ್ಟು ಹಬ್ಬುವದು
ಉರಿದಷ್ಟು ಕೊಬ್ಬುವದು
ಬಿಡಿಸಿದಷ್ಟು ತೊಡಕುವದು
ತನ್ನ ಬೇರು ಹುಡುಕುವದು

* * * *

— ಜೀವಿ

# ಮರೆತು ಬಿಡು ನನ್ನ ಕಥೆ ವತ್ಸ!

[ 'ಆಶಾನ್ ಆಶಯ ಗಂಭೀರನ್' — ಎಂದು ಮಲೆಯಾಳದ ಕೀರ್ತಿತನಾದ ಮಹಾಕವಿ ಕುಮಾರನ್ ಆಶಾನ್ ಬರೆದ 'ಸೀತಾ' ಎಂಬ ಖಂಡಕಾವ್ಯದ ಒಂದು ಭಾಗವಿದು. ವಾಲ್ಮೀಕಿ ಮುನಿಯೊಡನೆ ಲವ — ಕುಶರು ಅಯೋಧ್ಯೆಗೆ ಹೋಗಿದ್ದರು, ಮುನಿ ರಚಿತವಾದ ರಾಮಾಯಣವನ್ನು ಶ್ರೀ ರಾಮನ ಮುಂದೆ ಹಾಡಲು. ಇತ್ತ ಆಶ್ರಮದಲ್ಲಿ ಏಕಾಂಗಿನಿಯಾಗಿದ್ದ ಸೀತೆ ತನ್ನ ಹಿಂದಿನ ಪಾಡನ್ನು ನೆನೆಯುತ್ತಾ ಇದ್ದಾಳೆ. ಸೀತಾದೇವಿಯನ್ನು ಲಕ್ಷ್ಮಣನು ಕಾಡಿನಲ್ಲಿ ಬಿಟ್ಟುಹೋದ ದಿನದ ಆಕೆಗೆ ಮುಕುಳಿಸುವುದು 'ಲಕ್ಷ್ಮೀಶ'ನ ಸೀತಾ ವನವಾಸದೊಡನೆ ಇದನ್ನು ಹೋಲಿಸುವುದು. ]

- ೧ -

ಕೊನೆಯಿರದ ಸುಖದುಃಖ ತೆರೆತೆರೆಯ ಹೊಡೆತದಲಿ
ಮುಳುಗುತ್ತಲೇಳುತ್ತ ಕಷ್ಟಪಟ್ಟು,-
ಹಲವು ದಿನ ಕಳೆವಾಗ ಪೋತ ಜಲಧಿಯನೀಜಿ
ಆಚೆ ದಡವನು ಜೀವಿ ಸೇರಲುಂಟು!

- ೨ -

ಅದರಿಂದ—ಸುಖದುರ್ಗವನ್ನೇರಿಸಲಿಕ್ಕೆಂದೆ
ಕಾಣದಿಹ ಕೈಯೊಂದು ಪಿಡಿಯಿತೆನ್ನು,-
ವ್ಯಥೆಯ ಪಥದಲಿ ಪ್ರೀತಿಯಿಂದ ನೂಕಿದೆ ಮುಂದೆ
ಬೇಗ ಬೇಗನೆ ಸೇರೆ ದುರ್ಗವನ್ನು

- ೩ -

ಮನವೇನೊ ಗುಣವೊಂದಗಿದಾಗಲೂ ಬೆದರುತಿದೆ
ಆಪತ್ತೆಬಂತೆಂದು ವ್ಯರ್ಥವಾಗಿ;
ಪೋಷಿಸಲಿಕೆಂದೆ ಸಂಪ್ರೀತಿಯಿಂ ಪಿಡಿದಾಗ
ಪಕ್ಷಿ ನಡುಗುವ ತೆರದಿ ಭೀತಿಯುತವಾಗಿ!

- ೪ -

ನಿನ್ನರಸನೆನ್ನ ಬಿಟ್ಟಿಹನೆನ್ನುವಾಜ್ಞೆಯನು
ಎನಗೆ ಲಕ್ಷ್ಮಣ ತಿಳಿಯೆ ಹೇಳುತಿರಲು,-
ಸಿಡಿಲು ಬಡಿದಂತೆನ್ನ ಒಡಲು ನೆಲಕೊರಗಿತ್ತು!
ಬಾಯಲಿಲ್ಲಾನಂದು ದುಃಖವುಣಲು!!

- ೫ -

ಸ್ಮೃತಿಯೆ ಗತಿಯಿದ್ದರೂ—ಗರ್ಭಚಿಂತೆಯೊಳಾನು
ಆತ್ಮಹತ್ಯೆಗೆ ಮನವ ಮಾಡದಾದೆ;
ಹಿಂದಿನಾಗಾಯಕ್ಕೆ ಮುಂದೆ ಬರೆಯೆಳೆದಾಗ
ಕೊಂದೆನಾ—ಸಂಕಟವ ಹೇಳದಾದೆ!

- ೬ -

ಗತಿಗೆಟ್ಟು ಕಾಡಿನೊಳಗಲೆದಾಡಿ ಋಷಿಯೋರ್ವ
ಎನ್ನ ಮತಿಯುತ್ಸಾಹ ಪಡೆಯಲಿಲ್ಲ!
ಅದರಿಂದ ಸಂಕಟದ ಗಂಟು ಬಿಚ್ಚುತ ದುಃಖ-
ಭಾರ ತಗ್ಗುವುದೆತ್ತು! ಪಡೆದೆನಲ್ಲ!

- ೭ -

ಅಳಲ ನಿಮ್ನಡಿಗೆಯಿಂ ಕ್ಷಿಪ್ರವಾದ ವ್ಯಾಧಿ ಶಾಂ-
ತಗಲದುದೆ ತುಂಬು ಲೇಸೆಂಬೆಯೆನಗೆ:
ಕರಣಕ್ಷತಿಯಾಂತಿರುವ ನರನ ಬಾಳುವೆಗಿಂತ
ಮರಣವೇ ಲೇಸಲ್ತೆ ಯೋಚಿಸಲಿಕೆ.

- ೮ -

ಗುಣ ಪುಷ್ಪ ವಾಟಿಯಲಿ ಕಾಡು ಕೋತಿಯು ಕುಣಿಸೆ
ಎಳಸಲಾರೆನು—ಮತಿಯ ಮರುಳುಗೊಳಿಸೆ;
ಪವನಾಯುವಿಂದ ತೂತಾದ ವೇಣುವಿನಂತೆ
ಮನದೊಳೇ ಸಂಕಟವ ನಾನು ಗುಣಿಸೆ.

- ೯ -

ಸತ್ಕರ್ಮಗಳನು ಪೂರೈಸೆ ದೀಕ್ಷೆಯ ತಳೆದ
ಕ್ಷಮೆಯಂಥ ಬಂಧು ಬೇರೊಬ್ಬನಿಲ್ಲ;
ಅರಿವನರುಹುತಲಿರುವ ಸದ್ಗುರುವಿನಂತೆ ವ್ಯಥೆ
ನರಗೆ ಸರಿದಾರಿಯಂ ತೋರದಿಲ್ಲ,

- ೧೦ -

ಪ್ರಿಯತಮವನ್ನರಸುತ್ತ ಮತ್ತೆ ಮಾನವ ಸೆಳೆದು
ಮಾನಸಂ ಬಯಸದುದೆ ಭಾಗ್ಯವೆಂಬೆ;
ಅದರಿಂದಲೆನ್ನ ವಂಶಕೆ ಶುಭೋದಯವಿನ್ನಾಯಿತ್ತು!
ಹೃದಯ ಪರಿಪಾಕವಂ ಗೊಂಡಿತೆಂಬೆ!

- ೧೧ -

ಯೋಚನೆಯು ಬರದು: ಕರಿಮುಗಿಲು ತುಂಬಿತ ಕತ್ತಲೆ!
ಆದರೊಮ್ಮೆ ಹೃದಯದಂಗಳದಲಿ;
ಮಳೆ ಹಾತೆಗಳ ತೆರದಿ ಚಿಂತೆ ಸಂಚರಿಸುತ್ತಲೆ
ಎತ್ತಲೇಳುತ್ತಿಹವು ಮುತ್ತುತಿಲ್ಲಿ!

- ೧೨ -

ಮುತುವಿಸಲಿ ಹೃದಯವು ಹಿತಮಾದವಲ್ಲಿಯದು
ಹೊಸ ಹೂಗಳಂತಲೆದು ಮೆರೆಯುವಂತೆ;
ಸ್ಮೃತಿಯ ಪ್ರವಾಹ ನಿಲುಗಡೆಯು ಬೆಲೆಯುಂ ಮೀರಿ
ಹರಿಯುತಿದೆ ಕೆಲವೊಮ್ಮೆ ದಾರಿ ಮುಂತೆ!

- ೧೩ -

ಹುಬ್ಬು ಹುಳುವಿನ ತೆರದಿ ಕಂಪಿಸುತಿರಲು ಮತ್ತೆ
ಬಿರಿಯುತಿಹ ಶಿರವನ್ನು ಬಿಗಿದು ಹಿಡಿದಂತೆ;
ತನ್ನೆರಡು ಕೈಗಳಿಂ ಲಕ್ಷ್ಮಣಂ ತಲೆಯೊತ್ತಿ
ಕಣ್ಣೀರ ಹನಿಸಿ ಬೀಳ್ಕೊಂಡುದಂ ನೆನೆದ!

- ೧೪ -

ಅತಿ ಧೀರನತುಲ ಬಲಶಾಲಿಯುಂ ಧೀಯುತನೆ
ಆ ಅಗ್ರಜ ವಿಧೇಯನಾಪಿತಂ ಮಾತುಗೆ,-
ಎನ್ನಯೆದೆಯುಳಲ ಹೊಳೆಯುರೆ ಪಾಸಿಯೀಳಿಯುತನೆ
ನೆನೆವೆನಾನವನ ಗುಣಗಣವ ಹೀಗೆ.

- ೧೫ -

ಕಾಡೆನದೆ, ಬೀಡೆನದೆ, ಕಷ್ಟಸುಖವೆನ್ನ ಜೊತೆ
ಅನಘ! ನೀನೆಮ್ಮ ಬಳಿ ಬಿಡದೆ ಬಾಳ್ದೆ:
ತಮ್ಮ! ವಿನಯಾರ್ದ್ರವಾಗಿಹ ನಿನ್ನ ಮುಖವನ್ನು
ಎನ್ನೆಗಂ ಮರೆಯದಿಹ ನಡತೆ ತೋರ್ದೆ!

- ೧೬ -

ಅರಿಭಯಂಕರನೆ! ನೀ ವ್ರತನಿಷ್ಠೆಯನ್ನಾಂತು
ಗೈವಿರುವ ಪರಿಚರ್ಯೆಯೊಂದರಿಂದೆ,-
ಗಿರಿ ಕಾನನಗಳ ಚೆಲುವೆಲ್ಲ ಕಾಣುವುದಾಯ್ತು!
ಕಣ್ಗಳಿಗೆ ಹಿರಿದಾದ ಹಬ್ಬಗೈದೆ!

- ೧೭ -

ಹಿಂದೆ-ನೀನೆನ್ನ ಕಟುವಾದ ಮಾತುಗಳನ್ನು
ಕೇಳಿ, ಕಾಡಿನ ನಡುವೆ ಬಿಟ್ಟು ನಡೆದೆ!
ಇಂದೊ: ತ್ಯಜಿಸಿದುದೆಂತು! ವೈಪರೀತ್ಯವಿದನ್ನು
ಪೇಳಲೇಕೆನ್ನ ಕರ್ಮವಿಪಾಕ ಬಿಡದೆ!

- ೧೮ -

ತಮ್ಮ! ನಾ ನಿನ್ನೊಡನೆ ಯೋಚಿಸದೆ ನುಡಿದಿರುವ
ಚುಚ್ಚುಮಾತುಗಳನೀ ದಯೆಯಿರಿಸಿ ಕ್ಷಮಿಸು!
ತಡೆ ಹಿಡಿಯಲಾರದಿಹ ಮನವು ಕೆಲವೇಳೆಯಲಿ
ಓಡದಿಹ ಕೆಟ್ಟ ಹಾದಿಗಳಲ್ಲ-ನಿಜಕು!

೧೯

ವಿರಹತಾಪದಿ ಮರುಗುತೇಕಾಂಗಿಯಾಗಿರ್ದು
ಕೊನೆಗಾಣದಿಹ ಮಹಾವನದೊಳಲೆದು,-
ಬಳಲಿರ್ದ ರಘುನಾಥನಿಂಗೆ ನೀ ನೆರವಾದೆ
ಉತ್ತಮ ಕುಲದ ಕೀರ್ತಿಯೆತ್ತಿ ಹಿಡಿದೆ!

- ೨೦ -

ಅಸ್ಯ ದುರ್ಜಯನಾದ ಯಿಂದ್ರಜಿತ್ತುವಿನೊಡನೆ
ಹೋರಾಡಿರುವ ನಿನ್ನ ಕಥೆ ಕೇಳುತ-
ಉತ್ಕಂಠಗೊಂಡಾಗ, ಗಾಢತೆಯು ನಾನರಿತೆ
ಎನ್ನ ಹೃದಯದಿ ನಿನ್ನೊಳಿಹ ಪ್ರೀತಿಯು!

- ೨೧ -

ಮುನಿಯು ತೋರಿಸುತಿರುವಯೆನ್ನ ಕಂದಮ್ಮಗಳ
ನೀ ಪ್ರೀತಿಯಿಂ ಬಾಚಿ ತಬ್ಬುತಿರಬಹುದು!
ಅನಸೂಯವತಿಶುದ್ಧವಾದ ನಿನ್ನಯ ಮನಸು
ಆನಂದ ಸರಿತಿನಲ್ಲೀಸುತಿರಬಹುದು !!

- ೨೨ -

ಮರೆತುಬಿಡು ನನ್ನ ಕಥೆ ವತ್ಸ! ನೀ ಬಾಳಯ್ಯ!
ನಿಡುಗಾಲವಗ್ರಜಂಗೇಕ ಬಂಧುವೆನೆ;
ಗುಣಗಣಗಳಿಂ ಮೆರೆವ-ಬಂಧುಬಾಂಧವರಜತೆ
ದುಃಖ ಬೆರೆಯದ ಸುಖವ ಪಡೆಯಯ್ಯ ನೀನೆ!

—ಕಯ್ಯಾರ ಕಿಞ್ಞಣ್ಣ ರೈ

# ನರಕಾಸುರ ಸತ್ತ

ಪುರಾಣದಲ್ಲಿ ಬರೆದಿಟ್ಟುದಂ ಸತ್ಯ !
ನರಕಾಸುರ ಸತ್ತ!
ಇಳಿಯಿತು ರಕ್ಕಸ ವೃತ್ತಿಯ ಕತ್ತ
ಪ್ರಸನ್ನಗೊಂಡಿತು ವಿಶ್ವದ ಚಿತ್ತ !
ಆಗಸಕೇರಿತು ಬೆಳಕಿನ ಬುಟ್ಟಿ
ತಿರಗಿತು ಚಂದ್ರನ ಎದೆ ತಟ್ಟಿ
ಇಳಿಸಿತು ಬುವಿಯಲಿ
ಗೆಜ್ಜೆಯ ಬಂಬುವ ಕ್ರತು ಘಟಿ !

* * * *

ಅಂದಿನ ಕಥೆಗೂ
ಇಂದಿನ ವ್ಯಥೆಗೂ
ಏನೂ ಇಲ್ಲವೆ ಸಂಬಂಧ ?
ಕತ್ತಲು-ಬೆಳಕಿಗೆ ಬಿಡಲಾಗದ ಬಂಧ!
ಅಂದಿನ ದೀಪದ ಬುಡದಡಿ ಕತ್ತಲು
ತುಂಬು ಹಾಕುತಿತ್ತು;
ಇಂದಿನ ದೀಪದ ನೆತ್ತಿಯ ಮೇಲೆ
ನಡೆದಿದೆ ಕತ್ತಲ ಕಾಳಿನ ನೃತ್ಯ.
ಸತ್ತೂ ಸಾಯದ ಬಹುಕಿಯು ಬೆಳಗದೆ
ಮಿಣಿ ಮಿಣಿ ಬೆಳಗುವ ಬೆಡ್‌ಲ್ಯಾಂಪ್ ಬೆಳಕಿಗೆ
ಮುದ್ದಿಕ್ಕುತ್ತಿದೆ ಅಂದಿನ ಸತ್ಯ!

—ಬಿ. ಎ. ಸನದಿ

# ಹನಿಗವನಗಳು

—ಶ್ರೀನಿವಾಸ ಕುಲಕರ್ಣಿ



## ಸುಗಂಧ

ಹೊಳೆ ಬಂದಾಗ ಅಲೆಗಳೊಂದಿಗೆ ಬಂದು
ಅರೆ ಚಣ ಒಂದಾಗಿ-ಅದು ಇಳಿದಾಗ
ತೆರೆಗಳೊಂದಿಗೆ ಕೊಚ್ಚಿಕೊಂಡು ಹೋದಂದ
ಈ ಬಾಳ ಸಂಬಂಧ
ಪುಸ್ತಕದ ಎದೆಯೊಳಗೆ ಕಸ್ತೂರಿಯಿರಿಸಿಹೆನು
ಪುಟ ತಿರುವಿದಾಗೊಮ್ಮೆ ಹೊಮ್ಮಿ ಬರಲೆಂದು
ಈ ಸ್ಮೃತಿ-ಸುಗಂಧ



## ಗುರುತು

ಕಣ ಕಂದಕದೊಳಗೆ
ಪಾತಾಳಗಂಗೆ ಒಂದು
ಏನಾದರೂ [illegible] ಕೊಂಡಿರುವಿರಾ?
[illegible]
[illegible]
[illegible]
[illegible]
[illegible]
ಬಂದಂದ ಗುರುತಿಲ್ಲ?

# ಒಂದು ಕನಸು

ಹೊಸ ಪಶ್ಚಿಮ ದೇಶವೊಂದರಲಿ-ನಡೆದಿದೆ
ಭೂರಿ ಕವಿತಾಗೋಷ್ಠಿ ವಿಭವದಲಿ

ಎನಿತೊ ದೇಶದ ಕವಿವರೇಣ್ಯರೂ
ವಿಶ್ವವಾಣಿಯ ಮುದ್ದು ಕುವರರೂ
ಚೆಲುವನಾರಾಧಿಸುವ ರಸಿಕರು

ಒಂದುಗೂಡಿದ ಕಾವ್ಯದಾರಾಮ-ಸುತ್ತಲೂ
ಅರಳಿ ನಲಿದಿದೆ ಅಮಿತ ಸುಮಸ್ತೋಮ

ಇಂದ್ರಧನುವಿನ ಚಾರು ತೋರಣ
ಸಂಜೆ ಮುಗಿಲಿನ ಬಣ್ಣ ಹಂದಣ
ಚಿತ್ರ ನೋಡಲು ಚೆಲುವ ನಂದನ

ನೆಲವೊಗಗಳ ಸಾಹಿತ್ಯ ಸುಮನಸರು-ನೆರೆದಿರೆ
ಕಾವ್ಯತೀರ್ಥದಿ ಓಲಾಡಿ ಬಂದವರು

ಕಾವ್ಯಮಧುವದು ಬೇರೆ ಬೇರೆ
ತೋರ್ದು ಸುಂದರ ಪಾತ್ರದಲ್ಲಿರೆ
ಹಂಚಿ ಸವಿವೌತಣವು ಸಾಗಿರೆ

ಹೃದಯ ಸುಖಸಾಗರವನೀಸುತ್ತ-ಮಾನಸದ
ಸುಂದರದಲ್ಲಿವು ಹೊಳೆದು ತೋರಿತ್ತು.

ಭುವನವಾಗೀಶ್ವರಿಯ ವೀಣೆ
ಮಿಡಿಯ ತೊಡಗಿತು ತನಗೆ ತಾನೆ
ಮಿಡಿಸುತಿದ್ದುದು ಹೃದಯಂಗಳನೆ

ತಂತು ಸಾಸಿರವಿದ್ದರೇನಂತೆ-ಮೀಟುವ
ವರದ ಹಸ್ತದ ಮಹಿಮೆಯೊಂದಲ್ತೆ!

ಆಗಲೆದ್ದನು ಓರ್ವ ಕವಿವರ
ಮಧುರ ಹಾಡಿನ ಶ್ವೇತಸುಂದರ
ಅತ ಹಾಡಿದ-ಭಾವ ಬಂಧುರ

ಕವಿತೆ! ಆಹಾ, ಅಚ್ಚಗನ್ನಡದಾ-ಸೊಗಸಿನ
ಕಂಪು ಸೂಸಿದ ಕವನ ಶ್ರೀಗಂಧ

ಆಂಗ್ಲ ಶಾಲಗೆಯಲ್ಲಿ ಕನ್ನಡ
ಮಿಂಚಿ ನಲಿ ನಲಿದಾಡುತಿರ್ದುದ
ಕನ್ನಡದ ಚೆಂಗನಸು ದೂರದ

ಸೀಮೆಯಲಿ ನನಸಾಗಿ ಅರಳಿರಲು-ತಾಯಿಯು
ತೇರಿಗೇರಿತು ಹೊಸತು ಬಾವುಟವು

ಪುಳಕವೇರಿತು, ಕಣ್ಣು ಹನಿಯಿತು
ಕವಿಗಳೆಲ್ಲರ ಎದೆಯೊಳಿಂತು
ನಿಂತು ತಾಯಿಯು ನುಡಿಪಳಿಂತು!

ಭುವನ ಶಾರದೆ ನಿನ್ನ ಲೀಲಾವಿಲಾಸವೆಂತಹುದೋ!
ಕವನ ಲೋಕದಿ ಆವ ಸೀಮೆಯು ಗಸಣೆಯಲ್ಲಿಹುದೋ?

--ಅಮೃತ ಸೋಮೇಶ್ವರ



# ವಿದ್ಯಾರ್ಥಿಯ ಡಾಯರಿಯಿಂದ

—ಪ್ರೊ. ಜಿ. ಡಿ. ನಾಡಕರ್ಣಿ

ಜುಲೈ, ೧೮- ಕಾಲೇಜು ಶುರುವಾಗಿ ೧೫ ದಿನಗಳಾದುವು: ಜ್ಯೂನಿಯರ್ ಬಿ. ಎ. ದ ಕ್ಲಾಸಿನಲ್ಲಿ- ಅಲ್ಲಲ್ಲ, ಬಿ. ಎ. II ಕ್ಲಾಸಿನಲ್ಲಿಯ- ಮೊದಲನೆಯ ಸಮಸ್ಯೆ ಎಂದರೆ ಯಾವ ವಿಷಯ ಮುಖ್ಯವಾಗಿ ಆರಿಸಿಕೊಳ್ಳಬೇಕು ಎಂಬುದು. ಹಿಂದೆ ಜ್ಯೂನಿಯರ್ ಬಿ. ಎ. ಗೆ ವಿಶ್ವವಿದ್ಯಾಲಯದ ಪರೀಕ್ಷೆ ಇಲ್ಲದೆ "Jolly Junior" ಆಗಿತ್ತಂತೆ ! ಒಂದು ವರ್ಷವಾದರೂ ಪರೀಕ್ಷೆಯ ಕಾಟವಿಲ್ಲದೆ ಹಾಯಾಗಿ ಕಳೆಯಬಹುದಿತ್ತಂತೆ ! ಎಂಥ ಪುಣ್ಯವಂತರಪ್ಪಾ ಆ ಕಾಲದವರು. ಜ್ಯೂನಿಯರ್ ಮಾತ್ರವಲ್ಲ, ಕಾಲೇಜಿನ ಪ್ರಥಮ ವರ್ಷಕ್ಕೂ ಕೂಡ ಕೇವಲ ಕಾಲೇಜಿನ ಪರೀಕ್ಷೆ ಮಾತ್ರ ಇದ್ದ ಕಾಲ ಹಿಂದೆ ಇತ್ತಂತೆ ! ಈಗ...? ಪ್ರತಿ ವರ್ಷವೂ ಪರೀಕ್ಷೆ - ಇದು ನಿಜವಾಗಿಯೂ ವಿದ್ಯಾರ್ಥಿಗಳ ಸತ್ವ ಪರೀಕ್ಷೆಯಲ್ಲದೆ ಮತ್ತೇನು ?

ಅಂತೂ ಬಿ. ಎ. I ದಲ್ಲಿ A. T. K. T. ( Allowed to keep term ) ದೊರಕಿಸಿ B. A. II ಕ್ಲಾಸಿಗೆ ಬಂದದ್ದಾಗಿದೆ. ವಿಷಯ ಯಾವುದು ತೊಗೊಳ್ಳಬೇಕು ? ನಮ್ಮ ತಂದೆಯವರು ಸಂಸ್ಕೃತ ತೊಗೋ ಎಂದು ಹೇಳಿದರು. ಸರಿ; ಎರಡು ದಿನ ಸಂಸ್ಕೃತ ಕ್ಲಾಸಿಗೆ ಹೋಗಿದ್ದೆ. "ಅಲಂಕಾರ ಶಾಸ್ತ್ರ"ದ ಪಾಠ ನಡೆದಿತ್ತು. 'ಅಲಂಕಾರ ಶಾಸ್ತ್ರ'ವೆ ಧರಿಸೆ ಪುರುಷರದೋ, ಸ್ತ್ರೀಯರದೋ ಅಲಂಕಾರ ಅಂದರೆ toilet ಇರಬಹುದು ಅಂತ ನಾ ಮಾಡಿದ್ದೆ. ಆದರೆ ಮಮ್ಮಟನ "ಕಾವ್ಯ ಪ್ರಕಾಶ", ನನಗೆ ಪ್ರಕಾಶವಾಗದೆ, ಕಣ್ಣೆದೆ ಕತ್ತಲೆ ಕವಿಯಿತು. ಕನ್ನಡ ಕ್ಲಾಸಿಗೂ ಹೋಗಿದ್ದೆ. ಅಲ್ಲೇನಿದೆ ? ಯಾವ ಕಾದಂಬರಿಯೂ ಇಲ್ಲ, ಕಥೆಯೂ ಇಲ್ಲ. ಎಲ್ಲಾ ಹಳಗನ್ನಡ, ವ್ಯಾಕರಣ ! ಮರುದಿನಗಳಿಗೇ ಎದ್ದು ಹೊರಗೆ ಬಂದೆ. ಇನ್ನು "ಇಂಗ್ಲೀಷು." ಅದರಲ್ಲಿಯೇ ನನ್ನದು A. T. K. T. ಇದೆ ! ಅಂದ ಮೇಲೆ- by process of elimination - ಇಕನಾಮಿಕ್ಸ್ ತೊಗೋಬೇಕು ಅಂತ ಕಾಣಿಸುತ್ತದೆ. ಬಹಳಷ್ಟು ನನ್ನ ಫ್ರೆಂಡ್ಸ್ ಅದನ್ನೇ ತಗೆದುಕೊಂಡಿದ್ದಾರೆ. ಗರ್ಲ್ಸ್ ಕೂಡ ಸಾಕಷ್ಟು ಸಿಗ್ತಾವೆ ಅಂತಾರೆ. ಅದೇ ವಿಷಯ ತೆಗೆದುಕೊಂಡಂತಾಯಿತು.

ಅಗಸ್ಟ್ ೧- ಕಾಲೇಜಿನ ಇಲೆಕ್ಶನ್ಸ್ ಎಲ್ಲಾ ಆಗಿದುವು. ನನಗೇನೂ ಮನಸ್ಸಿರಲಿಲ್ಲ; ಆದರೆ ನನ್ನ ಮಿತ್ರರ ಬಲವಂತಕ್ಕೆ ಬಿದ್ದು ಜನರಲ್ ಸೆಕ್ರೆಟರಿಶಿಪ್‌ಗೆ ಸ್ಪರ್ಧಿಸಿದೆ. ಹಣ ಬಹಳ ಖರ್ಚು ಆದರೂ ಅಡ್ಡಿಯಿಲ್ಲ, ಆರಿಸಿ ಬಂದೆ ಎನ್ನುವುದೇ ಸಮಾಧಾನ. ಕಾಲೇಜ್ ಇಲೆಕ್ಶನ್‌ದಲ್ಲಿ ಹಣ ಹೆಚ್ಚು ಖರ್ಚು ಮಾಡಬಾರದು ಎಂದು ಹಿರಿಯರೇನೋ ಉಪದೇಶ ಮಾಡುತ್ತಾರೆ. ಹಣವಿಲ್ಲದೆ ಯಾವುದೇ ಚುನಾವಣೆಯಲ್ಲಿ ಆರಿಸಿ ಬರುವುದು ಸಾಧ್ಯವೇ ? ( ದೊಡ್ಡವರು ಚುನಾವಣೆಯಲ್ಲಿ ಎಷ್ಟು ಹಣ ಖರ್ಚು ಮಾಡುತ್ತಾರೆ ? ) ಆರಿಸಿ ಬಂದ ಮೇಲೆ ಬ್ಯಾಡ್ಜ್ ಹಚ್ಚಿ ಊರಲ್ಲಿ ಮೆರವಣಿಗೆ ಮಾಡಿದರೆ ತಪ್ಪೇ ? ಇನ್ನು ಮೇಲೆ ೨-೩ ಆದರೂ ಟೆರಿಲೀನ್ ಸೂಟು ಬೇಡವೇ? ತಂದೆಯವರಿಗೆ ಹಣದ ಸಲುವಾಗಿ ಕಾಗದ ಬರೆಯಬೇಕು.




ಅಗಸ್ಟ್ ೯- ಇಂದು ವಿದ್ಯಾರ್ಥಿಗಳ ಮಹಾಸಭೆ ಜರುಗಿತು. ಅನೇಕ ಕಾಲೇಜುಗಳ ಪ್ರತಿನಿಧಿಗಳು ಆಗಮಿಸಿದ್ದರು. ವಿದ್ಯಾರ್ಥಿಗಳಿಗೆ ಆಗುತ್ತಿರುವ ಅನ್ಯಾಯವನ್ನು ಸಭೆಯಲ್ಲಿ ಪ್ರಬಲವಾಗಿ ಖಂಡಿಸಲಾಯಿತು. ಈ ಅನ್ಯಾಯಕ್ಕೆ ಮುಖ್ಯ ಕಾರಣವೆಂದರೆ ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ಸಾಕಷ್ಟು ಪ್ರಾತಿನಿಧ್ಯವಿಲ್ಲದಿರುವುದು. ಇದನ್ನು ಅನುಲಕ್ಷಿಸಿ ಕೆಳಗಿನ ಮಹತ್ವದ ಠರಾವುಗಳನ್ನು ಸಭೆಯಲ್ಲಿ ಅಂಗೀಕರಿಸಲಾಯಿತು.

(೧) ವಿಶ್ವವಿದ್ಯಾಲಯದ ಸಿನೇಟ್ ಹಾಗೂ ಸಿಂಡಿಕೇಟುಗಳಲ್ಲಿ ವಿದ್ಯಾರ್ಥಿ - ವಿದ್ಯಾರ್ಥಿನಿಯರ ಪ್ರತಿನಿಧಿಗಳು ದೊಡ್ಡ ಪ್ರಮಾಣದಲ್ಲಿ ಇರಬೇಕು.

(೨) ಕಾಲೇಜಿನಲ್ಲಿ ಪ್ರಾಧ್ಯಾಪಕರ ನೇಮಕ ಕಾಲಕ್ಕೆ "ಇಂಟರವ್ಯೂ ಬೋರ್ಡ್"ನಲ್ಲಿ ವಿದ್ಯಾರ್ಥಿಗಳ ಪ್ರತಿನಿಧಿಗಳಿರಬೇಕು. ಈ ಹೊಸ ಪ್ರಾಧ್ಯಾಪಕ ವಿದ್ಯಾರ್ಥಿಗಳಿಗೆ ಹೇಗೆ ಕಲಿಸಬಹುದು ಎಂಬುದನ್ನು ವಿದ್ಯಾರ್ಥಿಗಳೇ ಅರಿಯಬಲ್ಲರಲ್ಲವೆ ?

(೩) ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳ ಮೇಲೆ ಪರೀಕ್ಷಕರ ಹೆಸರುಗಳನ್ನು ಅವಶ್ಯವಾಗಿ ಪ್ರಕಟಿಸಬೇಕು. ಇದು ವಿಶ್ವವಿದ್ಯಾಲಯದ ಧೀರ ಹೆಜ್ಜೆಯಾಗುವುದಲ್ಲದೆ ವಿದ್ಯಾರ್ಥಿಗಳಿಗೆ ಇದು ತುಂಬಾ ಅನುಕೂಲವಾಗುತ್ತದೆ.

(೪) ಪರೀಕ್ಷೆಗಳಲ್ಲಿ ಪಠ್ಯ ಪುಸ್ತಕಗಳನ್ನು "ರೆಫರ್" ಮಾಡುವುದಕ್ಕೆ ಅವಕಾಶವಿರಬೇಕು. ಇದರಿಂದ ಪರೀಕ್ಷೆಗಳಲ್ಲಿ ಹಲ-ಕೆಲವು ವಿದ್ಯಾರ್ಥಿಗಳು ವಾಮಮಾರ್ಗವನ್ನು ಅನುಸರಿಸುವುದು ನಿಂತುಹೋಗುತ್ತದೆ. ಅಲ್ಲದೆ ವಿಶ್ವವಿದ್ಯಾಲಯಕ್ಕೆ ಸುಪರವಾಯಿಜರರ ನೇಮಕ ಮಾಡುವ ಖರ್ಚು ಉಳಿಯುತ್ತದೆ.

(೫) ಈಗ ಪರೀಕ್ಷೆಯ ಪೇಪರುಗಳ ಅವಧಿ ಸಾಧಾರಣವಾಗಿ ಮೂರು ತಾಸಿನದು ಇರುತ್ತದೆ. ಇದು ಅನಾವಶ್ಯಕವಾಗಿ ದೀರ್ಘವಾಗಿದ್ದು ಇನ್ನು ಕಡಿಮೆ ಮಾಡಿ ಅರ್ಧ ತಾಸು - ಬಹಳವಾದರೆ ಒಂದು ತಾಸಿನ - ಅವಧಿಯ ಪೇಪರು ಇಡಬೇಕು. ಇದರಿಂದ ರಾಷ್ಟ್ರೀಯ ಉಳಿತಾಯವಾಗುತ್ತದೆ.

ಸಪ್ಟೆಂಬರ್ ೧- ಫುಟ್‌ಬಾಲ್ ಪಂದ್ಯದಲ್ಲಿ ನಮ್ಮ ಕಾಲೇಜ್ ಟೀಮಿಗೇ ವಿಜಯ ದೊರೆಯಿತು. ನನಗೆ ಇವತ್ತು ಅಭಿನಂದನೆಗಳ ಸುರಿಮಳೆಯೋ ಸುರಿಮಳೆ ! ಕುಮಾರಿ ಸು — ನನ್ನೆಡೆಗೆ ಮಂದಹಾಸ ಬೀರುತ್ತ "Congratulations" ಎಂದಾಗ ನನಗೆ ಸ್ವರ್ಗವು ಮೂರೇ ಬೆರಳು ಉಳಿದಂತೆ ಎನಿಸಿತು; ಜೀವನ ಸಾರ್ಥಕವೆನಿಸಿತು. ಆಹಾ ಪಾರ್ಟಿಯ ಬಿಲ್ ೧೪೨ ರೂ. ೫೦ ಪೈಸೆ ಆದರೂ ಅಡ್ಡಿಯಿಲ್ಲ. ಇವತ್ತಿನ ವಿಜಯೋತ್ಸಾಹಕ್ಕೆ ಅದೇನು ಬಹಳವಲ್ಲ.

ಸಪ್ಟೆಂಬರ್ ೧೫- ತಂದೆಯವರಿಗೆ ಹಣ



ಕ್ಕಾಗಿ ಮತ್ತೆ ಪತ್ರ ಬರೆದೆ. ಅವರು ಕಳಿಸಿದ ಹಣ ವಲ್ಲಾ ತೀರಿಹೋಗಿ, ಮಿತ್ರರಿಂದ ಕೈಗಡ ತಂದ ದುಡ್ಡೂ ಖರ್ಚಾಗಿದೆ. ಇನ್ನೂ ಎಷ್ಟೋ ಹೋಟೆಲ್ಲುಗಳ ಉದ್ರಿ, ಉಳಿದಿದೆ "ರೂಮ್ ಕೀಲಿ ಹಾಕಿ ಹೊರಟೆ ಹೋದಾಗ ಕಳವಾಗಿ ಎಲ್ಲಾ ದುಡ್ಡು ಕಳೆದುಹೋಯಿತು; ಪೋಲೀಸ್ ಕಂಪ್ಲೇಂಟ್ ಕೊಟ್ಟಿದ್ದೇನೆ" ಅಂತಾ ದೊಡ್ಡ ಗುಳಿಗೆ ಒಗೆದಿದ್ದೇನೆ ತಂದೆಯವರಿಗೆ ಮೊನ್ನೆ ಬರೆದ ಕಾಗದದಲ್ಲಿ. ಈಗ ಮೂರು ತಿಂಗಳ ಖರ್ಚು ಎಷ್ಟಾಯಿತು ಎಂಬುದನ್ನು ಸಹಜವಾಗಿ ನೋಡಿದಾಗ ಆದ ಖರ್ಚಿನ ಅಂದಾಜು ಈ ರೀತಿ ಇದೆ:

| | |
|---|---|
| ಇಲೆಕ್ಷನ್ ಖರ್ಚು... ಸುಮಾರು | ರೂ. ೫೦೦೦-೦೦ |
| ಚಹದ ಅಂಗಡಿ ಖರ್ಚು...... | ರೂ. ೫೮೫-೦೦ |
| ಸಿನೇಮಾ... — — | ರೂ. ೨೫೪-೦೦ |
| ಲಾಂಡ್ರಿ... — — | ರೂ. ೧೫೫-೦೦ |
| ಸಿಗರೇಟು, ಇ... — | ರೂ. ೧೨೫-೦೦ |

ಇತ್ಯಾದಿ

**ಅಕ್ಟೋಬರ್ ೧–** Excursion ಕ್ಕೆ ಎಲ್ಲಿ ಹೋಗಬೇಕು ಎನ್ನುವ ಚರ್ಚೆ ನಮ್ಮ ಮಿತ್ರ ವೃಂದದಲ್ಲಿ ಬಹಳ ನಡೆದು ಕೊನೆಗೆ ಗೋವಾಕ್ಕೆ ಹೋಗಬೇಕೆಂದು ನಿಶ್ಚಯಿಸಲಾಯಿತು. ಅಲ್ಲಿ ಹಳೆಯ ಚರ್ಚುಗಳು ತುಂಬಾ ಪ್ರೇಕ್ಷಣೀಯವಾಗಿವೆಯಂತೆ. ಅಲ್ಲದೆ ಗೋವಾದಲ್ಲಿ ಪಾನೀಯಗಳಿಗೆ ಹೆಚ್ಚಿನ ಸ್ವಾತಂತ್ರ್ಯವಿಲ್ಲವೆ ? ಕಾರಣ ಅಲ್ಲಿಗೆ ಹೋಗುವುದು ಒಳಿತು. ನಾಳೆ – ಅಕ್ಟೋಬರ್ ಎರಡು–ಅದೇನೋ ಗಾಂಧೀ ಜಯಂತಿಯಂತೆ. ಕಾಲೇಜಿನಲ್ಲಿ ಕಾರ್ಯಕ್ರಮ ಏನೋ ಇಟ್ಟಿದ್ದಾರೆ ಅದಕ್ಕೂ ನನಗೂ ಏನು ಸಂಬಂಧ ? ನಮ್ಮ ಮಿತ್ರವೃಂದ ಇವತ್ತು ರಾತ್ರಿ ಗಾಡಿಗೇ ಹೊರಡಲು ನಿರ್ಧರಿಸಿದ್ದಾರೆ ನಾನೂ ಹೊರಡಲೇಬೇಕು

**ಅಕ್ಟೋಬರ್ ೧೫ –** ಎನ್. ಸಿ. ಸಿ. ಇದೊಂದು ಕಾಟ ! ನಸುಕಿನಲ್ಲಿ ಎದ್ದು ಹೇಗೆ ಹೋಗುವುದು ? ಛೆ ! ಸಾಧ್ಯವೇ ಇಲ್ಲ ನನ್ನ ಮಿತ್ರ ಸೂಚಿಸಿದಂತೆ ಯಾರಾದರೊಬ್ಬ ಡಾಕ್ಟರರ ಸರ್ಟಿಫಿಕೇಟ್ ದೊರಕಿಸಿ ಅದರ ಮೂಲಕ N C C. ಯಿಂದ ಬಿಡುಗಡೆ ಪಡೆಯಬೇಕು.

**ನವ್ಹೆಂಬರ್ ೧೫–** ಪ್ರಿನ್ಸಿಪಾಲರ ಅಂಜಿಕೆಗೆ ಟರ್ಮಿನಲ್ ಪರೀಕ್ಷೆಗೆ ಕೂಡಬೇಕಾಯಿತು; ಕುಳಿತ. ಬಳಿಕ ಉತ್ತರ ಪತ್ರಿಕೆಯಲ್ಲಿ ಏನು ಬರೆಯಬೇಕು ಎಂಬುದು ಹೊಳೆಯಲಿಲ್ಲ. ಕೊನೆಗೆ ಪ್ರಶ್ನೆ ಪತ್ರಿಕೆಯ ಲ್ಲಿಯ ಪ್ರಶ್ನೆಗಳನ್ನೇ ಎರಡೆರಡು ಸಲ ಉತ್ತರ ಹಿಂದು ಬರೆದು ಅರ್ಧ ತಾಸಿನ ನಂತರ ನಿದ್ದೆ ಹೋಗಿ ಬಂದೆ !

ಆದರೆ ಇದರ ಪರಿಣಾಮ ಇಷ್ಟು ವಿಚಿತ್ರ ಆದೀತು ಎಂದು ನನಗೇನೂ ಹೊಳೆದಿರಲಿಲ್ಲ; ನಮ್ಮ ತಂದೆಯವರಿಗೆ ಬರೆದ ಪತ್ರದಲ್ಲಿ – "ಟರ್ಮಿನಲ್ ಪರೀಕ್ಷೆಯಲ್ಲಿ ನನಗೆ ಪ್ರತಿಯೊಂದು ಪೇಪರಿನಲ್ಲಿ ನೂರಕ್ಕೆ ೩೫ ಅಥವಾ ೪೦ ರಷ್ಟು ಮಾರ್ಕ್ಸ್ ಬಿದ್ದಿವೆ" ಎಂದು ನಿಜ ಕಾಣುವಂತೆ ಬರೆದಿದ್ದೆ. ಇದರಿಂದ ಅವರಿಗೆ ಸಾಕಷ್ಟು ನಂಬಿಕೆ ಹುಟ್ಟಬಹುದು ಎಂದು ಭಾವಿಸಿದ್ದೆ.

ಆದರೆ ಬಹಳ ಚಮತ್ಕಾರದ ಸಂಗತಿ ನಡೆಯಿತು. ನಾನು ರಜೆಗೆ ಊರಿಗೆ ಹೋದಾಗ ತಂದೆಯವರು ನನ್ನ ತಮ್ಮನ ಮುಖಾಂತರ ಎರಡು ಪತ್ರಗಳನ್ನು ನನ್ನ ಕಡೆಗೆ ಕಳಿಸಿಕೊಟ್ಟರು. ಒಂದು ಟರ್ಮಿನಲ್ ಫಲಿತಾಂಶದ ಬಗ್ಗೆ ನಾನು ತಂದೆಯವರಿಗೆ ಬರೆದದ್ದು: ಇನ್ನೊಂದು ಪತ್ರ ಪ್ರಿನ್ಸಿಪಾಲರು ನೇರವಾಗಿ ನನ್ನ



ಟರ್ಮಿನಲ್ ಪರೀಕ್ಷೆಯ ಮಾರ್ಕ್ಸ್ ತಿಳಿಸಿ ತಂದೆಯವರಿಗೇ ಬರೆದದ್ದು ಇತ್ತು. ಅವೆರಡನ್ನೂ ನೋಡಿದೊಡನೆಯೇ ನನ್ನ ಎದೆ ಧಸ್ಸೆಂದಿತು. ಏಕೆಂದರೆ ನನ್ನ ಸಜವಾದ ಟರ್ಮಿನಲ್ ಪರೀಕ್ಷೆಯ ಫಲಿತಾಂಶ "ಬಂಡೀಗಾಲಿಗಳ ಪರಿಷತ್ತು" ಆಗಿತ್ತು !

ಇನ್ನು ಮೇಲಾದರೂ ಪಠ್ಯಪುಸ್ತಕಗಳು ಯಾವುವು ಎಂಬುದನ್ನು ನೋಡಬೇಕು.

**ನವ್ಹೆಂಬರ್ ೨೦–** ಕುಮಾರಿ ಸು — ಳಿಗೆ ಮೊನ್ನೆ ಸುವಾಸನೆಯ ಕಾಗದದ ಮೇಲೆ ಖಾಸಗೀ ಪತ್ರ ಬರೆದೆ ಅವಳ ಮೋಹಕ ಚೆಲುವು, ಮಧುರವಾದ ಮಾತು ನನ್ನ ಮನಸ್ಸನ್ನು ಸೆಳೆದುಬಿಟ್ಟಿವೆ. ಪಠ್ಯಪುಸ್ತಕ ತೆರೆದು ಓದಲು ಕುಳಿತರೆ, ಪುಸ್ತಕದಲ್ಲಿ ಅವಳದೇ ಚಿತ್ರ ಕಾಣಿಸಿದಂತಾಗುತ್ತದೆ, ಕಿವಿಯಲ್ಲಿ ಅವಳದೇ ಜೇನನುಡಿ ನಿನದಿಸಿದಂತೆ ಅನಿಸುತ್ತದೆ. ನಾನು ಕವಿಯಾಗಿದ್ದರೆ ಅವಳ ಬಗೆಗೆ ಎಷ್ಟು ಕವನ ಬರೆಯುತ್ತಿದ್ದೆನೋ !

**ಡಿಸೆಂಬರ್ ೧–** ಈ ವರ್ಷ ಅಂತರ್ ಕಾಲೇಜು ಪಂದ್ಯಾಟಗಳು ತುಂಬಾ ಅಭೂತಪೂರ್ವವಾಗಿ ಜರುಗಲಿವೆ. ನಾನೇನು ಆಟಗಾರನಲ್ಲದಿದ್ದರೂ, ನಾನು ಜನರಲ್ ಸೆಕ್ರೆಟರಿ ಅಲ್ಲವೆ ? ಕಾರ್ಯಕ್ರಮಗಳಿಗೆ



ಹೋಗಲೇಬೇಕು. ಅಲ್ಲದೆ ನಗರದ ಎಲ್ಲಾ ಚಿತ್ರ ಮಂದಿರಗಳಲ್ಲಿ ಅತ್ಯುತ್ತಮ ಚಿತ್ರಗಳು ಬಂದಿವೆ. ಅಲ್ಲದೆ ಮೂರು spy-films ಬಂದಿವೆ !

**ಜನವರಿ ೧೦–** ಕಾಲೇಜಿನ ಸೋಶಿಯಲ್ ಗ್ಯಾದರಿಂಗ್ ಸಮೀಪಿಸುತ್ತಾ ಇದೆ. ಮಿತ್ರವೃಂದದ ಆಗ್ರಹಕ್ಕೆ ಒಳಗಾಗಿ ನಾಟಕದಲ್ಲಿ 'ಹಿರೋ'ವಿನ ಪಾತ್ರ ವಹಿಸಲು ಒಪ್ಪಿದೆ. ಅಲ್ಲದೆ ಕುಮಾರಿ ಸು— 'ಹಿರೊಯಿನ್' ಪಾತ್ರ ವಹಿಸುತ್ತಿರುವುದರಿಂದ ನಾಟಕದ 'ರಿಹರ್ಸಲ್ಸ್'ಗಳಿಗೆ ಹೆಚ್ಚಿನ ಜೀವಕಳೆ ಬಂದಿದೆ. ಹೀಗಾಗಿ "ಗೈಡ್ಸ್" ಕೊಳ್ಳುವುದು ಒತ್ತಟ್ಟಿಗಿರಲಿ, ಒಂದು ಸಿನೇಮಾಕ್ಕೆ ಹೋಗುವುದು ಕೂಡ ಆಗಿಲ್ಲ.

**ಫೆಬ್ರುವರಿ ೫–** ಕಾಲೇಜಿನಲ್ಲಿ ಬೇಸರವೋ ಬೇಸರ ನನಗೆ. ಎಲ್ಲಾ ಪ್ರಾಧ್ಯಾಪಕರೂ 'ನೋಟ್ಸ್' ಕೊಡುತ್ತಿದ್ದಾರೆ. ಅವನ್ನೆಲ್ಲ ಯಾರು ಬರೆದುಕೊಳ್ಳಬೇಕು ? ಏಕೆ ಬರೆದುಕೊಳ್ಳಬೇಕು ? 'ಗೈಡ್ಸ್' ಓದಿದರೆ ಆಯಿತು.

**ಮಾರ್ಚ ೧–** ಛೆ ! ಛೆ ! ಈ 'ಗೈಡ್ಸ್' ಕೂಡ ಎಷ್ಟು ದೊಡ್ಡವಿವೆ ! ಇಷ್ಟು ದೀರ್ಘ 'ಗೈಡ್ಸ್' ಓದುವುದೇ ಆದರೆ ಪಠ್ಯ ಪುಸ್ತಕಗಳನ್ನೇ ಓದಬಹುದಲ್ಲ ! ಈಗ ಕೆಲವು ಪ್ರಶ್ನೆಗಳನ್ನು ನಿರೀಕ್ಷಿಸಿ ಅವುಗಳಿಗೆ ಗೈಡ್‌ದಲ್ಲಿಯ ಉತ್ತರಗಳನ್ನು ಬಾಯಿಪಾಠ ಮಾಡುವ ಪ್ರಯತ್ನ ಮಾತ್ರ ಸಾಧ್ಯ. ಇದೂ ಆಗದಿದ್ದರೆ ಇದೆಯಲ್ಲ–ಅನಿವಾರ್ಯದ DROP !!



ಸಂಸಾರ ಸಂಸ್ಕಾರದಲ್ಲಿ

ಸರಸ ಸನ್ನಿವೇಶಗಳು ....

— ಸಂತೋಷಕುಮಾರ
ಗುಲ್ವಾಡಿ

# ಸಪ್ತಪದಿ

**ಇತ್ತೀಚೆಗೆ ವಿವಾಹವಾಗಿ, ಮೊದಲ ದೀಪಾವಳಿಗೆ ಮಾವನ ಮನೆಗೆ ಸಡಗರದಿಂದ ಬರುವ ಅಳಿಯ ಮಹಾಶಯರೆಲ್ಲ ಈ ಲೇಖ ಓದಬೇಕು. ಅವರ ದಾಂಪತ್ಯದ ಭವಿಷ್ಯ ಇಲ್ಲಿದೆ. ಹಳೆಯ ಅಳಿಯಂದಿರು ಇದನ್ನು ಓದಿದರೆ 'ಓಹ್, ಇದು ನನ್ನ ಅನುಭವ' ಎಂದು ವ್ಯಂಗ್ಯನಗೆ ನಗಬಹುದು.**

ಮದುವೆಯಾದವರಿಗೆಲ್ಲ ಸಪ್ತಪದಿ ಎಂದರೆ ಏನೆಂದು ಗೊತ್ತಿರಬೇಕೆಂದಿಲ್ಲ. ಏಕೆಂದರೆ ಎಷ್ಟೋ ಮಂದಿ ವರ ಮಹಾಶಯರು ವಿವಾಹದ ಸಂಭ್ರಮ ಕೂಡ ಮರೆತು ಹೆಂಡತಿಯ ಮೋರೆ ನೋಡುತ್ತ ಕೂಡುತ್ತಿರುತ್ತಾರೆ. ಹಾಗಿರುವಾಗ ಅವರಿಗೆ ಭಟ್ಟರ ವೇದಘೋಷವಾಗಲಿ, ಜನರ ಗದ್ದಲವಾಗಲಿ, ಗ್ರಾಮಾಫೋನು ರಿಕಾರ್ಡುಗಳ ಕಿರಿಚುವಿಕೆಯಾಗಲಿ ಹೇಗೆ ಕೇಳಬೇಕು? ತನ್ನ ಮುದ್ದಿನ ಹೆಂಡತಿ, ತ್ರಿಲೋಕ ಸುಂದರಿ ಅರ್ಥಾತ್ ತನ್ನ ಅರ್ಧಾಂಗಿಯನ್ನು ನೋಡಿ ನೋಡಿ ಅವರೆಲ್ಲ ಬೇರೆಯೇ ಲೋಕದಲ್ಲಿ ವಿಹರಿಸುತ್ತಿರುತ್ತಾರೆ. ಎಂದೇ ಭಟ್ಟರು ಹೇಳಿದುದನ್ನೆಲ್ಲ ಅವರು ಯಾಂತ್ರಿಕವಾಗಿ ಮಾಡುವುದು. ಬಹುಶಃ ಭಟ್ಟರು ಮಾಡಿಸುವ 'ಸಪ್ತಪದಿ' ಕೂಡ ಏನೆಂದು ತಿಳಿಯುವ ಸ್ಥಿತಿಯಲ್ಲಿರುವುದಿಲ್ಲ ಅವರು. ಅಂಥವರಿಗಾಗಿ ಬರೆದುದು ಈ ಮಾರ್ಗದರ್ಶಕ ಲೇಖ. ಏಕೆಂದರೆ ಕೆಲವರಿಗೆ ಸಪ್ತಪದಿ ಹೆಚ್ಚು ಕಡಿಮೆಯಾಗಿ ಸಾಡೇಸಾತಿಯಾಗಿ ಪರಿಣಮಿಸಲೂಬಹುದು.

'ಸಪ್ತಪದಿ' ಎಂಬುದು ಷೋಡಶ ಸಂಸ್ಕಾರಗಳಲ್ಲಿ ಒಂದಾದ ವಿವಾಹದ ಮುಖ್ಯ ಭಾಗ.

'ಅಶ್ವಲಾಯನ ಗೃಹ್ಯ ಸೂತ್ರ'ದಂತೆ ವಿವಾಹ-ಸಂಸ್ಕಾರದಲ್ಲೇ ಅತಿಪ್ರಮುಖವಾದ ಸಪ್ತಪದಿಯ ಮಂತ್ರಾರ್ಥ ಹೀಗಿದೆ:—

" ನಾವು ಒಟ್ಟೊಟ್ಟಿಗೇ ಪ್ರಾರ್ಥಿಸೋಣ,

ಒಂದನೇ ಹೆಜ್ಜೆ - ಉತ್ಸಾಹಕಾರಕ ತಾರುಣ್ಯದ ವೀರ್ಯಕ್ಕಾಗಿ

ಎರಡನೇ ಹೆಜ್ಜೆ - ಜೀವನದಲ್ಲಿ ಸಾಮರ್ಥ್ಯಕ್ಕಾಗಿ.



ಮೂರನೇ ಹೆಜ್ಜೆ - ಸಕಲೈಶ್ವರ್ಯಗಳಿಗಾಗಿ.

ನಾಲ್ಕನೇ ಹೆಜ್ಜೆ - ಜೀವನದ ಸುಖಕ್ಕಾಗಿ

ಐದನೇ ಹೆಜ್ಜೆ - ಸಂತಾನ ಪ್ರಾಪ್ತಿಗಾಗಿ.

ಆರನೇ ಹೆಜ್ಜೆ - ಸುದೀರ್ಘ ದಾಂಪತ್ಯ ಜೀವನಕ್ಕಾಗಿ,

ಏಳನೇ ಹೆಜ್ಜೆ - ಮುಂದೆ ನನ್ನ ಜೀವನ ಸಂಗಾತಿಯಾಗಿ ಜೊತೆಗೇ ಹೋಗಲಿಕ್ಕಾಗಿ

ಸಖೆ ಹೀಗೆಯೇ ನಿರಂತರವಾಗಿ ನಾವು ಜೊತೆ ಜೊತೆಯಾಗಿಯೇ ಹೋಗೋಣ. ಹಾಗೆ ನಾವು ಮುನ್ನಡೆದು ದೀರ್ಘಾಯುಗಳಾದ ಗಂಡು ಮಕ್ಕಳನ್ನು ಪಡೆಯೋಣ. "

( ವೇದಕಾಲದಲ್ಲಿ ಫ್ಯಾಮಿಲಿ ಪ್ಲ್ಯಾನಿಂಗ್ ಇರದುದರಿಂದ ಎರಡೇ ಮಕ್ಕಳಾಗಬೇಕೆಂಬ ಜಾಹಿರಾತೂ ಇರಲಿಲ್ಲ. ಇಲ್ಲವಾದರೆ ಈ ಮಂತ್ರಕ್ಕೆ ಪರ್ಮಿಟು ಸಿಕ್ಕುತ್ತಿರಲಿಲ್ಲ )

ಈಗ ಕಲಿಯುಗದಲ್ಲಿ ಈ ಏಳು ಹೆಜ್ಜೆಗಳಿಗೆ ಅನಧಿಕೃತವಾಗಿ ಇನ್ನೂ ಎರಡು ಹೆಜ್ಜೆಗಳು ಕೂಡಿವೆ. ಹಿಂದಿನವರು ಮಾಡಿಟ್ಟ ಕ್ರಮಗಳಿಗೆ ನಮ್ಮದನ್ನೂ ನಾವೂ ಜೋಡಿಸದಿದ್ದರೆ ನಾವು ಪ್ರಗತಿಪರರು ಹೇಗಾದೇವು? ಈ ಎಲ್ಲ ಹೆಜ್ಜೆಗಳನ್ನು ಕ್ರಮವಾಗಿ ಹಂತ ಹಂತವಾಗಿ ಮುಂದೆ ನೋಡಿಕೊಳ್ಳಿ. ಮುಂದೆ ಜೀವನದಲ್ಲಿ ಎಡವುವ ಪ್ರಶ್ನೆಯೇ ಇಲ್ಲ.

## ಪೂರ್ವರಂಗ ಸೂತ್ರ

( ಆಧುನಿಕ ಆವೃತ್ತಿ )

'ಅಶ್ವಲಾಯನ ಗೃಹ್ಯಸೂತ್ರ'ದಲ್ಲಾಗಲಿ ಯಾವ ಲಾಯರ್ ಕಾನೂನಿನಲ್ಲಾಗಲೀ ಈ ಸೂತ್ರವಿಲ್ಲ, ಏಕೆಂದರೆ ಅದು ಮದುವೆ ಕಂಟ್ರಾಕ್ಟ್ ಮುನ್ನವೇ ನಡೆಯುವುದು. ವಿದೇಶಿ ವಿನಿಮಯವಿಲ್ಲದೆ ಆಮದು ಮಾಡಿದ ಈ ಸೂತ್ರಕ್ಕೆ 'ಕೋರ್ಟ್‌ಶಿಪ್' ಅನ್ನುತ್ತಾರೆ. ಹೀಗೆ ಮಾಡಿ ಕೆಲವರು ಕೋರ್ಟಿಗೆ ಹೋಗಿರುವುದು ನಿಜವಾದರೂ ಅದರಿಂದಾಗಿ ಈ ಹೆಸರಂತೂ ಈ ಸೂತ್ರಕ್ಕೆ ಬಂದುದಲ್ಲ

ಬಸ್ ಕ್ಯೂಗಳಲ್ಲಿ, ಕಾಲೇಜು ಬಾಗಿಲಲ್ಲಿ, ಸಿನೆಮಾ ಮಂದಿರದಲ್ಲಿ ಇದು ಹೆಚ್ಚಾಗಿ ನಡೆಯುವುದು. ಈ ಸಂಸ್ಕಾರಕ್ಕೆ ಅಗ್ನಿಯ ಸಾಕ್ಷಿ ಬೇಕೆಂದಿಲ್ಲ. ಯಾವ ದಿಕ್ಕಿಗೂ ಮುಖಮಾಡಿ ಇದು ನಡೆಯಬಹುದು. ಆದರೆ ಹುಡುಗ-ಹುಡುಗಿಯ ಮುಖ ಮಾತ್ರ ಪರಸ್ಪರ ಎದುರಿಗೆದುರಾಗಿ ಇರಬೇಕಾದುದು ಅತಿಮುಖ್ಯ.

ನೀತಿ * ವಿವಾಹ ಗ್ರಂಥದ ಮೊದಲ ಅಧ್ಯಾಯ ಕಾವ್ಯ, ಉಳಿದುದೆಲ್ಲ ಗದ್ಯ

* ಇಬ್ಬರಿಗೆ ಜಗತ್ತಿನಲ್ಲಿ ಬೇರೇನೂ ಮಾಡಲು ತಿಳಿಯದಿದ್ದಾಗ ಅವರು ಮದುವೆಯಾಗುತ್ತಾರೆ.

## ಮೊದಲ ಹೆಜ್ಜೆ

ಇದು ಮದುವೆಯಾದ ಬಳಿಕ ಮೊದಲ ಆರು ತಿಂಗಳಲ್ಲಿ ಇಡುವ ಪ್ರಥಮ ಹೆಜ್ಜೆ. ಆಗ ದಂಪತಿಗಳಿಗೆ ಕೂತಲ್ಲಿ ನಿಂತಲ್ಲಿ ಸ್ವರ್ಗಲೋಕ. ಮಧುಚಂದ್ರದ ಉದ್ರೇಕದಲ್ಲಿ ಪ್ರತಿಯೊಂದೂ ಹೂವೆತ್ತಿದಷ್ಟು ಸುಲಭ. ಜೀವನ ಜೇನಿನಷ್ಟು ಸಿಹಿ; ಅದೊಂದು ಸವಿಗನಸು; ಹೂವಿಗಿಂತಲೂ ಬಲು ಹಗುರ. ಸೊಗಸು. ಚೆಲುವೇ ಬದುಕಿನ ಬೆಳಕು, ಪ್ರೇಮಲಹರಿ. ಅದಕ್ಕೆ ಅಂತ್ಯವಿಲ್ಲವೆಂಬ ಹಗಲು-ಗನಸು. ಆಗ ಅರ್ಥವಿಲ್ಲದ ಉದ್ಗಾರಗಳಿಗೆ ವಿಶೇಷ ಅರ್ಥ ಬರುತ್ತದೆ. ಮೌನ ಮಾತನಾಡುತ್ತದೆ. ಬಹುಶಃ ಕವಿಗಳು ವಿವರಿಸಿದ ಆನಂದ ಇದೇ ಆಗಿರಬೇಕೆಂಬ ಕಾವ್ಯಲೋಕದಲ್ಲಿ ಇಬ್ಬರದೂ ವಿಹಾರ. ಸ್ವರ್ಗಕ್ಕೆ ಕಿಚ್ಚು ಹಚ್ಚಬೇಕೆಂದು ಸರ್ವಜ್ಞ ಹೇಳಿದ್ದ ಜೀವನ ಇದೇ ಅಲ್ಲವೆ? 'ಮೈಸೂರು ಮಲ್ಲಿಗೆ'ಯಲ್ಲಿ ಕವಿ ನರಸಿಂಹ ಸ್ವಾಮಿ ಬರೆದಂತೆ—

'ನಮಗಿದುವೆ ಸೊಗಸು ಬದುಕಿನ
ಬಣ್ಣಗಳ ಸಂತೆ
ನಮಗಿಲ್ಲ ನೂರು ಚಿಂತೆ;
ನಾವು ಗಂಧರ್ವರಂತೆ.
"ತಾರೆಗಳ ಮೀಟುವೆವು,
ಚಂದಿರನ ದಾಟುವೆವು
ಒಲುಮೆಯೊಳಗೊಂದು ನಾವು;
ನಮಗಿಲ್ಲ ನೋವು; ಸಾವು."

ಪ್ರೇಮದ ಈ ಹುಡುಗಾಟದಲ್ಲಿ ಮಾತನಾಡುವ ಮಾತಿಗೆ ತಿರುಳಿಲ್ಲ. ಅವರೆ ಅವರ ಸವಿಯೇ ಬೇರೆ. ನಲ್ಲೆಗಾಗಿ ಚಂದ್ರನೆಡೆಗೆ ಹೋಗುವುದೇನು. ಅವನನ್ನು ಎಳೆದು ತರುವ ಸಾಹಸ ಅವನದು. ಆಕೆ ಅವನ ಸ್ವಪ್ನಸುಂದರಿ. ಇದ್ದಕ್ಕಿದ್ದಂತೆ ಈ ಸಂದರ್ಭದಲ್ಲಿ ಕೆಲವರು ಪ್ರೇಮಕವಿಗಳಾಗಿ ಬಿಡುವುದಿದೆ. ಕತ್ತಲೆಯ ರಾತ್ರಿಯ ಹೊತ್ತು ಎಲ್ಲರೂ ಮುಸುಕು ಹಾಕಿ ಮಲಗಿದಾಗ ಸ್ಫೂರ್ತಿ ಬಂದು ನದಿಯ ದಡಕ್ಕೆ ಹೆಂಡತಿಯನ್ನು ಕರೆದೊಯ್ದು, ಮೋಡದೆಡೆಯಲ್ಲಿ ಮರೆಯಾದ ಚಂದಿರನ ತೋರುವ ಕವಿಹೃದಯದ "ಟ್ರಾನ್ಸ್‌ಪ್ಲಾಂಟೇಷನ್" ಆಗುತ್ತದೆ ಕೆಲವರಿಗೆ. ಈ ಬಣ್ಣದ ಕನಸು ಮಾತ್ರ ಬಲು ಬೇಗ ಕರಗುತ್ತದೆ. ಅನುಭವಿಗಳ ಉಪದೇಶದ ಮಾತು: ಮದುವೆಗೆ ಯಶ ಬರುವುದು ಮಧುಚಂದ್ರದ ಸೋಲಿನ ಬಳಿಕವೆ

ನೀತಿ : * ವಿವಾಹ ಬಂಧನ ಎಷ್ಟು ಬಲವತ್ತರವಾಗಿರುತ್ತದೆಯೆಂದರೆ ಅದನ್ನು ಹೊರಲು ಇಬ್ಬರು, ಕೆಲವೊಮ್ಮೆ ಅರೇಳು ಮಂದಿ ಬೇಕಾಗುತ್ತದೆ.

* ವಿವಾಹವೆಂದರೆ ಖಾಸಗಿ ಸುಖಕ್ಕಾಗಿ ಮಾಡುವ ಒಂದು ಸಾರ್ವಜನಿಕ ಸತ್ಕಾರ.

## ಎರಡನೇ ಹೆಜ್ಜೆ

ಆರಂಭದ ಉದ್ರೇಕದ ಧರ್ಮಾಮೀಟರು ಈಗ ಕೆಳಗಿಳಿಯಲಾರಂಭ. ಗಂಡ-ಹೆಂಡತಿ ಆಗಸದಿಂದ ಧರೆಗಿಳಿದು ಪರಸ್ಪರ ಒಬ್ಬರನ್ನೊಬ್ಬರು ಅರಿಯಲಾರಂಭಿಸುವ ಹೆಜ್ಜೆಯಿದು. ಏನಾದರೂ ಹೆಚ್ಚು ಕಡಿಮೆಯಾದರೆ, "ಬಿಡು ಚಿನ್ನಾ, ಪರವಾಗಿಲ್ಲ" ಎಂದು ಒಂದು ಮುತ್ತಿನಲ್ಲೋ ಆಲಿಂಗನದಲ್ಲೋ ಮುಗಿಸಿಬಿಡುವ ಉದಾರ ಮನಸ್ಸು ಆಗ ಇಬ್ಬರದೂ.

ಮೊದಲಿನ ಹಂತದಲ್ಲಿದ್ದ ಪ್ರೇಮದ ಸಂಬೋಧನೆಗಳು ಇನ್ನೂ ಹಳೆಯವಾಗುವುದಿಲ್ಲ ಈ ಮೆಟ್ಟಲಲ್ಲಿ. ಚಿನ್ನ, ಅರಗಿಣಿ, ಎನ್ನ ಕಣ್ಣೇ, ಮುದ್ದು...ಎನ್ನ



ರಾಜಾ ಇತ್ಯಾದಿ ಅಲಂಕಾರಿಕ, ನಾಟಕೀಯ ಮಾತುಗಳು ನಿಜ ಜೀವನದಲ್ಲಿ ಬಲು ವಾಸ್ತವಿಕವಾಗಿ ಸ್ವೀಕರಿಸಲ್ಪಡುತ್ತವೆ. ಟ್ರೇನಿನಲ್ಲಿ ಹತ್ತುವಾಗ, ಸಿಟಿಬಸ್ಸು ಇಳಿಯುವಾಗ ಹೆಂಡತಿಯು ಎಲ್ಲಿ ಬಿದ್ದಾಳೋ ಎಂಬಷ್ಟು ಆದರದಿಂದ ಅವನು ಇನ್ನೂ ಆಕೆಯನ್ನು ಆಧರಿಸುತ್ತಾನೆ.

ಹೆಂಡತಿ ಕೇಳಲಿ, ಬಿಡಲಿ ಮದುವೆಯಾದ ದಿನಾಂಕದಂದು, ಶುಭ ದಿನಗಳಂದು ಆಕೆಗೆ ನೆನಪಿನಿಂದ ಅವನು ಉಡುಗರೆ ಕೊಡುತ್ತಾನೆ. ಈ ಹೆಜ್ಜೆಯ ಕೊನೆಯ ಹಂತ ಹೀಗೆ-

ಮೊದಲೆ ರತಿ ನೀನಲ್ಲ;
ಮನ್ಮಥನು ನಾನೇ?-ಅಲ್ಲ,
ಹೊಗಳಿ ಹಣೆವುದನೆಲ್ಲ
ನಾನೆಂದೋ ಹಣೆದೆವಲ್ಲ!
ಹಂಗು ಹೊಣೆಯಿಲ್ಲದೆಯೇ
ಪ್ರೀತಿಯ ನಲಿವ ಭಾರ!
ಮಿಂಚೆಳೆದರೇನೊಂಗೆ?
ತಾರೆಯಿದೆ ತುಂಬ ದೂರ.
( ಮೈಸೂರು ಮಲ್ಲಿಗೆ )

ನೀತಿ : * ಮದುವೆಗೆ ಮೊದಲು ಕಣ್ಣು ಬಿಟ್ಟು ಎಚ್ಚರಿಕೆಯಿಂದಿರಿ; ಮತ್ತೆ ಬೇಕಾದರೆ ಕಣ್ಮುಚ್ಚಿಕೊಳ್ಳಬಹುದು.

* ಎರಡನೆಯ ಗುಟುಕು ಹುಡ್ಡ ಕುಡಿದವರೆಗೆ ಅಮಲೇರದು; ಹೆಂಡತಿಯು ಬಣ್ಣ ಹೊರಗೆ ಬೀಳುವವರೆಗೆ ದಾಂಪತ್ಯದ ರಸಿಕತೆ ತಿಳಿಯದು

## ಮೂರನೆಯ ಹೆಜ್ಜೆ

ಇದರೊಂದಿಗೆ ಪ್ರೇಮದ ಕನಸು ಮುಕ್ತಾಯ. ಯಾವುದೋ ಚಿಕ್ಕಪುಟ್ಟ ಕಾರಣದಿಂದ ಜಗಳವಾಗುವ ಹಂತವಿದು. 'ನನ್ನ ಪ್ರೇಮವನು ನೀನು ಇಷ್ಟೇಯೋ ಅರ್ಥ ಮಾಡಿಕೊಂಡುದು?' ಎಂದು ಇಬ್ಬರೂ ಹುಬ್ಬುಗಂಟು ಹಾಕುವ ಪ್ರಥಮ ಪಾಠ ಕಲಿಯುತ್ತಾರೆ. ಇನ್ನೊಬ್ಬರ ಭಾವನೆ, 'ಮೂಡ್' ಗಳನ್ನು ಅರ್ಥ ಮಾಡಿಕೊಂಡೇ ತಾನು ವರ್ತಿಸಬೇಕಲ್ಲದೆ ಪ್ರೇಮಸಾಮ್ರಾಜ್ಯದಲ್ಲಿ ಸರ್ವಾಧಿಕಾರಿಯಾಗಲು ಸಾಧ್ಯವಿಲ್ಲವೆಂದು ಇಬ್ಬರಿಗೂ ತಿಳಿದುಬಿಡುತ್ತದೆ.

ಆದರೆ ಈಗಿನ ಕೋಪದಲ್ಲಿ ಇಬ್ಬರ ಪ್ರೇಮದ ಉದ್ರೇಕ ಹೆಚ್ಚು ಕೆಳಗಿಳಿಯುವುದಿಲ್ಲ. ಎಂದೇ ಪರಸ್ಪರ ಕೋಪವನ್ನು ಬಾಗಿಲ ಮೇಲೆ, ಅಡಿಗೆ ಮನೆಯಲ್ಲಿ ಪಾತ್ರೆಗಳ ಮೇಲೆ, ಇಲ್ಲವೆ ಹಾಸಿಗೆಯ ಮೇಲಾದರೆ ತಲೆದಿಂಬುಗಳ ಮೇಲೆ ತೆಗೆಯುವ ಕ್ರಮ ಹೆಚ್ಚು ಕೋಪ ಬಂದರೆ ಆತ ಒಂಟಿಯಾಗಿ ಹೊರಗೆ ಹೋಗಿ ಸೇದು ತೀರಿಸುವುದು; ಆಕೆ ಮನೆಯಲ್ಲೇ ಅತ್ತು ಛಲ ಸಾಧಿಸುತ್ತಾಳೆ.

ತುಳುಗಾದೆಯಂತೆ, 'ನೀರಿನ ಆಳ ತಿಳಿಯಬೇಕಾದರೆ ಇಳಿದೇ ನೋಡಬೇಕು, ಮನುಷ್ಯನ ಆಳ ನೋಡಬೇಕಾದರೆ ಜತೆ ನಿಂತೇ ಅನುಭವಿಸಬೇಕು' ಎಂಬ ಅನುಭವ ಇಬ್ಬರಿಗೂ ಲಾರ್ಡ್ ಬೈರನ್ ಕವಿಯ 'ವೆನ್ ವಿ ಟೂ ಪಾರ್ಟೆಡ್' ಕವನದ ಅನುವಾದವನ್ನು ಕವಿ ನರಸಿಂಹ ಸ್ವಾಮಿಯವರು ಮಾಡಿದ ಭಾವನೆಗೆ ಇದೇ ಸ್ಥಿತಿ ಸ್ಫೂರ್ತಿಯಾಗಿರಬೇಕು

'ಬಣ್ಣವಿಳಿದ ತುಟಿಯು ಮುತ್ತು
ಮಂಜಿಗಿಂತ ತಣ್ಣಗಿತ್ತು
ಎಂದೋ ನನಗೆ ಕಾಣಿಸಿತ್ತು
ಅಂದೊದಗಿದ ವಿಷದ ಕುತ್ತು.
'ನಿನ್ನ ಕಂಡು ಕೇಳದವರು
ತಿಳಿಯಲಿಲ್ಲ; ನಾನು ನಿನ್ನ
ಮೊದಲಿನಿಂದ ಬಲ್ಲೆನೆಂದು
ಎಂಥ ಮೋಸ, ವೇಷ, ಬಣ್ಣ!'

ಒಂದು ವೇಳೆ 'ಆಕೆ' ಅಹಿಂಸಾವಾದಿಯಾಗಿದ್ದಳೆ, ತವರು ಗಟ್ಟಿಯಾಗಿದ್ದರೆ ನೆಟ್ಟಗೆ ಅಲ್ಲಿ ನಡೆದೇಬಿಟ್ಟಳು. ತನ್ನ ತಂದೆ ಐ. ಸಿ. ಎಸ್. ಆಫೀಸರರು ಎಂಬ ಪ್ರತಿಷ್ಠೆಯಾದರೂ ಇರಬೇಡವೇ ಆಕೆಗೆ? ಕೆಲವೊಮ್ಮೆ ಆಕೆ ತಾನು ಬಾವಿಗೆ ಹಾರುತ್ತೇನೆ ಎಂದು ಹೆದರಿಕೆ ಹುಟ್ಟಿಸಲೂಬಹುದು. ಆದರೆ ಆಫೀಸಿನ ಟ್ರೇಡ್ ಯೂನಿಯನ್ ಸೆಕ್ರೆಟರಿಯಾಗಿರುವ 'ಇವನು' 'ಹೂಂ' ಎಂದರೆ ಅದಕ್ಕೆಲ್ಲ ಏಕೆ ಸೊಪ್ಪು ಹಾಕಬೇಕು? ತಾನು ಮಂತ್ರಿಗಳ ಮಗಳನ್ನೇ ಮದುವೆಯಾಗಬಹುದಿತ್ತಲ್ಲ!



ಇಬ್ಬರಲ್ಲೂ ಕೋಪ ಸುಡುತ್ತದೆ, ಮೌನ ಸಂಧಿ ಮಾಡುತ್ತದೆ ಮೊದಲ ಕೋಪ ಮೊದಲ ರಾಜಿ ಯೊಂದಿಗೆ ಕೊನೆಗೊಳ್ಳುತ್ತದೆ. ಗಂಡ–ಹೆಂಡಿರ ಕೋಪ ಉಂಡು ಮಲಗುವವರೆಗೆ ಇದ್ದು ಕೋಪ ಮಲಗುತ್ತದೆ- ಇವರಲ್ಲ. ಕೆಲವೊಮ್ಮೆ ಇಂಥ ಪ್ರಕರಣ ಸಿಡಿದು ಮಗ–ಸೊಸೆ 'ಬೇರೆ ಬಿಡಾರ ಮಾಡುವುದೂ ಇದೆ.

ನೀತಿ : * ಪ್ರತಿಯೊಬ್ಬನೂ ಜೀವನದಲ್ಲಿ ಒಂದಲ್ಲ ಒಂದು ಬಾರಿ ಮೂರ್ಖನಾಗುತ್ತಾನೆ. ಆದರೆ ಮದುವೆಯಾಗುವುದೆಂದರೆ ಜೀವನವಿಡೀ ಮೂರ್ಖನಾಗಿರುವುದೆಂದರ್ಥ.

* ಪ್ರತಿಯೊಬ್ಬರೂ ಯೌವನದಲ್ಲಿ ಮಾಡುವ ತಪ್ಪೆಂದರೆ ವಿವಾಹ.

* ಯಾರನ್ನು ವಿವಾಹವಾಗಿದ್ದೇನೆ ಎಂಬುದು ಮುಖ್ಯವಲ್ಲ, ಏಕೆಂದರೆ ಮರುದಿನ ಬೆಳಿಗ್ಗೆ ಎದ್ದು ನೋಡುವಾಗ ಅದು ಯಾರೋ ಬೇರೆಯೇ ಆಗುತ್ತಾರೆ.

## ನಾಲ್ಕನೆಯ ಹೆಜ್ಜೆ

ಇಷ್ಟರಲ್ಲೇ ನಾಲ್ಕು ಕಾಲಾಗಿದ್ದುದು ಎರಡಾಗುತ್ತದೆ ಹೊಸ ಮಗುವಿನ ಆಗಮನ ಹೊಸ ಹರ್ಷ ತರುತ್ತದೆ. ಆಕೆಗೆ ಮತ್ತೆ ಹೂವಿನ ಹಾಸಿಗೆ. ಅವನಿಗೆ ಜವಾಬ್ದಾರಿ ಹೆಚ್ಚು. ಎರಡು ಜೀವಗಳ ಹೊಣೆಗಳನ್ನು ಹೊತ್ತಿದ್ದಾನಲ್ಲವೆ ಭೂಪ? ತಾನು ತಂದೆಯಾದೆನೆಂಬ ಜಂಭ ಬೇರೆ.

ಇದು ಸಂಕ್ರಮಣ ಕಾಲ ದಾಂಪತ್ಯ ಬೇರೂರಲು ಫಲವಾದ ಸುಸಂಧಿ. ಮದುವೆಯಾದ ಬಳಿಕ ಕೆಲವು ತಿಂಗಳು ಬ್ರಹ್ಮಚಾರಿಯಾಗಬೇಕಾದ ಬಂಧನ. ಆದರೂ ಇದು ಬಹು ಕಿರುಕುಳದ ಸಮಯ. ಮಗುವಿನ ಕಿರಿಚುವಿಕೆಯಲ್ಲಿ ರಾತ್ರಿ ಎದ್ದೆಗೆಡಬೇಕು. ಆಕೆ ಆಯಾಸ ಮಾಡಿಕೊಳ್ಳುವಂತಿಲ್ಲ. ಸಹಜವಾಗಿ ಗಂಡು ಈಗ ಅನೇಕ ಬಾರಿ ಎಡುವುತ್ತಾನೆ. ಆಕೆ ಇದರ ದುರುಪಯೋಗ ಮಾಡಿಕೊಂಡು 'ಅವರನ್ನು ಹಂಡ್ರಿ ಗಂಡ, ಹೆನ್ಪೆಕ್ಡ್ ಆಗಿಸುತ್ತಾಳೆ. ಮದುವೆಯೆಂದರೆ ಮತ್ತೇನು? ಓರ್ವ ಯಜಮಾನ-ಓರ್ವ ಯಜಮಾನಿ, ಇಬ್ಬರೂ ಆಳುಗಳ ಸಮಾಜ-ಒಟ್ಟಿಗೆ ಕೂಡಿ ಇರುವುದು ಇಬ್ಬರೇ- ಇದೇ ಹಾಂಡಕ್ಕ ಕಾನೆ? ಅಲ್ಲಿ ಯಾರು, ಏನು ಎಂಬುದು ವಿರಸ್ಕಾರ ಅಸ್ಪಷ್ಟವಾಗುವುದು ಇಲ್ಲಿಯೆ.

ನೀತಿ : * ದಾಂಪತ್ಯದ ದೊಡ್ಡ ಸಮಸ್ಯೆಯೆಂದರೆ ಭಾವನಾತ್ಮಕವಾಗಿ ಪ್ರತಿ ಹೆಂಡತಿ ತಾಯಿಯಾಗಿರುತ್ತಾಳೆ: ಗಂಡ ಬ್ರಹ್ಮಚಾರಿಯಾಗಿರುತ್ತಾನೆ.

* ವಿವಾಹವೆಂದರೆ ಸ್ವರ್ಗವೂ ಅಲ್ಲ, ನರಕವೂ ಅಲ್ಲ ಅದೊಂದು ಅವಸ್ಥೆ ಅಷ್ಟೆ.

* ಮದುವೆಯ ಮೊದಲು 'ಆಕೆ ಹೇಳಿದುದನೆಲ್ಲ ಆತ ಬಲು ಎಚ್ಚರಿಕೆಯಿಂದ ಕೇಳುತ್ತಾನೆ. ಮದುವೆಯಾದ ಬಳಿಕ 'ಆಕೆ ಹೇಳುವ ಮೊದಲೇ 'ಆತ' ಮಲಗಿರುತ್ತಾನೆ.

## ಐದನೆಯ ಹೆಜ್ಜೆ

ಹಲವು ಒಪ್ಪಂದವಾದ ಬಳಿಕ, ಅರ್ಥಾತ್ ಗಂಡಿನ ತಪ್ಪಿನ ಒಪ್ಪಿಗೆಯಾದ ಬಳಿಕ ಇದೊಂದು 'ಅವಶ್ಯ ಪೀಡೆ ಯಾಗಿಬಿಡುತ್ತದೆ. ಇಬ್ಬರಿಗೂ, ಕೆಲವೊಮ್ಮೆ ಬಡ-ಅನಾಥ ಹುಡುಗಿಯಾದವಳನ್ನು ವಿವಾಹವಾದರೆ ತಾನು ಅವಳ ಕುಟುಂಬವನ್ನೇ ಮದುವೆಯಾಗಿದ್ದೇನೇನೋ ಎಂದು ಇವನಿಗೆ ಸಂಶಯ ಬರಬಹುದು: ಆತ ವಾಠ್ನದ ಹುಡುಗನಾಗಿ ಮನೆಯ ಅಳಿಯನಾದರೆ ಬೇರೆ ಹೇಳಬೇಕಿಲ್ಲ. ವಿವಾಹದೊಂದಿಗೆ ಗಂಡಿನ ಕೊನೆಯೆಂದು ಫ್ರೆಂಚ್ ಕಾದಂಬರಿಕಾರ ಬಾಲ್ಜಾಕ್ ಹೇಳಿದುದನ್ನು ಇಂಥವರನ್ನು ನೋಡಿಯೇ,



ಸರಿ 'ಆತ' ಹೆಣ್ಣು ಜಾತಿಯನ್ನೇ ಶಪಿಸುತ್ತಾನೆ. 'ಆಕೆ ಗಂಡುಜಾತಿಯೇ ಮೂರ್ಖರು ಎಂದು ತೀರ್ಪು ನೀಡುತ್ತಾಳೆ. ಆತ ಮತ್ತೆ ಮಾತನಾಡುವುದಿಲ್ಲ ಅಷ್ಟೆ

ನೀತಿ : * ಕುರುಡ ಕುರುಡನಿಗೆ ಮಾರ್ಗದರ್ಶನ ಮಾಡುವುದಕ್ಕೆ ಒಳ್ಳೆ ಉದಾಹರಣೆಗೆ ಮದುವೆ ಎನ್ನುತ್ತಾರೆ

* ಪ್ರತಿಯೊಬ್ಬನೂ ಜೀವನದಲ್ಲಿ ಪಾವ ಪಡಬೇಕಾದ ಎರಡು ಪಿಡುಗಗಳಿವೆ, ದಿಯಸ್ಸು ಮತ್ತು ವಿವಾಹ.

## ಆರನೆಯ ಹೆಜ್ಜೆ

ಇದು ಬಹು ಸಂಶಯದ ಹಂತ. ವಿವಾಹ ಬಂಧ ಬಹಳ ಸುಖಕರ ಎಂದು ಮೂರ್ಖ ಹೇಳಿದುದೆಂದು ಇಬ್ಬರೂ ತಮ್ಮತಮ್ಮಕ್ಕೇ ಕೇಳಿಕೊಳ್ಳುತ್ತಾರೆ ತಮ್ಮತಮ್ಮಕ್ಕೇ.

ಆತ ಬ್ರಹ್ಮಚಾರಿಯಾಗಿದ್ದಂತೆ ಮನೆರ ಯಥಾಪ್ರಕಾರ ತಡವಾಗಿ ಬರುತ್ತಾನೆ. ಆಕೆ ಮಹಿಳಾ ಸಮಾಜದ ಸದಸ್ಯೆಯಾಗಿ ಬೇರೆ ಹುಡುಗಿಯರನ್ನಾದರೂ ಸುಧಾರಿಸೋಣವೆನ್ನುತ್ತಾಳೆ.

ನೀತಿ : * ಪ್ರತಿಯೊಂದು ದಂಪತಿಗಳಲ್ಲಿ ಒಬ್ಬರಾದರೂ ಮೂರ್ಖರಿರುತ್ತಾರೆ.

## ನಿಳನೆಯ ಹೆಜ್ಜೆ

ಇದು ವಿಪರೀತದ ಹೆಜ್ಜೆ. ಇಬ್ಬರಿಗೂ ತಮ್ಮ ಬಲಾಬಲಗಳ ಅರಿವು ಚೆನ್ನಾಗಿ ಆಗಿಬಿಡುತ್ತದೆ 'ಆತ'ನ ಮಾತು ಕಡಿಮೆಯಾದಂತೆ ಆಕೆಯ ಭಾಷೆ ಬಿಗಿಯಾಗುತ್ತದೆ.

ಹಿಂದಿನಂತೆ ರಾತ್ರಿಯ ಚಂದ್ರ, ನಕ್ಷತ್ರಗಳು ಈಗ ಯಾವ ಸ್ಫೂರ್ತಿಯನ್ನೂ ಕೊಡುತ್ತಿಲ್ಲ. ಒಂದು ವೇಳೆ ಅಪ್ಪಿ ತಪ್ಪಿ ಹಿಂದಿನ ನೆನಪಾಗಿ, "ನೋಡಿ, ಹುಣ್ಣಿಮೆ ಚಂದ್ರ-ಎಂಥ ಸುಂದರ ಬೆಳದಿಂಗಳು" ಎಂದರೆ ಆ ಮುಸುಕೆಳೆದು, "ಸಾಕು ನಿನ್ನ ರಸಿಕತನ. ಬೆಳಗಿನಿಂದ ಸಂಜೆಯ ವರೆಗೆ ದುಡಿದು ಸಾಯುತ್ತಿದ್ದೇನೆ ಇಲ್ಲಿ ನಿನಗೇನು ಗೊತ್ತು? ಸುಮ್ಮ ಬಿದ್ದುಕೋ?" ಎನ್ನುವನಾತ.

ನೀತಿ : * ವಿವಾಹವೆಂದರೆ ಒಂದು ವ್ಯಾಪಾರ ಒಬ್ಬರಿಗೆ ಅದರಲ್ಲಿ ಲಾಭ. ಇನ್ನೊಬ್ಬರಿಗೆ ನಷ್ಟ. ಅದೊಂದು ಪರಸ್ಪರ ಒಪ್ಪಂದದಲ್ಲಿ ಮಾಡುವ ಮೋಸದ ಕರಾರು.

## ಉತ್ತರಕಾಂಡ

( ಆಧುನಿಕ ಆವೃತ್ತಿ )

ರಾಮ ಸೀತೆಯನ್ನು ಕಾಡಿಗೆ ಅಟ್ಟಿದ ಅಧ್ಯಾಯ ವಿದು. ಸಪ್ತಪದಿಯ ಹೊಸ ಆವೃತ್ತಿ. ಆತ ಆಫೀಸಿನಲ್ಲಿ ತನ್ನ ಸೆಕ್ರೆಟರಿಯನ್ನು ತೆಗೆದುಕೊಂಡು ಹೋಗಿ ಸಿನೆಮಾ ನೋಡುತ್ತಾನೆ. "ಸಾಯಲಿ" ಎಂದು ಆಕೆ ಮಹಿಳಾ ಸಮಾಜದ ಕಾರ್ಯದರ್ಶಿಯಾಗುತ್ತಾಳೆ.

ಇದರ ವಿಪರೀತ ಕಾಂಡವೇ ಘಟಸ್ಫೋಟ. ಭಾರತದಲ್ಲಿ ವಿದೇಶ ವಿನಿಮಯವಿಲ್ಲದೆ ಆಮದಾಗುತ್ತಿದೆ.

ನೀತಿ : * ವಿವಾಹ ಆಗಬಲ್ಲೆಯಿಲ್ಲ. ಸುಖಿಯಾದರೆ ಗೃಹಸ್ಥನಾಗುವಿ. ಇಲ್ಲವಾದರೆ ತತ್ತ್ವಜ್ಞಾನಿಯಾಗುವಿ.

# *Enjoy Your Holiday Travel*
# *Available For Hire*

**'SUVIHARI'** -- **37 Seater Super De-Luxe Coach with Radio**

**'MINI BUS'** -- **16 Seater Super De-Luxe Coach**

**'POLARA'** -- **5 Seater Air Cooled Cars with Radio**

**'IMPALA'** -- **5 Seater Air-Conditioned Cars with Radio**

**'FORD FALCON VAN'** -- **6 Seater Air-Conditioned Van with Radio.**

## MYSORE STATE ROAD TRANSPORT CORPORATION



*CONTACT:*

| | Phone : |
|---|---|
| **Chief Traffic Manager :** | **70567** |
| **Public Relations Officer :** | **29486** |




# ಮರದ ಬೊಂಬೆ

ಗೀತಾ ಕುಲಕರ್ಣಿ

ಮಾಧವರಾಯರು ತಮ್ಮ ಕೋಣೆಯಲ್ಲೇ ಶತಪಥ ತಿರುಗಿದರು. ಉದ್ವಿಗ್ನಗೊಂಡಿದ್ದ ಮನಸ್ಸು ಸಮಾಧಾನದ ನೆರಳಿಗಾಗಿ ಅರಸುತ್ತಿತ್ತು. ಶತಪಥ ತಿರುಗಿ ಕಾಲುಗಳು ನೋವಾದವೇ ಹೊರತು ಅವರು ಬಯಸುತ್ತಿದ್ದ ಆ ಸಮಾಧಾನ ಮಾತ್ರ ಅವರಿಂದ ದೂರದಲ್ಲಿ ನಿಂತು ಅಣಕಿಸಿದಂತಾಗಿತ್ತು. ಗಡಿಯಾರದಲ್ಲಿಯ ಸದ್ದಿಗೆ ಅವರ ಯೋಚನೆಯ ಚಕ್ರ ತಟ್ಟನೆ ನಿಂತಿತು. ಓ...ಆಫೀಸಿಗೆ ಹೊತ್ತಾಯಿತು ಗಡಿಬಿಡಿಯಿಂದಲೇ ಮನೆಯಲ್ಲಿಯ ಲುಂಗಿ ಕಳಚಿ ಆಫೀಸಿನ ಬಟ್ಟೆ ಬರೆ ಧರಿಸಿ. ಕಾಲಿಗೆ ಬೂಟ್ಸ್ ಹಾಕಿಕೊಳ್ಳುವಂತೆ, ಲಕ್ಷ್ಮಮ್ಮ ಬಂದು ಬಾಗಿಲಲ್ಲಿ ನಿಂತಾಗ ರಾಯರು ಮನದಲ್ಲೇ ಯೋಚಿಸುತ್ತಿದ್ದ ಮಾತನ್ನು ಮತ್ತೆ ನುಡಿದರು:

"ಈಗೇನು ಮಾಡೋಣ? ಯಾವುದಾದರೊಂದು ನಿತ್ಯರ್ಥವಾಗಬೇಕಲ್ಲ? ನೀನವಳನ್ನ ಮತ್ತೆ ಕೇಳಿದ್ದಿಯಾ?"

"ಅವಳು ಯಾವುದಕ್ಕೂ ಒಪ್ಪೋದಿಲ್ಲ. ಅವಳೆದುರು ಮದುವೆಯ ಮಾತನ್ನೇ ಎತ್ತಬಾರದಂತೆ... ತೃಪ್ತಿಯಾಗೋ ವರೆಗೆ ಓದಿ, ಆ ನಂತರ ಕೆಲಸ ಮಾಡ್ತೇನೆ ಎನ್ನುತ್ತಾಳೆ. ಹೆಚ್ಚು ಕೇಳಿದ್ರೆ... ಯಾಕಮ್ಮಾ ನಾನಿದ್ರೆ ನಿಂಗೆ, ಅಪ್ಪಯ್ಯಂಗೆ ಭಾರವಾಗ್ತೇನೆಯೋ? ಎಂದು ಕೇಳಿದ್ಲು."

"ಅದೆಲ್ಲ ಮದುವೆಗೆ ಮೊದ್ಲು ಹುಡುಗಿಯರಾಡುವ ಚಂದದ ಮಾತುಗಳು. ಇವಳೂ ನಾಲ್ಕು ದಿನ ಇದೇ ರಾಗ ಎಳೆಯುತ್ತಾಳೆ, ನಮ್ಮ ಸುನೀ ಹೀಗೇ ಹೇಳುತಿದ್ಲು ಮೊದಲು. ಈಗ ನೋಡು ಅರೆಗಳಿಗೆ ಹೇಮಂತನ್ನ ಬಿಟ್ಟು ಇರಲಾರಳು."

"ಸುನೀಗೆ ನಿಮ್ಮ ಮಾತು ಒಪ್ಪುತ್ತದೆ. ಆದರೆ ಮೊನ್ನೆ ನಡೆದ ಆ ಪ್ರಸಂಗದ ಬಳಿಕ ಇವಳನ್ನು ಒಪ್ಪಿಸೋದು ಕಷ್ಟಕ್ಕೆ ಬಂದಿದೆ. ಅವಳು ಪೂರಾ ಬದಲಾಗಿದ್ದಾಳೆ."

ಮಾಧವರಾಯ ಕ್ಷಣಹೊತ್ತು ನಿಂತಲ್ಲೇ ನಿಂತರು. ಮತ್ತೆ ಎಚ್ಚತ್ತವರಂತೆ ನಿಧಾನವಾಗಿ ಹೆಜ್ಜೆ ಮುಂದಿಟ್ಟರು.

"ನೋಡಿ, ಗಡಿಬಿಡಿಯಲ್ಲಿ ಎಲೆಯಡಿಕೆಯನ್ನು ಮರೆತುಬಿಟ್ರಿ. ಒಂದು ಕ್ಷಣ ನಿಲ್ಲಿ...ಈಗ ತಂದೆ... ಮತ್ತೆ ಸಂಜೆ ಮಮತಾಗೆ ಅಲಂಕಾರ ಮಾಡಬೇಕಲ್ಲ? ತಿಂಡಿ ತೀರ್ಥ—"

"ಎಲೆಯಡಿಕೆ ಈಗ ಬೇಡ. ಅಲ್ಲದೆ ಅವಳಿಗೆ ಒತ್ತಾಯ ಮಾಡೋದೂ ಬೇಡ...ನಾನು ಬರ್ತೇನೆ."

"ಮತ್ತೆ ನೀವು ಕೊಟ್ಟ ಮಾತು..."

ಮಾಧವರಾಯರು ಲಕ್ಷ್ಮಮ್ಮನ ಮಾತನ್ನು ಕಿವಿಯಲ್ಲಿ ಕೇಳಲು ಅಲ್ಲಿ ನಿಲ್ಲಲಿಲ್ಲ. ಅವರು ಹೊರಟು ಹೋಗಿ ಆಗಿತ್ತು.

ಮನೆಗೆಲಸದಲ್ಲಿ ಕೈತೊಡಗಿದ್ದರೂ ಲಕ್ಷ್ಮಮ್ಮಗೆ ಪತಿಯು ಬಾಡಿದ್ದ ಮುಖ ಕಣ್ಣೆದುರು ಕಟ್ಟಿದೆ. ಈ ಹುಡುಗಿ ತನಗೆ, ಅವರಿಗೆ ಸಮಸ್ಯೆಯಾಗಿ ಎದುರು ನಿಂತಿದ್ದಾಳಲ್ಲ? ಮಾತು ಮನದಲ್ಲಿ ಮತ್ತೆ ಕೇಳಿತು.

ಕಾಲೇಜಿನಲ್ಲಿ ಓದುವ ಹುಡುಗಿಯಾದರೂ ಮಮತಾಳದು ತುಂಬ ಸಂಕೋಚದ ಮನಸ್ಸು. ಕಾಲೇಜು ಮುಗಿದರೆ ಮತ್ತೆ ಮನೆಯ ರೋಣಿಯೊಳಗೆ ಅವಳ ಓಡಾಟ. ಅವಳ ಚೆಲುವಿನ ಮುಖ, ಒಲವಿನ ಮಾತುಗಳಲ್ಲಿ ಮನೆಯಲ್ಲಿ ಸುಳಿದಾಡುವ ಗಾಳಿಗೂ ಸುಗಂಧದ ಕಂಪು! ಓರಣವಾಗಿ ಸಿಂಗರಿಸಿಕೊಂಡ ಅವಳು ಕಣ್ಣಿಗೊಂದು ಹಬ್ಬ!

ಈಗೆರಡು ವರುಷಗಳಿಂದ ನಾಲ್ಕಾರು ಸಂಬಂಧ ಮಮತಾಗೆ ಬಂದಿತ್ತು. ಒಂದೆರಡು ತಮಗೆ ಸರಿ ಬಂದಿರಲಿಲ್ಲ. ಆದರೆ ನಾಲ್ಕು ತಿಂಗಳ ಹಿಂದೆ ಬಂದಿದ್ದ ವರ ಎಲ್ಲರಿಗೂ ಎಲ್ಲ ವಿಧದಲ್ಲೂ ಒಪ್ಪಿಗೆಯಾಗಿತ್ತು. ಮಮತಾ ಸಡಗರದಿಂದ "ಹೂಂ" ಎಂದಿದ್ದಳು. ಹುಡುಗನೊಂದಿಗೆ ಮಾತುಕತೆಯಾಡಿದ್ದಳು.

ಮದುವೆಯ ದಿನ ಗೊತ್ತು ಮಾಡುವುದಿತ್ತು. ಮಮತಾಳ ಕಾಲೇಜಿನ ಸ್ನೇಹಿತೆಯರು ಇದಕ್ಕಾಗಿ ಮೊದಲೇ ಗ್ರ್ಯಾಂಡ್ ಪಾರ್ಟಿ ಗಿಟ್ಟಿಸಿದ್ದರು.

ಅಂದು ಬಂದ ಓಲೆ "ನಮಗೆ ಈ ಸಂಬಂಧ ಬೇಡ" ಎಂದು ಓದಿದಾಗ ಮನೆಯಲ್ಲಿ ಅಶಾಂತಿಯ ಹೊಗೆಯಾಡಿತು–ಹೆಣ್ಣು ನಮಗೆ ಒಪ್ಪಿಗೆಯಿಲ್ಲ ಎಂದಿದ್ದರೆ ಅಂಥ ದೊಡ್ಡ ಮಾತಾಗಿರಲಿಲ್ಲ. ಕಂಡ ಗಂಡಲ್ಲ ಒಂದೇ ಬಾರಿಗೆ ಒಪ್ಪಬೇಕು ಎನ್ನುವ ಛಲ ಯಾರಿಗಿದೆ? ಆದರೆ ಸ್ವಭಾವಕ್ಕೆ ಬೆರಳು ತೋರಿಸಿ ಆಡಬೇಕೆ? ಮಮತಾಳ ಹೊಂಗನಸು ಮಣ್ಣು ಹುಡಿಯಲ್ಲಿ ಸೇರಿಬಿಟ್ಟಿತು.

ಮೊನ್ನೆ ಬಂದ ಸಂಬಂಧಕ್ಕೆ ಈಗ ಒಂದೇ ಉತ್ತರ: "ಬೇಡಮ್ಮ... ನನಗೆ ಗಂಡು ಕಂಡರೇ ಬೇಸರ. ಆ ನೆನೆಪೂ ಬೇಡ."

ಲಕ್ಷ್ಮಮ್ಮ ಕೈಯಲ್ಲಿದ್ದ ಕೆಲಸವನ್ನೆಲ್ಲ ಮುಗಿಸಿ ವಿಶ್ರಾಂತಿಗೆಂದು [illegible] [illegible] ಮತ್ತೆ ಅದೇ ನೆನಪು.

ಯಾವ ಅಲಂಕಾರವೂ ಇಲ್ಲದೆ- ಹಳೆಯ ವಾಯಲ್ ಸೀರೆಯುಟ್ಟು ತೀರ ಸೋತ ನಡಿಗೆಯಲ್ಲಿ ಹೊರ ಟಾಗ ತಾನೇ ಮುಖ ತಗ್ಗಿಸಿ ಒಳಕ್ಕೆ ಹೋಗಬೇಕು.

ಊಟಕ್ಕೆ ಕುಳಿತಾಗ. ಅವಳಿಗೆ ಪ್ರಿಯವಾದ ಅಡಿಗೆ ಇದ್ದರೂ ನೆಪಕ್ಕಿಷ್ಟು ಅನ್ನ-ಹಾಲು ಹಾಕಿಸಿ ಕೊಂಡು ಎರಡು ತುತ್ತು ಬಾಯಿಗಿಟ್ಟು ಎದ್ದು ನಿಂತಾಗ .

"ಮಮತಾ...ನೀನು ಹೀಗೆ ಊಟ ಮಾಡಿದ್ರೆ ಎರಡು ದಿನಕ್ಕೆ ಏದ್ರೆ ಕಾಯಿಲೇ ಬೀಳುತ್ತೀ... ನಿನ್ನ ಮೈಯಲ್ಲಿ ಎಲುಬು-ಚರ್ಮ ಬಿಟ್ರೆ ಇನ್ನೇನಿದೆ? ಸನ್ಯಾಸಿನಿಯ ಹಾಗೆ ನೀನಿದ್ರೆ...ನನ್ನ ಹೊಟ್ಟೆಯಲ್ಲಿ ತಳಮಳ..." ಎನ್ನುತ್ತಿದ್ದರು. ಮಮತಾ ಮಾತು ಕೇಳಲು ಅಲ್ಲಿದ್ದರಲ್ಲವೇ? ಅವಳಾಗಲೇ ತನ್ನ ಕೋಣೆ ಸೇರಿ ಪುಸ್ತಕ ಕೈಯಲ್ಲೆತ್ತಿದರೆ ಮತ್ತೆ ಮೌನದ ಮುಸುಕು!

ತುಟಿಯಲ್ಲಿಯ ನಗು ಕಣ್ಣಲ್ಲಿಯ ಮಿಂಚು ಮಾಯವಾಗಿ ವಾರಗಳು ಕಳೆದಿವೆ.

ಮಾಧವರಾಯರು ಕೋಣೆಯಿಂದ ಹೊರಬಂದಾಗ ಲಕ್ಷ್ಮಮ್ಮ ಅಲ್ಲೇ ಕಾಯುತ್ತ ನಿಂತಿದ್ದರು.

"ಏನಂತೆ? ಸುನೀತಾಳಲ್ಲಿ ಹೋಗ್ತಾಳಂತೆಯೇ?"

"ಹುಡುಗಿ ಒಂದು ನಮೂನೆಯಾಗಿದ್ದಾಳೆ. ನನಗೆ ಅವಳೊಂದು ಸಮಸ್ಯೆಯಾಗಿದ್ದಾಳೆ."

ಮದುವೆ ಗಂಡು, ಎಂದರೆ ಸಿಡಿದೇಳುವ ಮಗಳು ಈಗ ಇಬ್ಬರಿಗೂ ಒಗಟಾಗಿ ನಿಂತಿದ್ದಾಳೆ.

ಲಕ್ಷ್ಮಮ್ಮನ ಮನಸ್ಸು ಹಿಂದಕ್ಕೆ ಓಡಿತು: ಮಮತಾ ಹುಟ್ಟಿದ ಗಳಿಗೆಯಿಂದಲೂ ಪ್ರತಿ ಕ್ಷಣದ ನೆನಪುಗಳು ಎದುರಿಗೆ ಕಟ್ಟಿವೆ. ಈ ಜೀವನದಲ್ಲಿ ಇಂಥ ಹಟ ಎಲ್ಲಿ ಹುದುಗಿತ್ತು? ಎನ್ನುವುದೇ ಅವರ ತಲೆಯಲ್ಲಿ ಕೆದಕಿದರೂ ಸಿಗದಾಗಿದೆ. ಒಂದು ದಿನ ಪೋಸ್ಟಿನ ದಾರಿ ಕಾಯುತ್ತ ನಿಂತ ಮಡದಿಯನ್ನು ಕಂಡು ರಾಯರಿಗೆ ಆಚ್ಚರಿ!

"ಅಲ್ವೆ? ಇದೇನು ನೀನು ಒಳಗಿನ ಕೆಲಸ ಬಿಟ್ಟು"

"ಕಾಗದ ಬರುತ್ತದೆಯೋ ಎಂದು ಕಾದೆ..."

ಮಮತಾ ಸ್ನಾನ ಮುಗಿಸಿ ಅದೇ ಹೊರಟಳೆಂತೆ ಲಕ್ಷ್ಮಮ್ಮ ಹೇಳಿದರು:

"ಮಗೂ ನಿನ್ನಕ್ಕ ಬರ್ತ್ತಾಳೆ."

ಮಮತಾಳ ಮುಖದಲ್ಲಿ ಬದಲಾವಣೆ ಇಲ್ಲ. ಅಕ್ಕ ಬರ್ತ್ತಾಳೆಂದರೆ ಹಿಗ್ಗಿನ ಹಕ್ಕಿಯಾಗಬೇಕಿದ್ದ ಅವಳು ಮೌನ ಗೌರಿಯಂತೆ ಕೋಣೆ ಸೇರಿದಾಗ–ಲಕ್ಷ್ಮಮ್ಮಗೆ ಎರಡು ಕೆನ್ನೆಗೆ ಬಾರಿಸಲೇ ಎನ್ನುವಷ್ಟು ಸಿಟ್ಟು ಉಕ್ಕೇರಿತು. ಹಾಗೆಯೇ ಅವರು ಅಡಿಗೆ ಕೋಣೆಯೊಳಕ್ಕೂ ಹೋಗದೆ ತಮ್ಮ ಕೋಣೆಯಲ್ಲಿ ಹೋಗಿ ಬಾಗಿಲು ಹಾಕಿಕೊಂಡರು.

"ಅಮ್ಮ ,ಊಟಕ್ಕೆ ಬಡಿಸುತ್ತೀಯಾ?"

ಲಕ್ಷ್ಮಮ್ಮ ಉತ್ತರಿಸಲೂ ಇಲ್ಲ; ಬಾಗಿಲಾವೂ ತೆಗೆಯಲಿಲ್ಲ. ಮಮತಾ ತಾನೇ ತಟ್ಟೆಯಲ್ಲಿಷ್ಟು ಅನ್ನ–ಉಪ್ಪಿನಕಾಯಿ, ಹಾಲು ತೆಕ್ಕೊಂಡು ಊಟ ಮುಗಿಸಿ–ನಿರಾಭರಣಸುಂದರಿಯಾಗಿ ಕಾಲೇಜಿಗೆ ಹೊರಟು ಹೋದಳು.

ಲಕ್ಷ್ಮಮ್ಮಗೆ ಇಲ್ಲದ ಯೋಚನೆ ಮನದಲ್ಲಿ ಎದ್ದು ಬಿಟ್ಟಿತು. ಭೂತ–ಪ್ರೇತದ ಉಪದ್ರವವಾಗಿರಬಹುದೇ ಎನ್ನುವ ಶಂಕೆಯೂ ಒಂದು ಕ್ಷಣ ತಲೆಯಲ್ಲಿ ಸುಳಿದು ಹೋಯಿತು.

× × ×

ಸುನೀತಾ, ಹೇಮಂತ ಬಂದಂತೆ ಮನೆಯಲ್ಲಿಯ ಮೌನದ ಮುಸುಕು ಕರಗಿಹೋಯಿತು. ಹೇಮಂತನ ಹಾಸ್ಯದ ಮಾತಿನಲ್ಲಿ ಮಾಧವರಾಯರೂ ಮನಸ್ಸಿನ ನೋವು ಕಳೆದುಕೊಂಡರು.

ಊಟಕ್ಕೆ ಕುಳಿತಾಗ ಸ್ವಾರಸ್ಯದ ಮಾತುಕತೆಗಳಲ್ಲಿ ಊಟದ ಪ್ರಮಾಣವೂ ಜಾಸ್ತಿಯಾದಾಗ ಮಾಧವರಾಯರು ಹೊಟ್ಟೆಯ ಮೇಲೆ ಕೈಯಾಡಿಸುತ್ತಾರೆ. ಅವರಿಗೂ ಮಾತಿನಲ್ಲಿ ಪಾಲುಗೊಳ್ಳುವ ಆತುರವಿದ್ದರೂ ಕೆಲಸದ ನೆನಪು ಅಲ್ಲಿಂದ ಎಬ್ಬಿಸಿಬಿಡುತ್ತದೆ.

ಈಗ ಅಲ್ಲಿ ಸುನೀತಾ, ಹೇಮಂತ, ಲಕ್ಷ್ಮಮ್ಮ ಒಳಗೆ ಕುದಿಯುತ್ತಿದ್ದ ಮಾತಿಗೆ ರೂಪ ಬರುತ್ತದೆ.

"ನೋಡಿದೆಯಾ ಸುನೀ...ಅವಳು..."

"ಹೌದಮ್ಮ...ನಾನು ನಿಜವಾಗ್ಲೂ ಎಣಿಸಿರಲಿಲ್ಲ. ಬರಿದೇ ಬಾರಿಗೆ...ಮಮತಾ ಪೂರಾ ಬದಲಾಗಿದ್ದಾಳೆ."

ಹೇಮಂತಗೆ ಮಮತಾಳ ರೀತಿ–ನೀತಿಯಲ್ಲ ಸವಾಲಿನಂತೆ ಕಂಡಿದೆ.

ಹೆಣ್ಣು ಆದರಲ್ಲೂ ತನ್ನವಳ ತಂಗಿ-ತನ್ನನ್ನು ಮೆಚ್ಚಿಕೊಂಡು ಎಡೆಬಿಡದೆ ಹಿಂದೆ ತಿರುಗುತ್ತಿದ್ದ ಹುಡುಗಿ ಇಂದು ಕಣ್ಣೆತ್ತಿ ನೋಡದೆ ಒಂದೂ ಮಾತು ಆಡದೆ ತನ್ನ ಪೌರುಷಕ್ಕೆ ತಣ್ಣೀರೆರಚಿ–ನಿಂತು ಅಣಕಿಸಿದಂತಾಗಿದೆ. ಹಿಂದೆ ತಾನು ಬಂದಾಗ "ಭಾವಾ ನಂಗೇನು ತಂದಿದ್ದೀರಿ? ಬರಿಗೈಯಿಂದ ಬಂದದ್ದಕ್ಕೆ ಫಜೀತಿ ಮಾಡ್ತೇನೆ ನೋಡಿ" ಎಂದು ಇದ್ದ ಹತ್ತು ದಿನಗಳೂ ಪ್ರತಿ ಕ್ಷಣ ಸಾಕು–ಬೇಕಾಗುವಂತೆ ತೊಂದರೆ ಕೊಟ್ಟಿದ್ದಳು. ತಟ್ಟೆಯಲ್ಲಿಟ್ಟಿದ್ದ ಸಾರಿನಲ್ಲಿ ಸೌಟು ತುಂಬ ಉಪ್ಪು ಹಾಕಿದರೆ ಸ್ನಾನದ ನೀರಿನಲ್ಲಿ ನೀಲಗಿರಿ ಎಣ್ಣೆ ಸುರಿದು, ಮಲಗುವ ಹಾಸಿಗೆಯಲ್ಲಿ ನಸ್ಯ ಚೆಲ್ಲಿ ಅಳು-ನಗುವಿನ ಹೊಳೆಯಲ್ಲಿ ತೇಲಿಸಿ ತನ್ನ ಸೋಲಿಸಿದ್ದಳು. ಇವಳೂ ತಂಗಿಯ ಬೆನ್ನ ಹಿಂದೆ ನಿಂತು ಸೈಗುಟ್ಟಿದ್ದಳು. ಮಾರ್ಕೆಟಿಗೆ



ಮಡದಿಯ ಮಾತು ಕೇಳಿ ಮಾಧವರಾಯರು ಮಗಳ ಬಳಿ ಬಂದು ಕೇಳಿದರು-

"ಯಾವ ಪುಸ್ತಕ ಮಗೂ ನೀನೋದುವುದು?"

ಮಮತಾ ತಲೆ ಎತ್ತಿ ನೋಡಿ ಹೆಚ್ಚಿನ ಆಸಕ್ತಿ ತೋರದೆ ಪುಸ್ತಕ ಎದುರು ಹಿಡಿದಳು.

ಮಾಧವರಾಯರ ಕಣ್ಣುಗಳು ಒಂದು ಕ್ಷಣ ಅಲ್ಲೇ ತಡೆದು ನಿಂತಿತು.

"ನಿನ್ನ ಪ್ರಾಯಕ್ಕೆ ಇಂಥ ಪುಸ್ತಕವೇ? ಇದೆಲ್ಲ ನಮ್ಮಂಥವರಿಗೆ. ಸುನೀತಾಳಲ್ಲಿ ನಾಲ್ಕು ದಿನ ಹೋಗಿ ಬರುತ್ತೀಯಾ?"

"ಇಲ್ಲಿದ್ದ ಸ್ವಾತಂತ್ರ್ಯ ನನಗಲ್ಲಿ ದೊರೆಯುತ್ತದೆಯೋ? ಅವರಿಬ್ಬರ ನಡುಮಧ್ಯೆ ನಾನ್ಯಾಕೆ ಅಲ್ಲಿರಲಿ?"

"ಯಾರದು? ಸುನೀತಾಳಿಂದ ಬರಬೇಕಿತ್ತೇ?"

"ಹೂಂ...ಮೊನ್ನೆ ಅವಳಿಗೆ ಬರೆದಿದ್ದೆ... ಉತ್ತರಕ್ಕಾಗಿ"

"ಇಷ್ಟು ಬೇಗ ಉತ್ತರ ಅಪೇಕ್ಷಿಸುತ್ತೀಯಾ? ನಿನ್ನ ಕಾಗದವಾದರೂ ಮುಟ್ಟಬೇಕಲ್ಲ?"

× × ×

ಮಗಳ ಕಾಗದ ಕಂಡಾಗ ಲಕ್ಷ್ಮಮ್ಮಗೆ ಏನೋ ಹಾಯೆನಿಸಿತು. ಕಾಗದ ಓದಿದ ಮಾಧವರಾಯರು ನಗುತ್ತ ಮಡದಿಯ ಕೈಗಿತ್ತು ಹೇಳಿದರು:

"ಸುನೀ ಬರ್ತ್ತಾಳಂತ, ಇನ್ನಾದರೂ ಸ್ವಲ್ಪ ಸಮಾಧಾನದಿಂದಿರು-ನೀನು ಇಲ್ಲದ ಯೋಚನೆಯಲ್ಲಿ ಎಲ್ಲಿ ಹುಚ್ಚಿಯಾಗುತ್ತೀಯೋ ಎಂದುಕೊಂಡಿದ್ದೆ."

ಹೋದಲ್ಲಿ ಥಿಯೇಟರಿನಲ್ಲಿ ಹೋದಾಗ ಪರ್ಸ್ ಕಾಣೆಯಾಗಿ ಪೆಚ್ಚುಮುಖವಾದಾಗ

"ಭಾವಾ ನೀವೇನೂ ಹೆದರಬೇಡಿ. ಹಣ ಇಲ್ವೆ? ನೀವೇನೂ ಚಿಂತೆ ಮಾಡಬೇಡಿ. ನನ್ನ ಹತ್ರ ಹಣ ಇದೆ... ಇಕೊಳ್ಳಿ..." ಎಂದಾಗ ಸಾಮಾನು ಖರೀದಿ ಮಾಡಿದ ತಾನು- ಥಿಯೇಟರಿನಲ್ಲಿ ನಿಂತ ತಾನು- ಮತ್ತೆ ಸೋಲು ಒಪ್ಪಿಕೊಂಡಿದ್ದೆ! ತನ್ನ ಪರ್ಸನ್ನೇ ಎದುರು ಚಾಚುತಿದ್ದಾಳೆ ನಾದಿನಿ! ಅದೆಲ್ಲ ಈಗ ಕನಸಾಗಿಬಿಟ್ಟಿದೆ. ಈಗ ಕಾಣುವುದು ವಿರಾಗಿಣಿಯಾಗಿ ನಿಂತ ಮೌನಗೌರಿ. ಮಮತಾ!

ಲಕ್ಷ್ಮಮ್ಮ ಮತ್ತೆ ನುಡಿದರು:

"ಹುಡುಗಿ ಯಾವ ಅಡಿಗೆಯೇ ಇರಲಿ, ಕಣ್ಣಿಂದ ನೋಡೋದಿಲ್ಲ- ಬೆರಳಿಂದ ಮುಟ್ಟೋದೂ ಇಲ್ಲ! ಮೊನ್ನೆ ಮತ್ತೆ ಮದುವೆಯ ಬಗ್ಗೆ ಮಾತಾಡಲು ಬರುವುದನ್ನು 'ಬೇಡ' ಎಂದುಬಿಟ್ಟಳು. ಹುಡುಗ ಅವಳಿಗೂ ಗೊತ್ತು, ಸುನೀ. ಕಾಲೇಜಿನಲ್ಲಿಯೇ ಅವಳನ್ನು ಮೆಚ್ಚಿಕೊಂಡಿದ್ದ. ಈ ಹುಡುಗಿ ಹಿಂದೆ ಬಂದ ಸಂಬಂಧದಲ್ಲಿ ಆ ಜನ ಆಡಿದ ಒಂದು ಮಾತನ್ನೇ ದೊಡ್ಡ ಗುಡ್ಡ ಮಾಡಿಬಿಟ್ಟಿದ್ದಾಳೆ. ಮದುವೆ ಎಂದ್ರೆ ಕಾದು ಕೆಂಡವಾಗುತ್ತಾಳೆ."

ಸುನೀತಾಗೇ ಅಮ್ಮನ ಬಗ್ಗೆ ಮರುಕವಾಗುತ್ತಿದ್ದ "ಅಮ್ಮ ಸ್ವಲ್ಪ ತಡೆ...ನಾಲ್ಕು ದಿನಕ್ಕೆ ಮಮತಾ ಸರಿ ಹೋಗಬಹುದು...ಗಾಳಿಗೆ ಮೋಡಗಳೆಲ್ಲ ಚದುರಿ ಹೋಗೋದಿಲ್ವೆ? ನಿನ್ನ ಬೇಸರಕ್ಕೆ ಈಗ ನಾವಿಬ್ರೂ ಬಂದಿದ್ದೇವೆ."

ಲಕ್ಷ್ಮಮ್ಮ ಸಮಾಧಾನದಿಂದಲೇ ಊಟ ಮುಗಿಸಿ ಎದ್ದರು. ಅವರಿಗೆ ಮಗಳ ಮಾತಿನಲ್ಲಿ ಆಸೆಯ ಎಳೆ ಕಂಡಂತಾಗಿತ್ತು.

ದಿನದ ಪರಿಪಾಠದಂತೆ ಮಮತಾ ಎದ್ದು ಚಳಿಯಲ್ಲೇ ಅರ್ಧಘಂಟೆ ತಿರುಗಾಡಿ ಬಂದಳು. ಮುಖ ತೊಳೆದು ಒಳಕ್ಕೆ ಬಂದು ತನ್ನ ಕಪ್ಪು ಹಿಡಿದು ಅಮ್ಮನ ಎದುರು ನಿಂತಳು. ಲಕ್ಷ್ಮಮ್ಮ ಹಾಲು ಅದರಲ್ಲಿ ಹಾಕಿದಾಗ ಮಗಳ ಮುಖವನ್ನೊಮ್ಮೆ ನೋಡಿದಳು. ಅಲ್ಲಿ ಮೌನ ಮುದ್ರೆ ಒತ್ತಿ ನಿಂತಿದೆ! ಲಕ್ಷ್ಮಮ್ಮನೂ ತಾನಾಗಿಯೇ ಮಗಳನ್ನು ಮಾತನ್ನಾಡಿಸುವ ಗೋಜಿಗೆ ಹೋಗದೆ ತಮ್ಮ ಕೆಲಸದಲ್ಲಿ ತೊಡಗಿದರು.

ಹಾಲು ಕುಡಿದು ಮಮತಾ ಕಪ್ಪನ್ನು ತೊಳೆಯಲಿಟ್ಟು ಸುತ್ತೂ ಒಂದು ಬಾರಿ ಕಣ್ಣೋಡಿಸಿ ಕೇಳಿದಳು.

"ಅಕ್ಕಾ-ಭಾವ ಇನ್ನೂ ಎದ್ದಿಲ್ಲವೇನಮ್ಮಾ?"

"ಅವರಿಬ್ಬರೂ ಬೆಡ್ ಕಾಫಿ ಕುಡಿದು ಮತ್ತೆ ಕೋಣೆಗೆ ಹೋದ್ರು." ಮಮತಾ ಸ್ನಾನಕ್ಕಾಗಿ ಒಳಕ್ಕೆ ಹೊರಟುಬಿಟ್ಟಳು. ಸ್ನಾನ ಮುಗಿಸಿ, ಜಡೆ ಹೆಣೆದು ಕೋಣೆಯಲ್ಲಿ ಕುಳಿತು ಪುಸ್ತಕದ ಪುಟ ತೆರೆದಳು. ಆದರೆ ಅಲ್ಲಿ ಕಣ್ಣು ನಿಲ್ಲಲೊಲ್ಲದು ಅದನ್ನ ಮೇಜಿನ ಮೇಲಿರಿಸಿ, ಅಡಿಗೆ ಕೋಣೆಯಲ್ಲಿ ಕಾಲಿರಿಸಿದಳು. ಅಮ್ಮ ತಿಂಡಿ ತಯಾರಿಸಿ, ಈಗ ಅಡಿಗೆಯ ಸಿದ್ಧತೆಗಾಗಿ ತರಕಾರಿಯ ಬಾಸ್ಕೆಟ್ಟು ಮುಂದಿರಿಸಿ ಕುಳಿತಿದ್ದಾರೆ

"ಎಲ್ಲರ ತಿಂಡಿ ಆಯಿತಾಮ್ಮ? ಅಪ್ಪಂದು?"

"ನಾವೆಲ್ಲ ಮುಗಿಸಿ ಬಿಟ್ವು. ಈಗ ಅಡಿಗೆಯ ತಯಾರಿಗೆ ಕುಳಿತಿದ್ದೇನೆ."

ಅಮ್ಮ ಮೋಟಕಾಗಿಯೇ ಉತ್ತರಿಸಿದರು.

"ಅಕ್ಕ ಎಲ್ಲಿ?"

"ಈಗ ಕೋಣೆಯಲ್ಲೇ ಇದ್ದಾಳೆ. ಅವಳು ನನಗೆ ಸಹಾಯಕ್ಕೆಂದು ಬಂದಿದ್ಲು. ನಾನೇ ಒಳಕ್ಕೆ ಕಳುಹಿಸಿದೆ. ನಾಲ್ಕು ಜನಕ್ಕೆ ಅಡಿಗೆ ಮಾಡಲು ನನಗೆ ಭಾರವೇ?"

ಮಮತಾ ಅಲ್ಲಿಂದ ಅಕ್ಕನ ಕೋಣೆಯ ಸಮೀಪದಿಂದಲೇ ದಾಟಿ ಹೋದಳು.

ಒಳಗಿನಿಂದ ರೇಡಿಯೋ ಸಂಗೀತದ ಹಿನ್ನೆಲೆಯಲ್ಲಿ ಅಕ್ಕ-ಭಾವ ನಗುತ್ತ ಮಾತಾಡುತ್ತಿರುವುದು ಕಿವಿಗೆ ಬಿತ್ತು! ಮಮತಾ ಮೆಲ್ಲನೆ ಕೋಣೆ ಸೇರಿ ಖುರ್ಚಿ ಎಳೆದು ಪುಸ್ತಕ ಕಣ್ಣೆದುರು ಹಿಡಿದಳು

ಕಾಲೇಜಿನ ಸಮಯಕ್ಕೆ ಸರಿಯಾಗಿ ಅವಳು ಮತ್ತೆ ಊಟಕ್ಕೆ ಕುಳಿತಳು.

ಟಿದ್ದಾರೆ. ತನ್ನನ್ನು ನೋಡಿ "ಬರುತ್ತೀಯಾ ಮಮತಾ?" ಎಂದು ಅವರಿಬ್ಬರಲ್ಲಿ ಯಾರೂ ಕೇಳಲಿಲ್ಲ. ತಾನೂ ಹಾಗೇ ತಲೆ ತಗ್ಗಿಸಿ ಒಳಕ್ಕೆ ನಡೆದುಬಿಟ್ಟಳು. ಒಳಕ್ಕೆ ಬಂದು ನಿಂತ ಅವಳಿಗೆ ಮತ್ತೆ ಹೊರಟಿದ್ದ ಅವರನ್ನು ಕಾಣುವ ಆಸೆ. ಕಿಟಕಿಯ ಬಳಿಗೋಡಿ ನಿಂತು ನೋಡಿಯೇ ನೋಡಿದಳು. ಸುನೀತಾ-ಹೇಮಂತ ಕೈ ಕೈ ಹಿಡಿದು ಎಲ್ಲವನ್ನೂ ಮರೆತು ಹೊರಟ ತನ್ಮಯತೆ ಕಂಡಿತವಳಿಗೆ!

ಅವರಿಬ್ಬರ ಮಾತಿನಲ್ಲಿ ಅಂಥ ಯಾವ ಹರ್ಷದ ಸಿಹಿಮುತ್ತು ಪೋಣಿಸಿರಬಹುದು? ಎಲ್ಲಿಯ ಎಳೆತ ಅವರನ್ನ ಸುತ್ತುವರಿದಿರಬಹುದು? ರೆಪ್ಪೆ ಮುಚ್ಚದೆ ನೋಡುತಿದ್ದ ಮಮತಳಿಗೆ ನೆನಪಿನ ಮಿಂಚೊಂದು ಮನದಲ್ಲಿ ಕುಣಿದು ಹೋಯಿತು.

ಅಕ್ಕ-ಭಾವ ಬಂದರೆ ತನಗೆ ಹಿಗ್ಗಿನ ಬುಗ್ಗೆ ಎನಿಸುತ್ತಿರಲಿಲ್ಲವೇ? ಎಷ್ಟೊಂದು ಸಡಗರ-





"ಇದೆಲ್ಲ ಬೇಡಮ್ಮ. ದಿನದಂತೆ ಬರಿಯ ಅನ್ನ... ಹಾಲು..."

"ಸುನೀ ಬಂದಿದ್ದಾಳೆಂದು ಇದೆಲ್ಲ ಮಾಡಿದ್ದೇನೆ. ಎಲ್ಲರೂ ತಿನ್ನೋದನ್ನ ನಿನಗೆ ತಿನ್ನಲಾಗದೇ? ತುಂಬ ರುಚಿಯಾಗಿರಬೇಕು. ತಿಂದು ನೋಡು ಮಮತಾ..."

"ಬೇಡಮ್ಮಾ ನನಗೆ ಇದೆಲ್ಲ ಬೇಡ...ಕಾಲೇಜಿಗೆ ಹೊತ್ತಾಯಿತು."

ಊಟದ ಶಾಸ್ತ್ರ ಮುಗಿಸಿ ಕೈ ತೊಳೆದು ಹೊರ ಬರುತ್ತ ತಾಯಿಯನ್ನ ಕೇಳಿದಳು:

"ಅಕ್ಕ-ಭಾವ ಎಲ್ಲಿ ಕಾಣೋದಿಲ್ಲ?"

"ಕೋಣೆಯಲ್ಲೇ ಇದ್ದಾರೆ!"

ಈ ಮಾತೇಕೋ ಮಮತಾಗೆ ಬೇಸರವನ್ನುಂಟು ಮಾಡಿತು. ಅವಳ ಕಿವಿಗೆ ಅಕ್ಕ ಭಾವನ ಮಾತು, ನಗುವಿನ ಅಲೆಗಳು ಅಪ್ಪಳಿಸಿದವು. ಮುಖ ಕಿವುಚಿಕೊಂಡೇ ನಡೆದಳು. ಸಂಜೆ ಕಾಲೇಜಿನಿಂದ ತಾನು ಸೋತು ಬರುತ್ತಿದ್ದರೆ, ಅಕ್ಕ ಭಾವ ನಗುತ್ತ ಹೊರ

ಉಲ್ಲಾಸದಿಂದ ಎಳೆಯ ಮಗುವಿನಂತೆ ಅವರಿಬ್ಬರ ಹಿಂದೆ ಓಡಾಡುತಿದ್ದೆ?

ಅಕ್ಕಗೆ ಹಾಸ್ಯ ಮಾಡಿದಷ್ಟೂ ತನ್ನ ಹಸಿವೆ ಹಿಂಗುತ್ತಿರಲಿಲ್ಲ. ಮಾತು—ನಗುವಿನಲ್ಲಿ ಗಂಟಲಿನ ಪಸೆ ಆರಿ ಹೋದರೂ ಮನಕ್ಕೆ ತೃಪ್ತಿ ಎನಿಸುತ್ತಿರಲಿಲ್ಲ.

ಇಂದು ಅವರೂ ಪರಕೀಯರೆನ್ನುವ ಮನಸ್ಸು ತನ್ನದಾಗಿದೆ. ಗಂಡು...ಗಂಡು ಎಂದರೆ ಮನಸ್ಸು ಸಿಡಿದೇಳುತ್ತಿದೆ

ಇದೇ ಗಂಡಿಗಾಗಿ ತನ್ನ ಮನಸ್ಸೂ ಬಾಗಿ ತೂಗಿ ತೆರೆಯುತಿದ್ದ ದಿನಗಳು ಇತ್ತು. ಮನದಲ್ಲಿ ಆಸೆ ಇದ್ದರೂ—ಮುಖದಲ್ಲಿ ಬಿಗುಮಾನವಿಟ್ಟುಕೊಂಡೇ ಬಿಂಕದಲ್ಲಿ ನಡೆಯುತಿದ್ದ ದಿನಗಳು!

ಕಾಲೇಜಿನ ಗ್ರ್ಯಾಂಡರಿಂಗಿನ ಸಮಯದಲ್ಲಿ ತನ್ನ ಬಳಿಯಲ್ಲಿ ಯಾರೂ ಇಲ್ಲದ ನೆಪ ಹುಡುಕಿ ಬಂದು ಮಾತನ್ನಾಡಿಸಲು ಯಾಚಿಸಿದ ಗಿರೀಶನ ನೆನಪಾಯಿತು. ಕಾಲೇಜಿನಲ್ಲಿ ಅವನ ಒಗಗೆ ಎಲ್ಲರಿಗೂ ಪರಿಚಿತ [illegible]!

ಬುದ್ಧಿವಂತನೆಂದು ಹೆಸರು ಬೇರೆ ಹುಡುಗಿಯರನ್ನು ಕಂಡರೆ "ಅಷ್ಟು ದೂರ" ಎನ್ನುವುದನ್ನು ತಾನೂ ಕೇಳಿದ್ದಾಳೆ. ಅವನೇ ತನ್ನ ಮಾತಿಗಾಗಿ ಆತುರಪಟ್ಟಾಗ ಮನಸ್ಸು ಅರಳಿದ್ದರೂ ಮುಖದಲ್ಲಿ ಬಿಗುವು ತೋರಿ ಬಿಂಕದಿಂದಲೇ ಎದ್ದು ಹೋಗಿದ್ದಳು.

ಇಂದು ಇದೆಲ್ಲವನ್ನೂ ತನ್ನಿಂದ ದೂರವಿರಿಸಿ ಒಂಟಿಯಾಗಿರಲು ಬಯಸುತ್ತಿದೆ ಮನಸ್ಸು.

ಬಹು ಬೇಗ ಕಾಲೇಜಿನಿಂದ ಬಂದ ಮಗಳನ್ನು ಕಂಡು ಲಕ್ಷ್ಮಮ್ಮ ಕೇಳಿದರು:

" ಯಾಕೆ ಮಮತಾ ಬೇಗ ಬಂದುಬಿಟ್ಟೆ ? ನಾಲ್ಕು ಜನ ಸ್ನೇಹಿತೆಯರೂ ನಿನಗಿಲ್ವೆ ? ಹೀಗೆ ಒಬ್ಬಳೇ ಇದ್ದು ನನ್ನ ಪ್ರಾಣ ಹಿಂಡಬೇಕೆಂದು ಕಾಣುತ್ತದೆಯೇ ? "

" ಕಾಲೇಜಿನಲ್ಲಿ ಪಿರಿಯಡ್ ಮುಗಿದ ಬಳಿಕ ಏನ್ ಮಾಡಲಿ? ಅವರೆಲ್ಲ ದಿನಕ್ಕೊಂದು ಪಿಕ್ಚರ್ - ಪಾರ್ಟಿ ಯೆಂದು ಹಿಂಡು ಹಿಂಡಾಗಿ ಓಡ್ತಾರೆ ಅದಿಲ್ಲವಾದ್ರೆ. ಹುಡುಗರ ಬಗ್ಗೆ ಕಾಮೆಂಟ್ಸ್ ಮಾಡ್ತಾ ಹರಟೆ ಕೊಚ್ಚುತ್ತಾರೆ. ನನಗೆ ಅದೆಲ್ಲ ಇಷ್ಟವಿಲ್ಲ. ಮನೆಗೆ ಬಂದುಬಿಡ್ತೇನೆ. "

ರಾತ್ರಿ ಗಂಟೆ ಎಂಟಾದರೂ ಅಕ್ಕ-ಭಾವ ಬಂದಂತೆ ಕಾಣಲಿಲ್ಲ.

ಮಮತಾ ಓದುವ ಕೋಣೆ ಬಿಟ್ಟು ಹೊರಬಂದಳು. ಹೊಟ್ಟೆಯಲ್ಲಿ ಹಸಿವೆ ಕೂಗುತ್ತಿದೆ. ಅಡಿಗೆ ಕೋಣೆಗೆ ಬಂದಾಗ ನೀರುಳ್ಳಿ ಒಗ್ಗರಣೆ ತುಂಬುಳಿಗೆ ಹಾಕುತ್ತಿದ್ದಂತೆ ಮಮತಾಗೆ ಇನ್ನು ತಡೆಯದಾಯಿತು.

"ಅಮ್ಮಾ ಹಸಿವೆ ತುಂಬ..."

" ಸುನೀ—ಹೇಮಂತ ಬರಲಿ. ದಿನಾಲೂ ಅವರನ್ನು ಬಿಟ್ಟು ಊಟಮಾಡುವುದು ನಿನಗೆ ಸಮ ಕಾಣುತ್ತದೆಯೇ ? ಇನ್ನೇನು ಈಗ ಬರುವ ಹೊತ್ತು. "

ಮಮತಾ ಬೇಸರ ಬಂದರೂ ಮತ್ತೆ ಕೇಳಲಿಲ್ಲ. ಮತ್ತೆ ರೂಮಿಗೆ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡಳು

ಅಕ್ಕ ತನ್ನನ್ನು ಬಿಟ್ಟು ಎಲ್ಲಿಗೂ ಹೋಗುತ್ತಿರಲಿಲ್ಲ, ಏನೂ ಮಾಡುತ್ತಿರಲಿಲ್ಲ. ಈಗ ಅವಳಿಗೆ ತನ್ನ ನೆನಪೂ ಇರಲಿಲ್ಲ. ಹಿಂದೆ ಬಂದಾಗ ಅಕ್ಕ ಹೀಗಿರಲಿಲ್ಲ! ಭಾವ ಹೀಗಿರಲಿಲ್ಲ!

"ಮಮತಾ ಊಟಕ್ಕೆ ಬಾ. "

ಅಮ್ಮ ಕರೆದಾಗ ಬಿಗುಮಾನ ಬಿಡದಿದ್ದರೂ— ಹೊಟ್ಟೆ ಕೆರಳಿದ್ದು ಅವಳನ್ನು ಅಲ್ಲಿಂದ ಎಬ್ಬಿಸಿಬಿಟ್ಟಿತು.

ಅನ್ನಕ್ಕೆ ತುಪ್ಪ ಬಿತ್ತು. ತೊಂಡೆಲೆಯ ತಂಬುಳಿ ಬಿಳಿಯ ಅನ್ನಕ್ಕೆ ಕಲಿಸಿದ ಆ ಹಸುರು ಬಣ್ಣ ಕಣ್ಣು ತುಂಬುವಂತೆ ರುಚಿಯೂ ನಾಲಿಗೆಯಲ್ಲಿ ನೀರೂರಿಸಿತು. ಮಮತಾ ಆತುರದಿಂದಲೇ ಊಟಮಾಡುತ್ತಿದ್ದಳು. ಅವಳ ಕಣ್ಣು ತಟ್ಟನೆ ಬದಿಯಲ್ಲಿದ್ದ ಅಕ್ಕನ ತಟ್ಟೆಯಲ್ಲಿ ನೆಟ್ಟಿತು.

ಭಾವ ಎಂಜಲ ಕೈಯಿಂದ ಅಕ್ಕನ ತಟ್ಟೆಯಲ್ಲಿದ್ದ ಬಟಾಟೆ ಅಂಬೋಡೆ ತೆಗೆದು ತನ್ನ ಬಾಯಿಗಿಟ್ಟುಕೊಂಡಾಗ ಅಕ್ಕ ಎಂಜಲು ಕೈಯಿಂದ ಭಾವನ ಉಪ್ಪಿನಕಾಯಿಯ ತುಂಡು ತನ್ನ ಬಾಯಿಗಿಟ್ಟು "ನೀವು ನನ್ನದು ಕದ್ದರೆ ನಾನು ಬಿಡುತ್ತೇನೆಯೇ ? ನಿಮ್ಮ ತಟ್ಟೆಯಲ್ಲಿದ್ದ ಎಲ್ಲ ಪಲ್ಯಗಳನ್ನು ನಿಮಗೆ ಕೊಡದೆ ನಾನೇ ತಿನ್ನುತ್ತೇನೆ. ನೋಡಿ ಮತ್ತೆ! " ಎಂದಳು.

ಅಮ್ಮ ನಗುತ್ತ ಖಾಲಿಯಾದ ಸ್ಥಳದಲ್ಲಿ ಮತ್ತೆ ಬಡಿಸಿದರು. ಅವರಿಗೆ ಮಗಳು—ಅಳಿಯ ತಿಂದಷ್ಟು ಸಾಲದೇನೋ...

ಅವರಿಬ್ಬರೂ ಅವಳಿಗೆ ಎರಡು ಕಣ್ಣುಗಳು!

ಮಮತಾಳಲ್ಲಿ ಅಸೂಯೆ ತಲೆ ಎತ್ತಿ ನಿಂತಿತು.

'ಇಶ್ಶಿ! ಮದುವೆಯಾಗಿ ಮೂರು ವರ್ಷಗಳಾಗಿದೆ..ಇವರೇನು ನಿನ್ನೆ-ಮೊನ್ನೆ ಮದುವೆಯಾದ ಮದುಮಕ್ಕಳೇ? ಎಲ್ಲರೆದುರು ಆಟವಾಡಲು ನಾಚಿಕೆಯಿಲ್ಲ!'

ಮಮತಾ ಮನದಲ್ಲೇ ಗೊಣಗಿಕೊಂಡಳು. ತಲೆ ತಗ್ಗಿಸಿ ಊಟ ಮಾಡುತ್ತಿದ್ದ ಅವಳಿಗೆ ಅಕ್ಕ ಒಂದೇ ಬಾರಿಗೆ ಕೂಗಿಕೊಂಡಾಗ ತಟ್ಟನೆ ತಲೆ ಎತ್ತಿದಳು.

ಭಾವ ಕಲಿಸಿದ ಹುಳಿಯನ್ನ ಅಕ್ಕನ ಬಾಯಲ್ಲಿ ತುಂಬಿಸಿ ಮುಖಕ್ಕೆಲ್ಲ ಮೆತ್ತುವಂತೆ ಮಾಡಿದ್ದರು. ಇದಕ್ಕೂ ಅಮ್ಮ ನಿಂತು ನಗಬೇಕೆ?

ಮಮತಾಗೆ ಸಿಟ್ಟು ಉಕ್ಕೇರುವಂತೆ ಮಾಡಿತು. ಅಷ್ಟಕ್ಕೆ ಊಟ ಬಿಟ್ಟೆದ್ದು ಮಮತಾ ದುಡುದುಡು ಎದ್ದೋಡಿ ಕೈ ತೊಳೆದು ತನ್ನ ಕೋಣೆ ಸೇರಿ ಜೋರಾಗಿ ಬಾಗಿಲು ಹಾಕಿಕೊಂಡಳು.

ಮಮತಾ ಹಾಸಿಗೆಯಲ್ಲಿ ಬಿದ್ದು ಬಿಗಿಹಿಡಿದಿದ್ದ ನೋವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು. ಅಕ್ಕ—ಭಾವ ತನ್ನನ್ನು ಇಷ್ಟೊಂದು ಹೀನಾಯಮಾನವಾಗಿ ಕಾಣಬೇಕೇ? ಅವರ ಪ್ರತಿಯೊಂದು ನಡೆ—ನುಡಿಯಲ್ಲಿ ಅವಳಿಗೆ ಹೇಳಲಾಗದ ವೇದನೆ ಅವಳೆದೆಗೆ ಆಗುತ್ತದೆ. ಅಪ್ಪಯ್ಯಗೆ ಆ ಸಂಬಂಧ ಅಲ್ಲಿಗೇ ನಿಂತದ್ದು ತುಂಬ ಬೇಸರವಾಗಿರಬೇಕು; ಅವರ ಮುಖದಲ್ಲಿ ಗೆಲುವಿಲ್ಲ! ಅಮ್ಮನೂ ಮೊದಲಿನ ಲವಲವಿಕೆಯಿಂದ ಕೆಲಸದಲ್ಲಿ ತೊಡಗಿದ್ದನ್ನು ಅವಳು ಕಂಡಿಲ್ಲ. ತಾನು ಎಲ್ಲರಿಗೂ ಭಾರವಾಗಿದ್ದೇನೇನೋ ಎಂದುಕೊಂಡಳು.

ಆ ಗಂಡು ತನ್ನ ಬಗ್ಗೆ ಇಲ್ಲದ ಮಾತನ್ನೇಕೆ ಆಡಬೇಕು? ಇವರು ಕೇಳಿದ್ದಕ್ಕೆ ಹೂಂ ಎಂದು ಒಪ್ಪಲೇಬೇಕು. ಇಲ್ಲದಿದ್ದರೆ ಎಲುಬಿಲ್ಲದ ನಾಲಿಗೆ ಬೇಕು ಬೇಕಾದಂತೆ ತಿರುಗುತ್ತದೆ! ಹೂ...ಹೆಣ್ಣೆಂದರೆ ಕಲ್ಲು ಸಕ್ಕರೆ ಎಂದುಕೊಂಡಿದ್ದಾರೆ. ಬಾಯಿಗಿಟ್ಟು ಚಪ್ಪರಿಸಿ ಬಿಟ್ಟರೆ ಅವಳ ಬದುಕೆಲ್ಲ ತಮ್ಮ ಕೈಯಲ್ಲಿ ಎನ್ನುವ ಅಹಂಕಾರ!

ಹಾಗಿದ್ದರೆ. ಅಕ್ಕನ ಮುಖದಲ್ಲಿ, ಕಣ್ಣುಗಳಲ್ಲಿ ನಕ್ಷತ್ರದ ಹೊಳಪೇಕೆ? ಅರಳಿದ ಹೂವಿನ ನಗು ತುಟಿಗೆ ರಂಗು ತಂದಿದೆ! ಹಾಗಿದ್ದರೆ ತನ್ನ ಮಾತುಗಳು ನಿಜವಲ್ಲವೇ?



ಮನದಲ್ಲಿ ಯೋಚನೆಯ ಸುಳಿಗಳು ಹೆಡೆ ಎತ್ತಿ ನಿಂತಿತು. ಬಿಗಿದಿದ್ದ ಅವಳ ಹೃದಯ-ದಲ್ಲಿ ಅಲ್ಲಲ್ಲಿ ಬಿರುಕು ಬಿಟ್ಟಂತೆ ಕಂಡಿತು. ಹೊಸ ಗಾಳಿಯ ಸುಳಿಯೊಂದು ಮೈಗೆ ಸೋಂಕಿ ಚಳಿಯ ನೆನಪನ್ನು ಕೊರೆಯಿತು.

ಅಲ್ಲಿ ಅವಳಿಗೆ ಗಿರೀಶನ ರೂಪ ಮಿಂಚಿ ಮಾಯವಾಯಿತು. ದೇಹ ದಣಿದಿದ್ದರೂ ಮನಸ್ಸು ಉತ್ತೇಜನಗೊಂಡಿದೆ. ಬಾಗಿಲು ತೆರೆದಾಗ ಕಿರ್ರ್ ಎಂದಿತು. ಸದ್ದಾಗದಂತೆ ಮೆಲ್ಲನೆದ್ದು ಬಾತ್‌ರೂಮಿನತ್ತ ನಡೆದಳು.

ಅಕ್ಕ-ಭಾವನ ಕೋಣೆಯ ಬಾಗಿಲು ತೆರೆದಿತ್ತು. ಮಾತುಕತೆಗೆ ಅಲ್ಲಿ ಬರಗಾಲವಿಲ್ಲ! ಪುನಃ ತಾನು ಬಾತ್‌ರೂಮಿನಿಂದ ಬಂದಾಗ ಬಾಗಿಲು ಮುಚ್ಚಿತ್ತು.

ಮಮತಾಗೆ ಅಲ್ಲಿಂದಲೇ ಹೋಗುವ ಮನಸ್ಸು. ಆವಿ ಬಾಗಿಲ ಬಳಿ ಬಂದಾಗ ಕಾಲುಗಳು ಅಲ್ಲೇ ನಿಂತು ಬಿಟ್ಟಿತು. ಇದು ತಪ್ಪು ಎಂದಿತು ಅವಳ ಹೃದಯ. ಆದರೆ...ಕಾಲುಗಳು ಮಾತ್ರ ಮುಂದೆ ನಡೆಯಲಿಲ್ಲ.

"ನೀವು ಮಮತಾನ್ನ ಮಾತೇ ಆಡಿಸೋದಿಲ್ಲ! ಪಾಪ ಹುಡುಗಿ ತೀರ ಸೋತುಹೋಗಿದ್ದಾಳೆ."

"ಅವಳು ಮುಖ ಸಿಂಡರಿಸಿಕೊಂಡು ಇದ್ದರೆ ನಾನೇನು ಮಾಡಲಿ? ಕಣ್ಣೆತ್ತಿ ನೋಡಬೇಕೆನ್ನುವಂತೆ-ಮುಖ ತಿರುಗಿಸಿ ಹೊರಟು ಹೋಗುತ್ತಾಳೆ."

"ಹಿಂದೆ ನೀವೇ ಅವಳನ್ನ ಗಿಣಿ ಮಾತಾಡಿಸಿದಂತೆ ಮಾತಾಡುತ್ತಿರಲಿಲ್ವೆ? ಅವಳೆಂದರೆ ಕರ್ಪೂರದ ಬೊಂಬೆ, ನೀನು ಅವಳೆದುರು ಮಣ್ಣಿನ ಗೊಂಬೆ ಎನ್ನುತ್ತಿರಲಿಲ್ವೆ?"

"ಆಗ ಅವಳು ಇದ್ದದ್ದೂ ಹಾಗೆ. ಹೆಣ್ಣು ಪ್ರಾಯಕ್ಕೆ ಬಂದಾಗ ಅವಳ ಕುತ್ತಿಗೆಯಲ್ಲಿ ಮಾಂಗಲ್ಯ ಕಟ್ಟಿದರೆ ಆ ಮುಖದಲ್ಲಿ ರಸ ಉಕ್ಕುತ್ತದೆ. ಮಮ-ತಾಳ ಮುಖದಲ್ಲಿ ಅದರ ಬದಲಾಗಿ ಹೆಣ್ಣಿನ ಕಳೆಯೇ ಹೋಗಿದೆ. ಆ ಕಣ್ಣುಗಳಲ್ಲಿ ಗಂಡನ್ನು ಆಕರ್ಷಿಸುವ ಶಕ್ತಿಯೂ ಉಳಿದಿಲ್ಲ. ಈಗವಳು ಬರಿಯ ಮರದ ಬೊಂಬೆ!"

ಮಮತಾ ನಿಂತಲ್ಲೇ ನಡುಗಿದಳು. ಇವು ಮಾತುಗಳಲ್ಲ; ಕಬ್ಬಿಣದ ಬರೆಗಳು! ಹೃದಯ ಕೂಗಿಕೊಂಡಿತು. ಕಾಲುಗಳು ಮತ್ತಲ್ಲಿ ನಿಲ್ಲಲಿಲ್ಲ. ಕೋಣೆ ಸೇರಿದ ಅವಳು ಕನ್ನಡಿ ಎದುರಿಗೆ ನಿಂತಳು. ಹೀಗೆ ನಿಲ್ಲದೆ ಎಷ್ಟು ಕಾಲವಾಗಿತ್ತೊ?

ಹಿಂದೆ ಮುಂಗುರುಳು ಹಣೆಯಲ್ಲಿ ಉಯ್ಯಾಲೆಯಾಡುತ್ತಿತ್ತು. ನೀಳವಾದ ಕಣ್ಣುಗಳಲ್ಲಿ ಕಾಣುತ್ತಿದ್ದ ಹೊಳಪು ಎಲ್ಲಿ ಹೋಗಿದೆ? ತುಟಿಯಲ್ಲಿಯ ಮೋಹಕತೆ! ಗಲ್ಲಕ್ಕಿದ್ದ ಮೃದುತ್ವ ಮಾಯವಾಗಿದೆ! ನಿಡಿದಾದ ಜಡೆಯನ್ನು ಮುಂದಕ್ಕೆಳೆದು ನೋಡಿದಳು. ಜಂಭದ ಕೋಳಿಯೆಂದು ಮೆರೆದ ಶಾನಿಂದು ತೀರ ಸಪ್ಪೆಯಾಗಿ ಕಂಡಾಗ ಅವಳ ಪ್ರತಿಬಿಂಬ ಅವಳನ್ನೇ ಪ್ರಶ್ನಿಸಿತು. "ನನ್ನನ್ನ ಹೀಗೇಕೆ ಹಿಂಸಿಸಿದೆ?"

ಭಾವನ ಮಾತು ಕಿವಿಯಲ್ಲಿ ಮತ್ತೆ ಮೊರೆಯಿತು.

"ಅವಳ ಕಣ್ಣುಗಳಲ್ಲಿ ಗಂಡನ್ನು ಆಕರ್ಷಿಸುವ ಚೆಲುವಿದೆಯೆ?"

ಮಮತಾಳಿಗೆ ಮತ್ತೆ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ನೋಡುವ ಮನಸ್ಸಾಗಲಿಲ್ಲ.

ಸ್ವಿಚ್ ಆಫ್ ಮಾಡಿ ಹಾಸಿಗೆಯಲ್ಲಿ ಉರುಳಿಕೊಂಡಳು.

× × ×

"ಮಮತಾ, ಇನ್ನೂ ಎದ್ದಿಲ್ಲವೇ?"

ಅಮ್ಮ ಎಚ್ಚರಗೊಳಿಸಿದಾಗ ಮಮತಾ ಗಾಬರಿಗೊಂಡವಳಂತೆ ಎದ್ದು ಕುಳಿತು ಕೇಳಿದಳು.

"ಗಂಟೆ ಎಷ್ಟಮ್ಮಾ?"

"ಎಂಟು!"

"ಎಂಟು? ಅಯ್ಯೊ, ನನಗೆ ಎಚ್ಚರವೇ ಆಗಲಿಲ್ಲ-"

"ರಾತ್ರಿಯೆಲ್ಲ ಓದುತ್ತ ಕುಳಿತಿರಬೇಕು."

ಮಮತಾ ಅಮ್ಮನ ಮಾತಿಗೆ ಉತ್ತರ ಕೊಡಲಿಲ್ಲ. ಮಂಚದಿಂದಿಳಿದು ಎದ್ದು ನಿಂತಳು.

ಮತ್ತೆ ಅವಳು ಅಡಿಗೆ ಕೋಣೆಗೆ ಬಂದಾಗ ಸ್ನಾನ ಮುಗಿಸಿ ಬಂದಂತಿತ್ತು.

"ನಿನ್ನ ಧ್ಯಾನ-ಗೀನ ಎಲ್ಲ ಮುಗಿಯಿತೇ?"

"ಇಲ್ಲಮ್ಮಾ...ಇಂದೇನೋ ಬೇಸರವೆನಿಸಿತು."

"ತಕೋ ಹಾಲು."

"ಸ್ವಲ್ಪ ಕಾಫಿ ಸೇರಿಸಿಕೊಟ್ಟುಬಿಡಮ್ಮಾ; ಹಾಗೇ ತಿಂಡಿ ಏನು ಮಾಡಿದ್ದೀ?"

ಲಕ್ಷ್ಮಮ್ಮಗೆ ಮಗಳ ಮಾತಿನೆಡೆ ಲಕ್ಷ್ಯವಿಲ್ಲ. ಕಾಫಿ-ತಿಂಡಿ ಕೇಳಿದ್ದೇ ಅವರಿಗೆ ಹಬ್ಬವಾದಂತಾಗಿದೆ. ತಟ್ಟೆಯಲ್ಲಿ ದೋಸೆ-ಚಟ್ನಿ ಹಾಕಿ ಕಾಫಿಯ ಕಪ್ಪು ಮುಂದಿಟ್ಟಾಗ ಮಮತಾ ಮತ್ತೆ ಕೇಳಿದಳು:

"ಅಕ್ಕ-ಭಾವ ಎಲ್ಲಮ್ಮ?"

"ವಾಕಿಂಗಿಗೆ ಹೋಗಿ ಒರ್ತೇವೆ ಎಂದಿದ್ರು."

ಮಮತಾಗೆ ಕಾಫಿ ಎಂದರೆ ಪಂಚಪ್ರಾಣ! ಬಹಳ ಸಮಯದ ಬಳಿಕ ಕುಡಿಯುತ್ತಿರುವ ಕಾಫಿಯನ್ನು ಕುಡಿದಾಗ ಸಂತಸದಿಂದ ಅವಳ ಕಣ್ಣುಗಳು ತುಂಬಿಕೊಂಡವು.

ಎಷ್ಟು ರುಚಿ! ಎಷ್ಟೊಂದು ಕಂಪು! ದೇಹದಲ್ಲೇ ಲವಲವಿಕೆ ಉಕ್ಕೇರುತ್ತಿದೆ. ಜಡವಾಗಿದ್ದ ಮನಸ್ಸು ಗಾಳಿಯಲ್ಲಿ ಹಾರಾಡುವ ಆತುರ ತೋರುತ್ತಿದೆ. ಕೈತೊಳೆದು ಮಮತಾ ದಿನದ ಪರಿಪಾಠದಂತೆ ಕೋಣೆ ಸೇರಿ ಪುಸ್ತಕ ಕಣ್ಣೆದುರು ಹಿಡಿಯಬೇಕು! ಆದರೆ ಈಗ ಮಮತಾಳ ಕಾಲುಗಳು ಸರಸರನೆ ಮನೆಯ ಅಂಗಳಕ್ಕೆ ಓಡಿದವು. ಹೂದೋಟದಲ್ಲಿ ಅರಳುವ ಹೂವಿನೊಂದಿಗೆ ಅವಳ ಕೈಬೆರಳುಗಳು ನರ್ತಿಸಿದವು; ಅವಳು ಇಬ್ಬನಿಯಲ್ಲಿ ಮುಚ್ಚಿದ್ದ ಗುಲಾಬಿಯ ಮೊಗ್ಗನ್ನು ಮುದ್ದಿಟ್ಟು ಇನಿದನಿಯಲ್ಲಿ ಹಾಡಿನ ಪಲ್ಲವಿಯನ್ನು ಗುಣಗುಣಿಸಿದಳು.

ಅವಳ ಸಮೀಪದಲ್ಲೇ ಹೆಜ್ಜೆಯ ಸದ್ದಿಗೆ ತಟ್ಟನೆ ತಿರುಗಿ ನೋಡಿದಳು. ಅಕ್ಕ-ಭಾವನನ್ನು ಕಂಡಾಗ ಅವಳ ಕಳ್ಳಮನಸ್ಸು ಲಜ್ಜೆಗೊಂಡಿತು. ತಲೆ ತಗ್ಗಿದ ಅವಳನ್ನು ಕಂಡು ಹೇಮಂತ ಕೇಳಿದ:

"ಯಾರು ಮಮತಾ? ನಾನು ಯಾರೋ ಹೊಸ ಹುಡುಗಿ ತೋಟದಲ್ಲಿ ತಿರುಗಾಡುತ್ತಿದ್ದಾಳೆ ಎಂದುಕೊಂಡೆ!"

"ಯಾಕೆ ಭಾವಾ? ನನ್ನ ಗುರುತು ಸಿಗಲಿಲ್ವೆ?"

"ನನಗೇಕೆ? ನಿನ್ನಕ್ಕಗೂ ಸಿಗಲಿಲ್ಲ...ನೀನೇ ಕನ್ನಡಿಯಲ್ಲೊಮ್ಮೆ ನಿನ್ನ ಮುಖ ನೋಡಿಕೋ...ನಿನ್ನ ಗುರುತು ನಿನಗೂ ಸಿಗಲಾರದು!"

ಮಮತಾ ಅಲ್ಲಿ ನಿಲ್ಲಲಾರದಷ್ಟು ಲಜ್ಜೆಯಲ್ಲಿ ಮುದ್ದೆಯಾದಳು.

ಕೋಣೆ ಸೇರಿದ ಮಮತಾ ಕನ್ನಡಿ ಎದುರು ನಿಂತಳು. ನಿಜ! ತನ್ನ ಗುರುತು ಈಗ ತನಗೂ ಸಿಗದು. ಬಿಗಿದು ಕಟ್ಟಿದ್ದ ಜಡೆ ಸಡಿಲಾಗಿ ಬೆನ್ನಮೇಲೆ ಹರಡಿದೆ. ಮುಂಗುರುಳು ಹಣೆಯಲ್ಲಿ ನರ್ತಿಸುತ್ತಿದೆ! ಕಣ್ಣಲ್ಲಿ ಆಸೆಯ ಕರೆ ಕಾಣುತ್ತಿದೆ. ಬರಿದಾದ ಕೊರಳಲ್ಲಿ ಚಿನ್ನದೆಳೆ-ಬೋಳು ಕೈಯಲ್ಲಿ ಮಿನುಗುವ ಕೈಬಳೆಗಳು, ಉದಾಸೀನ ಭಾವದ ಛಾಯೆಯಷ್ಟೇ ಉಳಿದಿದೆ!

ನಿಡಿದಾದ ನಿಟ್ಟುಸಿರಿಟ್ಟ ಮಮತಾ ಪುಸ್ತಕ ತೆರೆದು ನೋಟ್ಸ್ ಬರೆಯಲು ಕುಳಿತಳು. ಗಡಿಯಾರದ ಸದ್ದಿನೊಂದಿಗೆ ಅವಳ ಹೃದಯದಲ್ಲೂ ತೆರೆಯೇಳುವ ಸದ್ದು ಕೇಳಿದಂತಾದಾಗ ಅವಳ ಮನಸ್ಸು ಚಂಚಲಗೊಳ್ಳುತ್ತಿದೆ. ಕೆಲಸ ಮುಗಿಸಿದ ಅವಳು ಗಡಿಬಿಡಿಯಿಂದಲೇ ಊಟ ಮುಗಿಸಿ, ಒಳಕ್ಕೆ ಬಂದು ಬೀರುವಿನ ಬಾಗಿಲು ತೆರೆದು ನಿಂತಳು. ಗುಲಾಬಿ ಜಾರ್ಜೆಟು ಸೀರೆ ಅದರದೇ ಬ್ಲೌಜ್ ತೊಟ್ಟು-ಮುತ್ತಿನ ಸರ ಕೊರಳಲ್ಲಿ ಹಾಕಿಕೊಂಡು, ಕಿವಿಗೆ ಮುತ್ತಿನ ಝುಮಕಿ-ಎರಡು ಸಡಿಲಾದ ಜಡೆ ಹೆಣೆದು ಗುಲಾಬಿಯ ಹೂವನ್ನು ಬಲಬದಿಯ ಕಿವಿಯ ಬಳಿ ಪಿನ್ನಲ್ಲಿ ಸಿಕ್ಕಿಸಿ, ಕಣ್ಣಿಗೆ-ಹುಬ್ಬಿಗೆ ಐಬ್ರೊ ಹಚ್ಚಿ, ಕುಂಕುಮದ ಬೊಟ್ಟು ಹಣೆಗಿಟ್ಟು, ಪರ್ಸು-ಬುಕ್ಕಿನೊಂದಿಗೆ ನೇರವಾಗಿ ಅಕ್ಕನ ಕೋಣೆಯಲ್ಲಿ ಬಂದು ಕೇಳಿದಳು:

"ಅಕ್ಕ...ನಿನ್ನ ವಾಚ್ ನನ್ನ ಕೈಗೆ ಕಟ್ಟು ನನಗದು ತುಂಬ ಸೇರಿದೆ. ಇವೊತ್ತು ಕಾಲೇಜನಿಂದ ಬೇಗ ಬಂದುಬಿಡ್ತೇನೆ. ನನ ಬಿಟ್ಟು ಪಿಕ್ಚರಿಗೆ ಹೋಗಬೇಡಿ ಮತ್ತೆ! ನಾನೂ ಬರ್‍ತೇನೆ. ನೀವಿಬ್ಬರೂ ರೆಡಿಯಾಗಿ...ಬ್ಯಾ...ಬ್ಯಾ..."

ವಾಚ್ ಕಟ್ಟಿದ್ದ ಕೈಯನ್ನು ಅತ್ತೊಮ್ಮೆ ಇತ್ತೊಮ್ಮೆ ತಿರುಗಿಸಿ ಮಮತಾ ಹೊರಕ್ಕೋಡಿದಾಗ ಸುನೀತಾ ಕಣ್ಣರಳಿಸಿ ಗಂಡನತ್ತ ನೋಡಿದಳು. ಹೇಮಂತ ನಗುತ್ತ ಹೇಳಿದ:

"ಮದ್ದು ಸರಿಯಾಗಿ ನಾಟಿದೆ. ರೋಗಿ ಈಗ ಗುಣಮುಖಳಾದಂತೆ!"

ಅಳಿಯ-ಮಗಳು ನಗುತ್ತ ಮಾತಾಡುತಿದ್ದರೆ ಲಕ್ಷ್ಮಮ್ಮ ಪೆಚ್ಚು ಮುಖ ಹಾಕಿಕೊಂಡು ಒಳಕ್ಕೆ ಬಂದರು.

"ಏನಮ್ಮ, ಒಂದು ನಮೂನೆಯಾಗಿದ್ದೀ? ಮೈಯಲ್ಲಿ ಹುಶಾರಿಲ್ವೆ? ಹಗಲು ಒಂದು ಕ್ಷಣ ಕೂತುಕೊಳ್ಳದೆ ಕೆಲಸಾ. ಕೆಲಸಾ. ಎಂದುಕೊಳ್ಳುವೆ..."

"ಇಲ್ಲ ಸುನೀ...ನನಗೇನೂ ಆಗಿಲ್ಲ. ಮಮತಾದೇ ಚಿಂತೆ ನನಗೆ. ಈಗ ಮತ್ತೆ ಅವಳಿಗೆ ನೆಂಟಸ್ತಿಕೆ ಬಂದಿದೆ. ಅವಳು ಈಗಿನ ರೀತಿಯಲ್ಲೇ ಇದ್ರೆ... ನಾಳೆ ಅವಳ ಕೈಹಿಡಿಯಲು ಯಾರೂ ಬರಲಾರರು. ನಿನ್ನೆ ಬಂದ ವರ ನಿನ್ನ ಅಪ್ಪಯ್ಯಗೂ ಒಪ್ಪಿಗೆ, ಮಮತಾಳಿಗೂ ಗೊತ್ತು; ಅವನು ಲಾ ಓದುತ್ತಿದ್ದಾನೆ!"

"ನಿನಗೆ ಸುಮ್ಮನೆ ಯೋಚನೆ. ಕೊರಗಬೇಡಮ್ಮ ನಾಳೆ ಮಮತಾನ್ನ ಇನ್ನೊಮ್ಮೆ ಕೇಳಿ ನೋಡು."

"ಅವಳನ್ನು ಕೇಳಿದರೆ ಮತ್ತೆ ಅದೇ ಹಾಡು!"

ಬಂದಂತೆ ಲಕ್ಷ್ಮಮ್ಮ ಹೊರಟುಹೋದರು.

ದಿನಕ್ಕಿಂತಲೂ ಕಾಲೇಜನಿಂದ ಬೇಗ ಬಂದ ಮಮತಾನ್ನ ಕಾಣುತ್ತಲೇ ಹೇಮಂತರ ನಗೆ ಉಕ್ಕಿತು.

"ಭಾವಾ...ನಾನು ಒಂದು ಕ್ಷಣದಲ್ಲಿ ರೆಡಿಯಾಗ್ತೀನಿ. ನಿಮ್ಮದಿನ್ನೂ ಆಗಿಲ್ಲ; ಅಕ್ಕ ಎಲ್ಲಿ?"

"ಅವಳ ಅಲಂಕಾರ ಎರಡು ಗಂಟೆಯಿಂದಲೂ ನಡೆದಿದೆ. ನನಗೆ ಒಂದು ಕ್ಷಣ ಸಾಕು..."

× × ×

ಸಿನೇಮಾ ಚೆನ್ನಾಗಿತ್ತು. ನಡುನಡುವೆ ಬರುವ ಹಾಸ್ಯದಲ್ಲಿ ಮಮತಾ ಮೈಮರೆತು ನಗುತ್ತಿದ್ದಳು. ಪಕ್ಕದಲ್ಲಿ ಕುಳಿತ ಅಕ್ಕನನ್ನು ಕುಲುಕಿ ಮತ್ತೆ ನಗುತ್ತಾಳೆ. ಇವಳನ್ನು ಕಂಡು ಸುನೀತಾ-ಹೇಮಂತರಿಗೆ ನಗು. ಮಾರನೆಯ ದಿನ ಬೆಳಗಿನಲ್ಲೇ ಮಮತಾ ಓದುತ್ತ ಕುಳಿತಲ್ಲಿ ಬಂದು ಲಕ್ಷ್ಮಮ್ಮ ಕೇಳಿದರು:

"ಮಮತಾ...ನಿನ್ನೆ ಒಂದು ನೆಂಟಸ್ತಿಕೆ ಬಂದಿದೆ. ನಿನ ಅಪ್ಪಯ್ಯಗೆ ತುಂಬ ಮನಸ್ಸಿದೆ. ಹುಡುಗ ಲಾ ಓದುತಿದ್ದಾನಂತೆ. ಗಿರೀಶ. ನಿನಗೂ ಪರಿಚಯ ಇದೆಯಂತೆ..."

ಪುಸ್ತಕದಲ್ಲಿ ಕಣ್ಣಿಟ್ಟಿದ್ದ ಮಮತಾ, ಮುಖ ಮೇಲಕ್ಕೆತ್ತಲಿಲ್ಲ. ಅವಳ ಕಣ್ಣಲ್ಲಿ ಅಕ್ಷರವೂ ಓಡಲಿಲ್ಲ. ಅವಳ ಕಣ್ಣೆದುರು ಗಿರೀಶನ ರೂಪ ಸುಳಿಯಿತು. ಕಣ್ಣು ಮಾತಾಡಿತು.

"ನಿನ್ನ ಅಪ್ಪಯ್ಯ ಹೇಳಿದ್ದಾರೆ...ನಿನಗೆ ಇಷ್ಟವಿದ್ದರೆ ಮಾತ್ರ. ನಮ್ಮ ಒತ್ತಾಯವಿಲ್ಲ..."

"ನಿಮಗೆ ಒಪ್ಪಿಗೆಯಾದರೆ...ಅಕ್ಕ-ಭಾವಗೂ ಸರಿ ಕಂಡರೆ ನನಗೂ..."

ಲಕ್ಷ್ಮಮ್ಮ ಮಗಳಿಂದ ಈ ಉತ್ತರ ಬರುತ್ತದೆಂದು ನಂಬಿರಲಿಲ್ಲ. ಅವಸರದಿಂದ ಅವರು ಕೋಣೆಯಿಂದ ಹೊರಟುಬಿಟ್ಟರು.

"ಸುನೀ...ಅಂತೂ ಮಮತಾ ದಾರಿಗೆ ಬಂದ್ಲು... ಒಪ್ಪಿಕೊಂಡುಬಿಟ್ಟಳು. ನಾನು ಅವಳ ಬಗ್ಗೆ ಆಸೆಯನ್ನೇ ಬಿಟ್ಟು ಬಿಟ್ಟಿದ್ದೆ."

ಹೇಮಂತ ಸ್ನಾನ ಮುಗಿಸಿ ಬಂದವನು ಅತ್ತೆಯ ಮಾತು ಮುಗಿಯುವಂತೇ ಹೇಳಿದ:

"ನಾವು ಇನ್ನು ಹೊರಡಬೇಕಲ್ಲ?"

"ಯಾಕೆ ಹೇಮಂತ...ಇನ್ನು ನಾಲ್ಕು ದಿನ ಇರಬಾರದೆ? ನೀವಿದ್ರೆ ಈ ಮನೆಯಲ್ಲಿ ಉಸಿರಾಡಿಸಬಹುದು...ಮಮತಾಳೆದುರು ಇರೋದು ಮರದ ಬೊಂಬೆಯೆದುರು ಇರೋದೂ ಒಂದೇ"

ಅಲ್ಲಿಗೇ ಬಂದ ಮಮತಾ ನಡುವೆ ಕೇಳಿದಳು:

"ಯಾಕಮ್ಮ ನನ್ನ ಮರದ ಬೊಂಬೆ ಎಂದೆ?"

"ಮತ್ತೇನೆನ್ನಲಿ? ನೋಡಿಲ್ಲಿ ನಿನ್ನಕ್ಕ ಭಾವಾ ನಾಳೆ ಹೊರಡಬೇಕೂ ಅಂತಾರೆ."

"ಯಾಕೆ ಭಾವಾ...ನಾಲ್ಕು ದಿನ ಗಮ್ಮತ್ತಾಗಿ ಇರಬಾರದೇ? ಒಂದು ಸಿನೇಮಾ ಇಲ್ಲ...ಪಾರ್ಟಿ ಇಲ್ಲ...ಈಗ ನೀವು ಹೊರಟುಹೋದ್ರೆ ಇನ್ನು ಬರೋದು...?"

"ಬೇಗ ಬರ್‍ತೀವೆ..."

"ಯಾವಾಗ?"

"ನೀನು ಕರೆದಾಗ..."

"ನಾನು ಕರೆದಾಗ?"

"ಹೂಂ...ನಿನ್ನ ಸಿಂಗರಿಸಲು ಹುಕ್ಕೆ ಬರಬೇಕಲ್ಲ?"

ಸುನೀತಾ ತಂಗಿಯ ಕಿವಿ ಹಿಂಡಿ ನಗುತ್ತ ಹೇಳಿದಳು.



ಗೋವಿಂದಮೂರ್ತಿ ದೇಸಾಯಿ

# ಚಲದಂಕೆ ಚಂದಲಾದೇವಿ!

ಕದಂಬ ಮಹಾಮಂಡಳೇಶ್ವರ ಉದಯಾದಿತ್ಯ ದೇವರು ಪತ್ನಿ ಚಂದಲಾದೇವಿಯೊಂದಿಗೆ ಮೂಲ ಸ್ಥಾನವಾದ ಕಿರಹಳ್ಳಿಯ ಗರುಡೇಶ್ವರ ಸ್ವಾಮಿಯ ದೇವಾಲಯಕ್ಕೆ ಆಗಮಿಸುತ್ತಿರುವಾಗ ಬೀದಿಯ ಉಭಯ ಪಾರ್ಶ್ವಗಳಲ್ಲಿಯೂ ಬಾಳೆ, ಸುನಿಂಬೆ, ಮಾದುಫಳ, ಮಾವು, ಕೌಂಗು, ತೆಂಗು ಫಲಭಾರ ವನ್ನೂ ಗಣನೆಗೆ ತಾರದೇ ತಲೆಯೆತ್ತಿ ಮುಗುಳು ನಗುತ ಸ್ವಾಗತಿಸಿದವು. ಸೊಕ್ಕಿದ ಜೋಳಗಳು ಫಲ ಭಾರದಿಂದ ನತಮಸ್ತಕರಾಗಿಯೇ ಮಹಾಮಂಡ-ಳೇಶ್ವರ ಮತ್ತು ಮಹಾಮಂಡಳೇಶ್ವರಿಯರನ್ನು ಗೌರವದಿಂದ ಬರಮಾಡಿಕೊಂಡವು.

ಉದಯಾದಿತ್ಯದೇವರು ಚಂದಲಾದೇವಿಯೊಂದಿಗ ರಥವನ್ನು ಇಳಿಯುತ್ತಿರುವಾಗ ದೇಗುಲದ ಮಂಗಲ ವಾದ್ಯಗಳು ಮೊಳಗುತ್ತಿದ್ದವು. ಮಹಾದೇವ ಪಂಡಿತರು ದೇವಾಲಯದ ಅರ್ಚಕವೃಂದದೊಂದಿಗೆ ಆಶೀರ್ವಾದ ಮಂತ್ರಗಳನ್ನು ಪಠಿಸುತ್ತ ಪೂರ್ಣ ಕುಂಭದ ಸ್ವಾಗತವನ್ನಿತ್ತರು. ಉದಯಾದಿತ್ಯದೇವರು ಮಹಾದ್ವಾರಕ್ಕೆ ಬಂದಾಗ ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಮಂಡಳೇಶ್ವರಂ ಬನವಾಸೀಪುರ-ವರಾಧೀಶ್ವರಂ ಜಯಂತಿ-ಮಧುಕೇಶ್ವರ ದೇವಲಬ್ಧ ವರಪ್ರಸಾದಂ ಮೃಗಮದಾಮೋದರ ತ್ರ್ಯಕ್ಷಕ್ಷೌ-ಸಂಭವಂ ಚತುರಾಶೀತನಗರಾಧಿಷ್ಠಿತಲಲಾಟಲೋಚನ ಚತುರ್ಭುಜಂ ಜಗದ್ವಿದಿತಾಷ್ಟಾದಶಾಶ್ವಮೇಧ ಯಜ್ಞ ದೀಕ್ಷಾ ದೀಕ್ಷಿತಂ ಹಿಮವದ್ಗಿರೀಂದ್ರ ರುಂದ್ರ ಶಿಖರ ಶಕ್ತಿ ಸಂಸ್ಥಾಪಿತ ಸ್ಫಟಿಕ ಶಿಲಾಸ್ತಂಭ ಬದ್ಧ-ಮದಗಜ ಮಹಾಮಹಿಮಾಭಿರಾಮಂ ಕದಂಬ ಚಕ್ರ ಮಯೂರವರ್ಮಮಹಾಮಹೀಪಾಳ ಕುಳಭೂಷಣಂ ಪೆರ್ಮಗಟ್ಟಿ ತೂರ್ಯ್ಯನಿರ್ಘೋಷಣಂ ಶಾಖಾಚ-ರೇಂದ್ರ ಧ್ವಜವಿರಾಜ ಮಾನೋತ್ತುಂಗ ಸಿಂಹ ಲಾಂಛನಂ ಸಮರಜಯಕಾರಣಂ ಕದಂಬರಾಭರಣಂ ಶ್ರೀಮನ್ಮಹಾಮಂಡಳೇಶ್ವರಂ ಉದಯಾದಿತ್ಯದೇವ ಭೋ ಪರಾಕ್ ಎಂದು ಭಟ್ಟಂಗಿಗಳು ಹೊಗಳಿದರು.

ದೇವಾಲಯದಲ್ಲಿ ಕಿರಹಳ್ಳಿಯ ಮಹಾಜನರಲ್ಲ, ಪರಿಸರದಲ್ಲಿದ್ದ ಪುರವಾಸಿಗಳು, ಗ್ರಾಮವಾಸಿಗಳು ದೇವಾಲಯದಲ್ಲಿ ಕಿಕ್ಕಿರಿದು ನೆರೆದಿದ್ದರು. ಸ್ವಾಮಿ ಗರುಡೇಶ್ವರನಿಗೆ ವಿಶೇಷ ಅಲಂಕಾರ ಮತ್ತು ಮಹಾಭಿಷೇಕಗಳಾದವು. ಮಹಾಮಂಡಳೇಶ್ವರರು ಸ್ವಾಮಿಯ ಪಾದಗಳನ್ನು ತೊಳೆದು ಸ್ವಾಮಿಗೆ ನಂದಾ ದೀಪವನ್ನಿಡಲು ಅಪಾರ ಸಂಪತ್ತನ್ನು ದತ್ತಿಯಾಗಿ ಕೊಟ್ಟರು. ಈ ಧರ್ಮಕಾರ್ಯಗಳಿಗೆಲ್ಲಾ ಮಹಾದೇವ ಪಂಡಿತರು ಅಧ್ವರ್ಯುಗಳಾಗಿದ್ದರು.

ಇದೇ ಸುಪ್ರಸಂಗದಲ್ಲಿ ಮಹಾಮಂಡಳೇಶ್ವರರು ಕಲೆಯ ಮೇಲಿದ್ದ ತಮ್ಮ ಆದರಾಭಿಮಾನಗಳನ್ನು ಪ್ರದರ್ಶಿಸಲು ಕಂಚಿನಿಯರಿಗೆ ದರ್ಪಣಗಳನ್ನು ಕೊಳ್ಳಲು ಅನುಕೂಲವಾಗುವಂತೆ ಅಮಿತ ಸಂಪತ್ತನ್ನು ದಾನವಾಗಿ ಕೊಟ್ಟರು. ನಾಟ್ಯಕಲೆ ಅಖಂಡವಾಗಿ ಉಳಿಯಲು ಬೇಕಾದ ಸಹಾಯವನ್ನು ಕೊಡುವ ಭರವಸೆಯನ್ನಿತ್ತರು.

ತದನಂತರದಲ್ಲಿ ದೇವಾಲಯದ ಸಭಾಮಂಟಪದಲ್ಲಿ ಕಂಚಿನಿ ಲಚ್ಚವಿಯ ನರ್ತನವಿತ್ತು. ಈ ನಾಟ್ಯದ ಚೆಲುವನ್ನು ವೀಕ್ಷಿಸಲೆಂದೇ ಸಹಸ್ರಾರು ಅಡಿ ನೆಲವನ್ನು ತುಳಿದು ಹಲವಾರು ಚಕ್ಷುಗಳು ಕುತೂಹಲಗೊಂಡು ಬಂದಿದ್ದವು. ಅವಳ ಅಪೂರ್ವ ಲಾವಣ್ಯವನ್ನು ನೋಡುವದೇ ಅವರಿಗೆ ಒಂದು ಪರ್ವವಾಗಿತ್ತು. ಇನ್ನು ಚೆಲುವು ನರ್ತಿಸುವದನ್ನು ನೋಡುವದೆಂದರೆ ಅವರಿಗೆ ಮಹಾಪರ್ವ ಬಂದಂತಾಗಿತ್ತು. ಲಚ್ಚವಿಯ ರೂಪರಾಶಿ ಹಣ್ಣೆಲೆಯಾದ ಹೃದಯದಲ್ಲಿಯೂ ಕಾಮದ ಕಿಡಿಯನ್ನು ಹೊತ್ತಿಸುವಂತಿತ್ತು.

ಲಚ್ಚವಿ ಹಜಾರಕ್ಕೆ ಬಂದು ಗರುಡೇಶ್ವರ ಸ್ವಾಮಿಗೆ ನಮಸ್ಕರಿಸಿ ಮಹಾಮಂಡಳೇಶ್ವರರ ಸಮ್ಮುಖದಲ್ಲಿ ನರ್ತಿಸಲು ಪ್ರಾರಂಭಿಸಿದಾಗ ನಾಟ್ಯ ಸರಸ್ವತಿಯೇ ಧರೆಗೆ ಇಳಿದು ಬಂದಂತಾಗಿತ್ತು. ನಾಟ್ಯ ಕಲೆಯಲ್ಲಿ ಅವಳು ಪರಿಣಿತಳಾಗಿದ್ದಳು. ಉದಯಾದಿ-ತ್ಯರು ಸೌಂದರ್ಯದ ಚಿಂತಾಲುವಿನಲ್ಲಿ ಚಂದಲಾದೇವಿ ಮತ್ತು ಲಚ್ಚವಿಯರ ಚೆಲುವನ್ನು ತೂಗಿನೋಡಿದರು. ಲಚ್ಚವಿ ಒಂದು ಮಲ್ಲಿಗೆಯ ಭಾರ ಅಧಿಕ ತೂಕದವಳಾಗಿ ಕದಂಬ ಮಹಾಮಂಡಳೇಶ್ವರರಿಗೆ ಕಂಡಳು. ಅವಳ ಅಂಗಾಂಗಗಳಲ್ಲಿ ಚೆಲುವು ಚಿಮ್ಮುತ್ತಿತ್ತು. ಅವಳನ್ನೇ ತದೇಕ ದೃಷ್ಟಿಯಿಂದ ನೋಡುವದನ್ನು ಸೂಕ್ಷ್ಮವಾಗಿ ವೀಕ್ಷಿಸಿದ ಚಂದಲಾದೇವಿಗೆ ಅದೇಕೋ ಪತಿದೇವರ ನೋಟ ಸರಿಯಾಗಿ ಕಾಣಲಿಲ್ಲ. ಬ್ರಹ್ಮದೇವ ತನ್ನ ಕಿಂತಲೂ ಅಪೂರ್ವವಾದ ಚೆಲುವನ್ನೇಕೆ ಈ ಲಚ್ಚವಿಯಲ್ಲಿ ಹಾಕಿದ್ದಾನೆ ಎಂದು ಅಸೂಯೆಗೊಂಡಳು.

ಲಚ್ಚವಿ ನಾಟ್ಯವಾಡುವಾಗ ನಾಟ್ಯಸರಸ್ವತಿಯು ವಿಲನ್ನೇ ಕುಣಿಸಹತ್ತಿರುವಳೇನೋ ಎಂದೆನಿಸಿತು, ನೆರೆದ ಮಹಾಜನರಿಗೆ! ಅವರೆಲ್ಲರೂ ತಲೆದೂಗಿದರು. ಅವರು ಹರ್ಷೋದ್ಗಾರಗಳಿಂದ ಅವಳ ನರ್ತನವನ್ನು ಪ್ರಶಂಸಿಸುತ್ತಿರುವಾಗ ಮಹಾಮಂಡಳೇಶ್ವರರು ಸಂಪ್ರೀತರಾಗಿ ತಮ್ಮ ಕಂಠದಲ್ಲಿದ್ದ ಮೌಕ್ತಿಕ ಹಾರವನ್ನು ತೆಗೆದು ಲಚ್ಚವಿಗೆ ಕೊಟ್ಟರು. ಆ ಸರವನ್ನು ಸ್ವೀಕರಿಸಲು ಬಂದಾಗ ಲಚ್ಚವಿ ಮೇನಕಿ, ರಂಭೆ, ಊರ್ವಸಿ, ತಿಲೋತ್ತಮೆಯರ ರೂಪವನ್ನೂ ಮೀರಿಸುವ ತನ್ನ ರೂಪವನ್ನು ಮಾನವ ಮನ್ಮಥನಂತಿದ್ದ ಉದಯಾದಿತ್ಯದೇವರ ಚಕ್ಷುಗಳಲ್ಲಿ ಮೂಡಿಸಿಬಿಟ್ಟಳು. ಮಹಾಮಂಡ-ಳೇಶ್ವರರು ಅವಳ ಅಲೌಕಿಕ ಲಾವಣ್ಯಕ್ಕೆ ಮನ-ಸೋತರು. ತಮ್ಮ ಮನೋರಥವನ್ನು ತಮ್ಮ ಚಕ್ಷುಗಳ ಹಿಂದೆಯೇ ಬೈತಿಟ್ಟುಕೊಂಡು ಹಾರವನ್ನು ಕೊಟ್ಟರು. ಆಗ ಆ ನಾಲ್ಕೂ ಅಧರಗಳಲ್ಲಿ ಮೂಡಿ ಬಂದ ಮಧುರ ಮಂದಹಾಸ, ಕಣ್ಣುಗಳಲ್ಲಿ ತೂರಿ ಬಂದ ಎಳೆತದ ರಶ್ಮಿಗಳು ಅವರಿಬ್ಬರನ್ನೂ ಅವರ್ಣ್ಯ ಬಂಧನದಲ್ಲಿ ಸಿಲುಕಿಸಿದವು. ಆ ಪ್ರಣಯಿಗಳ ಮೌನ ಸಂಜ್ಞೆಗೆ ಗುಂಜಿ ತೂಕದ ಮಾತೂ ಬೇಕಿ-ರಲಿಲ್ಲ!

ನಾಟ್ಯವು ಕೊನೆಗೊಂಡಾಗ ಮಹಾಜನರಿಗೆ ಅತೃಪ್ತಿ ಎನಿಸಿತು. ಅಂತಹ ಅಪೂರ್ವ ನೃತ್ಯವನ್ನು ವೀಕ್ಷಿಸುವ ಯೋಗ ತಮಗಿನ್ನು ಬರಲಾರದೆಂದು ಅಂದುಕೊಳ್ಳಹತ್ತಿದರು. ನೃತ್ಯವು ಮುಗಿದು ಮಹಾಮಂಡಳೇಶ್ವರ ಮತ್ತು ಮಹಾಮಂಡಳೇಶ್ವರಿಯರ ಅಪ್ಪಣೆಯನ್ನು ಪಡೆಯಲು ಲಚ್ಚವಿ ಬಂದಾಗ ಉದಯಾದಿತ್ಯದೇವರು ಅಂತಃಪುರಕ್ಕೆ ಬಂದು ಇನ್ನೊಮ್ಮೆ ನರ್ತಿಸಬೇಕೆಂದು ಕೇಳಿಕೊಂಡರು. ಲಚ್ಚವಿ ಸಂಕೋಚದಿಂದ ಆಮಂತ್ರಣವನ್ನು ಸ್ವೀಕರಿಸಿದಳು.



ಉದಯಾದಿತ್ಯದೇವರು ರಾಜಧಾನಿ ಬನವಾಸಿಗೆ ಬಂದ ಮೇಲೆ ಲಚ್ಚವಿಯು ಇನ್ನೊಂದು ಕಾರ್ಯಕ್ರಮಕ್ಕೆ ಏರ್ಪಾಡು ಮಾಡಲು ಹೇಳಿದರು. ನಾಟ್ಯ ಶಾಸ್ತ್ರದಲ್ಲಿ ಹೆಚ್ಚಿನ ಆಸ್ಥೆವಹಿಸಿ ಅದು ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಲು ಹಲವಾರು ಸಂಪತ್ತುಗಳನ್ನು ದಾನವಾಗಿ ಕೊಟ್ಟರು. ಆ ಶಾಸ್ತ್ರ ಅನಂತಕಾಲಕ್ಕೂ ನಿಲ್ಲುವಂತೆ ಹಲವಾರು ಏರ್ಪಾಡುಗಳನ್ನು ಮಾಡಿದರು. ಕದಂಬ ರಾಜ್ಯದಲ್ಲಿ ಎಂದಿಲ್ಲದ ಬೆಲೆ ಅದಕ್ಕೆ ಬಂದಿತು.

ಅದೆಲ್ಲದಕ್ಕಿಂತಲೂ ಲಚ್ಚವಿಯ ಗೆಜ್ಜೆಗಳ ಧ್ವನಿ ಇವರ ಕಿವಿಗಳಲ್ಲಿ ಕೇಳಿಬಂದರೆ. ಅವಳ ರೂಪ ಇವರ ಕನಸಿನಲ್ಲಿಯೂ ಬಂದು ನಾಟ್ಯವಾಡಹತ್ತಿತು. ಪೂರ್ವಭಾವಿಯಾಗಿ ನಿರ್ಧರಿಸಿದಂತೆ ಬನವಾಸಿ ಪುರವಾಸಿಗಳ ಸಮ್ಮುಖದಲ್ಲಿ ಅರಮನೆಯೊಳಗೆ ಲಚ್ಚವಿಯ ಒಂದು ನರ್ತನವಾಯಿತು. ಅಂದಿನಿಂದ ಲಚ್ಚವಿಯ ಪಾದಗಳು ಆಗೀಗ ಅಂತಃಪುರಕ್ಕೆ ಬಂದು ಹೋಗುತ್ತಲೇ ಇದ್ದವು. ಉದಯಾದಿತ್ಯದೇವರ ತಮ್ಮ ಹೃದಯವನ್ನೇ ಅವಳಿಗೆ ಧಾರೆಕೊಂಡರೆ, ಅವಳು ಇವರ ಸೇವೆಗೆ ತನ್ನನ್ನೇ ಮುಡುಪಾಗಿಟ್ಟಳು. ಉದಯಾದಿತ್ಯದೇವರಿಗೆ ಲಚ್ಚವಿಯ ಸೌಂದರ್ಯದ ಮಧುವನ್ನು ಆಸ್ವಾದಿಸಿದಷ್ಟೂ ಅತೃಪ್ತಿ ಎನಿಸಹತ್ತಿತು. ಅವಳನ್ನು ಅರೆಕ್ಷಣ ಅಗಲಿರುವದೆಂದರೆ ಅವರಿಗೆ ಅಸಹನೀಯವೆನಿಸಹತ್ತಿತು. ಲಚ್ಚವಿಯ ವಾಸಕ್ಕಾಗಿಯೇ ಒಂದು ವಿಶಾಲ ಸೌಧವು ನಿರ್ಮಾಣಗೊಂಡಿತು. ಉದಯಾದಿತ್ಯದೇವರು ಅಲ್ಲಿಯೇ ಹಗಲಿರುಳುಗಳನ್ನು ವ್ಯಯಿಸಹತ್ತಿದರು. ಎಂದಾದರೂ ಒಂದು ರಾತ್ರಿ ತಮ್ಮ ಅಂತಃಪುರಕ್ಕೆ ಬಂದರೆ ಚಂದಲಾದೇವಿಯನ್ನು ಅಪರಿಚಿತಳಂತೆ ಕಾಣಹತ್ತಿದರು. ಮೊದಮೊದಲು ಅವಳು ಹಲವಾರು ರಾತ್ರಿಗಳಲ್ಲಿ ಪತಿದೇವರ ಬರವಿಗಾಗಿ ಕಾದು ಕಾದು ಏಕಾಂಗಿಯಾಗಿ ನಿದ್ರಿಸಬೇಕಾಗುತ್ತಿತ್ತು. ಈಗ ಅದೆ ಅಭ್ಯಾಸವಾಗಿ ಬಿಟ್ಟಿತು. ಈ ಕಾಲ ಮಧುವಿನಕಿಂತಲೂ ಮಧುರವೆಂದು ಭಾವಿಸಿದ್ದ ಜೀವನ ಈಗ ಕಾಲಕೂಟ ವಿಷದಷ್ಟು ಕಹಿಯಾಗಿ ಕಾಣಹತ್ತಿತು ಚಂದಲಾದೇವಿಗೆ! ಅವಳು ಬನವಾಸಿಯ ಮಧುಕೇಶ್ವರ ಸ್ವಾಮಿಗೆ ಮೊರೆಯಿಟ್ಟಳು. ಗರುಡೇಶ್ವರ ದೇವರಿಗೆ ಪ್ರಾರ್ಥಿಸಿದಳು. ಆದರೆ ಅದರ ಪರಿಣಾಮ ಉದಯಾದಿತ್ಯದೇವರ ಮೇಲೆ ಏನೂ ಆಗಲಿಲ್ಲ. ಅವರು ದಿನಗಳು ಉರುಳಿದಂತೆ ಲಚ್ಚವಿಯಲ್ಲಿ ಹೆಚ್ಚೆಚ್ಚು ಆಸಕ್ತರಾಗಹತ್ತಿದರು. ಲಚ್ಚವಿಯನ್ನು ಉದಯಾದಿತ್ಯದೇವರು ಅಭಿನವ ಸರಸ್ವತಿ, ಸಮಸ್ತಾಂತಃಪುರ ನಿತಂಬಿನಿ, ಸಹಜ ಬೆಡಂಗಿ, ವಿದ್ಯಾಧರಿ, ಚಕೋರಾಕ್ಷಿ ಎಂದು ಸಂಬೋಧಿಸಿ ಅವಳ ಸಂಗೀತ, ನೃತ್ಯದ ಬಗ್ಗೆ ಮುಕ್ತ ಕಂಠದಿಂದ ಪ್ರಶಂಸಿಸಹತ್ತಿದರು.

ಲಚ್ಚವಿಯು ಸೀರೆಯ ಸೆರಗು ಬೀಸಿದರೆ ಸಮ್ಮೋಹಗೊಳ್ಳುವಷ್ಟು ಆಕರ್ಷಿತರಾದರು ಉದಯಾದಿತ್ಯದೇವರು! ಅಂತಃಪುರವು ಚಂದಲಾದೇವಿಯ ಹುರವೃಷ್ಟಿಯಾಗಿ ವ್ಯಥಿಸಹತ್ತಿತು. ಸುಂದರ ಗುಲಾಬಿ

ಪುಷ್ಪ, ಶುಭ್ರ ಮಲ್ಲಿಗೆ, ಬನದಿಂದ ಆದೇ ತಾನೇ ಬಿಡಿಸಿತಂದ ಕೇದಿಗೆಯಂತಿರುವ ಚಂದಲಾದೇವಿಯನ್ನು ಕಡೆಗಣಿಸಿ ತಿಪ್ಪೆಯಲ್ಲಿ ಬೆಳೆದ ಹೂವೊಂದನ್ನು ಆಘ್ರಾಣಿಸುತ್ತ ಕುಳಿತ ಉದಯಾದಿತ್ಯದೇವರನ್ನು ಎಲ್ಲರೂ ಕಟಪಡಹತ್ತಿದರು!!

ಮಹಾಮಂಡಳೇಶ್ವರರಿಗೆ ರಾಜ್ಯಭಾರದಲ್ಲಿ ಲಕ್ಷ್ಯ ಕೊಡಲು ಒಂದು ಕ್ಷಣವೂ ದೊರೆಯುತ್ತಿರಲಿಲ್ಲ. ತಾವಾಯಿತು ಲಚ್ಚವಿಯಾಯಿತು! ಚಾಲುಕ್ಯರಲ್ಲಿದ್ದ ರಾಜನಿಷ್ಠೆಯನ್ನು ಕಿತ್ತೆಸೆದು ತಾನು ಸ್ವತಂತ್ರನಾಗಬೇಕೆಂದು ಬಯಸುತ್ತಿದ್ದ ಕೀರ್ತಿವರ್ಮನ ಯೋಗಕ್ಷೇಮವನ್ನು ನೋಡಿಕೊಳ್ಳುವ ಭಾರವನ್ನು ಉದಯಾದಿತ್ಯದೇವರ ಮೇಲೆ ಹೊರೆಸಿದ್ದರೂ ಉದಯಾದಿತ್ಯರು ನಿಭೃತರಾಗಿ ಕುಳಿತಿದ್ದರು. ಚಾಲುಕ್ಯರ ಮಹಾಮಂಡಳೇಶ್ವರರಾದ ಇವರು ಚಾಲುಕ್ಯರ ಆಜ್ಞೆಯನ್ನು ಮನ್ನಿಸುವದು ಕರ್ತವ್ಯವೆಂದು ಭಾವಿಸಬೇಕಾಗಿತ್ತು. ಆದರೆ ಇವರು ಲಚ್ಚವಿಯಲ್ಲಿ ನಿಮಗ್ನರಾಗಿದ್ದರಿಂದ ರಾಜ್ಯಭಾರದತ್ತ ಲಕ್ಷ್ಯವನ್ನೇ ಪೂರೈಸಲಿಲ್ಲ. ಅವಳ ರೂಪ, ನಾಟ್ಯ, ಸಂಗೀತ ಇವರನ್ನು ಅಂಧರನ್ನಾಗಿ ಮಾಡಿದ್ದವು. ಅವಳಿಗಾಗಿ ರಾಜ ಭಾಂಡಾರದ ದ್ವಾರಗಳೇ ತೆರೆದಿದ್ದವು.

ಚಾಲುಕ್ಯ ಸಮ್ರಾಟರಿಂದ ಅಂತಿಮ ಎಚ್ಚರಿಕೆ ಬಂದಿದ್ದರೂ ಉದಯಾದಿತ್ಯದೇವರು ಕೀರ್ತಿವರ್ಮನ ಮೇಲೆ ದಂಡೆತ್ತಿಹೋಗುವ ಮಾತನ್ನೇ ಎತ್ತಿರಲಿಲ್ಲ. ಚಂದಲಾದೇವಿ ಭೋಜನದ ಸಮಯದಲ್ಲಿ ಎರಡು ಸಲ ಈ ಮಾತಿನ ಪ್ರಸ್ತಾಪವನ್ನು ಮಾಡಿದರೂ ಮಹಾಮಂಡಳೇಶ್ವರರು ಮೌನವಾಗಿಯೇ ಇದ್ದರು. ಪತಿದೇವರನ್ನು ಕೇಳಿ ಏನೂ ಪ್ರಯೋಜನವಿಲ್ಲವೆಂದು ಚಂದಲಾದೇವಿ ಅವರ ಸಹೋದರರೀರ್ವರಾದ ವಿಕ್ರಮಾದಿತ್ಯದೇವ ಮತ್ತು ಸೋಮೇಶ್ವರದೇವ ರೊಡನೆ ಆಪ್ತಾಲೋಚಿಸಿ ಅವರನ್ನು ಕದಂಬ ಸೈನ್ಯ ದೊಂದಿಗೆ ಕೀರ್ತಿವರ್ಮನ ಯೋಗಕ್ಷೇಮವನ್ನು ನೋಡಿಕೊಳ್ಳಲು ಅಣಿಮಾಡಿದಳು. ಕೀರ್ತಿವರ್ಮನ ಮೇಲೆ ದಂಡೆತ್ತಿಹೋಗದಿದ್ದರೆ ಸಮ್ರಾಟರ ಉಪ್ಪಿಗೆ ಎರಡನ್ನು ಬಗೆದಂತಾಗುತ್ತದೆಂದು ಚಂದಲಾದೇವಿ ಪತಿದೇವರಿಗೆ ಪರ್ಯಾಯವಾಗಿ ಹೇಳಿದರೂ ಅವರು ಅದನ್ನು ಲಕ್ಷ್ಯಕ್ಕೂ ತಂದುಕೊಳ್ಳಲಿಲ್ಲ. ಸೈನ್ಯವು ಸಿದ್ಧವಾಗಿ ವಿಕ್ರಮಾದಿತ್ಯದೇವ ಮತ್ತು ಸೋಮೇಶ್ವರದೇವರ ನೇತೃತ್ವದಲ್ಲಿ ಜೈತ್ರಯಾತ್ರೆಗೆ ಹೊರಡುವ ಮುಹೂರ್ತದಲ್ಲಿ ಕೂಡ ಅಗ್ರಜನ ಆಶೀರ್ವಾದವನ್ನು ಬಯಸಿ ಸೋದರರಿಬ್ಬರು ಬಂದರೆ ಅವರಿಗೆ ನಿರಾಶೆಯಾಯಿತು. ಉದಯಾದಿತ್ಯದೇವರು ಲಚ್ಚವಿಯೊಡನೆ ಸರಸಸಲ್ಲಾಪದಲ್ಲಿ ತಲ್ಲೀನರಾಗಿರುವರೆಂದು ಅಂತಃಪುರದ ಪರಿಚಾರಿಕೆ ವಿಕ್ರಮಾದಿತ್ಯದೇವರಿಗೆ ಹೇಳಿದಾಗ ಅವರಿಗೆ ಕೀರ್ತಿವರ್ಮನ ಬದಲು ಅಗ್ರಜನನ್ನೇ ಇರಿದು ಕೊಲ್ಲುವಷ್ಟು ಕೋಪ ಬಂದಿತು. ಆದರೆ ಅದು ತಕ್ಕ ಸಮಯವಲ್ಲವೆಂದು ಚಂದಲಾದೇವಿಯ ಆಶೀರ್ವಾದವನ್ನು ಪಡೆದು ಜೈತ್ರಯಾತ್ರೆಗೆ ಪ್ರಯಾಣ ಬೆಳೆಸಿದರು.

ಬನವಾಸಿಯ ಈ ಕದಂಬ ಸೈನ್ಯದೊಂದಿಗೆ ಗೋವೆಯ ಒಂದನೇ ಜಯಕೇಶಿಯ ಸೈನ್ಯವು ಸೇರಿ ಬಂಡೆದ್ದ ಕೀರ್ತಿವರ್ಮನ ರಾಜ್ಯದ ಮೇಲೆ ದಾಳಿ ಮಾಡಿದವು. ಕೀರ್ತಿವರ್ಮ ಸಾಮಾನ್ಯ ಮಾಂಡಳೀಕನಾಗಿರಲಿಲ್ಲ. ಅಂತಲೇ ಚಾಲುಕ್ಯರ ನೊಗವನ್ನೆತ್ತಿ ಸ್ವತಂತ್ರನಾಗಬಯಸಿದ್ದನು. ಯುದ್ಧ ಹಲವಾರು ದಿವಸಗಳ ಕಾಲ ನಡೆಯಿತು.

ರಣರಂಗದಲ್ಲಿ ವಾರ್ತೆಗಳನ್ನು ಕೇಳಲು ಹಗಲಿರುಳುಗಳಲ್ಲಿ ಯಾವ ವ್ಯತ್ಯಾಸವನ್ನೂ ಮಾಡದೇ ಕಾಯುತ್ತಿದ್ದ ಚಂದಲಾದೇವಿಯ ಚಕ್ಷುಗಳಲ್ಲಿ ಕಾತರತೆ ಉಕ್ಕಿ ಹರಿಯುತ್ತಿತ್ತು. ರಾಜ್ಯಭಾರದ ಸಕಲ ಕಾರ್ಯಗಳನ್ನು ಈಗ ಅವಳೇ ನಿರ್ವಹಿಸಬೇಕಿತ್ತು. ಒಂದೊಂದು ದಿವಸ ಅವಳಿಗೆ ಭೋಜನವನ್ನೂ ಸ್ವೀಕರಿಸುವಷ್ಟು ಸಮಯವು ದೊರೆಯುತ್ತಿರಲಿಲ್ಲ. ಕಣ್ಣಲ್ಲಿ ಎಣ್ಣೆಯನ್ನು ಹಾಕಿಕೊಂಡು ಚಂದಲಾದೇವಿ ರಾಜ್ಯದ ಆಗು-ಹೋಗುಗಳನ್ನೇ ಕುರಿತು ಯೋಚಿಸುತ್ತಿರುವಾಗ, ಉದಯಾದಿತ್ಯದೇವರು ಲಚ್ಚವಿಯ ಮಾಯಾಜಾಲದಲ್ಲಿ ಸಿಲುಕಿ ಅವಳ ದಾಸಾನುದಾಸರಾಗಿ ಅವಳ ತೋಳತೆಕ್ಕೆಯಲ್ಲಿಯೇ ಸಮಯವನ್ನು ಕಳೆಯಹತ್ತಿದರು.

ಯುದ್ಧವು ಪ್ರಾರಂಭವಾದಾಗ ಕೀರ್ತಿವರ್ಮನದೇ ಕೈಮೇಲಾಗುತ್ತ ನಡೆದಿದ್ದರೂ ನಂತರ ಕದಂಬ ಸೈನ್ಯವು ಮುನ್ನಡೆಯಹತ್ತಿತು. ಕೀರ್ತಿವರ್ಮನ ಶಕ್ತಿ ಕುಂದುತ್ತ ನಡೆದಂತೆ ಕದಂಬ ಸೈನ್ಯಕ್ಕೆ ವಿಜಯಶ್ರೀ ಮಾಲೆ ಹಾಕುವ ಲಕ್ಷಣಗಳು ಕಂಡುಬರಹತ್ತಿದವು. ಇದನ್ನು ಕೇಳುತ್ತಿದ್ದ ಚಂದಲಾದೇವಿಗೆ ಆನಂದವಾಗುತ್ತಿತ್ತು. ಉದಯಾದಿತ್ಯದೇವರು ಮಾತ್ರ ಎಂದಿನಂತೆ ಅನಾಸಕ್ತರಾಗಿಯೇ ಇರುತ್ತಿದ್ದರು.

ಇದ್ದಕಿದ್ದಂತೆ ಏನಾಯಿತೋ ಏನೋ ಲಚ್ಚವಿ ದೇಹಾಲಸ್ಯದಿಂದ ಬಳಲಿ ಹಾಸಿಗೆಯನ್ನೇ ಹಿಡಿದಳು. ರಾಜವೈದ್ಯರ ಒಂದು ತಂಡವೇ ಅಂತಃಪುರದಲ್ಲಿ ಹಗಲಿರುಳೂ ಅವಳ ಶುಶ್ರೂಷೆಯಲ್ಲಿ ಲಕ್ಷ್ಯವನ್ನು ಪೂರೈಸಹತ್ತಿತು. ಆದರೂ ಅವಳು ಇಂತಹದೇ ವ್ಯಾಧಿಯಿಂದ ಬಳಲುವಳೆಂದು ನಿರ್ದಿಷ್ಟವಾಗಿ ಹೇಳಲು ಬರಲಿಲ್ಲ. ರಾಜಕ್ಷಯವೆಂದು ಒಬ್ಬ ಅರಮನೆಯ ವೈದ್ಯರು ಸಂಶಯ ತಾಳಿ ಉಪಚಾರವನ್ನು ನಡೆಸಿದರು. ಉದಯಾದಿತ್ಯರು ಚಿಂತಾತುರರಾಗಿ ಅವಳ ಹಾಸಿಗೆಯ ಬಳಿಯೇ ಇರಹತ್ತಿದರು. ವೈದ್ಯರು ಅವಳಿಂದ ಸ್ವಲ್ಪ ದೂರ ಇರಲು ಮಹಾಮಂಡಳೇಶ್ವರರಿಗೆ ಮೊದಲು ಸೂಚಿಸಿದಾಗ ಅವರು ನಿರಾಕರಿಸಿದರೂ ನಂತರ ಅನತಿದೂರದಲ್ಲಿ ನಿಂತು ಉಪಚಾರದ ಯೋಗಕ್ಷೇಮವನು ನೋಡಿಕೊಳ್ಳಹತ್ತಿದರು. ಆರು ತಿಂಗಳಲ್ಲಿ ಲಚ್ಚವಿ ಮೊದಲಿನ ಲಚ್ಚವಿ ಆಗಿರಲಿಲ್ಲ. ಅವಳ ಮೊದಲಿನ ಮುಖ ಸೌಷ್ಠವ, ದೇಹಸೌಂದರ್ಯ ಈಗ ಉಳಿದಿರಲಿಲ್ಲ. ಹಾಸಿಗೆಯಲ್ಲಿಯೇ ಎದ್ದು ಕೂಡುವಷ್ಟು ಶಕ್ತಿ ಬಂದಿದ್ದರೂ ಅವಳೀಗ ಉದಯಾದಿತ್ಯರ ಪಾಲಿಗೆ ನಿದಾಗ ನಿರತೆಯಾಗಿದ್ದಳು. ಆ ಅಂತಃಪುರದಲ್ಲಿ ಅವರಿಗೆ ಈಗ ಮೊದಲಿನಷ್ಟು ಆಸಕ್ತಿ ಉಳಿದಿರಲಿಲ್ಲ. ಈಗ ಅವರು ಹೆಚ್ಚಿನ ಸಮಯವನ್ನು ಚಂದಲಾದೇವಿಯ ಸಾಮೀಪ್ಯದಲ್ಲಿ ಕಳೆಯಲು ಹವಣಿಸಹತ್ತಿದರು. ಭೋಜನಕ್ಕೆ ಬಂದವರು ಎರಡೆರಡು ಗಂಟೆಗಳ ಕಾಲ ಇಲ್ಲಿಯೇ ಇರಹತ್ತಿದರಲ್ಲದೆ, ಮಂದಸ್ಮಿತರಾಗಿ ಸರಸಸಲ್ಲಾಪಗಳನ್ನಾಡಹತ್ತಿದರು. ಪತಿದೇವರಿಗೆ ಸಲ್ಲಬೇಕಾದ ಗೌರವಾದರಗಳಿಂದ ಚಂದಲಾದೇವಿ ಉದಯಾದಿತ್ಯರೊಡನೆ ನಡೆದುಕೊಳ್ಳುತ್ತಿದ್ದರೂ ಶೃಂಗಾರ ಚೇಷ್ಟೆಯ ಮಾತುಗಳು ಬಂದಾಗ ಶೀತಲವಾದ ಶಿಲೆಯಂತೆ ಮೌನವಾಗಿ ಬಿಡುತ್ತಿದ್ದಳು.

ಅವಳಿಗೆ ತಾನು ಏಕಾಕಿಯಾಗಿ ಕಳೆದ ರಾತ್ರಿಗಳ ನೆನಪು ಬರಹತ್ತಿತು. ನಿರ್ಜರವಾದ ಇರುಳು ಪ್ರತಿ ರಾತ್ರಿ ಅಂತಃಪುರಕ್ಕೆ ದಾಳಿಯಿಕ್ಕಿ ಅಂತಃಪುರವೇ ನಿದ್ರಾವಶವಾಗುವಂತೆ ಮಾಡುತ್ತಿದ್ದರೂ, ಉದಯಾದಿತ್ಯದೇವರ ಆಗಮನಕ್ಕಾಗಿ ಕಣ್ಣರಳಿ ನಿತಾಂತದಲ್ಲಿ ಕಾಯುತಿದ್ದ ತನ್ನನ್ನು ಮಾತ್ರ ಜಯಿಸುವದು ಅದಕ್ಕಾಗಲಿಲ್ಲವೆಂಬ ಮಾತು ಅಭಿಮಾನವನ್ನು ತಂದರೂ ಅಭಿಮಾನದ ಹಿಂದಿದ್ದ ವ್ಯಥೆಯನ್ನು ಕುರಿತು ಅವಳ ಹೃದಯ ಕೊರೆಯುತ್ತಿತ್ತು. ಮಂಚಗಳ ಮೇಲೆ ಸಿಂಗಾರಗೊಂಡ ಸುಪ್ಪತ್ತಿಗೆಗಳು ಉದಯಾದಿತ್ಯರ ಆಗಮನಕ್ಕಾಗಿ ಕಾಯ್ದು ಕಾಯ್ದು ಕಾತರಗೊಂಡು ತೂಕಡಿಸುತ್ತಿರುವಾಗ ತಾನು ತೂಲಿಕೆಯ ಮೇಲೆ ತನ್ನ ಮೃದುವಾದ ಬೆರಳುಗಳನ್ನಾಡಿಸಿ "ಬರುವವರು ಬಂದಾಗ ನೀನು ಆವ್ಹಾನಿಸಬಿಟ್ಟರೂ ಬರುವೆ. ಏಕಾಕಿಯಾಗಿ ನಾನೀಗ ಬರಲಾರೆ. ನನ್ನ ಜೊತೆಗೆ



ನೀನೇಕೆ ವೃಥಾ ರಾತ್ರಿಗಳನ್ನು ಕಳೆಯುವಿ? " ಎಂದು ಹೇಳುತ್ತಿದ್ದ ಮಾತುಗಳು ನೆನಪಿಗೆ ಬಂದಾಗ ಆ ವಿರಹವ್ಯಥೆ ಭೂತಾಕಾರವಾಗಿ ಎದುರು ನಿಲ್ಲುತ್ತಿತ್ತು. ತಾರುಣ್ಯದ ಆರು ವರುಷಗಳನ್ನು ರಸಿಕ ಚಕ್ರವರ್ತಿ ಉದಯಾದಿತ್ಯದೇವರ ಸರಸಸಾಮೀಪ್ಯದಲ್ಲಿ ಕಳೆದ ಚಂದಲಾದೇವಿಗೆ ಒಂದು ವರುಷದಿಂದಲೂ ಏಕಾಕಿಯಾಗಿ ರಾತ್ರಿಗಳನ್ನು ಕಳೆಯಬೇಕಾದ ಪ್ರಸಂಗ ಬಂದದ್ದರಿಂದ ಜೀವನವೇ ಹೇಸಿಕೆ ಅನಿಸಿತ್ತು. ಹೀಗಾಗಿ ಉದಯಾದಿತ್ಯದೇವರು ಈಗ ಚಂದಲಾದೇವಿಯೊಡನೆ ಎಷ್ಟೇ ಪ್ರಣಯದ ಮಾತುಗಳನ್ನಾಡಲು ಪ್ರಯತ್ನಿಸುತ್ತಿದ್ದರೂ ಅವಳು ಅರಿಯದ ಹಸುಳೆಯಂತೆ ನಸುನಕ್ಕು ಮಾತನ್ನು ನಗೆಯಲ್ಲಿ ತೇಲಿಸಿಬಿಡಹತ್ತಿದಳು.

ನಿಕೃಷ್ಟ ಜಾತಿಗೆ ಸೇರಿದ, ಮಜ್ಜಾಮಾಂಸಗಳನ್ನು ತಿನ್ನುವ, ಮದಿರಾಪಾನವನ್ನು ಮೆಚ್ಚುವ ಹೆಣ್ಣೊಂದರ ನಾಟ್ಯಕಲೆಗಿಂತಲೂ ಅವಳ ಅಂಗಸೌಷ್ಠವಕ್ಕೆ ಪರಾಜಿತರಾದ ಉದಯಾದಿತ್ಯದೇವರನ್ನು ನೋಡಿದಾಗ ಚಂದಲಾದೇವಿಗೆ ಕಸಿವಿಸಿಯಾಗುತ್ತಿತ್ತು. ಪತಿಧರ್ಮ ಮತ್ತು ರಾಜ್ಯಭಾರಗಳನ್ನರಿತ ಚಂದಲಾದೇವಿ ಮೌನಿಯಾಗಿಯೇ ಎಲ್ಲವನ್ನೂ ಸಹಿಸಿ ಶಾಂತವದನದಿಂದ ಉದಯಾದಿತ್ಯರೊಡನೆ ನಡೆದುಕೊಳ್ಳುದ್ದಳು. ಈಗೀಗ ಉದಯಾದಿತ್ಯರು ರಾಜ್ಯಭಾರದಲ್ಲಿ ಲಕ್ಷ್ಯವನ್ನು ಪೂರೈಸಹತ್ತಿದರು.

ಲಚ್ಚವಿಯ ಗೆಜ್ಜೆಗಳ ಧ್ವನಿಗೆ ಮಾರುಹೋಗಿ ಅವಳ ಗುಲಾಮರಾದ ಕ್ಷಣದಿಂದ ಕದಂಬ ರಾಜ್ಯದ ಸಕಲ ಕಾರ್ಯಕಲಾಪಗಳನ್ನು ಚಂದಲಾದೇವಿಯೇ ನಿರ್ವಹಿಸುತ್ತಿರುವದನ್ನರಿತ ಉದಯಾದಿತ್ಯರು ಈಗಷ್ಟೇ ಚನ್ನಿಗಂಟೆಯೇ ಅಲೆಯುವದನ್ನು ನೋಡುತ್ತಿದ್ದ ಅಂತಃಪುರವು ಮನಸಿನಲ್ಲಿಯೇ ನಗುತ್ತಿತ್ತು. ರಾಜ್ಯವೆನೋ ಉದಯಾದಿತ್ಯದೇವರ ಹೆಸರಿನಲ್ಲಿದ್ದರೂ ಅವರು ಲಚ್ಚವಿಯ ದಾಸರಾಗಿ ಅವಳ ಸಾಮೀಪ್ಯದಲ್ಲಿಯೇ ತಮ್ಮ ಹಗಲಿರುಳುಗಳನ್ನು ಕಳೆಯುತ್ತಿರುವರೆಂಬ ಮಾತು ಕದಂಬ ಪ್ರಜೆಗಳ ಕಿವಿಯವರೆಗೆ ಹೋಗಿತ್ತಲ್ಲದೇ ಚಾಲುಕ್ಯ ಸಮ್ರಾಟರ ವರೆಗೂ ಅದು ತಲುಪಿತ್ತು. ಆದರೂ ಉದಯಾದಿತ್ಯದೇವರಿಗೆ ಮಹಾಮಂಡಳೇಶ್ವರರ ಗೌರವವೇ ಅರಮನೆಯಲ್ಲಿ ಸಲ್ಲುತ್ತಿತ್ತು. ಚಂದಲಾದೇವಿಯೇ ಇದಕ್ಕೆ ಕಾರಣಳು. ಅವಳೆಂದೂ ತುಟಿಗಳನ್ನಗಲಿಸಿ ಪತಿದೇವರ ಬಗ್ಗೆ ಒಂದು ಕಹಿ ಶಬ್ದವನ್ನೂ ಆಡಿರಲಿಲ್ಲ. ಅತ್ತಿಗೆಯ ವ್ಯಥೆಗಾಗಿ ವಿಕ್ರಮಾದಿತ್ಯದೇವರು ಮತ್ತು ಸೋಮೇಶ್ವರದೇವರು ಮರುಗುತ್ತಿದ್ದರೂ, ಚಂದಲಾದೇವಿ ಅವರಿಗೆ ತನ ವ್ಯಥೆಯ ಕಥೆಯನ್ನು ಆದೆಂದೂ ಹೇಳಿರಲಿಲ್ಲ.

ಒಂದು ದಿವಸ ಉದಯಾದಿತ್ಯದೇವರು ಚಂದಲಾದೇವಿಗೆ "ಚಂದಲಾ ನನ್ನನ್ನು ಕ್ಷಮಿಸಲಾರೆಯಾ ?" ಎಂದು ಪ್ರಾರ್ಥಿತ ಸ್ವರದಲ್ಲಿ ಕೇಳಿದರು.

"ಕ್ಷಮಿಸಲು ನಾನಾರು ! ನಾನು ನಿಮ್ಮ ಚರಣದಾಸಿ !! ಸ್ವಾಮಿ ಮಧುಕೇಶ್ವರನೇ ಕ್ಷಮಿಸಲರ್ಹನಾದ ವ್ಯಕ್ತಿ" ಎಂದಳು, ಚಂದಲಾದೇವಿ.

"ಸ್ವಾಮಿ ಕ್ಷಮಿಸುವದಂತೂ ಇದ್ದೇ ಇದೆ. ಆದರೆ ನಾವು ನಿನಗೆ ಅನ್ಯಾಯವನ್ನು ಮಾಡಿದ್ದರಿಂದ ನಿನ್ನಲ್ಲಿ ಕ್ಷಮೆ ಕೋರುತ್ತೇನೆ."

"ಸತಿಯಾದ ನಾನು ಪತಿಯ ಪಾಪಪುಣ್ಯಗಳಲ್ಲಿ ಪಾಲುಗಾರಳಾಗಿರುವದರಿಂದ ನಾನು ಕ್ಷಮಿಸುವ ಮಾತೇ ಇಲ್ಲ ದೇವಾ ! ಪತಿ ಅದೆಂದೂ ಸತಿಯ ಕ್ಷಮೆ ಕೇಳಬಾರದು. ನಿಮ್ಮನ್ನು ನಾನು ಅಪರಾಧಿ ಎಂದು ಅದೆಂದೂ ಪರಿಗಣಿಸಿಲ್ಲ. ಆದರೆ...ಆದರೆ... ದೇವಾ...ಕದಂಬ ಪ್ರಜೆಗಳು ನಿಮ್ಮನ್ನು ಕ್ಷಮಿಸಬೇಕು. ಆ ಕದಂಬಕುಲಸ್ವಾಮಿ ಮಧುಕೇಶ್ವರನು ನಿಮ್ಮನ್ನು ಕ್ಷಮಿಸಬೇಕು" ಎಂದಳು.

"ಚಂದಲಾ, ನನ್ನ ಪಾಲಿಗೆ ನೀನು ದೇವರು. ನೀನು ಕ್ಷಮಿಸಿದರೆ ಕದಂಬ ರಾಜ್ಯವೇ ಕ್ಷಮಿಸಿದಂತೆ. ನೀನು ಕ್ಷಮಾಶೀಲಳೆಂದು ನನಗೆ ಗೊತ್ತು. ನಾನು ಮಾಡಿದ ಅನ್ಯಾಯದ ಪರಿಮಾರ್ಜನೆಗಾಗಿ ನಾನು ಜೀವನದುದ್ದಕ್ಕೂ ನಿನ್ನ ಸೇವೆ ಮಾಡಿದರೂ ಆ ಋಣ ಪರಿಹಾರವಾಗದೆಂದು ನಾನರಿತಿರುವೆ" ಎಂದರು. ಆಗ ಅವಳ ಕಣ್ಣುಗಳು ಕಂಬನಿದುಂಬಿದ್ದವು.

ಚಂದಲಾದೇವಿ ಆ ಕ್ಷಣವೇ ಉದಯಾದಿತ್ಯದೇವರ ಪಾದಗಳ ಮೇಲೆ ತನ್ನ ಬೆರಳುಗಳನ್ನಿಡುತ್ತ "ದೇವಾ, ನೀವು ಹಾಗೆ ಮಾತನಾಡಬಾರದು, ಸತಿಗೆ ಪತಿಯೇ ಪರದೈವವಾದ್ದರಿಂದ ಅವಳೇ ನಿಮ್ಮ ಸೇವೆಯನ್ನು ಮಾಡಬೇಕು. ಸಂಗ್ರಾಮದಲ್ಲಿ ಸಾವಿರ ಸಾವಿರ ಅಲಗುಗಳನ್ನು ಕಿವಿಚಿಕೊಂಡಾಗಲೂ ಕಂಬನಿಗಳನ್ನು ಕಾಣದ ಈ ಚಕ್ಷುಗಳಲ್ಲಿ ಕಂಬನಿಗಳು ಬರಬಾರದು." ಎಂದು ಚಂದಲಾದೇವಿ ಉದಯಾದಿತ್ಯದೇವರ ಕಂಬನಿಗಳನ್ನು ಒರೆಸಿದಳು. ಆಗ ಉದಯಾದಿತ್ಯದೇವರು ಮೃದುವಾಗಿ ಚಂದಲಾದೇವಿಯ ಹಸ್ತಗಳ ಮೇಲೆ ತಮ್ಮ ಬೆರಳುಗಳನ್ನಾಡಿಸಿದರು. ಆಗ ಚಂದಲಾದೇವಿಗೆ ಪತಿಯನ್ನಪ್ಪಿಕೊಂಡು ಅವರ ಹೃದಯದಲ್ಲಿ ತನ್ನ ತಲೆಯನ್ನಡಗಿಸಿ ಅವರಿಂದ ಸಾವಿರ ಮುತ್ತುಗಳ ಕಪ್ಪುಕಾಣಿಕೆಗಳನ್ನು ಪಡೆಯಲೇನೋ ಎನಿಸಿತು. ಯಾವ ಒಂದು ನೋಟಕ್ಕಾಗಿ ಈ ಕಾಲ ಪರಿತಪಿಸಿ ವ್ಯಥೆಪಟ್ಟಳೋ ಆ ನೋಟ ಇಂದು ತನ ತೋಳತೆಕ್ಕೆಯಲ್ಲಿಯೇ ಸಿಲುಕಲು ಸಿದ್ಧವಾಗಿರುವಾಗ, ಅದನ್ನಪ್ಪಿಕೊಂಡು

ಕಳೆದುಹೋದ ಅಮೂಲ್ಯ ರತ್ನವನ್ನು ಮರಳಿ ಪಡೆಯಲೇನೋ ಎಂದು ಚಂದಲಾದೇವಿಯ ಮನಸ್ಸು ಒಂದು ಕ್ಷಣ ತೂಗುಯ್ಯಾಲೆಯಾಡಿತು. ಮರುಕ್ಷಣವೇ ಏನಾಯಿತೋ ಏನೋ ಉದಯಾದಿತ್ಯರ ಹಸ್ತವನ್ನು ಮೆಲ್ಲನೆ ಸರಿಸಿ ಹಿಂದಕ್ಕೆ ಸರಿದಳು. ಅಂದು ಉದಯಾದಿತ್ಯರಿಗೆ ಅಮಿತ ಆನಂದವಾಯಿತು. ಚಂದಲಾದೇವಿಯೊಡನೆ ಅಂದು ಭೋಜನವನ್ನು ಸ್ವೀಕರಿಸುವಾಗ ಹಳೆಯ ಸ್ಮೃತಿಗಳನ್ನು ನೆನೆಸಿಕೊಂಡು ತಾವಿನ್ನು ಪೂರ್ವದ ಉದಯಾದಿತ್ಯರಾಗುವೆವೆಂಬ ಭರವಸೆ ಕೊಟ್ಟರು; ಪದೇ ಪದೇ ಚಂದಲಾದೇವಿಯ ಕ್ಷಮೆಯನ್ನು ಕೋರಿದರು. ಚಂದಲಾದೇವಿ ತನ ವಿಶಾಲವಾದ ನಗೆಯಲ್ಲಿ ಮಾತುಗಳನು ತೇಲಿಸಿ ನೇರವಾದ ಉತ್ತರವನ್ನೇ ಕೊಡುತ್ತಿರಲಿಲ್ಲ. ಆದರೂ ಚಂದಲಾದೇವಿ ಪತಿದೇವರೊಡನೆ ಮನ ಬಿಚ್ಚಿ ಮಾತನಾಡಹತ್ತಿದಳು.

ಭೋಜನ ಮುಗಿದ ಮೇಲೆ ಚಂದಲಾದೇವಿ ಪತಿದೇವರಿಗೆ ತಾಂಬೂಲವನ್ನೀಯುತ್ತಿರುವಾಗ ಹರಿಕಾರನೊಬ್ಬ ಬಂದು ಮರುದಿವಸ ಪ್ರಾತಃಕಾಲದಲ್ಲಿ ವಿಕ್ರಮಾದಿತ್ಯದೇವರು ಮತ್ತು ಸೋಮೇಶ್ವರದೇವರು ಕದಂಬ ಸೈನ್ಯದೊಂದಿಗೆ ವಿಜೇತರಾಗಿ ಬನವಾಸಿಗೆ ಬರುವ ಸಂದೇಶವನ್ನು ಅರುಹಿದನು. ಆಗ ಚಂದಲಾದೇವಿಗೆ ಅಪಾರ ಸಂತೋಷವಾಯಿತು. ಪತಿ ಉದಯಾದಿತ್ಯದೇವರ ಮುಖವನ್ನು ನೋಡಿ ಮಂದಹಾಸ ಬೀರುತ್ತ "ದೇವಾ ಕದಂಬ ರಾಜ್ಯದ ಮಾನ ಉಳಿಯಿತು. ಚಾಲುಕ್ಯ ಸಾಮ್ರಾಟರ ಮಾತನ್ನು ಅವರ ಮಹಾಮಂಡಳೀಕರಾದ ನಾವು ನಡೆಸಿದಂತಾಯಿತು. ಮಧುಕೇಶ್ವರಸ್ವಾಮಿ ಮತ್ತು ಗರುಡೇಶ್ವರಸ್ವಾಮಿಗೆ ಮಹಾಪೂಜೆಗಳು ನಡೆಯಬೇಕಲ್ಲದೆ ನಾಳೆ ಸೂರ್ಯೋದಯಕ್ಕೆ ಆಗಮಿಸುವ ಕದಂಬ ಸೈನ್ಯಕ್ಕೆ ಅಭೂತಪೂರ್ವ ಸ್ವಾಗತವು ದೊರೆಯಬೇಕು." ಎಂದು ಒಂದೇ ಉಸುರಿನಲ್ಲಿ ಹೇಳಿದಾಗ ಅವಳಿಗಾದ ಅಪಾರ ಆನಂದ ಅವಳ ಮುಖದಲ್ಲಿ ನಾಟ್ಯವಾಡುತ್ತಿತ್ತು. ಕದಂಬ ರಾಜ್ಯದ ಮೇಲಿರುವ ಪತ್ನಿಯ ಅಭಿಮಾನ ಮತ್ತು ಕದಂಬ ಸೈನಿಕರು ತಂದ ವಿಜಯವನ್ನು ನೋಡಿ ಉದಯಾದಿತ್ಯದೇವರಿಗೆ ಪರಮ ಸಂತಸವಾಯಿತು. ಮರುಕ್ಷಣವೇ ವಿಜೇತರಾಗಿ ಬರುವವರಲ್ಲಿ ತಾವಿರಬೇಕಿದ್ದು ಕರ್ತವ್ಯಚ್ಯುತಿಯಿಂದ ತಮ್ಮ ಸೋದರರು ಇರುವರಲ್ಲಾ ಎಂದು ವಿಷಣ್ಣವದನರಾದರು. ಪತಿದೇವರ ಮುಖದಲ್ಲಿ ಕ್ಷಣಾರ್ಧದಲ್ಲಿಯೇ ಆದ ವ್ಯತ್ಯಾಸವನ್ನು ನೋಡಿ "ದೇವಾ ನಿಮಗೆ ಸಂತೋಷವಾಗಿಲ್ಲವೆ?" ಎಂದು ಕೇಳಿದಳು ಅವರ ಬಳಿ ಬಂದು. "ಹಾಗೆಂದರೇನು ಚಂದಲಾ. ಕದಂಬ ರಾಜರಾಜೇಶ್ವರಿಗೆ ಆನಂದವಾದಾಗ ಅವಳ ಪತಿಗೆ ಆನಂದವಾಗುವದಿಲ್ಲವೆಂದರೇನು?" ಎಂದು ಮುಖದಲ್ಲಿ ಬಲವಂತವಾಗಿ ಪ್ರಸನ್ನತೆಯನ್ನು ತರಲು ಪ್ರಯತ್ನಿಸಿದರು. ಪತಿಯ ವ್ಯಥೆಯನ್ನು ಅರ್ಥಮಾಡಿಕೊಂಡ ಚಂದಲಾದೇವಿ, "ದೇವಾ, ನಾಳೆ ನೀವು ಸ್ವಾಗತಕ್ಕಾಗಿ ಸಿದ್ಧರಾಗಬೇಕು" ಎಂದಳು. ಉದಯಾದಿತ್ಯದೇವರು "ಚಂದಲಾ, ನೀನು ಹೇಳಿದಂತೆಯೇ ಆಗಲಿ. ನಿನ್ನ ಮಾತನ್ನು ಮೀರಿ ನಡೆಯುವ ಎದೆಗಾರಿಕೆ ಈ ಕದಂಬ ರಾಜ್ಯದಲ್ಲಿ ಯಾರಿಗಿದೆ?" ಎಂದು ನಕ್ಕರು. "ದೇವಾ ನೀವು ಮೊದಲಿನಂತಾದಿರಲ್ಲಾ ಎಂದು ನನಗೆ ಹರುಷ. ನನ್ನ ಪಾಲಿಗೆ ಇಂದು ಎರಡು ಗೆಲವುಗಳು!" ಎಂದು ಹೇಳಿ, ಮರುದಿವಸದ ಕಾರ್ಯಕ್ಕೆ ಅಣಿಮಾಡಲು ಆಜ್ಞೆಯಿತ್ತಳು. ಅಂದು ಅಂತಃಪುರದ ಕಣಕಣಗಳಲ್ಲಿಯೂ ವಿಜಯೋತ್ಸಾಹದ ಛಾಯೆ ಕಾಣುತ್ತಿತ್ತು.

ಅಂದಿನ ರಾತ್ರಿ ಭೋಜನಕ್ಕೆ ಚಂದಲಾದೇವಿ ರಾಜ್ಯದ ಹಲವಾರು ಪ್ರಮುಖ ಅಧಿಕಾರಿಗಳನ್ನು ಆಹ್ವಾನಿಸಿದಳು. ಉದಯಾದಿತ್ಯದೇವರನ್ನು ಮುಖ್ಯ ಪೀಠದಲ್ಲಿ ಕುಳ್ಳಿರಿಸಿ ತಾನು ಅವರ ಪಾರ್ಶ್ವದಲ್ಲಿ ಮಹಾಮಂಡಳೇಶ್ವರಿಯಾಗಿ ವಿಶ್ರಮಿಸಿದ್ದಳು ಚಂದಲಾದೇವಿ! ಹಿತ-ಮಿತಿಗಳನ್ನರಿತು ತಾನು ಮಾತನಾಡುತ್ತಿದ್ದರೂ ಉದಯಾದಿತ್ಯದೇವರೇ ಅತ್ಯಧಿಕವಾಗಿ ಮಾತನಾಡುವಂತೆ ಚಂದಲಾದೇವಿ ಅವಕಾಶವನ್ನು ಕಲ್ಪಿಸಿಕೊಟ್ಟಳು. ತಾನೇ ಉದಯಾದಿತ್ಯದೇವರನ್ನು ಮಹಾಮಂಡಳೇಶ್ವರರೆಂದು ಬೋಧಿಸಿ ಸಕಲರಿಗೂ ಅವರು ಮೊದಲಿನ ಮಹಾಮಂಡಳೇಶ್ವರರಾಗಿರುವರೆಂಬ ಪ್ರಜ್ಞೆಯನ್ನು ತಂದುಕೊಟ್ಟಳು. ಅವರಿಗೂ ಇದರಿಂದ ಆನಂದವಾಯಿತು. ಸಭೆ ಮುಗಿದಾಗ ರಾತ್ರಿ ಅರಳಹತ್ತಿತ್ತು. ಮರುದಿವಸದ ಸಿದ್ಧತೆಗಾಗಿ ಎಲ್ಲರೂ ಎದ್ದಾಗ ಉದಯಾದಿತ್ಯದೇವರು ಚಂದಲಾದೇವಿಯೊಡನೆ ಅವಳ ಅಂತಃಪುರಕ್ಕೆ ಹೋದರು. ಚಂದಲಾದೇವಿಯ ಅಂತಃಪುರವನ್ನು ಅವರು ಕಾಣುತ್ತಿರುವುದು ವರುಷ ಒಂದರ ಮೇಲಾಗಿದ್ದರೂ ಚಂದಲಾದೇವಿ ಮಾತ್ರ ವಿವಾಹ ಮಾಡಿಕೊಂಡು ಬಂದ ದಿವಸದ ವಧುವಿನಷ್ಟೇ ಚೆಲುವಾಗಿ ಕಾಣಹತ್ತಿದಳು ಉದಯಾದಿತ್ಯದೇವರಿಗೆ! ಅವರ ಪರಿಚಿತ ತೂಲಿಕೆಗಳು ಅವರನ್ನು ಆದರದಿಂದ ಸ್ವಾಗತಿಸಿದವು. ಮಹಾಮಂಡಳೇಶ್ವರರನ್ನು ಕಾಣದ ಮಂಚಗಳೆರಡೂ ಮಹಾಮಂಡಳೇಶ್ವರರು ಬಂದು ಕುಳಿತಾಗ ತಾವಿನ್ನು ಧನ್ಯ ಎಂದು ಅಂದುಕೊಂಡವು. ಚಂದಲಾದೇವಿಯತ್ತ ಹೊರಳಿ "ದೇವಿ, ಬರುವವರು ಬಂದಾಗ ಬರುವೆ ಎಂದು ಹೇಳಿದ ಮಾತನ್ನು ನಾವೀಗ ನಿನಗೆ ನೆನಪು ಮಾಡಿಕೊಡುತ್ತೇವೆ. ಮಹಾಮಂಡಳೇಶ್ವರರು ಬಂದಿದ್ದಾರೆ" ಎಂದು ಮಂಚಗಳು ಚಂದಲಾದೇವಿಗೆ ಹೇಳಿದವು. ಚಂದಲಾದೇವಿ, "ದೇವಾ. ತಾವಿನ್ನು ವಿಶ್ರಮಿಸಬೇಕು. ನಾವು ಬ್ರಾಹ್ಮೀಮುಹೂರ್ತಕ್ಕೆ ಏಳಬೇಕಲ್ಲ ಎಂದು, ಹೇಳಿ ಅವರಿಗೆ ಮಂಚದ ಮೇಲೆ ಪವಡಿಸಲು ಹೇಳಿ ತಾನು ಕೆಳಗೆ ಹಾಸಿದ ಚಾಪೆಯ ಮೇಲೆ ಮಲಗಿದಳು. ಅದನ್ನು ನೋಡಿದ ಉದಿಯಾದಿತ್ಯದೇವರು ಮಂಚದಿಂದ ಎದ್ದು ಬಂದು "ಇದೇನು ದೇವಿ?" ಎಂದು ಅಂದರು. ಅವರಿಗೆ ತಮ್ಮ ತಪ್ಪಿನ ಅರಿವಾಗಿತ್ತು. "ಇದೇನಿಲ್ಲ ದೇವಾ. ಇದು ನನ್ನ ನಿತ್ಯದ ಹಾಸಿಗೆ" ಎಂದಳು.

"ಚಂದಲಾ, ನನ್ನನ್ನು ಕ್ಷಮಿಸು. ಯಾವುದೋ ವಿಷಗಾಳಿಗೆ ಸಿಕ್ಕು ನಾನು ವ್ಯಾಮೋಹಿತನಾದೆ. ಇನ್ನು ನಾನೆಂದೂ, ಆ ತಪ್ಪು ಹೆಜ್ಜೆಯನ್ನಿಡಲಾರೆ" ಎಂದು ಹೇಳುತ್ತ ಚಂದಲಾದೇವಿಯನ್ನು ಅಪ್ಪಿಕೊಳ್ಳಲು ಹೋದರು.

ಚಂದಲಾದೇವಿ ಅವರ ತೋಳತೆಕ್ಕೆಗೆ ಸಿಲುಕದೆ "ದೇವಾ, ನೀವೆಂದು ಆ ಲಚ್ಚವಿಯಲ್ಲಿ ಆಸಕ್ತರಾದಿರೋ ಅಂದೇ ನಿಮ್ಮನು ನಾನು ಸೋದರನೆಂದು ಭಾವಿಸಿದ್ದೇನೆ. ನನಗೆ ನೀವು ಬೇರೆಯಲ್ಲ. ಸೋಮೇಶ್ವರದೇವರು ಮತ್ತು ವಿಕ್ರಮಾದಿತ್ಯದೇವರು ಬೇರೆಯಲ್ಲ! ಲೋಕದ ಕಣ್ಣುಗಳಿಗೇನೋ ನಾವು ಸತಿ-ಪತಿ; ಆದರೆ ಭೋಗದ ಕಣ್ಣುಗಳಿಗೆ ಮಾತ್ರ ಸೋದರ-ಸೋದರಿಯರು!!" ಎಂದು ಚಂದಲಾದೇವಿ ಹೇಳಿದಾಗ ಚಂದಲಾದೇವಿಯ ಛಲವನ್ನು ಅರ್ಥಮಾಡಿಕೊಂಡ ಉದಯಾದಿತ್ಯರು ದೂರ ಸರಿದರು.

ಮರುದಿವಸ ಕದಂಬ ಸೈನ್ಯದ ಧೂಳಿ ಬನವಾಸಿಯತ್ತ ಬರುತ್ತಿರುವಾಗ ಮಹಾಮಂಡಳೇಶ್ವರ ಉದಯಾದಿತ್ಯದೇವರು ಮತ್ತು ಮಹಾಮಂಡಳೇಶ್ವರಿ ಚಂದಲಾದೇವಿ ಪುರವಾಸಿಗಳೊಂದಿಗೆ ವಿಕ್ರಮಾದಿತ್ಯದೇವರ ನೇತೃತ್ವದಲ್ಲಿ ವಿಜೇತರಾಗಿ ಬರುತ್ತಿರುವ ಕದಂಬ ಸೈನ್ಯವನ್ನು ಸ್ವಾಗತಿಸಿದರು. ಸೈನ್ಯಕ್ಕಲ್ಲದೆ, ಸೋದರರೀರ್ವರಿಗೂ ತಮ್ಮ ಅಗ್ರಜರಾದ ಉದಯಾದಿತ್ಯದೇವರು ಅತ್ತಿಗೆ ಚಂದಲಾದೇವಿಯ ಪುಣ್ಯದಿಂದ ಮೊದಲಿನ ಉದಯಾದಿತ್ಯದೇವರಾದರಲ್ಲಾ ಎಂದು ಆನಂದವಾಯಿತು. ಅವರು ಹರ್ಷಾತಿರೇಕದಿಂದ ಕೂಗುತ್ತಿರುವಾಗ ಉದಯಾದಿತ್ಯದೇವರಿಗೆ ತಾವು ಮಹಾಮಂಡಳೇಶ್ವರರೆಂಬ ಅಭಿಮಾನ ಉಕ್ಕಿ ಬಂದಿತು.

ಆದರೆ ಮರುದಿವಸ ಚಾಲುಕ್ಯ ಸಮ್ರಾಟರಿಂದ ಉದಯಾದಿತ್ಯದೇವರನ್ನು ಪದಚ್ಯುತಗೊಳಿಸಿ ವಿಕ್ರಮಾದಿತ್ಯದೇವರನ್ನು ಸಿಂಹಾಸನದಲ್ಲಿ ಕುಳ್ಳಿರಿಸುವ ಆಜ್ಞೆ ಬಂದಾಗ ಚಂದಲಾದೇವಿಗೆ ಎಳ್ಳಷ್ಟೂ ಆಶ್ಚರ್ಯವಾಗಲಿಲ್ಲ. ವಿಕ್ರಮಾದಿತ್ಯದೇವರು ಸಿಂಹಾಸನವನ್ನು ಅಲಂಕರಿಸಿದ ಮೇಲೆ ಅಣ್ಣಂದಿರಾದ ಉದಯಾದಿತ್ಯದೇವರು ಮತ್ತು ಅತ್ತಿಗೆ ಚಂದಲಾದೇವಿ ಅದೇ ಅಂತಃಪುರದಲ್ಲಿ ಇರಬೇಕೆಂದು ಪರಿಪರಿಯಾಗಿ ಪ್ರಾರ್ಥಿಸಿಕೊಂಡರೂ ಚಂದಲಾದೇವಿ ಒಪ್ಪಲಿಲ್ಲ.

"ಈ ಅಂತಃಪುರಕ್ಕೆ ಈಗ ಬೇರೊಬ್ಬ ಒಡತಿ ಬರಬೇಕು ನಮ್ಮ ಸ್ಥಾನ ಇಲ್ಲಿಲ್ಲ" ಎಂದು ಹೇಳಿ ಉದಯಾದಿತ್ಯದೇವರೊಡನೆ ಬೇರೊಂದು ಸೌಧಕ್ಕೆ ಹೊರಟಳು ಚಂದಲಾದೇವಿ. ಆರು ವರ್ಷಗಳ ಸಂಬಂಧವನ್ನು ಕತ್ತರಿಸಿ ಪತಿ ಉದಯಾದಿತ್ಯರೊಡನೆ ಬೇರೆ ಸೌಧಕ್ಕೆ ತೆರಳುವಾಗ ಚಂದಲಾದೇವಿ ನೂತನ ಮಹಾಮಂಡಳೇಶ್ವರರಾದ ವಿಕ್ರಮಾದಿತ್ಯದೇವರಿಗೆ "ನಾವೀರ್ವರೂ ಇನ್ನು ಕದಂಬ ಪ್ರಜೆ. ಕದಂಬ ಪ್ರಜೆಗಳಿಗೆ ಸಲ್ಲಬೇಕಾದ ನ್ಯಾಯವು ನಮಗೂ ಸಲ್ಲಬೇಕಲ್ಲದೇ, ರಾಜಮನೆತದವರೆಂಬ ವಿಶೇಷ ಗೌರವಾದರಗಳು ನಮಗಿನ್ನು ಸಲ್ಲಬೇಕಿಲ್ಲ" ಎಂದು ಹೇಳಿದಳು. ಆಗ ಕದಂಬ ರಾಜ್ಯಕ್ಕೆ ರಾಜ್ಯವೇ ಚಂದಲಾದೇವಿಯ ಛಲಕ್ಕೆ ತಲೆಬಾಗಿತು! ಪತಿ ಉದಯಾದಿತ್ಯದೇವರಂತೂ ಅದೆಂದೋ ಅವಳ ಛಲದಂಕೆಗೆ ಸೋತು ಅವಳ ಸೋದರರಾಗಿದ್ದರು!! ಬನವಾಸಿ ಸಂತಲಿಗೆ ನಾಡಿಗೆ ನಾಡೇ ಚಂದಲಾದೇವಿಯನ್ನು ಛಲದಂಕ ಚಂದಲಾದೇವಿ ಎಂದು ಕರೆಯಿತು!!!




ಸವರನ್ ಬೀಡಿ ಫ್ಯಾಕ್ಟರಿ
ಇವರಿಂದ
ಸಕಲರಿಗೂ ದೀಪಾವಳಿಯ
ಶುಭಾಶಯುಗಳು

# ಸ್ಪೇಷಲ್ ಸವರನ್

ಬೀಡಿಗಳಲ್ಲಿ ಅತ್ಯುತ್ತಮ
ಬೀಡಿಗಳು



ದೇಶದ ಅತಿ ಶ್ರೇಷ್ಠ ದರ್ಜೆಯ
ತಂಬಾಕಿನಿಂದ ತಯಾರಿಸಲ್ಪಡುತ್ತಿರುವ
ಜನಪ್ರಿಯ ಬೀಡಿಗಳು

ವ್ಯಾಪಾರಿಗಳಿಗೆ ಉತ್ತಮ ಅನುಕೂಲತೆಗಳು
ಬೇಗನೆ ಪತ್ರವ್ಯವಹಾರ ಮಾಡಿರಿ

## ಪಿ. ಸಯ್ಯದ್‌ಸಾಹೇಬ್ & ಸನ್ಸ್

ಸವರನ್ ಬೀಡಿ ಫ್ಯಾಕ್ಟರಿ, ಸಿ. ಬಿ. ಬಳ್ಳಾರಿ

# ಯುಟೆಕ್ಟಿಕ್ ಪಾಯಿಂಟ್

ಸೌ. ಸರಿತಾ ಕುಸುಮಾಕರ್

ಪ್ರೊ. ಶರ್ಮ ಉತ್ಸಾಹಿತರಾಗಿ ತನ್ಮಯತೆಯಿಂದ ರಸಾಯನಶಾಸ್ತ್ರದ ಪಾಠವನ್ನು ಎಮ್. ಎಸ್.ಸಿ. ವಿದ್ಯಾರ್ಥಿಗಳಿಗೆ ತಿಳಿಸಿ ಹೇಳತೊಡಗಿದ್ದರು. ಬಿ. ಎಸ್.ಸಿ. ಯಲ್ಲಿ ಕಲಿತ ಪಾಠವಾಗಿದ್ದುದರಿಂದಲೇ ಸದಾಶಿವನ ಧ್ಯಾನ ಆ ಕಡೆಗೆ ಕೇಂದ್ರೀಕೃತವಾಗಿರಲಿಲ್ಲ, ಅವನ ಚಿತ್ತಧಾರೆ ಬೇರೆಡೆಗೆ ಧಾವಿಸಿತ್ತು! ಪ್ರೊ. ಶರ್ಮ Phase rule ಹೇಳತೊಡಗಿದ್ದರು. "ಬೆಳ್ಳಿ ಪ್ರಕೃತಿಯಲ್ಲಿ ಸೀಸದ ಜೊತೆ ಅದಿರಿನ ರೂಪದಲ್ಲಿ ಸಿಕ್ಕುತ್ತದೆ. ಅದನ್ನು ಬೇರ್ಪಡಿಸುವ ವಿಧಾನವೆಂದು 'ಫೇಸ್. ರೂಲ್' ತತ್ವವನ್ನು ಅಳವಡಿಸಿಕೊಳ್ಳಲಾಗುತ್ತದೆ. ವಿಶಿಷ್ಟ ಉಷ್ಣತಾಮಾನ ಮತ್ತು ಒತ್ತಡಕ್ಕೆ ಅದಿರನ್ನು ಅಳವಡಿಸಿಕೊಂಡಾಗ ಬೆಳ್ಳಿ ಕರಗಿದ ಸೀಸದ ಮೇಲೆ ಏಕಕಾಲಕ್ಕೆ ಕನ್ನಡಿಯಂತೆ ಮಿಂಚಿ ಕೆನೆಯಾಗಿ ಬಂದುಬಿಡುತ್ತೆ. ಆ ವಿಶಿಷ್ಟ ಒತ್ತಡ ಮತ್ತು ಉಷ್ಣತೆಗೆ ಅದಿರಿನ 'Eutectic Point' ಅನ್ನುತ್ತಾರೆ;" ಪ್ರೊ. ಏನೇನೋ ಹರಟುತ್ತಿದ್ದಾರೆ ಎನಿಸಿತು ಸದಾಶಿವನಿಗೆ. ಬೇರೊಂದು Eutectic Point ಹೇಗೆ ಕಂಡುಹಿಡಿಯಬೇಕು. ಅದರ ವಿಧಾನ ಯಾವುದು ಎಂಬುದರಲ್ಲಿ ಮಗ್ನನಾಗಿ ಸಮಾಧಿಸ್ಥನಾಗಿದ್ದ ಸದಾಶಿವ!

ಪ್ರಕೃತಿಯೆಲ್ಲವೂ ಹೆಣ್ಣು, ಗಂಡಿನ ಆಧಿರಲ್ಲವೇ ಮಾನವೀಯ ಸುಖವೆಂಬುದು. ಈ ಹೆಣ್ಣು-ಗಂಡಿನ ಸಮನ್ವಯವಲ್ಲವೆ? ಇದಕ್ಕೇ ಪ್ರೀತಿ, ಪ್ರೇಮ ಎಂದು ಕರೆಯಬಹುದೇ ? ಒಂದು ಹೆಣ್ಣು ಒಂದು ಗಂಡನ್ನು ಪ್ರೀತಿಸುತ್ತಾಳೆ ಎಂಬುದನ್ನು ತಿಳಿಯುವುದಾದರೂ ಹೇಗೆ? ಸಂಬಂಧದ ಯಾವ ಘಟ್ಟದಲ್ಲಿ ಯಾವ ಮಟ್ಟದಲ್ಲಿ ಅವಳು ತನ್ನನ್ನು ಪ್ರೀತಿಸುತ್ತಾಳೆ ಎಂಬ ಅರಿವು ಗಂಡಿಗೆ ಉಂಟಾಗುವುದು... ಬಯಕೆ ಭಾವನೆಯ ಯಾವ ಒತ್ತಡದಲ್ಲಿ ತಾಪಮಾನ ಮುಟ್ಟಿದಾಗ ಈ ಪ್ರಶ್ನೆ ವ್ಯಕ್ತವಾಗಬಹುದು?ಅದನ್ನು ಅರಿಯುವುದಾದರೂ ಹೇಗೆ? ಪ್ರೇಮದ Eutectic Point ಯಾವುದು? 'ಪ್ರೇಮ' ಎಂಬ ವಿಚಾರ ಅವನ ಮನದಲ್ಲಿ ಸುಳಿದೊಡನೇ ಸದಾಶಿವ ಬೆವೆತು ನೀರಾದ. ಪ್ರೊಫೆಸರ್‌ರು ಮುಂದೆ ಏನು ವಿವರಿಸುತ್ತಿದ್ದಾರೆಂಬ ಬಗ್ಗೆ ಎಳ್ಳಷ್ಟೂ ತಲೆಯಲ್ಲಿ ತೂರಲಿಲ್ಲ, ಅವನ ವಿಚಾರ ನಿರಾತಂಕವಾಗಿ ಸಾಗಿತ್ತು. ಅವಳು ತನ್ನನ್ನು ಪ್ರೇಮಿಸುತ್ತಿದ್ದಾಳೆಂದು ಅವನಿಗೆ ತಿಳಿಯುವುದಾದರೂ ಹೇಗೆ? ಯಾವ ಸ್ಥಿತಿಯಲ್ಲಿ? ಛೆ... ಇದೇನು ಸಣ್ಣ ವಿಷಯವೆ? ಏನೋ ಬಾಲ್ಯದಿಂದ ಕೂಡಿ ಆಡಿದೋರು ಅಂತ ತಾನು ಈ ವಿಷಯ ನಿಸ್ಸಂಕೋಚವಾಗಿ ಆ ಜನಾರ್ದನನ ಕೇಳಿದ್ರೇ... ಎಲ್ಲರಿಗೂ ಹೇಳಿ ತನ್ನ "ಗುಗ್ಗು" ಅನ್ನೋದೆ? ಕಾಲೇಜ್‌ನಲ್ಲಿಯ ಚಲುವೆ ಚಿನ್ನಾರಿಯನ್ನೇ ಗಿಟ್ಟಿಸಿದ್ದಾನೆಂದು ಮದಂತಿ. ವದಂತಿ ಏಕೆ? ತಾನೆ ಎಷ್ಟೋ ಸಲ ಸಿನಿಮಾ, ಹೋಟೆಲ್, ಪಾರ್ಕಿನಲ್ಲಿ ನಗುತ್ತ ಹರಟುತ್ತ ನಲಿದಾಡುವುದನ್ನು ನೋಡಿಲ್ಲವೆ? ಇದೆಲ್ಲ ಅವರಿಗೆ ಹೇಗೆ ಸಾಧ್ಯವಾಯಿತೋ? ಮಧುಕರ ಮೊನ್ನೆ ಲವ್ ಮ್ಯಾರೇಜ್ ಮಾಡಿಕೊಂಡ. ಇದರ ಗುಟ್ಟೇನೊ ಎಂದು ಅವನನ್ನು ತಾನು ಕೇಳಿದ್ದಕ್ಕೆ "ಏನು ಮಹಾ... ನಾನು ಕ್ರಿಕೆಟ್ ಚಾಂಪಿಯನ್. ಅಂದು ಕೊನೆಯ ವರೆಗೂ ಉಳಿದು ಸೆಂಚುರಿ ಹೊಡೆದೆ ನೋಡು... ಕಾಲೇಜ್‌ಗೆ ಶೀಲ್ಡ್ ತಂದೆನಲ್ಲ... ಅವಳು ನನಗೆ ಅಭಿನಂದನೆ ಹೇಳಲು ಮನೆಯವರೆಗೆ ಬಂದಳು. ಸರಿ... ನಮ್ಮ ಮೈತ್ರಿ ಬೆಳೆಯಿತು. ಪ್ರೇಮಿಸಿ ಮದುವೆಯಾದ" ಎಷ್ಟು ಸುಲಭವಾಗಿ ಹೇಳಿಬಿಟ್ಟ! ತಾನಂತೂ ಎಂದೂ ಕ್ರಿಕೆಟ್ ಬ್ಯಾಟ್ ಕೂಡ ಹಿಡಿದಿಲ್ಲ. ಇನ್ನು ಈ ದಾರಿಯಂತೂ ತನ್ನದಲ್ಲ ಎಂದು ತಣ್ಣಗಾದ ಸದಾಶಿವ... ಮನಸ್ಸಿನಲ್ಲೇ ಸಿಡಿಮಿಡಿಗೊಂಡ. ಮಧುಕರನ ಮಾರ್ಗ ತನ್ನದಲ್ಲವೆಂದು ಹೊಳೆದಾಗ ಸದಾಶಿವನ ಕಣ್ಣೆದುರು ಶಾಂತಿನಾಥ-ಮಂಗಳಾರ ಜೋಡಿ ಕುಣಿಯತೊಡಗಿತು. ಅವರಿಬ್ಬರೂ ಕೂಡಿ ತಿರುಗುವುದನ್ನು ನೋಡಿ ಸಿನಿಮಾದಲ್ಲಿ ಹಲವಾರು ಬಾರಿ ಭೆಟ್ಟಿಯಾದಾಗ ಆಶ್ಚರ್ಯಾಘಾತವೆನಿಸಿರಲಿಲ್ಲವೆ? ಈ ಜನಕ್ಕೆ ಇದೆಲ್ಲ ಹೇಗೆ ಸಾಧ್ಯ ? ಹುಡಿಗಿಯರನ್ನು ಮೆಚ್ಚಿಸುವುದಾದರೂ ಹೇಗೆ ? ಏಕಕಾಲದಲ್ಲಿ ನಾನೂ ಮೆಚ್ಚಿ ಅವಳೂ ಮೆಚ್ಚಬೇಕಲ್ಲ...ಅಂದು ತಾನು ಶಾಂತಿನಾಥನನ್ನು ಕೇಳಿಯೇ ಬಿಟ್ಟಿದ್ದ... "ಏನೋ ಮಂಗಳಾ ನಿನ್ನನ್ನು ಪ್ರೀತಿಸುತ್ತಾಳೆಯೆ? ನೀನು ಅವಳನ್ನು ಮದುವೆಯಾಗ್ತೀಯಾ? " ಶಾಂತಿನಾಥ ಹೇಳಿದ್ದ ಮಾತು ನೆನಪಿಗೆ ಬಂತು. "ನಮ್ಮ ನಾವಿಬ್ಬರೂ ಒಬ್ಬರನ್ನೊಬ್ಬರು ಒಪ್ಪಿದ್ದೇವೆ... ನಮ್ಮಲ್ಲಿ ಸುಖವಿದೆ, ಒಲವಿದೆ. ಮದುವೆಯಾಗಬೇಕೆಂಬ ನಿರ್ಧಾರವಿದೆ" ಎಂದಾಗ "ಇದನ್ನು ಹೇಗೆ ಸಾಧಿಸಿದೆಯೋ?" ಎಂದು ಅರ್ಧಮರ್ಧ ಧೈರ್ಯದಿಂದ ಕಾತುರತೆಯಿಂದ ಕೇಳಿದ್ದ ತನಗೆ ಸಿಕ್ಕ ಉತ್ತರ? "ಇದು ನೋಡು ಶಿವೂ. ನಾವಿಬ್ಬರೂ ಒಬ್ಬರನ್ನೊಬ್ಬರು ನೋಡುತ್ತಿದ್ದೆವು. ಧೈರ್ಯ ತಂದು ಅವಳಿಗೆ ನನ್ನ ಹೃದಯವನ್ನು ತೋಡಿ ಪತ್ರ ಬರೆದೆ. ನಮ್ಮ ಪ್ರೇಮ ಸಂಬಂಧ ಬೆಳೆಯಿತು." ಅಂದರೆ...ಪ್ರೇಮ ಪತ್ರ ಬರೆದು ಸಾಧಿಸಿದ. ಪ್ರೇಮದ ಮಾರ್ಗದಲ್ಲಿ ಪತ್ರ ಒಂದು ಮೈಲಿಗಲ್ಲು. ಅಂದು ಇಡೀ ದಿವಸ ತಾನೂ ಅದೇ ಯೋಚಿಸಿದ್ದ. ಯಾವುದಾದರೂ ಒಂದು ಹುಡುಗಿಯನ್ನು ನೋಡಲು ಪ್ರಾರಂಭಿಸಬೇಕು. ಆಮೇಲೆ ಪತ್ರ ಬರೆಯಬೇಕು. ಆದರೆ ಆ ವಿಚಾರದಿಂದ ವಿಮುಖನಾದದ್ದು ರಮೇಶನ ಅನುಭವದ ವರದಿಯಿಂದಲ್ಲವೆ? ರಮೇಶ ಪದ್ಮಳಿಗೆ ಲವ್ ಲೆಟರ್ ಬರೆದನಂತೆ. ಅವಳು ಅದನ್ನು ತನ್ನ ಅಣ್ಣನಿಗೂ ಸೋದರಮಾವನಿಗೂ ತೋರಿಸಿಬಿಟ್ಟಳಂತೆ.ರಮೇಶನನ್ನು ನಡು ರಸ್ತೆಯಲ್ಲೇ ಹಿಡಿದು ಹೊಡೆದುಬಿಟ್ಟರಂತೆ. ಛೆ... ಎಂತಹ ಅವಮಾನ!! ತನಗೆ ಆ ವಿಚಾರ ಬೇಡವೇ ಬೇಡ. ಆದರೆ ಪ್ರೇಮಿಸಿ ಮದ್ವೆಯಾದರೆ ಎಷ್ಟು ಚೆನ್ನಾಗಿರುತ್ತದೆ... ಆದರೆ ಹೇಗೆ ಸಾಧ್ಯ? ರಾಮೂ ಮೊನ್ನೆ ಹೇಳಿದ್ದ ವಿಷಯ ಸದಾಶಿವನಿಗೆ ಥಕ್ಕನೆ ಹೊಳೆಯಿತು. "ಲೋ...ಶಿವೂ...ನಿನ್ನ ಗುಂಗುರು ಕೂದಲು... ಹರವಾದ ಎದೆ...ನಿನ್ನ ಎತ್ತರ ನಿಲುವು ನನಗಿದ್ದಿದ್ದರೆ ನಿನ್ನ ತಲೆ ಕೂದಲಿನಷ್ಟೆ ಹುಡುಗಿಯರನ್ನು ಒಲಿಸಿಕೊಳ್ತಿದ್ದೆ!" ಸದಾಶಿವ ತನ್ನ ಗುಂಗುರು ಕೂದಲು ಕ್ರಾಪಿನಲ್ಲಿ ಕೈಯಾಡಿಸಿಕೊಂಡ. ತನಲ್ಲೇ ತಾನು ಮೆಲು ನಕ್ಕ. ತಕ್ಷಣ ಅವನ ಮುಖ ಮ್ಲಾನವಾಯಿತು. ಅದಕ್ಕೆ ಅವನ ಒಳಕುದಿಯುವ ವಿಚಾ-

ರವೇ ಕಾರಣವಾಯಿತು. ಹುಡುಗಿಯರನ್ನು ಮೆಚ್ಚಿಸಲು ರೂಪವೇ ಕಾರಣವಲ್ಲವೆಂಬುದಕ್ಕೆ ಸಾಕ್ಷಿ ಆ ಆ್ಯಂಥೋಣಿ. ಕಾಲೇಜಿನಲ್ಲೆಲ್ಲ ಗುಲ್ಲೋ ಗುಲ್ಲಾಗಿತ್ತು. ಅಂತಹ ಕುರೂಪನಲ್ಲಿ ಏನು ಅಂತ ಮರುಳಾಗಿದಾಳೆ, ಆ ಲಿಲ್ಲಿ. ಅವರ ಪ್ರಣಯ ಪ್ರಕರಣ ವಿಚಿತ್ರವೇ! ಲಿಲ್ಲಿಯ ಸ್ಲೀವ್‌ಲೆಸ್‌ಬ್ಲೌಜ್...ಆ ಎದ್ದು ಕಾಣುವ ಎದೆಭಾಗ ಕಣ್ಣೆದುರು ಸುಳಿದು ಸದಾಶಿವ ಬೆವತು ನೀರಾದ.

ಪ್ರೊಫೆಸರ್ ಗೊಣಗುತ್ತಲೇ ಇದ್ದರು. ನಿಶ್ಶಬ್ದವಾಗಿತ್ತು ತರಗತಿ. ಸದಾಶಿವ ಮಾತ್ರ ತನ್ನ ಗುಂಗಿನಲ್ಲಿ ತಾನು ಮುಳುಗಿದ್ದ. ಕೈಯಲಿದ್ದ ಪೆನ್ನಿನಿಂದ ಪುಸ್ತಕದಲ್ಲಿ ಗೆರೆ ಗೀಚುತ್ತಿದ್ದ. ಅನೇಕ ವಿಚಾರಗಳ ಬಲೆಸೆರೆಯಲ್ಲಿ ಸಿಕ್ಕು ಬಳಲತೊಡಗಿದ್ದ.

ಕಳೆದ ರವಿವಾರ ತಾನು ಕೋದಂಡರಾಮುನ ಮನೆಯಲ್ಲಿ ಹೊತ್ತು ಕಳೆದಿದ್ದು. ಹೊಡೆದ ಹರಟೆ ಸದಾಶಿವನ ಚಿತ್ತವನ್ನು ಕಲಕಿತು. ತನಗಿಂತಲೂ ಎಷ್ಟೋ ವರ್ಷ ಸೀನಿಯರ್ ಈಗ ರಿಸರ್ಚ್ ಮಾಡುತ್ತಿರುವ ಕೋದಂಡರಾಮುವಿನಲ್ಲಿ ತನಗೇನೋ ವಿಶೇಷ ಸಲಿಗೆ. ಅವನೂ ಲವ್ ಮ್ಯಾರೇಜ್ ಮಾಡಿಕೊಂಡ ಎಂದು ತಿಳಿದಾಗಿನಿಂದ ಅವನ ಅನುಭವ ಬಗ್ಗೆ ತಿಳಿಯುವ ಕಾತುರವೆನಿಸಿತ್ತು. ಅಂದು ಅವನ ಹೆಂಡತಿ ಹೆರಿಗೆಗಾಗಿ ತವರಿಗೆ ಹೋಗಿದ್ದುದರಿಂದ ಮನೆಯಲ್ಲಿ ಬೇರಾರೂ ಇರದಿದ್ದುದರಿಂದ ಕೋದಂಡನಲ್ಲಿ ತನ್ನ ಮನದ ಕುತೂಹಲ-ಪ್ರೇಮಿಸಿ ಹೇಗೆ ಮದುವೆಯಾದ ಎಂಬ ವಿವರವನ್ನು ತಿಳಿಯುವ ಆತುರವನ್ನು ವ್ಯಕ್ತಪಡಿಸಿದ್ದ. ತನ್ನ ಆಶೆ. ಸವಾಲು ಪಾಟಿಸವಾಲು ಹಾಕಿ ಇತ್ಯರ್ಥ ಪಡಿಸಬೇಕೆಂಬ ಹವ್ಯಾಸಕ್ಕೆ ಅವನ ಉತ್ತರದಿಂದ ನಿರಾಶೆಯೆನಿಸಿದರೂ ಒಂದು clue ಸಿಕ್ಕಿತೆಂಬ ಹಿಗ್ಗಿನಿಂದ ಮನೆಗೆ ಮರಳಿದ್ದ. ಕೋದಂಡರಾಮು ಹೇಳಿದ್ದೆಂದರೆ ಅವನ ಹೆಂಡತಿ ವನಜಾ ತನ್ನ ತಂಗಿಯ ಸ್ನೇಹಿತೆಯಂತೆ. ಮನೆಗೆ ಆಗಾಗ ಬರುತ್ತಿದ್ದಳಂತೆ. ಒಮ್ಮೆ ಸಮಯ ಸಾಧಿಸಿ ಕೋದಂಡರಾಮು ವನಜಳ ಕೈಹಿಡಿದು ಅಮುಕಿದನಂತೆ. ಅವಳು ನಾಚಿಕೊಂಡಳಾದರೂ ಕೈಯನ್ನು ಹಿಂದಕ್ಕೆಳೆದುಕೊಳ್ಳಲಿಲ್ಲವಂತೆ. ಸ್ಮಿತವದನಳಾಗಿ ಹಾಸ್ಯ ಪ್ರತಿಹಾಸ್ಯದಲ್ಲಿ ಮೊದಲಾಗಿ ಪ್ರೇಮವಾಯಿತಂತೆ!! ಆ ಮೇಲೆ ಮದುವೆ. ಸಂಸಾರ.

ಕೋದಂಡರಾಮನ ಅನುಭವಕಥನ ಮೆಲುಕು ಹಾಕುತ್ತ ಕುಳಿತಿದ್ದ ಸದಾಶಿವನಿಗೆ ಕಾಲೇಜಿನಲ್ಲಿ ಇತ್ತೀಚೆಗೆ ನಡೆದ ಘಟನೆಯ ಸ್ಮೃತಿ ಸುಳಿದು ಸುಸ್ತಾಗಿಬಿಟ್ಟ. ಗ್ರಾಮಪುರೋಹಿತ ಆ ಮುಕ್ತಾಳ ಕೈಯನ್ನು ಹಿಡಿದುಬಿಟ್ಟನಂತೆ, ಲೈಬ್ರರಿಯಲ್ಲಿ! ಅವಳು ಎಲ್ಲರೆದುರಿಗೇ ಅವನ ಕೆನ್ನೆಗೆ ಬಿಗಿದುಬಿಟ್ಟಳಂತೆ! ಅದಕ್ಕಾಗಿಯೇ ಈಗ ನಾಲ್ಕೈದು ದಿನಗಳಿಂದ ಅವನು ಕಾಲೇಜ್‌ಗೂ ಬಂದಿಲ್ಲ. ಈ ಎಲ್ಲ ಹಿನ್ನೆಲೆ. ತನ್ನ ಪರಿತಾಪ ತಾನು ಕೈಕಂಡ, ಪರಿಶೋಧ...ಮನಸ್ಸಿನ ಈ ತುಮುಲ...ತನಗೊಬ್ಬನಿಗೇ ಈ ಶಿಕ್ಷೆಯೇ? ಎದುರುಗಡೆ ಪ್ರೊಫೆಸರ್‌ರು Phase rule ಹೇಳುತ್ತಿದ್ದಾರೆ...ಬೆಳ್ಳಿ-ಸೀಸದ Eutectic Point. ಪ್ರೇಮದ ಆ Pointನ್ನು ಕಂಡುಹಿಡಿಯುವುದಾದರೂ ಹೇಗೆ?!

“ಲೋ ಶಿವೂ...ಏನು ಗಂಭೀರ ವಿಚಾರಪ್ಪ... ಯಾವ ಕನಸಿನ ಕನ್ಯೆ—” ವಿಠ್ಠೂ, ಸದಾಶಿವನ



ಬೆನ್ನಿಗೆ ಬಲವಾಗಿ ಗುದ್ದಿದಾಗಲೇ ಸದಾಶಿವ ಸಮಾಧಿಸ್ಥಿತಿಯಿಂದ [illegible]. “[illegible]...ನನಗೆ ಬೇರೆ ಉದ್ಯೋಗವಿಲ್ಲವೇನೋ” ಎನ್ನುತ್ತ ಸದಾಶಿವ [illegible] ಎಷ್ಟು ನಾವರೂ ವಿಠ್ಠಲನ ಹಾಸ್ಯ ನಗುವಿಗೆ [illegible]ಗಾದ. ಇವನು ಸೈಕಾಲಜಿ ಸ್ಟೂಡೆಂಟ್ ನಂತೇ ಸದಾ ತನ್ನ ಮನಸ್ಸಿನಲ್ಲಿ ಆಗುವ ಎಲ್ಲ ಭಾವನೆಗಳನ್ನೂ ಗಾಳಹಾಕಿ ಹಿಡಿದುಬಿಡ್ತಾನಲ್ಲ! ಬಹುಶಃ ಅವನಿಗೂ ನನ್ನ ಅನುಭವವೇ ಆಗಿರಬೇಕು ಎಂದುಕೊಳ್ಳುತ್ತ ಪ್ರಶ್ನೆ ವಿಚಾರ ಕೇಂದ್ರಿಯದಲ್ಲಿಯೇ ಸದಾಶಿವ ಬಸ್ ಸ್ಟ್ಯಾಂಡ್ ಯಾವಾಗ ತಲುಪಿದನೋ, ಬಸ್ಸನ್ನು ಯಾವಾಗ ಏರಿದನೋ ಅಂದು ಅವನಿಗೆ ಧ್ಯಾಸವೇ ಇರಲಿಲ್ಲ. ಕಂಡಕ್ಟರ್ ಟಿಕೆಟ್ ಎಂದು ಹಣಕ್ಕಾಗಿ ಕೈಯೊಡ್ಡಿದಾಗ—“ಗಾಂಧಿ ಬಜಾರ್” ಎನ್ನುತ್ತ [illegible] ಕೈಹಾಕಿದಾಗ ಅಲ್ಲೇನಿದೆ? ಲ್ಯಾಬೊರೇಟರಿಯ [illegible] Apron ನಲ್ಲಿ ಪರ್ಸ್ ಇಟ್ಟಿದ್ದನ್ನು ಮರೆತುಬಿಟ್ಟಿದ್ದ. ಪೆಚ್ಚು ಪೆಚ್ಚಾಯಿತು. ಕಂಡಕ್ಟರ್ ನಿರ್ದಾಕ್ಷಿಣ್ಯತೆಯಿಂದ ಕಾಲೇಜ್ ಹುಡುಗರ ಜನಾಂಗವನ್ನೇ ಉದ್ಧಾರ ಮಾಡುತ್ತ ಬಸ್ಸಿನ ಗಂಟೆ ಹೊಡೆದುಬಿಟ್ಟ. ಇದೆಂತಹ ಅವಮಾನ ಪರಿಸ್ಥಿತಿ...ಬಸ್‌ನವರೆಲ್ಲ ತನ್ನ ಕಡೆ ನೋಡುತ್ತಿದ್ದಾರೆಯೇ 'ಅಯ್ಯೋ...ಇದೇನು'... ಸದಾಶಿವ ದಿಗ್ಮೂಢನಾಗಿ ನಿಂತಿದ್ದ. ಅಷ್ಟರಲ್ಲೇ ಮೃದುವಾಗಿ “ಎಲ್ಲಿಗೆ ಹೋಗ್ಬೇಕು ತಮಗೆ ?” ಎನ್ನುತ್ತ ಹುಡುಗಿಯರ ಸೀಟಿನಿಂದ ಧ್ವನಿ ಬಂತು. ಆ ಹುಡುಗಿ ಕಂಡಕ್ಟರ್ ಕೈಗೆ ಒಂದು ರೂಪಾಯಿ ನೋಟನ್ನು ಕೊಟ್ಟಾಗ ಕಂಡಕ್ಟರ್ ಉಳಿದ ಎಪ್ಪತ್ತು ಪೈಸೆ ಅವಳ ಕೈಗಿತ್ತು ಹಿಂದಕ್ಕೆ ಸರಿದಾಗ ಸದಾಶಿವ ಆ ಹುಡುಗಿಯ ಮುಖವನ್ನು ಕಾಣಬೇಕೆಂದು ಬಗ್ಗಿದ. ಆದರೆ ಆ ನೂಕುನುಗ್ಗಲಿನಲ್ಲಿ ಅವನಿಗೆ ಕಂಡದ್ದು ಅವಳ ಮುಖದ ಅರ್ಧಭಾಗ ಮಾತ್ರ! ಅವಳು

[illegible] ಕಾಲೇಜ್ ವಿದ್ಯಾರ್ಥಿನಿ [illegible] ಗ್ರಹಿಸಿಕೊಂಡ ಸದಾಶಿವನ ಮನಸ್ಸಿನಲ್ಲಿ ಒಂದು ತರಹದ ರೋಚಕ ಉತ್ಸಾಹದ ಅಲೆ ಹಾಯಿತು. ಅವಳು ಕಿಟಕಿಯ ಹೊರಗಡೆ ತನ್ನ ಮುಖ ತಿರುಗಿಸಿಕೊಂಡಿದ್ದರಿಂದ ಅವಳು ತನ್ನ ಕಡೆಗೆ ತಿರುಗಿದಾಗ ತಾನು 'ಥ್ಯಾಂಕ್ಸ್' ಹೇಳಬೇಕು ಎಂದು ನಿರ್ಧರಿಸಿಕೊಂಡ.

ವಿಶ್ವೇಶ್ವರಪುರಂ ಸರ್ಕಲ್‌ನಲ್ಲಿ ಅವಳು ಬಸ್ ಇಳಿಯುತ್ತಿರುವಾಗ ಅವಳಿಗೆ ಥ್ಯಾಂಕ್ಸ್ ಹೇಳಬೇಕು ಎಂದು ತವಕಿಸುತ್ತಿದ್ದ ಸದಾಶಿವ. ಅವಳಿಂದ ತುಂಬಾ ದೂರದ ಅಂತರ ಬಸ್ಸಿನ ಈ ಕುದಿಗೆ ನಿಂತಿದ್ದ. ಅವಳು ಇಳಿದು ಹೊರಟೇಬಿಟ್ಟಳು!

ಗಾಂಧಿಬಜಾರ್‌ನಲ್ಲಿ ಇಳಿದ ಸದಾಶಿವ ಅವಳ



ಚಿತ್ರವನ್ನು ತನ್ನ ಮನಸ್ಸಿನ ಪರದೆಯ ಮೇಲೆ ಮೂಡಿಸುವ ವಿಶ್ವಪ್ರಯತ್ನ ಮಾಡಿದ. ಅವಳು ಕಪ್ಪಾಗಿದ್ದಾಳೆಯೆ...ಛೇ ಹಾಗಿಲ್ಲ...ಇಲ್ಲ ಬೆಳ್ಳಗಿದ್ದಾಳೆ...ಸುಳ್ಳು ಬಿಳುಪು ಅಲ್ಲ...ಕೆಂಪಾಗಿದ್ದಾಳೆ. ವಯಸ್ಸಿನಲ್ಲಿ ಎಲ್ಲರೂ ಹಾಗೇ ಕಾಣಿಸುತ್ತಾರೆ...ಅವಳು ಕೆಂಪಗಿಲ್ಲ...ಕಪ್ಪಾಗಿಯೂ ಇಲ್ಲ...ಒಟ್ಟಿನಲ್ಲಿ ಬಣ್ಣ ಚೆನ್ನಾಗಿಯೆ ಇದೆ- ಕಣ್ಣು-ಮೂಗು ಫೀಚರ್ಸ್... ಸರ್ವಥಾ ಕುರೂಪಿ ಅಲ್ಲ...ಚೆಲುವೆ? ಅಂತಹ ಚೆಲುವೆಯೂ ಅಲ್ಲ... ಮತ್ತೆ ಹೇಗಿದ್ದಾಳೆ?...ಇದ್ದಾಳೆ... ಪುನಃ ಪುನಃ ಅವಳನ್ನು ನೋಡಬೇಕು ಅನಿಸುತ್ತೆ. ಅವಳಲ್ಲಿ ಏನೋ ಒಂದು ತರಹ ಆಕರ್ಷಣೆ ಇದೆ. Yes, she has that it. ಮನೆಯ ಹೊಸ್ತಿಲನ್ನು ಎಡವಿ ವಿಚಾರ ಪರವಶತೆಯಿಂದ ಎಚ್ಚೆತ್ತ ಸದಾಶಿವ. ಎಂತಹ ವಿಚಿತ್ರ ಈ ಪ್ರಸಂಗ!! ಅವಳಿಗೆ ಥ್ಯಾಂಕ್ಸ್ ಹೇಳಬೇಕು...ಅವಳು ತನಗಾಗಿ ಕೊಟ್ಟ ಆ ಮೂವತ್ತು ಪೈಸಾ ಮರಳಿ ಕೊಡಬೇಕು...ಅದಕ್ಕೋಸ್ಕರವಾದರೂ ಅವಳನ್ನು ಹುಡುಕಬೇಕು ಎಂದುಕೊಂಡ ಸದಾಶಿವ.

× × ×

ಮೂರು ವಾರ ಕಳೆದರೂ ಸದಾಶಿವನಿಗೆ ಅವಳ ಭೆಟ್ಟಿಯಾಗಲಿಲ್ಲ. ಥ್ಯಾಂಕ್ಸ್ ಹೇಳಿ, ಅವಳಿಗೆ ಮೂವತ್ತು ಪೈಸಾ ಮರಳಿ ಕೊಡುವ ಋಣಭಾರದಿಂದ ಅವನು ಮಾನಸಿಕ ಜರ್ಜರಿತನಾಗಿದ್ದ. ಋಣಮುಕ್ತನಾಗುವ ಬಗೆ ಹೇಗೆ ಎಂದು ಚಿಂತಿಸುತ್ತಿದ್ದ ಸದಾಶಿವನಿಗೆ ಅಂದು ಆಕಸ್ಮಾತ್ ಕಾಲೇಜಿನೆದುರಿನ ಬಸ್ ಸ್ಟಾಪ್‌ನಲ್ಲಿ ಕ್ಯೂನಲ್ಲಿ ಅವಳು ನಿಂತಿರುವುದನ್ನು ಕಂಡು [illegible]. [illegible] ಆರೇಳು ಜನರ ಮುಂದೆ ಅವಳು ನಿಂತಿದ್ದಳು: ಇಂದು ಅವಳು ನನ್ನೆಡೆಗೆ ತಿರುಗಿದ ಕೂಡಲೇ ಥ್ಯಾಂಕ್ಸ್ ಹೇಳಿಬಿಡುವೆ...ಮೂವತ್ತು ಪೈಸಾ ಕೊಟ್ಟುಬಿಡುವೆ. ಇಷ್ಟು ದಿವಸ ಕೊಡಲು ತಡವಾದ್ದರಿಂದ ಅವಳು ನನ್ನ ಬಗ್ಗೆ ಏನು ತಿಳಿದುಕೊಂಡಿದ್ದಾಳೊ ಏನೋ... ತಾನೊಬ್ಬ ಘಟಿಂಗ ಎಂದುಕೊಂಡಿದ್ದರೆ...ನಾನು ಇದಕ್ಕಿಂತ ಮೊದಲೇ ಅವಳನ್ನು ಕಂಡು ಥ್ಯಾಂಕ್ಸ್ ಹೇಳಿ ಅವಳ ಮೂವತ್ತು ಪೈಸಾ ಕೊಟ್ಟುಬಿಡಬೇಕಾಗಿತ್ತು...ಸರಿ, Better late than never ಇಂದು ಕೊಡಲು ಹೋದಾಗ ಅವಳು ಏನು ಹೇಳಬಹುದು? ಅವಳು ಏನೂ ಮಾತಾಡಲಿಕ್ಕಿಲ್ಲ...ಛ... ಬಸ್ಸಿನಲ್ಲಿ ಇಷ್ಟು ಜನರೆದುರು ಅವಳು ತನ್ನೊಡನೆ ಏನು ಮಾತಾಡಲು ಸಾಧ್ಯ? ಪರಿಚಯದ ಕುರುಹು

ಯಾತನೆಯಲ್ಲಿ ಸದಾಶಿವ ಅವಳ ಬೆನ್ನು, ಆ ನಿಡಿದಾದ ಕಪ್ಪು ದಟ್ಟ ಕೂದಲಿನ ಜಡೆ ನೋಡುತ್ತ ನಿಂತಲ್ಲೇ ನಿಂತಿದ್ದ. ಬಸ್ ಬಂದೇ ಬಿಟ್ಟಿತು. ಎಲ್ಲರೂ ಬಸನ್ನೇರಿದರು. ಸದಾಶಿವ Foot Board ನ ಮೇಲೆ ಕಾಲಿಟ್ಟು ಒಳಗೆಹೋಗಬೇಕು ಎನ್ನುವಷ್ಟರಲ್ಲೇ ಕಂಡಕ್ಟರ್ ಗಂಟೆ ಹೊಡೆಯುತ್ತ "ಸೀಟಿಲ್ಲ...ಸಾರ್...ಹಿಂದೆ ಬಸ್ ಬರ್‍ತಾ ಇದೆ" ಎನ್ನುತ್ತ ಸಾಗಿಬಿಟ್ಟ. 'ನನ್ನನ್ನು ಇದೇ ಬಸ್‌ನಲ್ಲೇ ಹೇಗಾದರೂ ಮಾಡಿ ಕರೆದೊಯ್ಯಬೇಕು" ಎಂದು ಯಾಚನೆ ಮಾಡಬೇಕೆ? ಅವಮಾನ... ಆದರೆ ಯಾಚಿಸದಿದ್ದರೆ...ಅವಳು ಈ ಬಸ್‌ನಲ್ಲಿ ಹೋಗಿಯೇ ಬಿಡ್ತಾಳೆ...ಸದಾಶಿವ ಏನೂ ತೋಚದಂತೆ ಕಳವಳಿಸಿದ. ಬಸ್ ಹೋಗಿಯೇಬಿಟ್ಟಿತು. ಅವಳೂ ಆ ಬಸ್‌ನಲ್ಲಿ ಹೋಗಿಯೇಬಿಟ್ಟಳು. ಪೆಚ್ಚು ಮುಖದಿಂದ ಸದಾಶಿವ ಧೂಳೆಬ್ಬಿಸಿದ ಆ ಬಸ್ಸನ್ನೇ ನೋಡುತ್ತ ನಿಂತಲ್ಲೇ ನಿಂತಿದ್ದ!!

ಅವಳಿಗಾಗಿ ಎರಡು ಮೂರು ಸಲ ತನ್ನ ಕ್ಲಾಸ್ ತಪ್ಪಿಸಿ ಹುಡುಕಾಡಿದ- ಅವಳು ಕಾಲೇಜ್‌ನಲ್ಲಿ ಕಾಣಲಿಲ್ಲ. ಒಂದು ಸಲ ಅವಳು ತನ್ನ ಗೆಳತಿಯರ ಗುಂಪಿನಲ್ಲಿ ಕಂಡಳು. ಧೈರ್ಯ, ಸಾಹಸ, ದೃಢನಿಶ್ಚಯದ ಅವತಾರನಾಗಿ ಸದಾಶಿವ ಅವಳು ಬರುತ್ತಿರುವ ದಾರಿ ಮಾರ್ಗದಲ್ಲೇ ನಿಂತುಬಿಟ್ಟ. ಸದಾಶಿವ ಅವಳನ್ನೇ ಎವೆಯಿಕ್ಕದೇ ನೋಡತೊಡಗಿದ. ಅವಳೂ ತನ್ನನ್ನು ಹೊರಳಿ ನೋಡುತ್ತಿರುವಳೆಂದು ಭಾಸವಾಯಿತು ಅವನಿಗೆ. ಸದಾಶಿವ ತಕ್ಷಣ ತನ್ನ ಉಡುಪು ನೋಡಿಕೊಂಡ! ಬೆಳಿಗ್ಗೆ ಅವಸರದಲ್ಲಿ ಕಾಲೇಜಿಗೆ ಬಂದಿದ್ದರೂ ಅಕ್ಷ್ಯಪೂರ್ವಕವಾಗಿಯೇ ಮುಖಕ್ಷೌರ ಮಾಡಿಕೊಂಡು ಇಸ್ತ್ರೀ ಬಟ್ಟೆ ಧರಿಸಿ Trim ಆಗಿ ಬಂದಿದ್ದ. ಕೈ ತಾನಾಗಿಯೇ ದಾಡಿಯ ಮೇಲೆ ಹರಿದಾಡಿತು. ಜೇಬಿನಲ್ಲಿ ಕೈ ಹಾಕಿ ಮೂವತ್ತು ಪೈಸಾ ಹೊರತೆಗೆದ. ಸದಾಶಿವನ ಮುಂದಿನಿಂದಲೇ ಆ ಗೆಳತಿಯರೊಡನಿದ್ದ ಅವಳೂ ನಡೆದುಹೋದಳು. ತನ್ನ ಮುಂದೇ ಹೋಗುತ್ತಿರುವ ಅವಳಿಗೆ ಇದು... ನೋಡಿ ಥ್ಯಾಂಕ್ಸ್... ನಿಮ್ಮ ಮೂವತ್ತು ಪೈಸಾ ತೆಗೆದುಕೊಂಡು ಬಿಡಿ ಎಂದು ಹೇಳಿಬಿಡಬೇಕೆಂದು ತಿಂಗಳಿಂದ ಕಂಠಪಾಠ ಮಾಡಿದ್ದ ವಾಕ್ಯ ತುಟಿಗಳನ್ನು ದಾಟಿ ಹೊರ ಬರಲೇ ಇಲ್ಲ!! ಅವಳು ನಡದೇ ಹೋದಳು. ಸದಾಶಿವ ನಿಂತೇ ಇದ್ದ. ತನ್ನ ಪಾಪಭೀರುತ್ವವನ್ನೇ ಹಳಿದುಕೊಳ್ಳುತ್ತ ಚಿಂತೆ, ಅಸಮಾಧಾನ, ದುಃಖ, ದುಗುಡ-ದುಮ್ಮಾನಗಳ ಸಾಕಾರ ಮೂರ್ತಿಯಾಗಿ ಸದಾಶಿವ ನಿಂತೇ ಇದ್ದ!!!

× × ×

ಪ್ರಾಸಂಗಿಕ ಮಳೆಯಿಂದ ರಸ್ತೆಯಲ್ಲಿ ಅಲ್ಲಲ್ಲಿ ನೀರು ನಿಂತು ಕೆಸರಾಗಿಬಿಟ್ಟಿದ್ದಿತು. ಕೈಯಲ್ಲಿ ಪುಸ್ತಕಗಳನ್ನು ಹಿಡಿದುಕೊಂಡು ಓದಿನ ಗುಂಗಿನಲ್ಲಿ ತಲೆ ತಗ್ಗಿಸಿ ಹೊರಟಿದ್ದ ಸದಾಶಿವ. ಒಂದು ಆಟೋರಿಕ್ಷಾ ಸರಕ್ಕನೆ ಇವನ ಪಕ್ಕಕ್ಕೇ ಹಾಯ್ದು ಹಿಂತಿರುಗಿಬಿಟ್ಟಾಗ ಸದಾಶಿವನ ಬಟ್ಟೆಯೆಲ್ಲ ಕೆಸರಿನಿಂದ ಕೊಳೆಯಾಯಿತು. ಇವನ ಪಕ್ಕದಲ್ಲಿ ಸಾಗಿದ್ದ ಬೇರೊಬ್ಬ ಸೂಟ್‌ಧಾರಿಯ ಅವಸ್ಥೆಯೂ ಸದಾಶಿವನಂತೇ ಆಗಿತ್ತು. ಆ ಸೂಟ್‌ಧಾರಿ ತನ್ನ ಇಂಗ್ಲೀಷಿನ ಕನ್ನಡದಲ್ಲಿ ಅವಾಚ್ಯ ಬಯ್ಗಳಿಂದ ಆ ಆಟೋ ಡ್ರೈವರ್‌ನನ್ನು ಉದ್ಧಾರ ಮಾಡತೊಡಗಿದರು. "ಏನು ಮಾಡೋಕಾಗುತ್ತೆ ಸಾರ್. ಚಿಕ್ಕ ಮಗು ಓಡಿ ಬಂದುಬಿಟ್ಟಿತು. ರಿಕ್ಷಾ ಈ ಪಕ್ಕಕ್ಕೆ ಹೊರಳಿಸದಿದ್ರೆ ಆ ಮಗು ಉಳೀತಿರಲಿಲ್ಲ. ನಿಮ್ಮ ಬಟ್ಟೆ ಕೆಟ್ಟು ಹೋಯ್ತು ನಿಜ. ಆದ್ರೆ— ಆ ಮಗೂನ್ನ ಉಳಿಸೋದಕ್ಕೆ" ಸಾಹೇಬರು ಅವನಿತ್ತ ವಿವರಣೆಗೆ ಕಿವಿಗೊಡದೇ ಅವನನ್ನು ಹೊಡೆಯಲಿಕ್ಕೇ ಕೈ ಮೇಲಕ್ಕೆತ್ತಿದಾಗ, ನೆರೆದ ಇನ್ನುಳಿದ ಜನ ಕೂಡ ಸೂಟ್‌ಧಾರಿಯ ಪರವಾಗಿ ರಿಕ್ಷಾದವನಿಗೆ ಬಯ್ಯಲು ಸುರು ಮಾಡಿದ್ದನ್ನು ನೋಡಿ ಸದಾಶಿವ ಡ್ರೈವರನ ಬೆಂಬಲಕ್ಕೆ ಮುಂದಾದ. ಅವನ ಪರವಾಗಿ ಇಂಗ್ಲೀಷಿನಲ್ಲೇ ವಾದಿಸತೊಡಗಿದಾಗ ಜನ ಚದುರಿ ಹೋದರು. ಸೂಟ್‌ಧಾರಿ ಗೊಣಗುತ್ತ ಹೊರಟು ಹೋದ. ನಂತರ ಡ್ರೈವರ್ ಸದಾಶಿವನ ಬಳಿಸಾರಿ "ಬನ್ನಿ — ಸಾರ್ — ಕೂತ್ಕೊಳ್ಳಿ, ನಿಮಗೆ ಎಲ್ಲಿಗೆ ಹೋಗ್ಬೇಕು?" ಎಂದು ಕೇಳಿದಾಗ ಸದಾಶಿವ, "ಆಗ್ಲಿ ಆದ್ರೆ ಒಂದು ಕರಾರಿನ ಮೇಲೆ ನಾನು ಕೂಡ್ತೇನೆ...



ಕೃಷ್ಣಮೂರ್ತಿ ಪುರಾಣಿಕ

# ಹಾಲುಂಡ ತವರಿಗೆ

-೧-

ಮಹಾದೇವಿ ಬಸ್ಸಿನಿಂದ ಇಳಿದಾಗ ಅವಳನ್ನು ಕರೆದುಕೊಂಡು ಹೋಗಲು ಅಣ್ಣನ ಕಾರು ಬಂದಿರಲಿಲ್ಲ. ಅವಳಿಗೆ ಆಶ್ಚರ್ಯವಾಯಿತು. ನಿರಾಶೆಯೂ ಆಯಿತು. ಮನೆಯಲ್ಲಿ ಅಣ್ಣಂದಿರ ಎರಡು ಕಾರುಗಳಿದ್ದರೂ ಇದು ಹೀಗೇಕೆ? ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡಳು.

ನಿಲ್ದಾಣದ ಮೇಲೆ ಜನಜಾತ್ರೆಯಾಗಿತ್ತು. ಎಲ್ಲರೂ ಜಾತ್ರೆಗೆ ಬಂದವರೆ; ಇನ್ನೂ ಬರುವವರೆ. ಮಧ್ಯಾಹ್ನದ ಬಿಸಿಲು ಸುಡುತ್ತಿತ್ತು. ಬೆವರು ಇಳಿಯುತ್ತಿತ್ತು. ದೇವಿನಪುರದ ಬಿಸಿಲು ಅದು. ಮಹಾದೇವಿ ತನ್ನ ಚೀಲವನ್ನು ಬಗಲಲ್ಲಿ ಇಟ್ಟುಕೊಂಡು ಆ ನೂಕುನುಗ್ಗಲಲ್ಲಿ ದಾರಿ ಮಾಡಿಕೊಂಡು ನಡೆಯತೊಡಗಿದಳು. ಸುತ್ತಲೂ ಟಕಮಕ ನೋಡುತ್ತ ಹೆಜ್ಜೆ ಹಾಕತೊಡಗಿದಳು.

"ಯಾಕೆ ನಿಮ್ಮನ್ನ ಕರೆಯಲು ಕಾರು ಬರಲಿಲ್ಲವೆ?"

ಬಸ್ಸಿನಲ್ಲಿ ಆ ಮುತ್ತೈದೆಯ ಮುಂದೆ ತನ್ನನ್ನು ಕರೆಯಲು ಕಾರು ಬರುವದೆಂದು ಕೊಚ್ಚಿಕೊಂಡ ಮಹಾದೇವಿಯನ್ನು ಅವಳು ಕೇಳಿದಾಗ ಮಹಾದೇವಿಗೆ ಅವಮಾನವೇ ಆಯಿತು.

"ಈಗ ಬಂದೀತು. ನಮ್ಮ ಬಸ್ಸು ತುಸು ಮೊದಲೇ ಬಂದಂತೆ ಕಾಣುತ್ತದೆ" ಎಂದ ಮಹಾದೇವಿಯ ದನಿ ಮಂದವಾಗಿ ಹೊರಸೂಸಿತು.

ಆ ವೇಳೆಗೆ ಅಣ್ಣನ ಕಪ್ಪನೆಯ ಕಾರು ಬರುತ್ತಿರುವದನ್ನು ನೋಡಿ ಮಹಾದೇವಿಗೆ ಸಂತೋಷವಾಯಿತು.

ಆ ಕಾರಿನಿಂದ ಕಿರಿಯ ಅಣ್ಣನ ಹೆಂಡತಿ ಪುಷ್ಪಾ ಇಳಿದಳು. ಭರ್ಜರಿ ಸೀರೆ, ಕಣ್ಣುಗಳಿಗೆ ತಂಪು ಕನ್ನಡಕ. ಅವಳು ಇವಳನ್ನು ನೋಡಿದಳು; ಇವಳು ಅವಳನ್ನು ನೋಡಿದಳು.

"ನಾನು ಇಲ್ಲಿಯೇ ಇದ್ದೀನಿ ಅತ್ತಿಗೆ."

ಮಹಾದೇವಿ ಚೀಲವನ್ನು ಗಲ್ಲಿಸಿ ಮತ್ತೆ ಸೊಂಟದ ಮೇಲೆ ಇಟ್ಟುಕೊಂಡಳು.

"ಕಾಣಿಸ್ತು, ಮತ್ತೆ ನಾ ನಿಮ್ಮನ್ನ ಕರೆದುಕೊಂಡು ಹೋಗಲು ಬಂದಿಲ್ಲರಿ. ಹುಬ್ಬಳ್ಳಿಯಿಂದ ನನ್ನ ತಂಗಿ ಇಂಜನೀಯರನ ಹೆಂಡತಿ ಬರುವವಳಿದ್ದಾಳೆ. ನೀವು ಹೀಗೆಯೇ ನಡೆಯಿರಿ. ಹಾಂ! ಬೇಕಾದರೆ ಆ ಕೈಚೀಲವನ್ನು ಡ್ರಾಯ್ವರನ ಕೈಯಲ್ಲಿ ಕೊಡಿರಿ. ಹಾಳು-ಗಮುಟು. ಒಳಗೆ ಹಿಂದಿನ ಕೇಸಿನಲ್ಲಿ ತುರುಕುತ್ತಾನೆ."

"ಆಂ?" ಮಹಾದೇವಿ ಕಕ್ಕಾಬಿಕ್ಕಿಯಾಗಿ ಕೇಳಿದಳು.

ಆ ವೇಳೆಗೆ ಹುಬ್ಬಳ್ಳಿಯ ಬಸ್ಸು ಬಂದಿತು. ಆಧುನಿಕ ಹೆಣ್ಣು ಪುಷ್ಪಲತಾಳ ತಂಗಿ ಅದರಿಂದ ಕೆಳಗಿಳಿದಳು. ನಗೆಯ ಅಬ್ಬರದಲ್ಲಿ ಪುಷ್ಪಾ ತಂಗಿಯೊಡನೆ ಕಾರು ಹೊಕ್ಕಳು.

"ಎಲಾ! ನೀವು ಇನ್ನೂ ಇಲ್ಲಿಯೇ ಇದ್ದೀರಲ್ಲ! ಬನ್ನಿ ಹಾಗಾದರೆ ಸಾವಕಾಶ. ನಾ ಮುಂದೆ ಹೋಗತೀನಿ ಬಾಯ್ ಬಾಯ್"

ಎಂದು ಮಹಾದೇವಿಯ ಕಣ್ಣುಗಳಲ್ಲಿ ಧೂಳು ಸುರಿಸುತ್ತ ಕಾರು ಹೊರಟಿತು. ಮಹಾದೇವಿಯು ಆ ಧೂಳನ್ನು ಕುಡಿದಳು. ತವರು ಮನೆಯ ಧೂಳು ಅದು. ಪವಿತ್ರವಾದದ್ದು.

ಸುಡುಸುಡುವ ಬಿಸಿಲಲ್ಲಿ ಮಹಾದೇವಿ ಗಂಟನ್ನು ಬಗಲಿನಿಂದ ತಲೆಗೆ, ತಲೆಯಿಂದ ಬಗಲಿಗೆ ಬದಲು ಮಾಡಿಕೊಳ್ಳುತ್ತ ನಡೆಯತೊಡಗಿದಳು.

ಅವಳಿಗೆ ಅವಮಾನವಾಗಿತ್ತು. ಆದರೆ ಮನೆಯಲ್ಲಿ ತಾಯಿ...ತಂದೆ.!

ಮಹಾದೇವಿ ಅವಮಾನವನ್ನು ನುಂಗಿಕೊಂಡಳು. ಪಾದಗಳು ಸುಡುತ್ತಿದ್ದವು; ತಲೆ ಕಾಯತೊಡಗಿತ್ತು; ಒಳಗೂ ಹೊರಗೂ.

ಒಂದು ಕ್ಷಣ ಹೀಗೆಯೆ ತಿರುಗಿ ಗಂಡನ ಊರಿಗೆ ಹೋಗಬೇಕೆಂಬ ಮನೋಭಾವ ಬಂದಿತು. ಆದರೆ ಹಾಲುಂಡ ತವರಿಗೆ ಅವಮಾನವಾದೀತು. ತಾಯಮ್ಮನಿಗೇಕೆ ಅಪಚಾರ!

ಆ ಕ್ಷಣ ಅವಳ ಕಿವಿಯಲ್ಲಿ ಗಂಡನು ಹೇಳಿದ ಮಾತುಗಳು ಗುಣುಗುಣಿಸಿದವು.

"ನಿನ್ನ ತವರು ಬದಲಾಗಿದೆ ಮಾದೇವಿ! ಕಳ್ಳಪೇಟೆಯ ಕದೀಮರಾದ ನಿನ್ನ ಅಣ್ಣಂದಿರು ಕುಬೇರರಾಗಿದ್ದಾರೆ. ಸೊಕ್ಕು ಬಂದಿದೆ. ಶ್ರೀಮಂತರ ಬೀಗತನವಾಗಿದೆ. ಈಗ ನಮಗೆ ವಿಷಮ ವೇಳೆ. ಅವರದು ಶುಕ್ರದೆಶೆ. ಹೋಗುವದಾದರೆ ಹೋಗು. ನಿನ್ನ ತಂದೆಯ ಪತ್ರ ಬಂದಿದೆ, ಜಾತ್ರೆಗೆ ಬರಬೇಕೆಂದು."

"ನನ್ನ ಜೀವ ನೆನೆಸುತ್ತಿದೆ. ನಾಕು ದಿನ ಹೋಗಿ ಬರತೇನಿ."

"ಸಂತೋಷದಿಂದ ಹೋಗಿ ಬಾ! ಆದರೆ ಅವಮಾನವನ್ನು ನೀನು ಸಹಿಸಿಕೋ. ಈ ಹತ್ತು ರೂಪಾಯಿಗಳು ನಿನ್ನ ಹತ್ತರ ಇರಲಿ."

"ನನ್ನ ತವರು ಶ್ರೀಮಂತವಾದರೆ ನನಗೆ ಅಭಿಮಾನ. ನಾನು ಒಬ್ಬಳೇ ತಂಗಿ. ಜಾತ್ರೆಗೆ ನಾನು ಹೋಗದೆ ಇನ್ನಾರು ಹೋಗಬೇಕು?"

"ಹೋಗಿ ಬಾ!"

ಗಂಡನ ಮಾತುಗಳು ಈಗ ಮಹಾದೇವಿಯ ಕಿವಿದೆರೆಯ ಮೇಲೆ ಅಪ್ಪಳಿಸತೊಡಗಿದವು. ತಾನು ಬರಬಾರದಿತ್ತೇನೋ ಎಂದು ಅವಳಿಗೆ ಅನ್ನಿಸತೊಡಗಿತು.

ಅವಳು ಮನೆಗೆ ಬಂದಾಗ ಅಲ್ಲಿ ಬೀಗರದೇ ಗದ್ದಲ ನಡೆದಿತ್ತು. ತಾಯಿ ಇವಳನ್ನು ನೋಡಿ ಧಾವಿಸಿ ಬಂದು ಕೇಳಿದಳು.

"ನಡೆಯುತ್ತ ಬಂದೆಯೇನು ಮಗಳೆ?"

"ಬಸ್ ಸ್ಟ್ಯಾಂಡು ದೂರವೇನಿಲ್ಲ ಅವ್ವಾ! ಅಲ್ಲದೆ ಹದವಾದ ಬಿಸಿಲೂ ಇತ್ತು."

"ಅಯ್ಯೊ! ದೇವರೆ! ಹೇಗೂ ಕಾರು ಅಲ್ಲಿ ಬಂದಿತ್ತು. ಅದರಲ್ಲಿಯೇ ನೀನು ಬರಬಹುದಿತ್ತಲ್ಲ."

ತಾಯಿ ಅಂತಃಕರಣದಿಂದ ಕೇಳಿದಳು.

"ಆ ಕಾರಿನಲ್ಲಿ ನನಗೆ ಸೀಟು ಸಿಕ್ಕಲಿಲ್ಲ ಅವ್ವಾ!"

ಎನ್ನುತ್ತಲೇ ಮಹಾದೇವಿಯ ಕಣ್ಣು ತುಂಬಿತು. ಅವಳು ತಾಯಿಯ ಪಾದಕ್ಕೆ ಮಣಿದು ಅಪ್ಪಿಕೊಂಡಳು. ಓಡುತ್ತ ತನ್ನನ್ನು ಕಾಣಲು ಬಂದ ತಂದೆಯ ಪಾದ ಹಿಡಿದು ಅತ್ತಳು.

ತಾಯಿಗೆ ಏನು ನಡೆದಿರಬಹುದೆಂಬುದು ಮಿಂಚಿನಂತೆ ಹೊಳೆಯಿತು. ಅವಳು, ತುಟಿಕಚ್ಚಿಕೊಂಡಳು.

"ಒಳಗೆ ಬಾ ಮಗಳೆ! ಈ ಮನೆಯ ಅವಸ್ಥೆಯನ್ನು ನೋಡು."

"ನನಗೆ ಹಿಗ್ಗು ಹಿಡಿಸದಾಗಿದೆ ಅವ್ವಾ. ನಾನು ಹಾಲುಂಡ ತವರು ಇದು. ಇದರ ಕುಡಿಬಳ್ಳಿ ಹಬ್ಬಿದೆ. ಹಾಲು ಜೇನು ಹರಿಯತೊಡಗಿದೆ. ಇದಕ್ಕಿಂತಲೂ ಹೆಚ್ಚಿನದೇನನ್ನು ಬಯಸುತ್ತದೆ ಹೆಣ್ಣು! ಬಹಳ ಸಂತೋಷಾ ಅವ್ವಾ."

ತವರಿನ ವೈಭವವನ್ನು ಕಣ್ಣು ತುಂಬಾ ನೋಡಿ ಮಹಾದೇವಿ ಹೃತ್ಪೂರ್ವಕವಾಗಿ ಹೇಳಿದಳು.

"ಸಂಪತ್ತು ಬಂದು ಮನೆಯನ್ನು ತುಂಬಿದೆ ಮಗಳೆ! ಆದರೆ ಈ ಮನೆಯ ಆತ್ಮವು ಹೌಹಾರಿ ನಿಂತಿದೆ. ಏಳು; ಸ್ನಾನ ಮಾಡು! ಇಂದೇ ಲಕ್ಷ್ಮಿಯ ಹೊನ್ನಾಟವಿದೆ. ಜಾತ್ರೆ ಭರ್ಜರಿಯಾಗುತ್ತದೆ. ಈ ಮನೆಯಲ್ಲಿ ನಿನ್ನನ್ನು ಬಿಟ್ಟರೆ ನನ್ನವರು ಯಾರೂ ಇಲ್ಲ. ಹಿರಿಯ ಸೊಸೆ ತನ್ನ ಬಳಗವನ್ನು ಕರೆಸಿದ್ದಾಳೆ. ನಡುವಿನ ಸೊಸೆ ತನ್ನ ತಂಗೆಂದಿರನ್ನು ಕರೆಸಿದ್ದಾಳೆ. ಕಿರಿಯ ಸೊಸೆ ತಾಯಿ, ತಂದೆ, ಅಕ್ಕ, ತಂಗಿ, ಅಣ್ಣ, ತಮ್ಮ ಎಲ್ಲರನ್ನೂ ಕರೆಸಿದ್ದಾಳೆ... ನಾನು ಕರೆಯಿಸಿದ್ದು ನಿನ್ನೊಬ್ಬಳನ್ನೇ..."

"ಅಂದಹಾಗೆ ಚಂದ್ರಣ್ಣ ಕಾಣುವದಿಲ್ಲವಲ್ಲ ಅವ್ವಾ!"

"ಮುಂಬಯಿಗೆ ಹೋಗಿದ್ದಾನೆ. ನಾಳೆ-ನಾಡದು ಬರುವದಾಗಿ ತಿಳಿಸಿದ್ದಾನೆ. ನಿನ್ನನ್ನು ಖಂಡಿತ ಕರೆಸಲು ತಿಳಿಸಿದ್ದಾನೆ."

"ಆದರೆ ರಾಚಣ್ಣ, ಸಂಗಣ್ಣ ಬಹಳ ಬದಲಾಗಿದ್ದಾರೆ ಅವ್ವಾ! ನನ್ನೊಡನೆ ಸರಿಯಾಗಿ ಮಾತೇ ಇಲ್ಲ."

"ಆ ಮೂದೇವಿಗಳಿಗೆ ಮರುಳಾಗಿದ್ದಾರೆ... ಹೋಗಲಿಬಿಡು...ನಿನ್ನ ಚಂದ್ರಣ್ಣ ಬರುತ್ತಾನೆ."

ಮಹಾದೇವಿಗೆ ತವರ ಮನೆಯಲ್ಲಿ ತಾನು ಪರಕೀಯಳೆಂಬಂತೆ ಅನ್ನಿಸತೊಡಗಿತು.

ತಾಯಿಯನ್ನು ಬಿಟ್ಟು ಯಾರೂ ಮಾತಾಡಿಸುತ್ತಿರಲಿಲ್ಲ. ಮಾತಾಡಿದರೂ ಅಷ್ಟಕ್ಕಷ್ಟೆ.

ಇವರಿಗೆ ಶ್ರೀಮಂತಿಕೆಯ ದೆವ್ವ ಬಡಿದಿದೆ.

ಮಹಾದೇವಿ ತನ್ನಲ್ಲಿಯೆ ಅಂದುಕೊಂಡಳು.

-೨-

ಆ ದಿನ ಭಾರೀ ಜವಳಿ ಖರೀದಿಯಾಯಿತು.

ಸೊಸೆಯಂದಿರು ತಮ್ಮ ಬಳಗಕ್ಕೆ ಟೆಸ್ಸೂ, ರೇಶಿಮೆ, ಜರತಾರೀ ಮೊದಲಾದ ಭಾರಿ ಬೆಲೆಯುಳ್ಳ



ವಸ್ತ್ರಗಳನ್ನು ತಂದರು. ಅದರಲ್ಲಿ ಒಂದು ಸಾದಾ ಸೀರೆಯೂ ಇತ್ತು.

"ಇದು ನಿಮ್ಮ ಮಗಳಿಗೆ ಜಾತ್ರೆ ಉಡುಗೋರಿ ತಂದದ- ತಗೋಳ್ರಿ" ಹೀಗೆ ನುಡಿದ ಸೊಸೆ ಸಾದಾ ಸೀರೆಯನ್ನು ಅತ್ತೆಯ ಮುಂದೆ ಒಗೆದಳು.

"ಆದರೆ ಇದು ತೀರಾ ಸಾದಾಸೀರೆಯಾಗಿದೆ. ಆ ಜರದ ಸೀರೆ ಯಾರಿಗೆ ಮತ್ತೆ?"

"ಯಾರಿಗೆ ಎಂತಹದನ್ನು ಕೊಡಬೇಕೊ ಅದಕ್ಕೆ ತಕ್ಕ ಉಡುಗರಿ ತಂದಿದೆ. ನನ್ನ ತಂಗಿಯ ಗಂಡ ಇಂಜನೀಯರ್. ಅಕ್ಕನ ಗಂಡ ಕಾನ್ಟ್ರಾಕ್ಟರ್. ನಿಮ್ಮ ಮಗಳ ಗಂಡ ಬಳ್ಳೊಳ್ಳಿ ಮಾರತಾನ. ಇಂಥಾ ದೊಡ್ಡ ಸೀರಿ ಉಟಗೊಂಡರ ಮಂದಿ ಏನ ಅಂದಾರು. ನಾಲ್ಕು ದಿನ ಉಟಕೊಂಡು ಹರಿಲಿ ಅಂತ ಈಚಲಕರಂಜೀ ಸಾದಾ ಭಾಂಡ ತಂದದ."

ಅತ್ತೆಗೆ ತಿಳಿಸುವಂತೆ ಹಾವಭಾವ ಮಾಡುತ್ತ ಸೊಸೆ ಹೇಳತೊಡಗಿದಳು. ಅವಳ ಗಂಡ ಕೌಲೆತ್ತಿನಂತೆ ಗೋಣು ಹಾಕಿದನು.

"ಮತ್ತ ಈ ಬಳ್ಳೊಳ್ಳಿ ವ್ಯಾಪಾರಿಯು ಹೆಂಡತಿಯ ಅಣ್ಣನೇ ನಿನ್ನ ಗಂಡನಲ್ಲವೇನು ಪುಷ್ಪಾ? ಹಾಗೆ ಮಾಡಬೇಡ. ಬಹಳ ದಿನಗಳ ಮೇಲೆ ತವರಿಗೆ ಬಂದಿದ್ದಾಳೆ ಮಗಳು. ಅವಳಿಗೊಂದು ಒಳ್ಳೆಯ ಸೀರೆ ತಂದುಕೊಡು."

ಅಸಹಾಯುಕ ತಾಯಿ ದೀನಳಂತೆ ಕೋರಿದಳು.

"ಇರಲಿ ಬಿಡು ಅವ್ವಾ! ದೊಡ್ಡದೇನು ಸಣ್ಣದೇನು? ತವರಿನ ನೂಲಿನ ಎಳೆಯೇ ನನಗೆ ರೇಶಿಮೆ ಜರತಾರಿ. ಅದನ್ನು ನಾನು ಸಂತೋಷದಿಂದ ಸ್ವೀಕರಿಸುತ್ತೇನೆ."

ತೇರನ್ನು ನೋಡಲು ಮನೆಯವರೆಲ್ಲ ಭರ್ಜರಿ ಸೀರೆ, ಕುಪ್ಪುಸಗಳನ್ನು ತೊಟ್ಟುಕೊಂಡು ಹೊರಬಿದ್ದರು. ಮೂರು ಕಾರುಗಳು ಸಿದ್ಧವಾಗಿದ್ದವು.

"ಮಾದೇವಿನ್ನ ಕರಕೊಂಡು ಹೋಗೂದಿಲ್ಲೇನು ಪುಷ್ಪಾ?" ತಾಯಿ ಕೇಳಿದಳು.

"ಸಾದಾ ಸೀರೆಯವರು ಕಾರಿನಾಗ ಕೂಡೂದು ಏನ ಚಂದ ಅತ್ತೆ? ನಮ್ಮ ಅಬರೂ ಹೋಗತಾದ, ನಾಕ ಮಂದಿಒಳಗ ನಮ್ಮ ತಲಿ ಒಡದಂಗ ಆಗತದ."

"ಗಟ್ಟಿಸಿ ಮಾತಾಡಬೇಡವೆ? ಕೇಳಿದರೆ ಮಗಳು ಎದೆಒಡಕೊಂಡಾಳು? ನಿಮ್ಮ ದೌಲತ್ತಿಗಷ್ಟು ಬೆಂಕೀ ಬೀಳ! ಹೆಣ್ಣುಮಗಳ ಹೊಟ್ಟೀ ತಂಪು ಮಾಡದ ನಿಮ್ಮ ಸಂಪತ್ತೇನ ತಗೋಂಡು ಸುಡೂದು..." ತಾಯಿ ಗುಣುಗಿದಳು.

ತೇರು ಸಿಂಗಾರವಾಗಿತ್ತು. ಅಲ್ಲಿ ಸಾವಿರಸಾವಿರ ಜನರು ನೆರೆದಿದ್ದರು. ಅಲ್ಲಿ ಶ್ರೀಮಂತರ ಜರತಾರಿ ಮಿನುಗುತ್ತಿತ್ತು. ರೇಸಿಮೆ ಪತ್ತಲಗಳ ದೊಡ್ಡದೊಂದು ಪ್ರದರ್ಶನವೇ ನಡೆದಿತ್ತು. ನರಸತ್ತ ಹೆಣ್ಣು ಗೊಂಬೆಗಳಿಗೆ ಪೀತಾಂಬರ ಸುತ್ತಿಬಿಟ್ಟಂತೆ ಸಿರಿತನದ ಅಟ್ಟಹಾಸ ಮೆರೆಯುತ್ತಿತ್ತು. ಜಾತ್ರೆಗೆ ಬಂದವರೆಲ್ಲ ದೇವರನ್ನು ನೋಡಲು ಬಂದವರೆಂದು ಹೇಳುವದೇ ಕಠಿಣ. ಅವರು ಈ ಎದೆಯುಬ್ಬಿಸಿಕೊಂಡು ಮೆರೆಯುವ ಜರತಾರಿ ರೇಸಿಮೆಗಳನ್ನು ನೋಡಲು ಬಂದವರಾಗಿದ್ದರು. ದೇವರೊಂದು ನೆವ; ಈ ದೇವತೆಗಳೇ ಜನರಿಗೊಂದು ಮನರಂಜನೆ. ಈ ಶ್ರೀಮಂತರಲ್ಲಿ ಪುಷ್ಪಾನ ತಂಗಿ ವಿಚಿತ್ರವಾದ ಕಳಸದ ತುರುಬನ್ನು ಪೇರಿಸಿಕೊಂಡು ನಾಟಕದ ವೇಷದಲ್ಲಿ ಓಡಿ ಬಂದ ಅಗ್ಗದ ನಟಿಯಂತೆ ಕಾಣುತ್ತಿದ್ದಳು. ದೊಡ್ಡ ಇಂಜನೀಯರನ ಮೂರನೆಯ ಹೆಂಡತಿ ಹೇಗಿರಬೇಡ? ತೇರಿನಲ್ಲಿ ಕುಳಿತ ದೇವತೆಯ ಉತ್ಸವಮೂರ್ತಿ ಇದನ್ನೆಲ್ಲ ನೋಡಿ ಹೌಹಾರಿ

ಹರುಗುತ್ತಿತ್ತು. ತೇರು ಮುಂದೆ ನಡೆಯಲಿಲ್ಲವೆಂದು ಬರಿಮುರಿಗಳ ವಧೆ. ಈ ಜಾತ್ರೆಯ ಸಂಭ್ರಮದಲ್ಲಿ ಅಹಿಂಸೆ ತಲೆಕೆಳಗಾಗಿತ್ತು. ದಯವೇ ಧರ್ಮದ ಮೂಲವೆಂದು ತಿಳಿದ ಜನವೇ ಇಲ್ಲಿ ನಿರ್ದಯವಾಗಿ ಪ್ರಾಣವಧೆ ಮಾಡುತ್ತಿತ್ತು.

ನ್ಯಾಯದೇವತೆ ತನ್ನ ಡೊಳ್ಳು ಹೊಟ್ಟೆಯನ್ನು ತಾನೇ ತನ್ನ ಕೈಗಳಿಂದ ಬಡಿದುಕೊಳ್ಳುತ್ತಿತ್ತು. ಪ್ರಜಾರಾಜ್ಯದಲ್ಲಿ ಮನರಂಜನೆಯೇ ಪ್ರಜಾತಂತ್ರವಾದಂತೆ ಸಾಂಸ್ಕೃತಿಕ ಕಲಸುಮೇಲೋಗರವಾಗಿ



ಜಾತ್ರೆಯಲ್ಲಿ ಕುಸಿದುಬಿದ್ದಿತ್ತು. ಶ್ರೀಮಂತಿಕೆಯ ಅಟ್ಟಹಾಸದ ತೊತ್ತಳ ತುಳಿತದಲ್ಲಿ ಬಡವನ ಒಡಲು ಬಿಕ್ಕಿ ಬಿರಲು ಬಿದ್ದು ಚಪ್ಪಟೆಯಾಗತೊಡಗಿತ್ತು.

ತೇರು ಸಾಗಿತು; ಪಾದಗಟ್ಟೆಯತ್ತ ಧಾವಿಸ ತೊಡಗಿತು. ಒಂದು ದಿವಸದ ಜಾತ್ರೆಗಾಗಿ ಮಾನವನ ಯುಗ ಯುಗದ ಯಾತ್ರೆ ನಡದೇ ಇತ್ತು.

ಮಗಳು ಮಹಾದೇವಿ ಎಲ್ಲಿಯೋ ನಿಂತು ತೇರನ್ನು ನೋಡಿ ಬಂದಳು. ತನ್ನ ರೊಕ್ಕದಲ್ಲಿ ಬಾಳೀಕಾಯಿ, ಖಾರೀಕ, ಉತ್ತತ್ತಿಗಳನ್ನು ಕೊಂಡು ಹಾರಿಸಿ ಕವಡಿನ ದೇವತೆಯ ರಿಣ ತೀರಿಸಿದಳು. ಭಕ್ತಿ ಭಾವದಿಂದ ಮೊಕಕವಟ್ಟಿ ಲಕ್ಷ್ಮೀದೇವಿಗೆ ಅಡ್ಡಬಿದ್ದಳು.

ತೇರು ಪಾದಗಟ್ಟೆ ಮುಟ್ಟಿದರೂ ಜಾತ್ರೆ ಇನ್ನೂ ಕರವೇ ಇತ್ತು. ಮೂಕುಮಗ್ಗಲಲ್ಲಿ ಹುಡಿಗೆಯರಿಗೆ ಬಾಯ್ದು ಸಿಳ್ಳು ಹೊಡೆಯುವ ಪ್ರಜಾರಾಜ್ಯದ ಸ್ವಾತ್ಯ ಪ್ರಜೆಗಳು ನಗುತ್ತಲೆ ನಿಂತಿದ್ದರು.

ಮಹಾದೇವಿಗೆ ಈ ಅಸಹ್ಯ ನಗೆಯನ್ನು ತಡೆದು ಕೊಳ್ಳುದಾಗಲಿಲ್ಲ. ಅವಳು ಬಂದ ದಾರಿಗೆ ಸುಂಕ ವಿಲ್ಲವೆಂಬಂತೆ ನಡೆಯುತ್ತಲೆ ಒಳದಾರಿಯಿಂದ ಮನೆಗೆ ನಡೆದಳು. ಪರಿಚಯದವರು ಕಾರಿನಲ್ಲಿ ಏಕೆ ಹೋಗುವದಿಲ್ಲವೆಂದು ಕೇಳಿದರೆ ಏನು ಹೇಳುವದು? ಅವಳಿಗೆ ತವರಿನ ಅಪ್ರತಿಷ್ಠೆ ಬೇಕಾಗಿರಲಿಲ್ಲ.

ಅವಳು ಮುಖ ತಗ್ಗಿಸಿಕೊಂಡು ಹಾಗೆಯೇ ನಡೆಯುತೊಡಗಿದಳು.

ದಾರಿಯಲ್ಲಿ ಅಣ್ಣನಾದವನು ಇವಳನ್ನು ನೋಡಿ,

"ನಡೆದೇಬಿಟ್ಟೆಯೇನು ತಂಗಿ? ಒಂದು ಆಯಸ್ಕ್ರೀಮ್ ಕೊಡಿಸಲೇನು? ಬೇಕಾದರೆ ಕೋಲ್ಡ ಡ್ರಿಂಕ್ ಕುಡಿ" ಎಂದನೇ ಹೊರತು ಕೊಡಿಸಲಿಲ್ಲ.

"ಬೇಡವಪ್ಪಾ! ಬಳ್ಳೊಳ್ಳೀ ಮಾರುವ ನಾನು ಇದನ್ನೇನು ಕುಡಿಯುವದು."

"ಬಿಡಲಿ ಬಿಡ್ರಿ. ಅದೇನೋ ಅಂತಾರಲಾ, 'ಕಲಗಡಿದೆಗೆ ಉಕ್ಕು ಭಾಳ; ಬಡವರಿಗೆ ಸೊಕ್ಕು ಭಾಳ'"

ಪುಷ್ಪಾ ಫ್ರುಟ್‌ಸಾಲಡ್ ಪೆಕ್ಕೆತ್ತಿ ನುಡಿದಳು.

"ಕರದ ಹಣ್ಣು ಕೊಟ್ಟರ ಆಳಿಯನಿಗೆ ಮಲ-ರೋಗ ಬಂತಂತೆ. ನಿಮ್ಮ ತಂಗಿ ವಂಡರ್‌ಫುಲ್ ಇದ್ದಾಳ ಭಾವಯ್ಯ!" ಎಂದು ಸೆರಗು ಹಾರಿಬಿದ್ದರೂ ಲಕ್ಷ್ಯ ಮಾಡದೆ ಇಂಜನೀಯರನ ಹೆಂಡತಿ ನುಡಿದು ಆರೆಂಜನ್ನು ಕೊಳವೆಯಿಂದ ಹೀರತೊಡಗಿದಳು.

ಮಹಾದೇವಿಗೆ ಈ ಮಾತುಗಳು ಮರ್ಮಕ್ಕೆ ಚುಚ್ಚಿದವು. ಆ ನೋವಿಗೆ ಎದೆ ಹೋಯಿತು. ಅವಳು ಗಡಬಡಿಯಿಂದ ಮನೆಗೆ ನಡೆದು ನಡೆದದ್ದನ್ನೆಲ್ಲ ತಾಯಿಯ ಮುಂದೆ ಹೇಳಿ ಬಿಕ್ಕಿ ಬಿಕ್ಕಿ ಅತ್ತಳು. ಅವಳ ತೊಡೆಯ ಮೇಲೆ ಮಲಗಿ 'ನೀನೇಕೆ ಕರೆಸಿದೆಯವ್ವಾ' ಎಂದು ಅನೇಕ ಸಲ ನುಡಿದಳು.

ತಾಯಿ ಕಣ್ಣು ಹಾಯುತ್ತಿತ್ತು.

ಮಗಳ ಕಣ್ಣೀರು ಅವಳ ತೊಡೆ ತೋಯಿಸು-ತ್ತಿತ್ತು.

-೩-

ಮರುದಿನ ಇಳಿ ಹೊತ್ತಿನಲ್ಲಿ ಜಾತ್ರೆ ಸೋಲಲು, ಸಾಮಾನುಕೊಳ್ಳಲು ಎಲ್ಲರೂ ಹೊರಟು ನಿಂತರು. ಗಮಗಮ ವಾಸನೆಯ ಸೀರೆಯ ನಿರಿಗೆಗಳು ಫಿಲ್ ಫಿಲ್ ಎಂದು ಓಡಾಡತೊಡಗಿದವು.

"ನಮ್ಮ ಕಾರಿನಾಗ ಜಾಗಾ ಇಲ್ಲ ಮಹಾದೇವಿ! ನೀ ಹಿಂದಾಗಡೆ ಬಸವಂತಿನ್ನ ಕರೆದುಕೊಂಡು ಬಾ! ನಿನಗೂ ಜಾತ್ರೀ ಸಾಮಾನ ಕೊಡಸ್ತೀವಿ" ಪುಷ್ಪಾ ಉಪಕಾರ ಮಾಡುವ ದನಿಯಲ್ಲಿ ಹೇಳಿದಳು.

"ಆಗಲಿ ಅತ್ತಿಗೆ. ಹೋಗಿ ಬರತೀವಿ." ಎಂದ ಮಹಾದೇವಿಯ ಹೃದಯದಲ್ಲಿ ಉಮ್ಮಳವಾಯಿತು.

ನಗೆಯ ತೆರೆಗಳನ್ನು ಎಬ್ಬಿಸುತ್ತ ಕಾರುಗಳು ಹೊರಟು ಹೋದವು.

ಮಹಾದೇವಿ ತನ್ನ ಚೀಲವನ್ನು ತುಂಬಿಕೊಂಡು ತಾಯಿಯ ಹತ್ತಿರ ಬಂದು,

"ಅಪ್ಪಾ ನನ್ನ ಅವಮಾನದ ಕೊಡ ತುಂಬಿ ಹೋಯಿತು; ತಡೆದುಕೊಳ್ಳುವದು ಆಗುವದಿಲ್ಲ. ನಾನು ಹೋಗಿ ಬರುತ್ತೀನಿ. ಆಶೀರ್ವಾದ ಮಾಡಿ ಕಳಿಸು."

ಎಂದ ಮಹಾದೇವಿ ತಾಯಿಯನ್ನು ಅಪ್ಪಿಕೊಂಡಳು.

ತಾಯಿ ನಿರುಪಾಯಳು; ತಂದೆಯದು ಅಸಹಾಯಕ ಸ್ಥಿತಿ. ಇವರ ಅಬ್ಬರವನ್ನು ಯಾರು ಕೇಳಬೇಕು.

"ಹಾಗಾದರೆ ಹೋಗಿಯೇ ಬಿಡುವೆಯೇನು ಮಗಳೆ?"

"ಇಲ್ಲಿ ಇದ್ದರೆ ಯಾರಿಗೆ ಏನು ಸುಖ ಅಪ್ಪಾ! ಸುಳ್ಳೇ ನಿಮಗೆ ವ್ಯಥೆಯಾಗುತ್ತದೆ. ಆದರೆ ನಾನು ಹೋಗುವೆನೆಂದು ಅನ್ನುವದಿಲ್ಲ; ಹೋಗಿ ಬರು-ತ್ತೇನೆ ಅಪ್ಪಾ! ತವರಿನ ರಿಣ ಎಷ್ಟು ಜನ್ಮ ಹುಟ್ಟಿ ಬಂದರೂ ತೀರುವದಿಲ್ಲ. ನಾನು ಸುಖದಿಂದ ಹೋಗುವದಿಲ್ಲವಪ್ಪಾ! ಹಣ್ಣು ಕೊಂದರೆ ನೋಯಿಸಿ

ದೇವರಿಗೆ ಅದು ಕಾಣದಾಗುತ್ತದಂತೆ. ನಾನು ಸಂತೋಷದಿಂದಲೇ ಹೋಗಿ ಬರುತ್ತೇನೆ. ನನ್ನ ಅಣ್ಣ-ಅತ್ತಿಗೆ ಚಂದವಾಗಿರಲಿ. ಅವರ ಬಳ್ಳಿ ಹಬ್ಬಲಿ..."

ಮಹಾದೇವಿ ತಾಯಿಯ ಪಾದ ಹಿಡಿದಳು:

"ಆ ಸಾದಾ ಸೀರೆಯನ್ನು ಒಯ್ಯಬೇಡ. ಬಿಟ್ಟು ಹೋಗು."

ತಾಯಿ ಗದ್ಗದಿತಳಾಗಿ ಹೇಳಿದಳು.

"ಛೇ! ಛೇ! ಅದು ತವರಿನ ಉಡುಗೊರೆ. ಪರಮ ಪವಿತ್ರ. ಅದನ್ನು ನೀನು ಕುಂಕುಮ ಹಚ್ಚಿ ಕೊಡು. ಪ್ರೀತಿಯಿಂದಲೇ ಒಯ್ಯುತ್ತೇನೆ."

ಈ ಮಾತನ್ನು ಕೇಳಿ ತಾಯಿ ಕಣ್ಣೀರಿನ ಹೊಳೆ ಹರಿಸಿದಳು.

ಮಹಾದೇವಿ ತನ್ನ ರೊಕ್ಕದಿಂದ ಎರಡು ತೆಂಗಿನ ಕಾಯಿಗಳನ್ನು ತೆಗೆದುಕೊಂಡು ದೇವರಿಗೆ ಒಡೆಸಿದಳು. ಬೆಂಡು, ಬತ್ತಾಸು, ಕಡಲೆ, ಚುರಮುರಿ ಪ್ರಸಾದವನ್ನು ಪಡೆದುಕೊಂಡು ಚೀಲದಲ್ಲಿ ಹಾಕಿಕೊಂಡಳು.

ಜಾತ್ರೆ ಕಿಕ್ಕಿರಿದು ಕೇಕೆ ಹಾಕುತಿತ್ತು. ಜೋಕಾಲಿ ಮೇಲೆ ಕೆಳಗೆ ಹೋಗಿ ಬರುತ್ತಿತ್ತು. ಜನ ಜೀವನದ ಏರಿಳಿತಕ್ಕೆ ಸಾಂಕೇತಿಕವಾಗಿ. ಇನ್ನೊಂದು ಕಡೆ ಜೋಕಾಲಿ ತಿರುಗುತ್ತಿತ್ತು ಗರಗರ ಸುತ್ತುತ್ತಿತ್ತು. ಶ್ರೀಮಂತಿಕೆಯ ಮತ್ತಿನಲ್ಲಿ ಸುತ್ತುವ ತಲೆಗಳಂತೆ. ಸುತ್ತುವ ಜೋಕಾಲಿ ನಿಲ್ಲುತ್ತಿತ್ತು; ತಿರುಗಿದ ತಲೆ? ಇನ್ನೊಂದೆಡೆಗೆ ಜೂಜಾಟ. ಪ್ರಜಾಪ್ರಭುತ್ವದಲ್ಲಿ ಪ್ರಭುತ್ವವೇ ಇದನ್ನು ರುಬ್ಬಹಚ್ಚಿ ಲಾಟರಿ ತೆಗೆಯುತ್ತಿರುವಾಗ ಸಾಮಾನ್ಯ ಜನ ಬಿಟ್ಟಾರೇ? ಒಂದಕ್ಕೆ ಆರು ಆರಕ್ಕೆ ಹನ್ನೆರಡು ಗುಳಿಗುಳಿ ಡಬ್ ನಡೆದಿತ್ತು.

ಇಷ್ಟೆಲ್ಲ ಸಡಗರ ನಡೆದಿದ್ದರೂ ಮಹಾದೇವಿಗೆ ಯಾವುದೂ ಕಾಣುತ್ತಿರಲಿಲ್ಲ. ನೇರವಾದ ದಾರಿಯೊಂದು ಕಾಣುತ್ತಿತ್ತು. ತಾಯಿಯ ಮುಖ ಮಾತ್ರ ತೇಲುತ್ತಿತ್ತು. ಗಂಡನ ಕೈ ಕೈ ಮಾಡಿ ಕರೆಯುತ್ತಿರುವಂತೆ ಭಾಸವಾಯಿತು.

ಅವಳು ಇತ್ತ ಅತ್ತ ನೋಡದೆ ಬಸ್ಸು ನಿಲ್ದಾಣದ ಕಡೆಗೆ ಒಂದೇ ಸವನೆ ಧಾವಿಸ ತೊಡಗಿದಳು. ಕಣ್ಣೀರು ಹರಿದು ಗಲ್ಲದ ಬಳಿಯ ಕೋಡು ಗಲ್ಲಿನಂತೆ ಕಾಣುತ್ತಿತ್ತು. ಚಿಮ್ಮಿ ಬರುವ ನೀರು ಗಲ್ಲಗಳ ಮೇಲೆ ಪುಟಿದು ಬೀಳುತ್ತಿತ್ತು.

ಮಹಾದೇವಿ ಬಸ್ಸನ್ನು ಹತ್ತಿ ಕಿಡಿಕಿಯ ಹತ್ತಿರ ಕುಳಿತಳು. ಅವಳ ಮುಖ ಬಿದ್ದು ಹೋಗಿತ್ತು. ಆಗ ಅವಳ ನೆರೆಮನೆಯ ಶಿವಬಸಪ್ಪನು ಇವಳನ್ನು ನೋಡಿ,

"ಇದೇನು ಮಹಾದೇವಿ ಬಸ್ಸಿನಲ್ಲಿ ಕುಳಿತೆಯಲ್ಲ?"

"ಇವಳ ತಾಯಿಯ ಹೈಯಲ್ಲಿ ಹುಡುಗಿ ಇಲ್ಲ ಹೆಂಡತಿ ಬಂದಿತು ಕಾಕಾ!".

"ನಿನ್ನ ಗಂಡನಿಗೆ ತಾಯಿಯೆಲ್ಲಿದ್ದಳು ಮತ್ತೆ? ಎಲ್ಲಾ ತಿಳಿಯಿತು ಬಿಡು; ಮನೆಗೆ ಬಂದು ಬಿಟ್ಟ ವಸ್ತು ಕಂಕುಮವನ್ನು ತೆಗೆದುಕೊಳ್ಳಲಿಲ್ಲ ಮಗಳೆ! ಬಹಳ ದಿನಗಳ ಮೇಲೆ ಬಂದಿದ್ದಿ..."

"ಕೊಟ್ಟ ಕಂತ ಹಬ್ಬಾಯಿತು ಕಾಕಾ! ಆಶೀರ್ವಾದ ಮಾಡಿ."

ಕೋಟಾದು ಹೊರಟಿತು. ಮಹಾದೇವಿ ತನ್ನ ತವರಿನತ್ತ ಕೈ ಜೋಡಿಸಿದಳು:

ಅವಳ ತುಟಿ ಮುಂದೆ ಬಂದಿತು.

ಕಣ್ಣು ಹನಿ ಅದರ ಮೇಲೆ ಕುಳಿತಿತು.

-೪-

ಮಹಾದೇವಿ ಮನೆಬಿಟ್ಟು ಹೊರಟ ಸ್ವಲ್ಪ ಹೊತ್ತಿನಲ್ಲಿಯೇ ಮುಂಬಯಿಯ ಚಂದ್ರಣ್ಣನು ಮನೆಗೆ ಬಂದಾಗ ತಾಯಿ ಗಲ್ಲಕ್ಕೆ ಕೈ ಹಚ್ಚಿಕೊಂಡು ಅಳುತ್ತಿದ್ದಳು. ತಂದೆ ಕಟ್ಟೆಯ ಮೇಲೆ ಮೊಣಕಾಲು ಸುತ್ತ ವಲ್ಲಿಯನ್ನು ಸುತ್ತಿಕೊಂಡು ಕುಳಿತಿದ್ದನು.

"ಅವ್ವಾ ಇದೇನವ್ವಾ ಹೀಗೆ?"

ಚಂದ್ರಣ್ಣ ಕೇಳಿದನು. "ಮತ್ತೆ ತಂಗಿ ಬರಲಿಲ್ಲ ಏನು?"

ತಾಯಿ ಗದ್ಗದ ಸ್ವರದಲ್ಲಿ ಎಲ್ಲವನ್ನೂ ಹೇಳಿದಳು. ತಂದೆ ಅಬ್ಬರಿಸಿದನು.

"ಮಹಾದೇವಿಯ ಗಂಡ ಶಾಂತವೀರಣ್ಣ. ನಿಮಗೆ ಕೊಡದಿದ್ದರೆ ಈ ದೌಲತ್ತು ಎಲ್ಲಿಂದ ಬರುತ್ತಿತ್ತು. ಸೊಕ್ಕಿಗೆ ಬಂದೀರಿ ಮಕ್ಕಳಿರಾ!

"ತಂಗಿ ಹೋಗಿ ಎಷ್ಟು ಹೊತ್ತಾಯಿತು ಅವ್ವಾ?"

"ಇದೇ ಈಗ ಹೋಗಿದ್ದಾಳೆ. ದೇವರಿಗೆ ಶರಣು ಮಾಡಿ ಗೋಕಾವಿ ಸ್ಟೇಶನ್ನಿಗೆ ಬಸ್ಸಿನಲ್ಲಿ ಹೋಗಿ ಅಲ್ಲಿಂದ ರೇಲು ಹಿಡಿಯುತ್ತಾಳಂತೆ!"

ಚಂದ್ರಣ್ಣ ಕೈಕಾಲು ಕೂಡ ತೊಳೆದುಕೊಳ್ಳದೆ ಬಾಗಿಲ ಕಡೆಗೆ ತಿರುಗಿದನು.

"ತಂಗಿಯ ಕ್ಷಮಾಪಣೆ ಕೇಳಿ ಕರೆದುಕೊಂಡು ಬರುತ್ತೇನೆ. ಅವಳು ನೊಂದರೆ ನಮ್ಮ ಗತಿಯೇನು? ಇಲ್ಲ; ಹೆಂಗಸರಿಗೂ ಬುದ್ಧಿ ಇಲ್ಲ."

"ಹಾಗಾದರೆ ಬೇಗನೆ ಹೋಗು ಚಂದ್ರಣ್ಣ. ದೇವರ ಪೌಳಿಯ ಹತ್ತಿರವೇ ಮಗಳು ಸಿಗಬಹುದು.

ಚಂದ್ರಣ್ಣ ಈ ಜನ ಜಾತ್ರೆಗೆ ಬಂದನು. ಅದು ಜನದ ಜಾತ್ರೆಯಾಗಿದ್ದರಿಂದ ಅವ್ಯವಸ್ಥಿತವಾಗಿ ಸಿಕ್ಕಾಪಟ್ಟೆ ಅಸ್ತವ್ಯಸ್ತವಾಗಿತ್ತು; ದನಗಳ ಜಾತ್ರೆಯಾಗಿದ್ದರೆ ಒಂದು ವ್ಯವಸ್ಥೆಯಾದರೂ ಇರುತ್ತಿತ್ತು.

"ತಂಗಿನ್ನ ನೋಡಿದೇನು ಅತ್ತವ್ವಾ!"

"ಓ! ಯಾವಾಗ ಬಂದೆ ಚಂದ್ರಣ್ಣಾ! ಅಲ್ಲೇ ಪೌಳಿ ಹಂತ್ಯಾಕ ಇರಬೋದು ಹೋಗಿ ನೋಡು."

ಮಹಾದೇವಿ ಪೌಳಿಯ ಹತ್ತಿರ ಇರಲಿಲ್ಲ."

"ಮಹಾದೇವಿ ಇತ್ತ್ಯಾಗ ಬಂದಿದ್ಲೇನು ಮಾವಾ?"

"ಜೋಕಾಲಿ ಹಂತ್ಯಾಕ ಇರಬೇಕು ನೋಡಲಾ!"

ಆದರೆ ಮಹಾದೇವಿ ಜೋಕಾಲಿ ಹತ್ತಿರ ಇರಲಿಲ್ಲ. ಎಲ್ಲಿಯೂ ಕಾಣಲಿಲ್ಲ:

ಚಂದ್ರಣ್ಣ ಪರಿಚಯದ ಎಲ್ಲರನ್ನೂ ಕೇಳುತ್ತ ಜಾತ್ರೆಯನ್ನು ಭೇದಿಸುತ್ತ ನಡೆದನು. ಎಲ್ಲಿಯೂ ತಂಗಿಯ ಸುಳಿವೇ ಸಿಗಲಿಲ್ಲ.

[illegible]

ಧಾವಿಸಿ ಬಂದನು. ಅಲ್ಲಿಯೇ ನಿಂತ ಶಿವಬಸಪ್ಪ ಇವನನ್ನು ನೋಡಿ-

"ನಿನ ಜಾತ್ರ್ಯಾಗ ತಂಗೀನ ಕಳಿಸಬೇಕೇನ ಹಾವ ಕಾರಾ! ಇದೇ ಈಗ ಹೋದ್ಲು ನೋಡು ಸ್ಟೇಶನ್ನಿಗೆ"

"ನೀನು ನೋಡಿದೆಯೇನು ಕಾಕಾ?"

"ಬಸ ನೋಡುವವನೆ ಮಾತಾಡಿಸಿದೆನಪ್ಪಾ!

ಅವಳ ಅತ್ತಿಗೆ ಚೀರು ಎಂದು ತಾರು ಬಂತಂತೆ!"

ಚಂದ್ರಣ್ಣನ ಕಾರು ಸ್ಟೇಶನ್ನದತ್ತ ಅತ್ಯಂತ ವೇಗದಿಂದ ಓಡತೊಡಗಿತು.

ಜಾತ್ರೆಯ ಮೇಳ ಹಿಂದೆ ಹಿಂದೆ ಸರಿಯುತ್ತ



ಹೋದಂತೆ ಅದರ ಕಿಲಕಿಲು ಶಬ್ದವೂ ಮಂದವಾಗ ತೊಡಗಿತು.

ಈಗ ಕಾರಿನ ಸ್ಟೀಮಿನ ದನಿಯು ಮಾತ್ರ ಕೇಳುತ್ತಿತ್ತು.

ಮೂರನೆಯ ವರ್ಗದ ಡಬ್ಬಿಯಲ್ಲಿ ಕಿಡಕಿ ಹತ್ತಿರ ಮಹಾದೇವಿ ಕುಳಿತುಕೊಂಡಿದ್ದಳು. ಮುಖ ಬಿಳಿಚಿಹೋಗಿತ್ತು.

ಇನ್ನೇನು ಗಾಡಿ ಬಿಡುವದರಲ್ಲಿತ್ತು.

ಚಂದ್ರಣ್ಣ ಓಡುತ್ತ ಬಂದು "ತಂಗಿ!" ಎಂದು ಕೂಗಿದನು.

ಮಹಾದೇವಿಯ ಕಣ್ಣುಗಳಲ್ಲಿ ಪಳಕ್ಕನೆ ನೀರು ಚಿಮ್ಮಿದವು.

"ನೀನೇಕೆ ಬಂದಿ ಅಣ್ಣಾ! ನೀನೇಕೆ ಬಂದೆಯಪ್ಪಾ!"

"ಇಳಿದು ಬಾ ತಂಗಿ! ನಮ್ಮಿಂದ ತಪ್ಪಾಗಿದೆ!, ಇಳಿದು ಬಾರವ್ವ!"

ಚಂದ್ರಣ್ಣ ಅವಸರದ ಅಂತಃಕರಣದ ದನಿಯಲ್ಲಿ ಬೇಡಿಕೊಂಡನು.

"ಬೇಡ ಅಣ್ಣಾ! ನಾನು ಬರಬಾರದು! ನಾನು ಬಂದರೆ ನಿಮಗೆಲ್ಲ ತೊಂದರೆ! ಅಲ್ಲದೆ ಅಗೌರವ. ಬಡವಿಯೊಡನೆ... ಹೋಗಲಿ ಬಿಡು...ಅಣ್ಣಾ! ಮುಂಬಯಿಯಿಂದ ಬಂದವನು ಹೀಗೆಯೇ ಬಂದೆಯೇನು? ಬೆವರು ಹರಿಯುತ್ತಿದೆಯಲ್ಲ ಅಣ್ಣ!"

ಮಹಾದೇವಿ ಕಿಟಕಿಯ ಗೋಡೆಗೆ ಆನಿಸಿಕೊಂಡು ನಿಂತ ಅಣ್ಣನ ಮುಖದ ಬೆವರ ಹನಿಗಳನ್ನು ತನ್ನ ಸೆರಗಿನಿಂದ ಒರೆಸತೊಡಗಿದಳು. ಹೀಗೆ ಮಾಡುತ್ತಿರುವಾಗ ಅವಳ ಕಣ್ಣ ಹನಿಗಳು ಅವನ ತಲೆಯ ಮೇಲೆ ಬೀಳತೊಡಗಿದವು. ಅಣ್ಣನ ಕಣ್ಣ ಹನಿಗಳನ್ನು ಭೂದೇವಿ ಗಟಗಟ ಕುಡಿಯ ತೊಡಗಿದಳು.

"ನೀನು... ನನ್ನ... ಅಣ್ಣ... ಚಂದ್ರಣ್ಣ...... ಆದರೆ... ಅತ್ತಿ... ಗೆ... ರ... ನಾನು... ಏನು ಸಂಬಂಧ...ಹೇ...ಳು?

"ಸಿಟ್ಟಾಗಬೇಡ ತಂಗಿ!"

"ಛೇ! ನಾನೇಕೆ ಸಿಟ್ಟಾಗಲೆಪ್ಪಾ ಯಾರ ಮೇಲೆ ಕೋಪಗೊಳ್ಳಲಿ? ಹಾ...ಊಟ...ಕೆ...ದ...ರಿ...ದೆ...ಹಾಲುಂಡ ತವರಿಗೆ..." ಮಹಾದೇವಿ ಬಿಕ್ಕರಿಸಿದಳು,

ಗಾಡಿ ಚಲಿಸ ತೊಡಗಿತು.

ಅಣ್ಣನು ಚಲಿಸುವ ಗಾಡಿಗುಂಟ ನಡೆಯ ತೊಡಗಿದನು. ಗಾಡಿ ವೇಗವನ್ನು ಹಿಡಿದ ಕೂಡಲೆ ನಿಂತಲ್ಲಿಯೇ ನಿಂತನು.

ತಂಗಿ ಕಿಡಕಿಯ ಹೊರಗೆ ಅಣ್ಣನನ್ನು ನೋಡುತ್ತಲೆ ಇದ್ದಳು.

ಅಣ್ಣನ ಕೈ ಮೇಲೆ ಮೇಲೆ ಎದ್ದು ಬೀಸುತಿತ್ತು! ತಂಗಿಯ ಕೈ ಗಾಳಿಯಲ್ಲಿ ಬೀಸುತಿತ್ತು.

"ಅಣ್ಣಾ !"

"ಹೋಗಿ...ಬಾ...ತಂ...ಗಿ!

ಗಾಡಿ ಸಿಳ್ಳು ಹಾಕಿತು.

ತಂಗಿ ಮುಖ ಒಳಕ್ಕೆ ಸರಿಸಿಕೊಂಡಳು. ಅಣ್ಣನೈ ಮಾತ್ರ ಇನ್ನೂ ನಿಂತಲ್ಲಿಯೇ ನಿಂತುಕೊಂಡಿದ್ದನು



**ಶೇಷನಾರಾಯಣ**

# ವೃಂದಕ್ಕಾ ವೃಂದಕ್ಕಾ ಇವರು ಇನ್ನೂ ಬಂದೇ ಇಲ್ಲ

ಬೆಂಗಳೂರಿನಲ್ಲಿಯೆ ಭಾರೀ ಕಂಟ್ರಾಕ್ಟದಾರ ಎನ್ನಿಸಿಕೊಂಡಿರುವ ಗೋವಿಂದಸ್ವಾಮಿ ತನ್ನ ಪತ್ನಿ ವೃಂದಳಿಗೆ ಶ್ರೀನಿವಾಸನ ಪರಿಚಯ ಮಾಡಿಕೊಟ್ಟು, ಹೇಳಿದ:

"ಇವರೇ ಶ್ರೀನಿವಾಸ, ಆವೊತ್ತು ನಾನು ಹೇಳಿದ್ದವರು."

ಮುಗುಳ್ನಗುತ್ತ ಒಂದು ಸಲ ವೃಂದಾ ಆಪಾದಮಸ್ತಕ ಆಗಂತುಕನನ್ನು ನೋಡಿದಳು.

ಶ್ರೀನಿವಾಸ ಮೂವತ್ತು - ಮೂವತ್ತೆರಡರ ಪ್ರಾಯದ ಲಕ್ಷಣವಾದ ಯುವಕ. ಹಳ್ಳಿಯಿಂದ ಬಂದಿರುವುದರಿಂದ ಅವನ ಕಣ್ಣುಗಳು ಗುಳಿಬಿದ್ದಿಲ್ಲ. ಆದರೆ ಅವನ ಉಡುಪು ಕಡಮೆ ಬೆಲೆಯದು. ಟೆರಿಲೀನ್ ಇತ್ಯಾದಿ ದುಬಾರಿಯದಲ್ಲ. ಕೈಗೆ ಗಡಿಯಾರವೂ ಇಲ್ಲ. ಆದರೆ ಕಾಲಿಗೆ ಚಪ್ಪಲಿ ಇದೆ

ತಲೆಬಾಗಿಸಿ ನಿಂತ ಶ್ರೀನಿವಾಸ "ನಮಸ್ಕಾರ" ಅಂದ.

"ನಮಸ್ಕಾರ" ಎಂದು ಪ್ರತಿವಂದಿಸಿದಳು ವೃಂದಾ.

★ ★ ★ ★

ಗೋವಿಂದಸ್ವಾಮಿ ಬಿ. ಇ. ಮಾಡಿಕೊಂಡು ಸರಕಾರದ ಕೆಲಸಕ್ಕೆ ಸೇರಲಿಲ್ಲ ಎಂದಾಗ ಅವನಿಗೆ ಹುಚ್ಚು ಎಂದು ಸ್ನೇಹಿತರು ಹಾಸ್ಯಮಾಡಿದ್ದುಂಟು.

ಆದರೆ ನಿಜವಾಗಿ ನಡೆದದ್ದು ಹಾಗಲ್ಲ.

ಎಲ್ಲರಂತೆಯೆ ಆತ ಇಂಜನಿಯರಿಂಗ್ ಕಾಲೇಜಿನಿಂದ ಹೊರಬಂದ ತಕ್ಷಣ ಹತ್ತಾರು ದಿಕ್ಕುಗಳಿಗೆ ಅರ್ಜಿಗಳನ್ನು ಎಸೆದಿದ್ದ. ಆದರೆ ಅವನಿಗೆ ಆಗ ಕೆಲಸ ಸಿಗಲಿಲ್ಲ. ಅವನದು ಅನುಕೂಲವಾದ ಮನೆತನ.

ಆದುದರಿಂದ ಆತ ಸ್ವಂತ ಉದ್ದಿಮೆಗೆ ಇಳಿದ. ಅದರಲ್ಲಿ ಫಲ ಕಂಡ.

ಇವೊತ್ತು ಅವನು ಲಕ್ಷಾಧಿಪತಿ. ಭಾರೀ ಭಾರೀ ಕೆಲಸಗಳ ಕಂಟ್ರಾಕ್ಟನ್ನು ಆತ ಹಿಡಿಯುತ್ತಾನೆ. ಬೆಂಗಳೂರಿನಲ್ಲಿ ಮಾತ್ರವಲ್ಲ, ರಾಜ್ಯದ ಎಲ್ಲ ಭಾಗಗಳಿಗೂ ಕೈಚಾಚುತ್ತಾನೆ.

ಬರೇ ದಾರಿ ಕೆಲಸವನ್ನೆ ಕಲಿತು ಕಂಟ್ರಾಕ್ಟದಾರನಾಗದೆ. ಇಂಜನಿಯರಿಂಗ್ ಪಾಸು ಮಾಡಿ, ಜತೆಗೆ ವಾಕ್ಚಾತುರ್ಯವೂ ಜನರಲ್ಲಿ ಬೆರೆಯುವ ಮನೋಭಾವವೂ ನೋಡಿಯೂ ಅಧಿಕಾರಿಗಳ ಬಳಿ ನಡೆದುಕೊಳ್ಳುವ ಝುಣಝುಣ ರೀತಿಯೂ ಇವೆಲ್ಲವೂ ಮೇಳೈಸಿದರೆ ಪ್ರಸಿದ್ಧಿಗೆ ಬರಲು ಇನ್ನೂ ಎಷ್ಟು ವರ್ಷಗಳು ಬೇಕಾದೀತು?

ಈಗ ಅವನು ಏಳು ಎಂಟು ಸಾವಿರ ರೂಪಾಯಿಗಳು ಸಂಬಳ ಕೊಡುವ ಧಣಿ. ವಾಸಕ್ಕಿರುವ ಭಾರೀ ಮನೆ ಮಾತ್ರವಲ್ಲ, ಬೇರೆ ಆರೆಂಟು ಮನೆಗಳೂ ಇವೆ. ಅವುಗಳಿಂದ ಬಾಡಿಗೆ ಬರುತ್ತದೆ. ಗಂಡನಿಗೊಂದು ಹೆಂಡತಿಗೊಂದು ಕಾರು ಇದೆ

ಗೋವಿಂದಸ್ವಾಮಿ ಊರಲ್ಲಿರುವುದೇ ಅಪರೂಪ. ಇವೊತ್ತು ಕೋಲಾರ. ನಾಳೆ ಗುಲ್ಬರ್ಗ. ಹೀಗೆ ಅವನ ವ್ಯವಹಾರ

ತಾನು ಊರಲ್ಲಿಲ್ಲದಾಗ ತನ್ನ ಮನೆ ಮತ್ತು ಬೆಂಗಳೂರಿನ ಕೆಲಸ ಕಾರ್ಯಗಳನ್ನು ನಿರ್ವಹಿಸಲು ತುಂಬ ನಂಬಿಕೆಯವನು ಒಬ್ಬ ಕೆಲಸಕ್ಕೆ ಬೇಕಾಗಿದ್ದಿತು

ಈ ಕೆಲಸವನ್ನು ಇದುವರೆಗೂ ರಾಮಕೃಷ್ಣ ಮಾಡುತ್ತಿದ್ದ. ಗೋವಿಂದಸ್ವಾಮಿ ಕಂಟ್ರಾಕ್ಟ ಹಿಡಿದಾಗಲೇ ಅವನು ಕೆಲಸಕ್ಕೆ ಸೇರಿದ್ದ. ಈಗ ಅವನೂ ಒಳ್ಳೆಯ ಸ್ಥಿತಿಗೆ ಬಂದಿದಾನೆ

ಹೀಗಾಗಿ ಶ್ರೀನಿವಾಸ ಬೆಂಗಳೂರಿಗೆ ಬಂದದ್ದು

ಶ್ರೀನಿವಾಸ ರಾಮಕೃಷ್ಣನ ಊರಿನವನು. ಅವನಿಗೆ ಬಂಧುವು ಸಹ. ಹಳ್ಳಿಯಲ್ಲಿಯೆ ಆತ ಪ್ರಾಥಮಿಕ ಶಾಲೆಯ ಉಪಾಧ್ಯಾಯ

"ಈ ಕೆಲಸದಲ್ಲಿ ಏನು ಸಿಗುತ್ತದೆ? ಮೂರೂರು ಮುಕ್ಕಾಲು ರೂಪಾಯಿ ಸಂಬಳ ತೆಗೆದುಕೊಂಡು ಸಾಯೋವರೆಗೂ ಹೀಗೆಯೆ. "ಇರಬೇಕೆ? ಹೊಟ್ಟೆಗಿದ್ದರೆ ಬಟ್ಟೆಗಿಲ್ಲ. ಬಟ್ಟೆಗಿದ್ದರೆ ಹೊಟ್ಟೆಗಿಲ್ಲ. ಪಟ್ಟಣಕ್ಕೆ ಹೊರಟು ಬಾ" ಎಂದು ರಾಮಕೃಷ್ಣ ಪುಸಲಾಯಿಸಿದ

ಶ್ರೀನಿವಾಸ ಈ ಏರ್ಪಾಟಿಗೆ ಮೊದಲು ಒಪ್ಪಲಿಲ್ಲ. ಏಕೆ? ತನಗಿರುವ ಸರಕಾರೀ ಕೆಲಸವನ್ನು ತ್ಯಜಿಸುವುದೇ? ಬಿಟ್ಟು, ಖಾಸಗಿ ಕೆಲಸಕ್ಕೆ ಸೇರುವುದೇ?

ಸಂಬಳ ಕಡಮೆಯಾದರೆ ಏನಂತೆ? ಸರಕಾರದ ಕೆಲಸ ಸರಕಾರದ ಕೆಲಸವೇ. ಖಾಸಗಿಯಲ್ಲಿ ಆ ಭದ್ರತೆ ಎಲ್ಲಿ ಸಿಗಬೇಕು?

ಇದಕ್ಕಿಂತ ಮುಖ್ಯವಾದದ್ದು, ತನ್ನ ಕೆಲಸ ತುಂಬ ಪವಿತ್ರವಾದುದು ಎನ್ನುವುದು ಶ್ರೀನಿವಾಸನ ಭಾವನೆ. ನಾಳಿನ ಪ್ರಜೆಗೆ ಇಂದು ಓನಾಮ ಹೇಳಿಕೊಡುವ ವೃತ್ತಿಯಲ್ಲವೇ ಅದು. ತಾನು ಓನಾಮ ಬ್ರಹ್ಮ.

ಆದರೆ ರಾಮಕೃಷ್ಣನ ಒತ್ತಡ, ಬೇರೆಯವರ ಹೇಳಿಕೆ ಇವೆಲ್ಲವುಗಳಿಗೆ ಶ್ರೀನಿವಾಸ ಮಣಿದ.

ಏನು ಸರಕಾರೀ ಕೆಲಸ? ಅಷ್ಟರಲ್ಲಿಯೇ ಇದೆ. ಭ್ರಾಂತಿ ಇದ್ದು ಖಾಸಗಿಯಲ್ಲಿ ಮುಂದುವರಿದರೆ ಸಮುದ್ರದಲ್ಲಾದರೂ ಹೋಗಿ ಈಜಬಹುದು. ಅದಕ್ಕೆ ಅವಕಾಶವಿದೆ. ಸಣ್ಣ ಬಾವಿಯಲ್ಲಿಯೆ ಕಪ್ಪ-ಳಿಸಿಕೊಂಡಿದ್ದರೆ ಏನು ಪ್ರಯೋಜನ?

ಅಂತೂ ಇಂತೂ ಶ್ರೀನಿವಾಸ ತನ್ನ ಕೆಲಸಕ್ಕೆ ರಾಜೀನಾಮೆಯಿತ್ತು ಬೆಂಗಳೂರಿಗೆ ಬಂದ. ರಾಮಕೃಷ್ಣ ಗುಲ್ಬರ್ಗಕ್ಕೆ ಹೋದ. ಅಲ್ಲಿ ಒಂದು ಭಾರೀ ಕೆಲಸ ನಡೆಯುತ್ತ ಇದೆ. ಅದಕ್ಕೆ ಅವನು ಸೂಪರ್ ವೈಸರ್

★ ★ ★ ★

ಶ್ರೀನಿವಾಸನಿಗೆ ಕಳೆದ ವರ್ಷ ಹಾಗೆ ಮದುವೆಯಾಗಿತ್ತು. ಮದುವೆಯಾಗಿ ಸಂಸಾರ ಹೂಡಿದ ನಾಲ್ಕು ತಿಂಗಳುಗಳಲ್ಲಿಯೆ ಆತ ಬೆಂಗಳೂರಿಗೆ ಬಂದು ಬಿಟ್ಟ.

ಈಗ ಆತ ಇಲ್ಲಿ ಮನೆಮಾಡಬೇಕು

ಗೋವಿಂದಸ್ವಾಮಿ, ಈಗ ಬೇರೆ ವ್ಯವಸ್ಥೆಯನ್ನು ಮಾಡಿದ. ಅತನದು ಭಾರೀ ಮನೆ. ಎರಡು ವರ್ಷಗಳ ಹಿಂದೆ ಅವನು ಈ ಮನೆಯನ್ನು ಎರಡೂವರೆ ಲಕ್ಷ ರೂಪಾಯಿಗಳಿಗೆ ಕೊಂಡಿದ್ದಾನೆ

ಈ ಮನೆಗೆ ವಿಶಾಲವಾದ ಕಂಪೌಂಡ್ ಇದೆ. ಇದರ ಪ್ರಧಾನ ಬಾಗಿಲು ಪೂರ್ವಕ್ಕೆ; ಮನೆಯ ಬಾಗಿಲು ಮಾತ್ರ. ದಕ್ಷಿಣಕ್ಕೆ ಕಂಪೌಂಡಿಗೆ ತಾಗಿದ

ಬಾಗಿಲಲ್ಲಿ ನಿಂತು ಶಾಂತ ಮಾರ್ದನಿ ಕೊಡು ತ್ತಾಳೆ:

"ವೃಂದಕ್ಕಾ, ವೃಂದಕ್ಕಾ..."

* * * *

ಶ್ರೀನಿವಾಸನಿಗೆ ಈಗ ಆ ಮನೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದೆ. ಇವನು ನಂಬಿಕೆಗೆ ಅರ್ಹನಾದ ವನು ಎನ್ನುವ ಭಾವನೆ ಗೋವಿಂದಸ್ವಾಮಿಗೆ ದಿನ ದಿನಕ್ಕೆ ದೃಢವಾಗುತ್ತಿದೆ.

ಮುಂಭಾಗದ ಒಂದು ಕೋಣೆಯೇ ಅವನ ಆಫೀಸ್ ರೂಂ. ಅವನು ಕುಳಿತು ಕೆಲಸ ಮಾಡು-ವಂಥಾದ್ದೇನೂ ಇಲ್ಲ. ಓಡಾಡುವಂಥದೇ. ಬ್ಯಾಂಕಿಗೆ ಹೋಗುವುದು, ಹಣ ತರುವುದು ಚೆಕ್ ಕಟ್ಟುವುದು, ಕೂಲಿಗಳಿಗೆ ವಿತರಣೆ ಮಾಡುವುದು ಇಂಥದೇ.

ಪ್ರಾರಂಭದಲ್ಲಿ ತನ್ನ ಯಜಮಾನತಿಯನ್ನು ಅವನು ಅದು ಇದು ಕೇಳುತ್ತಿದ್ದ. ಈಗ ದಿನ ದಿನಕ್ಕೆ ಕೆಲಸದಲ್ಲಿ ಅನುಭವ ಹೆಚ್ಚಿದಂತೆ ಅವನೇ ಎಲ್ಲವನ್ನೂ ಮಾಡಿಕೊಂಡು ಹೋಗುತ್ತಿದ್ದಾನೆ.

ಕೆಲವು ಸಂದರ್ಭಗಳಲ್ಲಿ ಮನೆ ಕೆಲಸಗಳಿಗೂ ಶ್ರೀನಿವಾಸ ನೆರವಾಗುತ್ತಾನೆ. ಹಾಸಿಂಗು ಅದು ಇದು ಹೀಗೆ ಮುಖ್ಯವಾದುದಕ್ಕೆ ಕಾರನ್ನು ಚಾಲನೆ ಮಾಡಿ ಕೊಂಡು ವೃಂದಳೇ ಹೊರಡುತ್ತಾಳೆ, ಶ್ರೀನಿವಾಸ ಹಿಂದಿನ ಸೀಟಿನಲ್ಲಿ ಕುಳಿತುಕೊಳ್ಳುತ್ತಾನೆ.

ಮೊದಲು ತಲೆಬಾಗಿಸಿ ವೃಂದಳೊಂದಿಗೆ ಮಾತಾ ಡುತ್ತಿದ್ದ ಶ್ರೀನಿವಾಸ. ಈಗ ದಿನಗಳು ಕಳೆದಂತೆ. ಧಾರಾಳವಾಗಿ ಮಾತಾಡುತ್ತಾನೆ, ನಕ್ಕುನಲಿದು ಸಹ. 'ಶ್ರೀನಿವಾಸ' ಎಂದು ಕೂಗುತ್ತ ವೃಂದಾ ಅವನಲ್ಲಿ ಸಲಿಗೆಯಿಂದ ನಡೆದುಕೊಳ್ಳುತ್ತಿದ್ದಾಳೆ. ಏನಾದರೂ ಒಂದು ಕಾರಣ ತೆಗೆದು ಅವಳು ಅವನನ್ನು ತಮಾಷೆ ಮಾಡುತ್ತಾಳೆ. ಆಗ ಇವನೂ ಅದರಲ್ಲಿ ಸಮಭಾಗಿ-ಯಾಗುತ್ತಾನೆ, ಶಾಂತಳ ಎದುರಿಗೂ.

ಚೆಲುವಾದ ಕಣ್ಣುಗಳ ತರುಣ ಶ್ರೀನಿವಾಸ ಹೀಗೆ ಆ ಮನೆಗೆ ಕುಬ್ಜನಾಗಿ ಬಂದವನು ದಿನದಿನಕ್ಕೆ ಪಾದ ವನ್ನು ಬೆಳೆಸುತ್ತಿದ್ದಾನೆ.

ಈಗ ಅವನೂ ಲಕ್ಷಣವಾಗಿ ಉಡುಪುಗಳನ್ನು ಧರಿ ಸುತ್ತಾನೆ. ಟೆರಿಲೀನದೇ ಪ್ಯಾಂಟು-ಷರ್ಟ್ ಎಲ್ಲ. ಸೊಗಸಾದ ವಾಚ್ ಕಟ್ಟಿದ್ದಾನೆ. ವೃಂದಾ ಕಾರನ್ನು ಚಾಲನೆಮಾಡಿಕೊಂಡು ಹೋಗುವಾಗ ಈಗ ಅವನು ಹಿಂದಿನ ಸೀಟಿನಲ್ಲಿ ಕುಳಿತುಕೊಳ್ಳುವುದಿಲ್ಲ, ಮುಂದೆ ಯೆ ಕುಳಿತುಕೊಳ್ಳುತ್ತಾನೆ; ಮುದುರಿಕೊಂಡಲ್ಲ ಧಾರಾಳವಾಗಿ.

* * * *

ಕುಬ್ಜನಾಗಿ ಬಂದವನು ಈ ಪ್ರೌಢಿಮೆ, ದಿನದಿನಕ್ಕೆ ಬೆಳೆಯುತ್ತಿರುವುದನ್ನು ಗೋವಿಂದಸ್ವಾಮಿ ಕಂಡು ಕೊಂಡ. ನಡವಳಿಕೆ, ಮಾತು, ನೋಟ, ಮನೆಯಲ್ಲಿ ಆಗುತ್ತಿರುವ ಬದಲಾವಣೆ-ಇಂಥವು ಅವನಿಗೆ ಸಿಲು-ಕನ್ನ ಡಿಯಾದುವು.

ಒಂದು ದಿನ ಬೆಳಗ್ಗೆ ಎಂಟು ಗಂಟೆಯ ಸುಮಾ ರಿನಲ್ಲಿ ಒಂದು ಬಿಲ್ಲನ್ನು ಹಿಡಿದು ನೋಡುತ್ತಾ ಗೋವಿಂದಸ್ವಾಮಿ ಕುಳಿತಿದ್ದ. ತಲೆನೋವಿನ ಬಿಲ್ಲು. ವಾಸ್ತವವಾಗಿ ಅದಕ್ಕೆ, ಆ ಒಂದು ಕೆಲಸಕ್ಕೆ, ಬೆಲೆ ಕಟ್ಟುವುದೇ ಕಠಿಣವಾಗಿದೆ. ಕೈಪ್ರೋಟಿಯ ಮೇಲೆ ಮಾಡಿರುವ ಕೆಲಸ.

ಈಗ ಆ ಬಿಲ್ಲಿನಲ್ಲಿ ಮೇಲೂ ಏನೇನೋ ಕಾರಣ ದಿಂದ ಮೋಸ ಆಗಿದೆ. ಅಷ್ಟು ಇಷ್ಟು ಕೊಟ್ಟ ನೆಂದು, ಸಿಗಬೇಕಾದ ಮಾಲು ಸಿಗಲಿಲ್ಲವೆಂದು, ಇ.ಇ. ಸಾಹೇಬರಿಗೆ ಕೋಪ. ಅದಕ್ಕಾಗಿ ಬಿಲ್ಲಿನಲ್ಲಿ ಸೆನ್ಸಾರ್.

ಥೂ, ಇವರ ಮನೆ ಹಾಳಾಗ.

ಇಲಾಖೆಯವರನ್ನು ಗೋವಿಂದಸ್ವಾಮಿ ಬೈದು ಕೊಳ್ಳುತ್ತಿದ್ದಾಗ ವೃಂದಾ ತಟ್ಟೆಯಲ್ಲಿ ಪೂರಿ-ಪಲ್ಯ ವನ್ನು ತೆಗೆದುಕೊಂಡು ಬಂದಳು. ಅಡಿಗೆಗೆ ಪರಿ-ಚಾರಕನಿದ್ದರೂ ಸರಬರಾಜು ಮಾಡುವುದು ವೃಂದಾ ಳಿಗೇ ಸೇರಿದ್ದು.

ಪತಿಯ ಮುಂದೆ ತಟ್ಟೆಯನ್ನಿಟ್ಟು, ತಾನು ಅವನ ಸನಿಹದಲ್ಲಿ ಕುಳಿತು, ತಾನೊಂದು ತಟ್ಟೆಯನ್ನು ಕೈ-ಗೆತ್ತಿಕೊಂಡಳು ವೃಂದಾ. ಶ್ರೀನಿವಾಸ ಆಗ ಒಳಗೆ ಬಂದ.

"ಬನ್ನಿ, ಬನ್ನಿ, ಶ್ರೀನಿವಾಸ್" ಎಂದು ಉತ್ಸಾ ಹದಿಂದ ಅವನನ್ನು ... ತಟ್ಟೆ ಯನ್ನು ಟೀಪಾಯಿಯ ... -ದಳು ವೃಂದಾ.

"ನನಗೆ ಟಿಫಿನ್ ಆಗಿದೆ ಬೇಡಿ" ಎಂದ ಶ್ರೀನಿ-ವಾಸ.

ಬಿಲ್ಲಿನ ಮೇಲೆ ಕಣ್ಣಾಡಿಸುತ್ತಿದ್ದ ಗೋವಿಂದ ಸ್ವಾಮಿ. ಈಗ ಮೈಮೇಲೆ ಬಿಸಿನೀರು ಬಿದ್ದಂತೆ ಉರಿಉರಿಯಾದ. ಒಂದು ಸಲ ಅವನ ಕಣ್ಣುಗಳು ಶ್ರೀನಿವಾಸನ ಮೇಲೂ ಮತ್ತೊಂದು ಸಲ ಒಳಗೆ ಧಾವಿಸಿ ಮತ್ತೆ ಹೊರಬಂದ ವೃಂದಳ ಮೇಲೂ ಹೊರಳಿದುವು.

ಮತ್ತೆ ಗೋವಿಂದಸ್ವಾಮಿ ತನ್ನ ದೃಷ್ಟಿಯನ್ನು ಕಾಗದದ ಕಡೆಗೆ ತಿರುಗಿಸಿದ. ಹಾಗೆ ನೆಪ ಅಷ್ಟೇ; ಸೂಕ್ಷ್ಮವಾಗಿ ಅವನ ಕಣ್ಣುಗಳು ಇತ್ತ ಮೆಲ್ಲ ಮೆಲ್ಲಗೆ ಹೀಗೆ ಹಾಗೆ ಹೊರಳಿದುವು.

ವೃಂದಾ ಮತ್ತೊಂದು ತಟ್ಟೆಯಲ್ಲಿ ಪೂರಿಪಲ್ಯ ವನ್ನು ತಂದು ಶ್ರೀನಿವಾಸನ ಮುಂದೆ ನೀಡಿದಳು. ಅವಳು ಕೈನೀಡುವಾಗ ಅವಳ ಬೆರಳುಗಳು ಶ್ರೀನಿ ವಾಸನ ಬೆರಳಿನೊಂದಿಗೆ ಸಮೀಪವಾಗಿದ್ದುವು. ಮೆಲ್ಲಗೆ ಸ್ಪರ್ಶವೂ ಆಯಿತೋ ಏನೋ.

ಕುಳಿತ ಹಾಗೆಯೆ ಗೋವಿಂದಸ್ವಾಮಿ ಆಗ ಬೆಂಕಿಯ ಮುದ್ದೆಯಾದ.

ಶ್ರೀನಿವಾಸನೂ ವೃಂದಳೂ ಪೂರಿಯನ್ನು ಮುರಿದು ಮುರಿದು ಬಾಯಿಗೆ ಹಾಕಿದರು. ಗೋವಿಂದಸ್ವಾಮಿ ಮುಟ್ಟೇ ಇರಲಿಲ್ಲ.

"ಯಾಕೆ? ಆರಿಹೋಗುತ್ತೆ ತಗೊಳ್ಳಿ" ಎಂದಳು ವೃಂದಾ.

ಎರಡು ಸಲ ಗೋವಿಂದಸ್ವಾಮಿ ಪೂರಿಯನ್ನು ಮುರಿದ ಬಳಿಕ ಸೊರ್ರನ್ನುತ್ತ ಪೂರಿಯ ತಟ್ಟೆಗೇ ಕೈತೊಳೆದುಕೊಂಡುಬಿಟ್ಟ. ತಟ್ಟೆ ನೀರಿನಿಂದ ತುಂಬಿ ಹೋಗಿ ಪೂರಿಗಳು ಅದರಲ್ಲಿ ಮುಳುಗಿಹೋದುವು.

ಆವೇಶ ಬಂದವನಂತೆ ಗೋವಿಂದಸ್ವಾಮಿ ಈಗ ಒಳ ನಡೆದುಬಿಟ್ಟ. ಕೆಲಸದಲ್ಲಿ ಏನಾದರೂ ಹೆಚ್ಚು ಕಡಮೆಯಾದರೆ ಅವನು ಹೀಗೆ ಉದ್ವೇಗಗೊಳ್ಳು ವವನು. ಆದುದರಿಂದ ವೃಂದಾ ಸುಮ್ಮನಾಗಿ ಬಿಟ್ಟಳು.

ಅವೊತ್ತೇ ಗೋವಿಂದಸ್ವಾಮಿ ಗುಲ್ಬರ್ಗಕ್ಕೆ ಹೊರಟು ಹೋದ. ಇಂಥ ದಿನ ಬರುತ್ತೇನೆ ಎಂದು ತಿಳಿಸಿಹೋದ.

ಈಗ ಆತನಿಗೆ ಮನಸ್ಸಿಗೆ ಶಾಂತಿ ಇಲ್ಲ. ನಂಬಿ ಕೆಗೆ ಅರ್ಹನಾದವನು ಒಬ್ಬನು ಬೇಕು ಎನ್ನುವಾಗ ಒಬ್ಬ ಸಿಕ್ಕಿದ. ಈಮನುಷ್ಯ ಬಗೆಹರಿಯಿತು ಎನ್ನುವಾಗ



ಸಮುಸ್ಯೆಯೋ ಹಾವಾಗಿ ಮನೆಯಲ್ಲಿ ಹರಿದಾಡುತ್ತ ಇದೆ; ವಿಷವನ್ನು ಕಾರಿದೆ.

ಛಿಛಿಛಿಛಿಛೀ.

ಅವನು ಛಿಛಿಛೀ ಎನ್ನುವಾಗ ಒಳ ದನಿಯೊಂದ ಅವನಿಗೆ ಪ್ರಶ್ನೆ ಹಾಕಿತು:

'ಹಣದ ಹೇರಾಸೆಗಾಗಿ ಮನೆ ಎನ್ನುವುದನ್ನು ಮರೆತು ನೀನೇ ಬಾಳನ್ನು ಹಾಳುಮಾಡಿಕೊಂಡಿರುವ ಪಶು. ನೀನೇ ಅಪರಾಧಿ. ಚಿಕ್ಕ ಪುಟ್ಟ ವಯಸ್ಸಿನಲ್ಲಿ ಹಣಕ್ಕಿಂತ ಮುಖ್ಯವಾದದ್ದು ಆಸೆ ಆಕಾಂಕ್ಷೆಗಳೇ. ನೀನು ಅವುಗಳಿಂದ ದೂರವಾದ ಮೇಲೆ, ಅಂಥ ಬಯಕೆ ಕೈಗೆಟುಕಿತು ಎನ್ನುವಾಗ ವೃಂದಾ ಅದನ್ನು ಅರಿಸಿಕೊಂಡಿದ್ದಾಳೆ, ಅವಳು ನಿರಪರಾಧಿ.

ಏನು ಮಾತು ಇದು? ಹೇಸಿಗೆ ಮಾತು. ನನ್ನ ಮನೆಗಾಗಿ ಸಂಪಾದನೆಗಾಗಿ ಅಲ್ಲವೇ ನಾನು ಹೀಗೆ ದುಡಿಯುತ್ತ ಇರುವುದು! ಇದು ಗೃಹಸ್ಥರು ಆಡುವ ಮಾತೆ? ಎಂದುಕೊಳ್ಳುತ್ತ ಗೋವಿಂದಸ್ವಾಮಿ ಗಡ ಬಡಿಸಿ ಮೇಲೆದ್ದ.

ಮನಸ್ಸು ಕಾದ ಎಣ್ಣೆ ಬಾಂಡ್ಲಿಯಾಗಿ ಕತಕತ ಕುದಿಯುತ್ತಿರುವಾಗ ಕೆಲಸವನ್ನು ಇನ್ನು ಹೇಗೆ ಮಾಡಲು ಸಾಧ್ಯವಾದೀತು?

ಹೇಳಿದ ದಿನಕ್ಕಿಂತ ಮೊದಲೇ ಊರಿಗೆ ಹೋಗಿದ್ದು ಬರುತ್ತೇನೆ ಎಂದು ರಾಮಕೃಷ್ಣನಿಗೆ ಹೇಳಿ, ಗೋವಿಂದಸ್ವಾಮಿ ಬೆಂಗಳೂರಿನ ಕಡೆ ಹೊರಟ.

ಅವೊತ್ತು ಅವನಿಗೆ ತುಂಬ ತಲೆನೋವು, ಕಣ್ಣುಗಳನ್ನು ತೆರೆಯಲು ಸಾಧ್ಯವೇ ಇಲ್ಲ ಎನ್ನುವಷ್ಟು. ಆಗ ರಾತ್ರಿ ಎಂಟೂವರೆ ಒಂಬತ್ತು ಗಂಟೆಯ ಸಮಯ. ತುಂತುರು ಹನಿ ಬೇರೆ ಹಾಕುತ್ತ ಇದೆ. ಟಾರು ರಸ್ತೆಗಳೆಲ್ಲ ನೀರಿನಿಂದ ಚಿಮ್ಮಿವೆ. ರಸ್ತೆ ಬದಿಯ ಮರಗಳು ಮೌನವಾಗಿ ನಿಂತುಬಿಟ್ಟಿವೆ. ಬೀದಿ ದೀಪಗಳು ಆರಿ ಹೋಗಿ ರಸ್ತೆ ಗುಂ ಎನ್ನುತ್ತಿದೆ.

ತುಮಕೂರು ರಸ್ತೆಯಲ್ಲಿ ಹಾದು ಮಲ್ಲೇಶ್ವರದ ಬೀದಿಗಳಿಗೆ ಗೋವಿಂದಸ್ವಾಮಿಯ ಕಾರು ಬಂದಾಗ ಇದ್ದಕ್ಕಿದ್ದಂತೆ ಅವನ ಕಣ್ಣುಗಳು ಜಾಗ್ರತಗೊಂಡವು.

ಗೋವಿಂದಸ್ವಾಮಿಯ ಕಾರಿನ ದೀಪಗಳ ಬೆಳಕು, ಇವನ ಕಾರಿನ ಮುಂದೆ ಹೋಗುತ್ತಿದ್ದ ಮತ್ತೊಂದು ಕಾರಿನ ಮೇಲೆ ಹರಿಹಾಯ್ದಿದೆ. ಆಗ, ಆ ಕಾರಿನ ಹಿಂಬದಿಯಲ್ಲಿರುವ ನಂಬರಿನ ಮೇಲೆ, ಈ ಬೆಳಕು ಸ್ಪಷ್ಟವಾಗಿ ಬಿದ್ದಿದೆ.

M. Y. X. 353388.

ನಿಜ. ಮುಂದೆ ಹಾಯುತ್ತ ಇರುವುದೂ ಗೋವಿಂದಸ್ವಾಮಿಯ ಕಾರೇ. ವೃಂದಾ ಅದನ್ನು ಚಾಲನೆ ಮಾಡಿಕೊಂಡು ಹೋಗುತ್ತಿದ್ದಾಳೆ.

ಗೋವಿಂದಸ್ವಾಮಿ ತನ್ನ ಕಾರಿನ ವೇಗವನ್ನು ಕಡಿಮೆ ಮಾಡಿಕೊಂಡ. ಮುಂದಿನ ಕಾರನ್ನೇ ಹಿಂಬಾಲಿಸಿದ. ಹೀಗೆ ಸುತ್ತಿದರೆ ಹೀಗೆ; ಹಾಗೆ ಬಳಸಿದರೆ ಹಾಗೆ.

ವೃಂದಾ ನಗುನಗುತ್ತ ಕಾರನ್ನು ನಡೆಸುತ್ತಿದ್ದಳು. ಶ್ರೀನಿವಾಸನೂ ನಗುತ್ತಿದ್ದ. ಅವನು ತನ್ನ ಒಂದು ಕೈಯನ್ನು ನೀಳವಾಗಿ ವೃಂದಳ ಬೆನ್ನ ಹಿಂದಿನ ಸೀಟಿನ ಮೇಲೆ ಚಾಚಿದ್ದ.

ರಸ್ತೆಗಳು ಕತ್ತಲಲ್ಲಿ ಮುಳುಗಿದ್ದುದರಿಂದಲೋ ಇಲ್ಲವೇ ತಮ್ಮ ಇರವನ್ನು ಮರೆತೋ, ತಮ್ಮ ಹಿಂದೆ ಮತ್ತೊಂದು ಕಾರು ಹಿಂಬಾಲಿಸಿ ಬರುತ್ತಿರುವುದನ್ನು ಅವರು ಗಮನಿಸಲೇ ಇಲ್ಲ.

ಗೋವಿಂದಸ್ವಾಮಿಯ ದೇಹ ಗಿರಿಗಿರಿ ಗಿರಿಗಿರಿ ಎಂದಿತು. ಅವನಿಂದ ಇನ್ನು ಸಹನೆಯನ್ನು ತಂದುಕೊಳ್ಳುವುದು ಸಾಧ್ಯವಿಲ್ಲ. ಇಷ್ಟರಲ್ಲಿಯೆ ಮುಂದಿನ ಕಾರಿಗೆ ಈ ಕಾರು ಢಿಕ್ಕಿ ಹೊಡೆದರೂ ಹೊಡೆಯಬಹುದು.

ಕಾರು ಮುಂದೆ ಹಾಯುತ್ತಿದ್ದಂತೆ ಬೇರೊಂದು ಕಡೆಗೆ ತನ್ನ ಕಾರನ್ನು ಗೋವಿಂದಸ್ವಾಮಿ ತಿರುಗಿಸಿಕೊಂಡ. ನಾಲ್ಕಾರು ನಿಮಿಷಗಳಲ್ಲಿಯೆ ತನ್ನ ಮನೆಯ ಮುಂದೆ ಆತ ಬಂದಿಳಿದ.

ಅವನು ಮನೆಯ ಮೆಟ್ಟಲುಗಳನ್ನು ಹತ್ತುತ್ತಿದ್ದಂತೆ ದೀಪಗಳೆಲ್ಲ ಪಕ್ ಪಕ್ ಎಂದು ಕಣ್ಣು ತೆರೆದುವು. ಹೌದು, ಇಡೀ ಬೆಂಗಳೂರೇ ವಿದ್ಯುಚ್ಛಕ್ತಿ ಸರಬರಾಜು ನಿಂತು ಹೋಗಿದ್ದು, ಈಗ ಬೆಳಕು ಚೆಲ್ಲಿದೆ.

ಮನೆಯ ಮುಂದೆ ನಿಂತ ಗೋವಿಂದಸ್ವಾಮಿ ಈಗ ಕಾದ ಕುಲುಮೆ. ಹೌದು. ಅವನ ದೇಹದಲ್ಲಿದ್ದ ಎಲ್ಲ ದೀಪಗಳು ಸಹ ಈಗ ಹತ್ತಿಕೊಂಡು ಬಿಟ್ಟಿವೆ. ಒಂದೇ ಭೋರ್ಗರೆತ. ಬೆಂಕಿಯ ಅಲೆ. ಬೆಂಕಿಯ ಜ್ವಾಲೆ—ಆ ಜ್ವಾಲೆಯಲ್ಲಿ ತೊಯ್ದ ಅವನ ಕಣ್ಣುಗಳು ರಕ್ತದ ಗೋಲಿಗಳಾಗಿವೆ. ಕೈಗಳೋ ಸಲಾಕೆಗಳಾಗಿ ಕಾದು ಸಿಡಿದುನಿಂತಿವೆ.

ಅರ್ಧ-ಮುಕ್ಕಾಲು ಗಂಟೆ ಕಳೆದಿರಬಹುದು. ವೃಂದಳ ಕಾರೂ ಬಂದಿತು. ಹನುಮಯ್ಯ ಹೋಗಿ ಗೇಟನ್ನು ತೆರೆದ. ಆಕೆ ಒಳಬಂದರೆ ಪತಿಯ ಕಾರು ನಿಂತಿದೆ, ಪತಿ ಬಂದಿದ್ದಾನೆ.

"ಅರೆ. ಇದೇನು! ಹದಿನಾಲ್ಕನೇ ತಾರೀಖು ಬರ್ತೀನಿ ಅಂತ ಬರೆದಿದ್ರಿ!" ಎನ್ನುತ್ತ ವೃಂದಾ ಕಾರಿನಿಂದ ಕೆಳಗಿಳಿದಳು.

ಅವಳು ಯಾವ ವಿಧವಾದ [illegible] ತೋರಿಸಿಕೊಳ್ಳಲಿಲ್ಲ, ಸರಿಯೆ. ಆದರೆ [illegible] ಶ್ರೀನಿವಾಸ [illegible] ನಿಂತ.

ವೃಂದಾ ಹಿಂಬಾಲಿಸಿದಳು. "ಬಾ ಇಲ್ಲಿ ಶ್ರೀನಿವಾಸ" ಎಂದು ಗೋವಿಂದಸ್ವಾಮಿ ಕೂಗನ್ನು ಹಾಕಿ ತಾನೂ ಹಿಂಬಾಲಿಸಿದ.

ಶ್ರೀನಿವಾಸ ಮೆಟ್ಟಿಲುಗಳನ್ನು ಹತ್ತಿ ಮನೆಯೊಳಗೆ ಪ್ರವೇಶಿಸಿದನೊ ಇಲ್ಲವೊ ಧಡಾರ್ ಎಂದು ಮನೆಯ ಬಾಗಿಲು ಮುಚ್ಚಿಕೊಂಡುಬಿಟ್ಟಿತು.

★ ★ ★ ★

ರಾತ್ರಿ ಹನ್ನೊಂದು — ಹನ್ನೊಂದೂವರೆಯಾದರೂ ಶ್ರೀನಿವಾಸ ಬರಲಿಲ್ಲ.

ಶಾಂತ ಪತಿಗಾಗಿ ಕಾದಳು. ಎಲ್ಲೋ ಒಂದೆರಡು ದಿನಗಳು, ತಾವು ಸಂಸಾರ ಹೂಡಿದ ಮೇಲೆ, ರಾತ್ರಿ ಹನ್ನೊಂದು ಗಂಟೆಗೆ ಆತ ಬಂದಿದ್ದಾನೆ.

ಬಿಸಿಬಿಸಿಯಾಗಿ ಅಡಿಗೆ ಮಾಡಿ ಎಷ್ಟೋ ಹೊತ್ತು ಕಳೆದು ಹೋಗಿತ್ತು. ಈಗ ಅದು ತಣ್ಣಗಾಗಿಯೂ ಹೋಗಿದೆ. ಶಾಂತಾ ಹಾಸಿಗೆ ಬಿಡಿಸಿ ಹಾಸಿದಳು. ಮಲಗಿಕೊಂಡಳು. ಎಷ್ಟು ಹೊತ್ತು ನಿಧಾನಮಾಡಿ ಬಂದರೂ ಪತಿ ಬಂದ ಮೇಲೆಯೇ ಅವಳು ಊಟ ಮಾಡುವುದು.

ವಾಡಿಕೆ ಇಲ್ಲ. ಎಷ್ಟು ಹೊತ್ತು ಕಳೆದರೂ ಈಗ ಶ್ರೀನಿವಾಸ ಬರಲೇ ಇಲ್ಲ. ಹನ್ನೆರಡು ಗಂಟೆಯೂ ಆಗಿಹೋಗಿದೆ.

ಗೋವಿಂದಸ್ವಾಮಿಯ ಮನೆಯ ಹಿಂಬದಿಗೆ ಸೇರಿದ ಹಾಗೆ ಇಡೀ ರಾತ್ರಿ ಒಂದು ದೀಪ ಬೆಳಗುತ್ತದೆ. ಅದರ ಬೆಳಕು ಶಾಂತಳ ಮನೆಯ ಮುಂದೆ ಹನುಮಯ್ಯನ ಮನೆಯ ಮುಂದೆ, ಮಾವಿನ ಮರಗಳ ಮೇಲೆಲ್ಲ ಬೀಳುತ್ತದೆ.

ಇವೊತ್ತು ಏನು ಕಾರಣವೊ ಆ ದೀಪ ಆರಿಹೋಗಿದೆ. ಯಾವೊತ್ತೂ ಆ ದೀಪ ಆರಿದ್ದಿಲ್ಲ.

ನಿಮಿಷ ನಿಮಿಷಗಳು ಜಾರುತ್ತಿದ್ದಂತೆ ಶಾಂತಳ ದೇಹದಲ್ಲಿ ವಿಚಿತ್ರ ಯಾತನೆಯಾಗುತ್ತಿದೆ. ಕಣ್ಣುಗಳಲ್ಲಿ ನೀರು ಚಿಮ್ಮುತ್ತಿದೆ. ಏನೋ ಸಂಕಟ. ಏನೋ ಒಡಲ ಉರಿ.

ವೃಂದಕ್ಕನಿಗಾದರೂ ಸಮಾಚಾರವನ್ನು ತಿಳಿಸಬೇಕು. ಒಂದು ಸಮಯ ಪತಿಯನ್ನು ಎಲ್ಲಿಗಾದರೂ ಕಳುಹಿಸಿದ್ದಾರೊ ಹೇಗೆ? ಬಾಗಿಲಲ್ಲಿ ನಿಂತೆ, ಬಾಗಿಲನ್ನು ತೆರೆಯದೆಯೆ, ಶಾಂತ ಕೂಗಿಕೊಂಡಳು:

"ವೃಂದಕ್ಕಾ, ವೃಂದಕ್ಕಾ, ಇವರು ಇನ್ನೂ ಬಂದೇ ಇಲ್ಲಾ."

ಇಲ್ಲ, ಉತ್ತರವಿಲ್ಲ, ಯಾರಿಂದಲೂ ಶಾಂತ ಮೆಲ್ಲಗೆ ಬಾಗಿಲನ್ನು ತೆರೆದಳು. ತೆರೆದಳೊ ಇಲ್ಲವೊ ಮತ್ತೆ ಧಡಾರ್ ಎಂದು ಮುಚ್ಚಿ ಅಗಳಿ ಹಾಕಿಬಿಟ್ಟಳು.

ಅವಳು ಬಾಗಿಲನ್ನು ತೆರೆದಾಗ ಕತ್ತಲು ಗುಂ ಎಂದು ಮೈಚಾಚಿದೆ. ಏನೂ ಕಾಣಿಸುತ್ತಿಲ್ಲ. ಆ ಮಾವಿನ ಮರಗಳು ಭೂತಗಳಾಗಿ ನಿಂತಿವೆ. ಗಾಳಿ ಹೂಸ್ ಎನ್ನುತ್ತಿದೆ.

ಶಾಂತಳಿಗೆ ಈಗ ಅಳುವನ್ನು ತಡೆಯುವುದು ಸಾಧ್ಯವಾಗಲಿಲ್ಲ- ಒಂದು ಕಡೆ ಕುಳಿತು ಅವಳು ಬಿಕ್ಕಿ ಬಿಕ್ಕಿ ಅತ್ತಳು, ಅನಾಥೆಯಂತೆ, ಕುಳಿತ ಹಾಗೆಯೇ "ಸಿದ್ದಮ್ಮಾ ಸಿದ್ದಮ್ಮಾ" ಎಂದು ಕೂಗಿಕೊಂಡಳು.

ಸಿದ್ದಮ್ಮ ಹನುಮಯ್ಯನ ಹೆಂಡತಿ. ಅವಳಿಂದಲೂ ಉತ್ತರವಿಲ್ಲ. ಯಾರೂ ಇವೊತ್ತು ಶಾಂತಳ ಕರೆಗೆ ಓಗೊಡುತ್ತಿಲ್ಲ. ಏನೋ ಶಿಕ್ಷೆ ತನಗೆ ಆಗುತ್ತ ಇದೆ, ಭಾರೀ ಶಿಕ್ಷೆ.

ಅಲ್ಲ, ಇವೊತ್ತು ಪತಿಗೆ ಒಂದು ಸುದ್ದಿ ತಿಳಿಸಬೇಕು ಎಂದು ಶಾಂತ ತುಂಬ ಆಸೆಯಾಗಿದ್ದಳು. ಹೌದು ಅವಳು ಈ ತಿಂಗಳು ಇನ್ನೂ ಹೊರಗೆ ಕುಳಿತಿಲ್ಲ. ಅಂ, ತಿಂಗಳ ಮೇಲೆ ಎಂಟು ದಿನಗಳಾಗಿವೆ ತಾನು ಹೊರಗೆ ಕುಳಿತು.



ಈ ಸುದ್ದಿ ತಿಳಿದರೆ ಶ್ರೀನಿವಾಸ ಎಷ್ಟು ಸಂತೋಷ ಪಡುತ್ತಾನೊ ಏನೊ? 'ಮೊದಲನೆಯದು ಗಂಡು ಕಣೇ' ಎನ್ನುತ್ತಾನೊ ಏನೊ?

ಆಗ ಹೊರಗೆ ಯಾರೋ ಗುಸು ಗುಸು ಎಂದ ಹಾಗಾಯಿತು. ಕಾಲ ಸಪ್ಪಳವಾಯಿತು. ಶಾಂತ ಮೇಲೂ ಬೆಚ್ಚಿದಳು.

ಈಗ ಹದಿನೈದು ದಿನಗಳ ಹಿಂದೆ ಒಂದು ಸಂಭವ ನಡೆದಿದೆ. ಅವೊತ್ತು ಪತಿಪತ್ನಿಯರು ಎರಡನೆಯ ಆಟ ಸಿನಿಮಾ ನೋಡಲು ಹೋಗಿದ್ದರು. ರಾತ್ರಿ ಒಂದು ಗಂಟೆಗೆ ಮನೆಗೆ ಹಿಂತಿರುಗಿದಾಗ ಮನೆಯ ಬಾಗಿಲು ಮುರಿದಿದೆ.

ಸದ್ಯ ಕಳ್ಳತನ ಏನೂ ಆಗಲಿಲ್ಲ. ಅವರು ಬಾಗಿಲ ಚಿಲಕ ಮುರಿಯುವಾಗ ನಾಯಿ ಸಿಕ್ಕಾಬಟ್ಟೆ ಬಗುಳಿದೆ. ಹನುಮಯ್ಯನಿಗೆ ಎಚ್ಚರವಾಗಿ ಎದ್ದು ಬಂದಿದ್ದಾನೆ.

ಈಗ ಆ ನಾಯಿಯಾದರೂ ಇದ್ದರೆ ಚೆನ್ನಾಗಿತ್ತು. ಶಾಂತಳ ಹಿಂದೆ ಮುಂದೇದು ಕುರಿ ಮರಿಯಂತೆ ಸುತ್ತಾಡುತ್ತಿತ್ತು. ಮೊನ್ನೆ ಕೆಮ್ಮುತ್ತ ವಾಂತಿಮಾಡಿಕೊಂಡು ಒಂದೇ ದಿನದಲ್ಲಿ ತೀರಿಕೊಂಡುಬಿಟ್ಟಿತು.

ನಿಜ. ಯಾರೋ ನಡೆದುಹೋಗುತ್ತಿರುವುದೇ ನಿಜ. ಆಗೋ, ಕಾಲ ಸಪ್ಪಳ ಮತ್ತೆ ಮತ್ತೆ ಕೇಳುತ್ತ ಇದೆ. ಗುಸು ಗುಸೂ ಎಂದು ಅವರು ಮಾತಾಡಿಕೊಳ್ಳುತ್ತ ಇದ್ದಾರೆ.

ಶಾಂತ ಉಡುಗಿಹೋದಳು. ಬೆವತುಹೋದಳು. "ಹನುಮಯ್ಯಾ" ಎಂದು ಕೂಗಿಕೊಳ್ಳಬೇಕೆಂದರೂ ಬಾಯಿ ನಡುಕ, ಆಗಲಿಲ್ಲ. ಉಸಿರು ಬಿಡುವುದೂ ಈಗ ಕಷ್ಟವಾಗಿರುವ ಹಾಗಿದೆ ಆಕೆಗೆ.

ಬೆಳಗಾಯಿತೊ ಇಲ್ಲವೊ ಸುದ್ದಿ ಮಿಂಚಿನಂತೆ ಹರಡಿತು.

ಅಲ್ಲ, ಹೀಗೂ ಉಂಟೆ? ಯಾರ ಬಾಯಲ್ಲಿಯೂ ಇದೇ ಸುದ್ದಿ, ಇದೇ ಚರ್ಚೆ.

ರಾತ್ರಿ ಹತ್ತು ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ಶ್ರೀನಿವಾಸ ಪರಾರಿಯಾಗಿದ್ದಾನೆ ಎಂದು ಗೋವಿಂದಸ್ವಾಮಿ ತಿಳಿಸಿದ. ಪೋಲೀಸರಿಗೆ ದೂರು ಕೊಟ್ಟ. ಈಗಿನ ಕಾಲದಲ್ಲಿ ಯಾರನ್ನು ನಂಬಬೇಕು ಬಿಡಬೇಕು; ಕೆಟ್ಟ ಕಾಲ. ಶ್ರೀನಿವಾಸ ತುಂಬ ಸಭ್ಯನ ಹಾಗೆ ಕಾಣುತ್ತಿದ್ದ. ಇಂಥವರೇ ಅಂಥ ಕೆಲಸ ಮಾಡುವುದು ಎಂದು ಜನ ಬಗೆ ಬಗೆಯಾಗಿ ಮಾತಾಡಿಕೊಂಡರು.

ಶಾಂತ ಈ ಸುದ್ದಿಯನ್ನು ತಿಳಿದು ಬೆವತುಹೋದಳು. ಅವಳಿಗೆ ಮೂರ್ಛೆ ಬರುವ ಹಾಗಾಯಿತು. ಯಾರಿಗೋ ಹೇಳಿ ಚನ್ನಪಟ್ಟಣಕ್ಕೆ ಆಕೆ ಟೆಲಿಗ್ರಾಂ ಮಾಡಿಸಿದಳು. ಅಲ್ಲಿಂದ ಅವಳ ಅಣ್ಣ ರಾಮಚಂದ್ರ ಬರುವ ವೇಳೆಗೆ, ಇಲ್ಲಿ ಪೋಲೀಸ್ ಅಧಿಕಾರಿಯೂ ಬಂದಿದ್ದ.

ವಿಚಾರಣೆ ಪ್ರಾರಂಭವಾಯಿತು.

'ಅಷ್ಟು ಹಣ ಹೊರಗೆ ಯಾಕೆ ಇಟ್ಟಿತ್ತು? ಎಲ್ಲಿತ್ತು?' ಇತ್ಯಾದಿ ಪೋಲೀಸಿನವರು ಕೇಳುವ ಮಾಮೂಲು ಪ್ರಶ್ನೆಗಳನ್ನು ಅಧಿಕಾರಿ ಗೋವಿಂದಸ್ವಾಮಿಗೆ ಕೇಳಿದ. ಇಲ್ಲಿ ಎರಡು ಮೂರು ಕೆಲಸ ನಡೆಯುತ್ತಿರುವುದಾಗಿಯೂ ಕೂಲಿ ವಿತರಣೆಗೆ ಮತ್ತಿತರ ಖರ್ಚಿಗೆ ಅಷ್ಟು ಹಣ ಬೇಕಿತ್ತೆಂದೂ ನಿನ್ನೆ ತಾನು ಗುಲ್ಬರ್ಗದಿಂದ ಬಂದುದು ಆಕಸ್ಮಿಕವೆಂದೂ' ಗೋವಿಂದಸ್ವಾಮಿ ತಿಳಿಸಿದ.

ಅಧಿಕಾರಿ ಅವನ ವಿಚಾರಣೆ ಮುಗಿಸಿ ಮನೆಯೆಲ್ಲವನ್ನೂ ಒಂದು ಸುತ್ತು ಹಾಕಿ, ಶ್ರೀನಿವಾಸ ಉಪಯೋಗಿಸುತ್ತಿದ್ದ ಆಫೀಸ್ ರೂಂ ಅನ್ನೂ ಶೋಧ ಮಾಡಿ ವೃಂದಳಿಗೂ ಪ್ರಶ್ನೆ ಹಾಕಿದ.

ವೃಂದಳಿಗೆ ಪ್ರಶ್ನೆ ಹಾಕುವಾಗ ಅವಳ ಉತ್ತರ ಸಮರ್ಪಕವಾಗಿಲ್ಲದೆ ಅಸಮಂಜಸವಾಗಿದ್ದುವು.

ಅಧಿಕಾರಿಗೆ ಏನೋ ಸಂದೇಹ, ಶಂಕೆ ಅವಳ ಉತ್ತರದಿಂದ, ಬೆದರಿ ಬೆದರಿ ಕಂಗಾಲಾದ ಇಳಿಮುಖ, ಕೇಳಿದ ಪ್ರಶ್ನೆಗಳನ್ನೇ ಮತ್ತೆ ಮತ್ತೆ ಹಿಂತಿ

ಮುಂದೆ ತಿರುಗಿಸಿ ಅಧಿಕಾರಿ ಅವಳನ್ನು ಸೂಕ್ಷ್ಮ-ವಾಗಿ ಗಮನಿಸಿದ

ಬಳಿಕ ಆ ಅಧಿಕಾರಿ ಮನೆಯಿಂದ ಹೊರಬಂದ. ಹಿಂಡು ಹಿಂಡು ಜನ ಮನೆಯ ಮುಂದೆ ಗುಂಪು ಕೂಡಿದ್ದರು. "ಇಲ್ಲೇನ್ ಕರಡಿ ಕುಣೀತ್ತೈತೋ, ನಡೀರಿ ನಡೀರಿ" ಎಂದು ಹನುಮಯ್ಯ ಎಲ್ಲರನ್ನೂ ಹೊರದಬ್ಬಿ ಗೇಟನ್ನು ಮುಚ್ಚಿದ.

ಆ ಅಧಿಕಾರಿ ಈಗ ಮನೆಯ ಮೆಟ್ಟಲುಗಳನ್ನು ಇಳಿದು ಪಶ್ಚಿಮಕ್ಕೆ ನಡೆದ. ಆ ಮಾವಿನ ಮರಗಳ ಬಳಿ ಬಂದ. ಅಲ್ಲಿ ಹಿಂಡು ಕಾಗೆಗಳು ಕಾ ಕಾ ಕಾ ಕಾ ಕಾ ಎಂದು ಗದ್ದಲವನ್ನೆಬ್ಬಿಸುತ್ತ ಒಂದು ಮಾವಿನಮರದ ಕೆಳಗೆ ಕಾರುಭಾರ ನಡೆಸಿದ್ದುವು. ಯಾವಾಗ ಈ ಇನ್ಸ್‌ಪೆಕ್ಟರ್ ಅಲ್ಲಿಗೆ ಬಂದನೋ ಅವುಗಳು ಮೇಲೆ ಮೇಲೆ ಹಾರಿ ಆ ಕೊಂಬೆ ಈ ಕೊಂಬೆಗಳ ಮೇಲೆ ಕುಳಿತು ಕರ್‍ರ ಕರ್‍ರ ಎನ್ನತೊಡಗಿದುವು.

ಈತ ಅಧಿಕಾರಿ. ಅಲ್ಲಿಂದ ಮುಂದೆ ನಡೆದು ಹನುಮಯ್ಯನ ಮನೆಯ ಬಳಿ ಹೋದ. ಅದನ್ನು ದಾಟಿ ಶಾಂತಳ ಮನೆಗೆ ಹೋದ. ಅಲ್ಲಿ ಒಂದು ಕಡೆ ರಾಮಚಂದ್ರನೂ ಶಾಂತಳೂ ನಡುಗುತ್ತ ನಿಂತು-ಕೊಂಡಿದ್ದರು. ಅಧಿಕಾರಿ ಮುಗ್ಧ ಶಾಂತಳನ್ನು ಗದರಿಸಿ ಕೇಳಿದ:

"ನಿನಗೂ ಸ್ವಲ್ಪ ಕೊಟ್ಟುಬಿಟ್ಟು ಹೋಗಿದಾನೋ? ಎಲ್ಲಾ ಹೊತ್ಕೊಂಡು ಹೋಗ್ಬಿಟ್ನೋ?"

"ನನಗೇನೂ ಗೊತ್ತಿಲ್ಲ..." ಎಂದು ತೊದಲಿ ತೊದಲಿ ನುಡಿದಳು ಶಾಂತ.

"ಗೊತ್ತಿಲ್ಲ! ಸುಳ್ಳು ಹೇಳ್ತೀಯಾ? ಅವನು ನಿನ್ನ ಕೂಡ ಹೇಳೇ ಹೋಗಿದಾನೆ. ಸ್ಟೇಷನ್ನಿನಲ್ಲಿ ನಿನ್ನ ಕೂಡಿಹಾಕಿ ನಾಲ್ಕು ಬಾರಿಸಿದರೆ, ನೀನಾದೇ ಬಾಯ್ಬಿಡ್ತೀಯಾ..."

ಆ ಕ್ಷಣವೇ ಬಹಳ ಉದ್ವೇಗದಿಂದ ಕಾದುಗಿ ಹೋದ ಶಾಂತ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಅಧಿಕಾರಿಯ ಮನಸ್ಸು ಚುರ್ ಎಂದಿತು. ಅವ ನಿಗೆ ಶಾಂತಳ ಮುಖವನ್ನು ನೋಡಿ ಸಂಕಟವಾ-ಯಿತು. ಮುಖವನ್ನು ನೋಡಿ ಅವರು ಇಂಥವರೇ ಎಂದು ತೀರ್ಮಾನಿಸುವ ಶಕ್ತಿ ಅತನಿಗಿದೆ. ಈ ವೃತ್ತಿಯಲ್ಲಿ ಅವನು ಸಾಕಷ್ಟು ಪರಿಣತಿಯನ್ನು ಪಡೆದಿ-ದ್ದಾನೆ.ಹತ್ತಾರು ವರ್ಷಗಳ ಸರ್ವಿಸ್ ಮಾಡಿದ್ದಾನೆ.

ಈ ವಿಚಾರದಲ್ಲಿ ಶಾಂತ ಏನೂ ಅರಿಯದವಳು ಎನ್ನುವುದನ್ನು ಅವನು ಬಲ್ಲ. ಅವಳ ಮುಖದಲ್ಲಿ ಕಳಂಕದ ಒಂದು ಎಳೆಯೂ ಮಿಡಿಯುತ್ತಿಲ್ಲ. ಇದ್ದರಲ್ಲವೆ ಅದು ಮಿಡಿಯುವುದು! ಅಷ್ಟಲ್ಲದೆ ಈ ಹುಡುಗಿಯ ವಯಸ್ಸಿನವಳೇ ತನಗೊಬ್ಬಳು ಮಗಳು ಇದ್ದಾಳೆ. ಏನು ಸಂಬಂಧವೋ ಇವಳ ಮುಖ ತನ್ನ ಮಗಳ ಮುಖವನ್ನು ಹೋಲುತ್ತ ಇದೆ—ಅಯ್ಯೋ ಪಾಪವೇ.

ಇಷ್ಟಲ್ಲದೆ ಗೋವಿಂದಸ್ವಾಮಿಯ ದೂರಿನಲ್ಲಿಯೇ ಅಧಿಕಾರಿಗೆ ಏನೋ ಭಾರೀ ಸಂದೇಹ. ವೃಂದಳನ್ನು ನೋಡುತ್ತ ನೋಡುತ್ತ ಅವನ ಸಂದೇಹ ಇಮ್ಮಡಿಯಾಗತೊಡಗಿದೆ.

ಆತ ಈಗ, ಅಲ್ಲಿಯೆ ಇದ್ದ ಒಂದು ಕುರ್ಚಿಯನ್ನು ಎಳೆದು ಕುಳಿತುಕೊಂಡ. ಹಾಸಿಗೆ, ಪೆಟ್ಟಿಗೆ ಇತ್ಯಾದಿ ಎಲ್ಲವನ್ನೂ ತೆಗೆಸಿ ನೋಡುವ ಶಾಸ್ತ್ರ ಮಾಡಿದ ಬಳಿಕ ಶ್ರೀನಿವಾಸನ ಊರು ಕೇರಿ ಎಲ್ಲ ಕೇಳಿ ಮಹಜರ್ ಬರೆದುಕೊಂಡ. ಆ ಮನೆಯಿಂದ ಹೊರಬಂದ.

ಹೊರಬಂದು ಆತ ಬಾಗಿಲಲ್ಲಿ ನಿಂತಾಗ, ಮೊದಲು ಕಾಕಾ ಎನ್ನುತ್ತ ರಂಪ ಮಾಡಿ, ಈಗ ಆ ಮಾವಿನ ಮರದಡಿ ಹೋಗಿ ನಿಂತಾಗ ಆ ಹಿಂಡು ಕಾಗೆಗಳು ಮೇಲೆ ಹಾರಿದ್ದುವಷ್ಟೆ. ಈಗ ಇವನು ಈ ಕಡೆ ಬರುತ್ತಲೆ. ಮತ್ತೆ ಅವು ಗುಂಪು ಕೂಡಿ. ಕೆಳಗೆ ಹಾರಿ, ನೆಲಕ್ಕೆ ಮೋರೆಯನ್ನು ಚಾಚಿ ಕೊಕ್ಕನ್ನು ಮೇಲೆತ್ತಿ ಕರ್‍ರ ಕರ್‍ರ ಕರ್‍ರ ಎಂದು ಗಲಾಟೆ ಮಾಡ ತೊಡಗಿದ್ದುವು.

ಅಧಿಕಾರಿ ಈಗ ಏನೋ ಮಿಂಚನ್ನು ಕಂಡವನಂತೆ ಮತ್ತೆ ಅಲ್ಲಿ ಹೋದ. ಯಥಾಪ್ರಕಾರ ಕಾಗೆಗಳು ಮೇಲೆ ಹಾರಿದುವು. ಕೂಗನ್ನೆಬ್ಬಿಸಿದುವು. ಆತ ಈಗ, ಅಲ್ಲಿ ಮಾವಿನ ಮರದಡಿಯಲ್ಲಿ ನಾಲ್ಕಾರು ನಿಮಿಷಗಳು ಶತಪಥ ತುಳಿದ.

ಬಳಿಕ ಆತ. ಆ ಜಾಗವನ್ನು ಅಗೆಯುವಂತೆ ಆಳುಗಳಿಗೆ ಆಣತಿ ಇತ್ತ.





ಯಾವ ವನದೇವತೆಯ
ಶೋಕಭಾವ!

ಗಾನರಸ ಉದಿಯುವುದು
ಕಾಣೆ ಒಡಲಿನ ಅಂದ
ತಿಳಿಹು ಕೌಶಿಕಮುನಿಯೆ
ಇದರ ಹಾವ!



ನಿರ್ಜನದ ಅಟವಿಯೋ
ಮಿಥಿಲೆ ಪಥವನು ಹಿಡಿದು
ನಡೆದಿರಲು ದಾರಿಯೇ
ತಪ್ಪಿತೇನು!

ಹೇಳುವಿರ ಗುರುವರರ
ಯಾವ ರಕ್ಕಸಮಾಯೆ
ಪದವ ಹದಗೆಡಿಸುವುದು
ಕಾಮ್ಯವೇನು!

ವಿಶ್ವಾಮಿತ್ರ:

ಉಲಿಯದಿರು ಕೆಡೆನುಡಿದು
ಎಲೆಕಂದ ರಘುನಂದ
ಮೈತಳೆದ ಭಗವಂತ
ಹರಿ, ಮುರಾರಿ!

ಅಳಲು ಕಾಲವಿದಲ್ಲ
ದಾನವರು ಇಲ್ಲಿಲ್ಲ,
ಬಂದಿಹೆವು ಗೌತಮನ
ನೆಲೆಯ ಸೇರಿ!

ಅವನ ಸತಿ ವರಸುವ್ರತಿ
ಸುರತ ಕೇಳಿಗೆ ಸಿಲುಕಿ-
ಸುರಪತಿಯ ಸರಸದಲಿ
ಸೋತ ಕ್ಷಣದಿ,

ಸಿಡಿದೆದ್ದ ಯತಿಕೋಪ
ಉಡುಗಿಸಿತು ಅವಳೆದೆಯ
ಹೆಪ್ಪುಗಟ್ಟಿತು ಬಾಳು
ಶಿಲೆಯ ತರದ!

ಎಂಥ ಅನುತಾಪವದು
ಭೂಮಿ ಬಿರಿಯಲು ಅರಿದು
ಕೇಳೆನಾ ಹೆಣ್ಣಳಲ
ರಾಮ ಪ್ರಭುವೆ!

ನಿನ್ನ ಕಾಯುತಲಿಹುದು
ದೈವಾತ್ಮ ಬೆಳಕದು
ಮನದ ಮಹಾಲೀಸ್ಯವು
ತೊಳೆಯೊ ವಿಭುವೆ!!

[illegible]



[illegible]

ಮೇಳ:

ದಶರಥನಂದನ ಭವಭಯಭಂಜನ
ಶೋಕಾಕುಲರಿಗೆ ಆಧಾರ
ರಾಮಪಾದರಜಸ್ಪರ್ಶಿತ ನೆಲದಲಿ
ಪತಿತ ಜೀವಿಗಳ ಉದ್ಧಾರ

ಒಂದನೆಯವ:

ಗುರು ನಮೋ ಎನ್ನುತ ವಿಶ್ವಾಮಿತ್ರನ
ಅಡಿಗಳಿಗೆರಗಿದ ದಾಶರಥಿ!
ಶಿಲೆಬಳಿ ಬಂದನು 'ಅವ್ವಾ' ಎಂದನು
ಕಾಣಿಸಿದಳು ಆಹ! ಮುನಿಯ ಸತಿ

ಎರಡನೆಯವ:

ಕಾನನವೆಂಬುದು ನಳನಳಿಸಿತು ಕಣಾ!
ಉದ್ಯಾನದ ತರುಮಂಜರಿಯು
ಚಿವ್‌ಚಿವ್ ಎಂದಿತು ಕುಹೂ ಹಾಡಿತು
ತುಂಬಿತು ವನವನೆ ರಸಝರಿಯು!

ಒಂದನೆಯವ:

ಬಂದಳಹಲ್ಯೆಯು ಅಲಿಪ್ತದೋಷೆಯು
ನಿರ್ಮಲಕಾಂತಿಯ ಕಳೆವಡೆದು
ರಾಮನಾಮವನು ಜಪಿಸುತೆ ಮಂಗಳೆ
ದೇವದರ್ಶನವ ತಾ ಪಡೆದು!

[ ಹಿನ್ನೆಲೆ ]

ಅಹಲ್ಯೆ:

ರಾಮನಾಮ ಪ್ರೇಮಧಾಮ
ದೇವಮಯ ಮಾಯಾ
ನಂಬಿಬಂದ ಮನುಜರಿಗೇ
ಕೊಡುವೆ ನೀ ಅ-ಭಯಾ
ಪಾಪಪೀಡೆ ನಡೆಸೆ ಕ್ರೀಡೆ
ಎದೆಯ ತುಂಬ ಛಾಯಾ
ಸಂಜೀವಿನಿ ಲೇಪವಾಯ್ತು
ನಿನ್ನ ರೂಪ ಛಾಯಾ!!

ಒಂದನೆಯವ:

ಗೌತಮ ಬಂದನು ಹಿಮಗಿರಿಯಿಂದಲಿ
ಅದೆ ಶುಭಗಳಿಗೆಯ ಹೊತ್ತಿನಲಿ
ಶಾಪವಿಮುಕ್ತಳ ರಘುಪತಿ ಭಕ್ತಳ
ಸತಿಯೆನೆ ಪಡೆಯುವ ಗೊತ್ತಿನಲಿ

ಎರಡನೆಯವ:

ಕೌಶಿಕ ಮುನಿವರ ಕೈಯೆತ್ತಿದನಹ
ಹರಸಲು ಋಷಿದಂಪತಿಗಳನು!
ಪುಣ್ಯಚರಿತೆ ಸತಿ ಅಹಲ್ಯೆಮಿಲನದಿ
ಗೌತಮ ನುತಿಸಿದ ರಾಮನನು!!

ಮೇಳ:

ದಶರಥ ನಂದನ ಭವಭಯ ಭಂಜನ
ಶೋಕಾಕುಲರಿಗೆ ಆಧಾರ!
ರಾಮಪಾದರಜ ಸ್ಪರ್ಶಿತ ನೆಲದಲಿ
ಪತಿತ ಜೀವಿಗಳ ಉದ್ಧಾರ

- ಚಿದಂಬರ ದೀಕ್ಷಿತ


ಎಲ್ಲಿ ಬೇಕಾದರೂ
ಉಡುವಂತ ಸೀರೆಗಳು...
ಹತ್ತಿಯ ಬಟ್ಟೆಗೆ ಹೊಸ ರೂಪು-ಹೊಸ ರಂಗು.
ಅದರಲ್ಲೂ ಅದ್ಭುತ ಕಲ್ಪನೆ. ಹಳೆಯ ಸಂಪ್ರದಾಯ
ದಲ್ಲೂ ನಾಳಿನ ಸೊಬಗು ತೋರುವ ವೈಶಿಷ್ಟ್ಯ. ಇಡೀ
ದಿನ ಅಚ್ಚುಕಟ್ಟಾಗಿ-ಅನುಕೂಲವಾಗಿರುವಂತಹ
ಸೀರೆಗಳು. ಒಗೆಯುವುದೂ ಸುಲಭ...ಟಾಟಾ
ಟೆಕ್ಸ್‌ಟೈಲ್ಸ್‌ರವರ ವಾಯಿಲ್‌ಗಳು.
ನೀವು ಮೆಚ್ಚುವ ಅನೇಕ ಬಣ್ಣಗಳು.
ಮೋಹಿನಿ, ಹಸೀನ ಹಾಗೂ
ಮೆಯಿಡ್ ಆಫ್ ದಿ ಮಿಸ್ಟ್.
TATA Textiles



# ವರ್ಷ ಭವಿಷ್ಯ

ಜೋತಿಷಿ :-

**ಶ್ರೀ ಕೃಷ್ಣಶಾಸ್ತ್ರಿ ಭಿಡೆ**

ಭವಿಷ್ಯಕಥನ ಕಾರ್ಯಾಲಯ
ಕಪಿಲೇಶ್ವರ ಬೀದಿ, ಬೆಳಗಾವಿ

★

**ವಿಕ್ರಮ ಸಂವತ್ ೨೦೨೭ರ ಭವಿಷ್ಯ, ಅರ್ಥಾತ್ ಶ್ರೀಶಕೆ ೧೮೯೨ ಕಾರ್ತಿಕ ಶುದ್ಧ ೧ ಶನಿವಾರದಿಂದ ೧೮೯೩ ಆಶ್ವಿನ ವದ್ಯ ೩೦ ಮಂಗಳವಾರದ ವರೆಗಿನ, ಅಂದರೆ ಕ್ರಿಸ್ತಶಕ ೧೯೭೦ ಅಕ್ಟೋಬರ್ ೩೧ರಿಂದ ೧೯೭೧ ಅಕ್ಟೋಬರ್ ೧೯ ರ ವರೆಗಿನ, ಅರ್ಥಾತ್ ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗಿನ ವರ್ಷಭವಿಷ್ಯ.**

★

**ಸೂಚನೆ :** ಈ ವರ್ಷಭವಿಷ್ಯವನ್ನು ಕೇವಲ ಸ್ಥೂಲಮಾನದಿಂದ ಹೇಳಲಾಗಿದೆ. ವ್ಯಕ್ತಿಗಳ ಭವಿಷ್ಯವನ್ನು ಅವರವರ ಜನ್ಮಕುಂಡಲಿಯ ಮೇಲಿಂದ ಅತ್ಯಂತ ಖಚಿತವಾಗಿ ಹೇಳಲು ಸಾಧ್ಯ. ಆದರೂ ಜನ್ಮರಾಶಿಯ ಮೇಲಿಂದ ಹೇಳಲಾದ ಈ ವರ್ಷಭವಿಷ್ಯವು ದ್ವಾದಶ ರಾಶಿಯವರಿಗೆ ದೊರೆಯುವ ಇಷ್ಟಾನಿಷ್ಟ ಫಲಗಳ ನಿಶ್ಚಿತ ಕಲ್ಪನೆಯನ್ನು ನೀಡುವುದೆಂಬುದರಲ್ಲಿ ಸಂದೇಹವಿಲ್ಲ. ಪ್ರತಿಯೊಬ್ಬರ ಜನ್ಮರಾಶಿಯಂತೆಯೆ ಜನ್ಮಲಗ್ನವನ್ನನುಸರಿಸಿಯೂ ಭವಿಷ್ಯವನ್ನು ಹೇಳಿದರೆ ಹೆಚ್ಚು ನಿಜ ಬರುವುದು ಅನುಭವಕ್ಕೆ ಬಂದ ಮಾತಾಗಿದೆ ಸ್ತ್ರೀಯರ ಭವಿಷ್ಯವನ್ನು ಅವರ ದೇಹಧರ್ಮಾನುಸಾರ ಫಲತಾರತಮ್ಯವನ್ನು ಗಮನದಲ್ಲಿಟ್ಟುಕೊಂಡು ನೋಡಬೇಕು.






ಈ ರಾಶಿಯವರು ಈ ವರ್ಷವನ್ನು ಸಾಡೇಸಾತಿಯಲ್ಲಿಯೇ ಕಳೆಯಬೇಕಿರುವುದಾದರೂ ರೂಪಾಯಿಯಲ್ಲಿ ಹತ್ತಾಣೆಯಷ್ಟಾದರೂ ಯಶಸ್ಸು ಮತ್ತು ಸುಖ ದೊರೆಯುವುದು ನಿಶ್ಚಿತ.

ಕಳೆದ ವರ್ಷದಂತೆಯೆ ಈ ವರ್ಷವೂ ಈ ರಾಶಿಯವರಿಗೆ ಸಾಡೇಸಾತಿ ಇರುವುದಾದರೂ ಈ ರಾಶಿಯಲ್ಲಿರುವ ಶನಿಯು ಗುರುವಿನಿಂದ ಹಾಗು ಪ್ರಬಲ ಸ್ಥಾನವಾದ ಷಷ್ಠದಲ್ಲಿರುವ ಸ್ವಸ್ವಾಮಿ ಮಂಗಳನಿಂದ ದೃಷ್ಟನಾಗಿರುವುದರಿಂದ ಆರೋಗ್ಯ ಉತ್ತಮವಾಗಿರುವುದು. ಆದರೆ ಡಿಸೆಂಬರ್ ೧೧ ರಿಂದ ಗೋಚರ ಗುರು ಎಂಟನೆಯವನಾಗಿರುವುದರಿಂದ ಆಗಿನಿಂದ ತುಸು ವಾಯುವಿಕಾರದ ಹಾಗು ಮೂತ್ರಕೋಶದ ತೊಂದರೆಯಾಗಬಹುದು. ವರ್ಷಾರಂಭದಲ್ಲಿ ಬುಧ, ಚಂದ್ರ, ರವಿ, ಶುಕ್ರರು ಸಹ ಈ ರಾಶಿಯನ್ನು ನೋಡುತ್ತಿರುವುದರಿಂದ ಒಟ್ಟಿನಲ್ಲಿ ಕಷ್ಟದಿಂದ ಬಳಲುವಂಥ ಪ್ರಸಂಗಳು ಬರದೆಯೆ ಕಳೆದ ವರ್ಷಕ್ಕಿಂತಲೂ ಮನೋತ್ಸಾಹವನ್ನು ಹೆಚ್ಚಿಸುವಂತಹ ಒಂದೆರಡು ಘಟನೆಗಳಾದರೂ ಸಂಭವಿಸುವುದು ನಿಶ್ಚಿತ. ಅಲ್ಲದೆ ಎಲ್ಲ ಆವಶ್ಯಕ ವಿಷಯಗಳಲ್ಲೂ ದೇಹಸೌಖ್ಯ ತುಂಬ ಉತ್ತಮ.

ಈ ರಾಶಿಯವರ ಪತ್ನಿಯ ಅಥವಾ ಪತಿಯ ಆರೋಗ್ಯ ಈ ವರ್ಷವಿಡಿ ಉತ್ತಮವಾಗಿರುತ್ತದೆ. ಆದರೆ ವರ್ಷಾರಂಭದಿಂದ ನವೆಂಬರ್ ೨೬ ರ ವರೆಗೆ ಮತ್ತು ಮಾರ್ಚ್ ೨೪ ರಿಂದ ಎಪ್ರಿಲ್ ೧೭ರ ವರೆಗಿನ ಕಾಲದಲ್ಲಿ ಕೆಮ್ಮು, ನೆಗಡಿ, ಮೈಕೈ ಉಳುಕುವುದು ಮುಂತಾದ ತೊಂದರೆಗಳು ತುಸು ಮಟ್ಟಿಗೆ ಆಗಬಹುದು. ಸಾಡೇಸಾತಿಯಿಂದಾಗಿ ಉಭಯತ

ರಲ್ಲೂ ಯಾವುದೇ ಚಿಕ್ಕ ದೊಡ್ಡ ವಿಷಯದಲ್ಲೂ ಒಮ್ಮತವಿರುವ ಸಂಭವ ತೀರ ಕಡಿಮೆ. ಅಲ್ಲದೆ ಎಂಟನೆಯ ಗುರು ಬಂದ ಮೇಲೆ ಮತಭೇದ ತೀರ ಹೆಚ್ಚಬಹುದು. ಆದರೆ ಅದರ ಪರಿಣಾಮ ಪ್ರಾಪಂಚಿಕ ವಿಷಯಗಳ ಮೇಲೆ ಎಷ್ಟೂ ಕಂಡುಬರದೆಯೆ ಎಲ್ಲ ವಿಷಯಗಳೂ ವ್ಯವಸ್ಥಿತ ಪೂರ್ತಿಗೊಳ್ಳುವವು. ಫೆಬ್ರುವರಿ ೧೭ ರಿಂದ ಬರುವ ಹತ್ತನೆಯ ರಾಹುವು ಉತ್ಕರ್ಷಕ್ಕೆ ಉತ್ತಮನು. ಆದರೆ ಆಗಿನಿಂದಲೇ ಬರುವ ನಾಲ್ಕನೆಯ ಕೇತುವಿನಿಂದಾಗಿ ನೆರೆಹೊರೆಯವರೊಂದಿಗೆ ಮತ್ತು ಕೆಲವು ಆತ್ಮೀಯರೊಂದಿಗೆ ಸಾಕಷ್ಟು ವಿರಸ ಹಾಗು ಮತ್ಸರವುಂಟಾಗುವುದಕ್ಕೆ ಕಾರಣನಾಗುವನಲ್ಲದೆ ಪರಸ್ಪರರ ಮೇಲೆ ವೃಥಾ ಆರೋಪ ಪ್ರತ್ಯಾರೋಪಗಳೂ ಹೊರಿಸಲ್ಪಡಬಹುದು.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗುವುದಿದ್ದರೆ ಅದಕ್ಕೆ ವರ್ಷಾರಂಭದ ಒಂದೂವರೆ ತಿಂಗಳು ಒಳ್ಳೆಯ ಬಾಸಿಂಗಬಲವಿದೆ. ಆದರೆ ಡಿಸೆಂಬರ್ ೧೧ ರ ನಂತರ ಎಂಟನೆಯ ಗುರುವಿನಿಂದಾಗಿ ಅದು ಒಟ್ಟಾರೆ ಕಡಿಮೆಯಾಗಬಹುದು. ಕೆಲವರ ವಿವಾಹ ಹೊಂದಿದರು ಕೂಡ ಅದು ಪೂರ್ಣ ಕೈಗೂಡುವ ವರೆಗೆ ಅನೇಕ ಅಡೆತಡೆಗಳು ಬಂದು ಸ್ಥಗಿತಗೊಳಿಸಬೇಕಾಗಬಹುದು ಮಾತ್ರವಲ್ಲದೆ, ಕೆಲವೊಂದು ಪ್ರಸಂಗಗಳಲ್ಲಿ ಮುರಿದೂಹೋಗಬಹುದು. ಇದ್ದುದರಲ್ಲಿಯೆ ಜನವರಿ ೩೦ ರಿಂದ ಫೆಬ್ರುವರಿ ೨೭, ಮಾರ್ಚ್ ೨೪ ರಿಂದ ಎಪ್ರಿಲ್ ೧೭ ಹಾಗು ಮೇ ೧೨ ರಿಂದ ಜೂನ್ ೫ ರ ವರೆಗಿನ ಅವಧಿಯಲ್ಲಿ ಭಾರಿ ಪ್ರಯತ್ನ ಪಟ್ಟರೆ ವಿವಾಹವಾದರೂ ಆದೀತು. ವಧುವರರು ಪರಸ್ಪರರಿಗೆ ಅಷ್ಟೊಂದು ಅನುರೂಪರಿರದಿದ್ದರೂ ಆಚಾರ ವಿಚಾರಗಳಲ್ಲಿ ಉಭಯತರಲ್ಲೂ ಸಾಕಷ್ಟು ಸಾಮ್ಯವಿರಬಹುದಾಗಿದೆ.

ಈ ವರ್ಷ ನಿಮ್ಮ ಮಗ ಅಥವಾ ಮಗಳ ವಿವಾಹ ಮಾಡುವುದಿದ್ದರೆ ಅದಕ್ಕೆ ಡಿಸೆಂಬರ್ ೧೧ ರ ವರೆಗೆ ಇಲ್ಲವೆ ನಂತರ ಮೇ ೧೨ ರಿಂದ ಜೂನ್ ೬ ಅಥವಾ ಜುಲೈ ೧ ರಿಂದ ೧೫ ರ ವರೆಗಿನ ಕಾಲದಲ್ಲಿ ಮಾತ್ರ ಒಳ್ಳೆಯ ಬಾಸಿಂಗಬಲವಿದೆ. ಆದರೆ ವಿವಾಹ ಹೊಂದುವುದಕ್ಕೆ ಮಾತ್ರ ವಿಶೇಷ ತೊಂದರೆ ಬರಲಾರದು, ಮತ್ತು ಸೊಸೆ ಅಥವಾ ಅಳಿಯ ಅನುರೂಪರೂ ಮನಸ್ಸಿಗೆ ಒಪ್ಪುವಂತಹರೂ ಆಗಿರುವರು. ಮಕ್ಕಳ ಉನ್ನತಿಗೆ ಡಿಸೆಂಬರ್ ೧೧ ರ ವರೆಗಿನ ಕಾಲ ಬಹಳ ಉತ್ತಮ; ಅನಂತರ ಫೆಬ್ರುವರಿ ೧೭ ರ ನಂತರದ ಕಾಲವೂ ಒಳ್ಳೆಯದಾಗಿದ್ದು ಅವರ ಬ್ಬೊಟ್ಟಿನ ದೈವವಂತೂ ಬಹು ಚೆನ್ನಾಗಿ ತೆರೆಯಲಿದೆ. ನವೆಂಬರ್ ೧೭ ರಿಂದ ಜನವರಿ ೧೨, ಎಪ್ರಿಲ್ ೧೯ ರಿಂದ ಜೂನ್ ೨೭ ಹಾಗು ಅಗಸ್ಟ್ ೧೪ ರಿಂದ ಅಕ್ಟೋಬರ್ ೧೨ ರ ವರೆಗಿನ ಅವಧಿಯಲ್ಲಿ ಜನರಿಂದ ಪ್ರಶಂಸೆಯು ದೊರೆಯುವಷ್ಟು ಒಳ್ಳೆಯ ಸುಖ ಮಕ್ಕಳಿಂದ ನಿಮಗೆ ಸಿಗಬಹುದಾಗಿದೆ. ಆದರೆ ಫೆಬ್ರುವರಿ ೧೭ ರ ಮೊದಲು ಒಬ್ಬ ಮಗ ಅಥವಾ ಮಗಳ ವಿಪರೀತ ಹಟದಿಂದ ತೊಂದರೆಯಾಗುವ ಸಂಭವವೂ ಇದೆ.

ನಿಮ್ಮ ಉದ್ಯೋಗದಲ್ಲಿ ಈ ವರ್ಷ ಭಾರಿ ಯಶಸ್ಸು ಹಾಗು ತುಂಬ ಲಾಭ ದೊರೆಯಲಿವೆ. ಸಾಡೇಸಾತಿಯಿದ್ದರೂ ಚಿಂತೆ ಬೇಡ. ಯಾಕೆಂದರೆ ಕರ್ಮ ಹಾಗು ಲಾಭಸ್ಥಾನಗಳ ಸ್ವಾಮಿಯಾದ ಶನಿಯು ಈ ರಾಶಿಯಲ್ಲಿರುವ ವರೆಗೆ ಅಂದರೆ ಮೇ ೧೮ ವರೆಗೆ ಪೂರ್ಣದೃಷ್ಟಿಯಿಂದ ಕರ್ಮಸ್ಥಾನವನ್ನು ಹಾಗು ವೃಷಭಕ್ಕೆ ಹೋದನಂತರ ಅಂದರೆ ಮೇ ೧೮ ನಂತರ ಲಾಭಸ್ಥಾನವನ್ನು ನೋಡುತ್ತಿರುತ್ತಾನೆ. ಆದರೂ ಡಿಸೆಂಬರ್ ೧೧ ರ ನಂತರದ ಕಾಲದಲ್ಲಿ ಭಾಗ್ಯಸ್ಥಾನಾಧಿಪತಿ ಗುರುವಿನ ಭ್ರಮಣದಿಂದಾಗಿ ಅವನು ಈ ರಾಶಿಗೆ ಎಂಟನೆಯ ಮತ್ತು ಭಾಗ್ಯಸ್ಥಾನಕ್ಕೆ ಹನ್ನೆರಡನೆಯವನಾಗುವುದರಿಂದ ಪ್ರಗತಿಗೆ ಮಾತ್ರ ತೊಂದರೆಯುಂಟಾಗುವುದಲ್ಲದೆ ಒಂದೆರಡು ಸಲ ಆಘಾತವಾಗುವಷ್ಟು ಅಡೆತಡೆಗಳು ಉಂಟಾಗಬಹುದು. ಒಂದೆರಡು ವಿಷಯಗಳಲ್ಲಿ ಇದು ಊರಿನ ನಿಮ್ಮ ಪ್ರತಿಷ್ಠೆಗೂ ಕುಂದು ತಟ್ಟಬಹುದು. ನೌಕರದಾರರಿಗೆ ಬಡತಿ ದೊರೆತರೆ ಅದು ತಾತ್ಪೂರ್ತಿಕವೆನಿಸಬಹುದು. ಬದಲಿಯಾದರೆ ಅದು ಮಾತ್ರ ಎಲ್ಲ ಬಗೆಯ ಸುಖ ಸೌಕರ್ಯಗಳಿರುವ ಸ್ಥಳಕ್ಕೆ. ಅಲ್ಲಿ ಕೆಲಸದ ಭಾರ ವಿಶೇಷವೆನಿಸಿದರೂ ವರಿಷ್ಠರ ಮರ್ಜಿ ಮಾತ್ರ ಸಾಕಷ್ಟಿರುವುದು, ಅಲ್ಲದೆ ಹೊಸ ಸ್ಥಳವು ನಿಮಗಿಂತ ಹೆಂಡತಿಗೆ ಹೆಚ್ಚು ಹಿಡಿಸುವುದು. ವ್ಯಾಪಾರಸ್ಥರಿಗೆ ತುಂಬ ಲಾಭವಾದರೂ ಅನೇಕ ವಿಷಯಗಳಲ್ಲಿ ಸರಕಾರಿ ನಿಯಮಗಳ ಉಪದ್ರವವಾಗುವುದು. ಮಾರ್ಚ್ ೨೪ ರಿಂದ ಎಪ್ರಿಲ್ ೨೭, ಮೇ ೧೨ ರಿಂದ ಜುಲೈ ೧, ಅಗಸ್ಟ್ ೧೮ ರಿಂದ ೨೯ ಮತ್ತು ಅಕ್ಟೋಬರ್ ೬ ರ ನಂತರದ ಕಾಲವು ಲಾಭಕ್ಕೆ ಹೆಚ್ಚು ಅನುಕೂಲವಾಗಿದೆ. ಪಾಲುದಾರಿಕೆಯ ಉದ್ಯೋಗವಿದ್ದವರಿಗೆ ಡಿಸೆಂಬರ್ ೧೧ ರ ನಂತರ ಬಹಳ ಕಷ್ಟ ಪ್ರಾಪ್ತವಾಗುವ ಯೋಗವಿದೆ. ಅನೇಕರಿಗೆ ದ್ರವ್ಯಸಂಗ್ರಹ ಸಾಧ್ಯವಾಗುವುದು; ವಾಹನ ಕೊಂಡುಕೊಳ್ಳುವ ಯೋಗವೂ ಇದೆ. ಎಂಟನೆಯ ಗುರುವು ಸತ್ಸಮಾಗಮಕ್ಕೆ, ಆಧ್ಯಾತ್ಮಜ್ಞಾನಕ್ಕೆ, ಶುಭಸೂಚಕ ಸ್ವಪ್ನಗಳಿಗೆ ತುಂಬ ಅನುಕೂಲನು. ಆಪ್ತಸುಖಕ್ಕಿಂತ ಮಿತ್ರಸುಖ ಉತ್ತಮ. ಕೆಲವು ಯಾತ್ರೆಗಳು ಸಾಧ್ಯವಾಗಬಹುದು. ಆದರೆ ಇತರ ಕಾರ್ಯಗಳಿಗಾಗಿ ಮಾಡಿದ ಪ್ರವಾಸ ಅಷ್ಟು ಸುಖಕರವೆನಿಸದು. ಮಾತ್ರವಲ್ಲ ಒಂದೆರಡು ಕೆಲಸಕ್ಕಾಗಿಯೂ ಕನಿಷ್ಠ ನಾಲ್ಕಾರು ಬಾರಿ ಓಡಾಡಬೇಕಾಗಬಹುದು. ಪತ್ರವ್ಯವಹಾರ ಮತ್ತು ಇತರ ಕೆಲಸಗಳು ಅಪೇಕ್ಷಿತ ವೇಳೆಗಾಗದೆ ತುಸು ವಿಲಂಬವಾಗಬಹುದಾದರೂ ಮನಸ್ಸಿನಂತೆಯೆ ಕೊನೆಗೊಳ್ಳುವವು. ಆದರೆ ಪ್ರತ್ಯಕ್ಷ ಭೆಟ್ಟಿ ಅಪೇಕ್ಷೆಗಿಂತ ಹೆಚ್ಚು ಉತ್ತಮವೆನಿಸುವುದು.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ವಿಷಯಗಳಲ್ಲಿ ಅರ್ಧದಷ್ಟು ಯಶಸ್ವಿಯಾಗುವವು. ಈ ವಿಷಯದಲ್ಲಿ ನವೆಂಬರ್ ೨೭ ರ ವರೆಗಿನ ಹಾಗು ಮಾರ್ಚ್ ೧ ರಿಂದ ಎಪ್ರಿಲ್ ೧೯ ಮತ್ತು ಅಗಸ್ಟ್ ೧೪ ರಿಂದ ಅಕ್ಟೋಬರ್ ೧೨ ರ ವರೆಗಿನ ಕಾಲವು ಹೆಚ್ಚು ಯಶೋದಾಯಕವು.

ಈ ರಾಶಿಯ ಗರ್ಭವತಿಯರ ಪ್ರಸೂತಿಯು ಫೆಬ್ರುವರಿ ೧೭ ರ ವರೆಗಿನ ಅವಧಿಯಲ್ಲಾದರೆ ಕಷ್ಟಕರವಾಗುವುದು, ಹಾಗು ಅನಂತರವಾದರೆ ಸುಲಭ ಹೆರಿಗೆಯಾಗುವುದು. ಡಿಸೆಂಬರ್ ೧೧ ರ ವರೆಗೆ ಪ್ರಸೂತರಾದವರಿಗೆ ಗಂಡು ಮಗುವೂ ಅನಂತರ ಆಗುವವರಿಗೆ ಬಹುಶಃ ಹೆಣ್ಣು ಮಗುವೂ ಜನಿಸುವ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೧ ರ ಮೊದಲು ಅಥವಾ ಮಾರ್ಚ್ ೧ ರಿಂದ ಅಗಸ್ಟ್ ೧೪ ರ ವರೆಗಾದರೆ ಯಶಸ್ಸು ನಿಶ್ಚಿತವೆನ್ನಬಹುದು. ಆದರೆ ಎಂಟನೆಯ ಗುರುವಿರುವಾಗ ಪ್ರಥಮ ಅಥವಾ ದ್ವಿತೀಯ ಶ್ರೇಣಿ ಸಿಗುವುದು ಕಠಿಣವೆ.




ಈ ವರ್ಷ ಈ ರಾಶಿಯವರಿಗೆ ಸ್ಥೂಲಮಾನದಿಂದ ಡಿಸೆಂಬರ್ ೧೧ ರ ವರೆಗೆ ಪೂರ್ಣ ಕಷ್ಟಕರವಾದರೆ ಇಲ್ಲಿಂದ ಮೇ ೧ ರ ವರೆಗೆ ಮಧ್ಯಮತರದ್ದು ಹಾಗು ಅನಂತರ ಮಾತ್ರ ರೂಪಾಯಿಯಲ್ಲಿ ಹನ್ನೆರಡು ಹದಿಮೂರು ಆಣೆಯಷ್ಟು ಯಶ ಮತ್ತು ಸುಖದಾಯಕವೆಂಬುದು ನಿಶ್ಚಿತ.

ಈ ವರ್ಷವಿಡಿ ಈ ರಾಶಿಯವರು ಸಾಡೇಸಾತಿಯನ್ನು ಭೋಗಿಸಬೇಕಾಗುವುದು. ಅದರ ಕಾರಕನಾದ ಶನಿಯು ಎಪ್ರಿಲ್ ೩೦ ರ ವರೆಗೆ ಹನ್ನೆರಡನೆಯ ಅಂದರೆ ವ್ಯಯಸ್ಥಾನದಲ್ಲಿ ನೀಚ ರಾಶಿಯಾದ ಮೇಷದಲ್ಲಿರುವುದರಿಂದ ಹತ್ತಿರಿರುವ ದ್ರವ್ಯವು ಯೋಗ್ಯ ಕೆಲಸಗಳಿಗಿಂತ ನಿರರ್ಥಕ ಕಾರ್ಯಗಳಲ್ಲೇ ಹೆಚ್ಚು ವ್ಯಯವಾಗುವುದಲ್ಲದೆ ಯಾವುದೇ ಚಿಕ್ಕ ದೊಡ್ಡ ಕೆಲಸವೂ ಮನಸ್ಸಿನಂತೆ ಆಗದೆಯೇ ಅದಕ್ಕೆ ವಿಪರೀತ ಟಿಸಿಲೊಡೆದು ವಿಕೃತ ಸ್ವರೂಪವೇ ಪ್ರಾಪ್ತವಾಗಬಹುದು. ಆದರೆ ಮೇ ೧ ರ ನಂತರ ಮಾತ್ರ ವೆಚ್ಚವು ತಂತಾನೆ ಹಿಡಿತದಲ್ಲಿ ಬರುವುದಲ್ಲದೆ ಅದು ವ್ಯರ್ಥವೂ ಆಗಲಾರದು.

ಡಿಸೆಂಬರ್ ೧೧ ರ ನಂತರ ಆರೋಗ್ಯ ಚೆನ್ನಾಗಿರುವುದು. ಪ್ರಾಪಂಚಿಕ ದಗದಗಿ ಬಹಳವಾದರೂ ಕೊನೆಗೆ ಪರಿಣಾಮ ಮಾತ್ರ ಮನಸ್ಸಿನಂತೆಯೆ ಇರುವುದು. ಡಿಸೆಂಬರ್ ೧೧ ರ ವರೆಗೆ ಮತ್ತು ಮಾರ್ಚ್ ೧ ರಿಂದ ೧೯ ರ ವರೆಗೆ ಆರೋಗ್ಯದ ಬಗ್ಗೆ ತುಸು ಜಾಗ್ರತೆ ವಹಿಸಿದರೆ ಸಾಕು. ಇತರ ಆವಶ್ಯಕ ವಿಷಯಗಳಲ್ಲಿ ದೇಹಸುಖ ಫೆಬ್ರುವರಿ ೧೭ ರ ವರೆಗೆ ತೀರ ಕಡಿಮೆಯೆನಿಸಿದರೂ ನಂತರ ಮಾತ್ರ ಅಪೇಕ್ಷಿಸಿದಷ್ಟಾದರೂ ನಿಶ್ಚಿತ ದೊರೆಯುವುದು.

ಹೆಂಡತಿಯ ಆರೋಗ್ಯ ಡಿಸೆಂಬರ್ ೧೧ ರಿಂದ ಸಾಕಷ್ಟು ಉತ್ತಮವಿರುವುದಲ್ಲದೆ ಬಹುತರ ವಿಷಯಗಳಲ್ಲಿ ಒಳ್ಳೆಯ ಮತೈಕ್ಯ ಮತ್ತು ಗಾಢ ಪ್ರೇಮ ಕಂಡುಬರುವುದು. ಆದರೆ ಶನಿಯು ಹನ್ನೆರಡನೆಯವನಾಗಿರುವ ವರೆಗೆ ನಿಮ್ಮ ಬಗ್ಗೆ ಅವಳ ಮನಸ್ಸನ್ನು ಕಲುಷಿತಗೊಳಿಸಲು ನಿಮ್ಮ ಆಪ್ತರೇ ಭಾರೀ ಪ್ರಯತ್ನದಲ್ಲಿರುವುದು ಅನುಭವಕ್ಕೆ ಬರಬಹುದು.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗಲೇಬೇಕಿದ್ದಲ್ಲಿ ಅದಕ್ಕೆ ಡಿಸೆಂಬರ್ ೧೧ ರಿಂದ ಬಾಸಿಂಗಬಲ ಉತ್ತಮವೇ ಇದೆ. ಆದರೆ ಶನಿಯು

ಜನ್ಮಸ್ಥನಾದ ನಂತರ, ಅಂದರೆ ಮೇ ೧೮ ನಂತರವೇ ವಿವಾಹ ನಿರಾಬಾಸ ಹೊಂದಬಹುದಾಗಿದೆ. ವಧು ಅಥವಾ ವರ ರೂಪದಿಂದ ಅಷ್ಟೇನೂ ಅನುರೂಪರೆನಿಸದಿದ್ದರೂ ಗುಣದಿಂದ ನಿಮಗಿಂತಲೂ ಶ್ರೇಷ್ಠರೆನಿಸುವರು.

ಅದರಂತೆಯೆ ನಿಮ್ಮ ಮಗ ಅಥವಾ ಮಗಳ ವಿವಾಹ ಮಾಡುವದಿದ್ದಲ್ಲಿ ಅದಕ್ಕೆ ಡಿಸೆಂಬರ್ ೧೧ ರ ವರೆಗೆ ಬಹಳ ಉತ್ತಮ ಹಾಗು ಅನಂತರ ಸಾಮಾನ್ಯ ಬಾಸಿಂಗಬಲವಿದೆ. ಸೊಸೆ ಅಥವಾ ಅಳಿಯ ನಿಮಗಿಂತ ಹೆಚ್ಚು ಸುಸ್ಥಿತಿಯಲ್ಲಿರುವವರೂ ಸುಶಿಕ್ಷಿತರೂ ಆದರೆ ತುಸು ಸಿಡುಕಿನ ಸ್ವಭಾವದವರೂ ಆಗಿರಬಹುದಾಗಿದೆಯಾದರೂ ವಿವಾಹಕಾರ್ಯದಲ್ಲಿ ಯಾವುದೇ ಬಗೆಯ ತೊಂದರೆ ಅಥವಾ ಮತ-ವಿರೋಧವುಂಟಾಗುವುದಿಲ್ಲ. ಆದರೆ ವೆಚ್ಚದ ದೃಷ್ಟಿಯಿಂದ ಮೇ ೧ ರ ವರೆಗೆ ಎಷ್ಟು ಭಾರವೆನಿಸುವುದೋ ಮುಂದೆಯಾದರೆ ಅಷ್ಟೆನಿಸಲಿಕ್ಕಿಲ್ಲ. ಡಿಸೆಂಬರ್ ೧೬ ರ ವರೆಗೆ ಮಕ್ಕಳ ಉನ್ನತಿ ಚೆನ್ನಾಗಿಯೇ ಆಗುವುದಲ್ಲದೆ ಅವರಲ್ಲೊಬ್ಬನಂತೂ ವಿಶೇಷ ಉತ್ಕರ್ಷ ಹೊಂದುವನು. ಡಿಸೆಂಬರ್ ೧೧ ರ ನಂತರ ಮಕ್ಕಳೆಲ್ಲರಿಂದಲೂ ನಿಮಗೆ ಒಳ್ಳೆಯ ಸುಖ ದೊರೆಯತೊಡಗುವುದು.

ಶನಿಯು ಮೇಷದಿಂದ ವೃಷಭಕ್ಕೆ 'ಬರುವ ವರೆಗ ಅಂದರೆ ಮೇ ೧ ರ ವರೆಗೆ ಉದ್ಯೋಗದಲ್ಲಿ ನಿಮಗೆ ಹೆಚ್ಚಿನ ಯಶಸ್ಸಾಗಲಿ ಲಾಭವಾಗಲಿ ಸಿಗಲಾರದೆಂಬುದು ನಿಜ. ಆದರೆ ಡಿಸೆಂಬರ್ ೧೧ ರ ವರೆಗಿನ ಕಾಲವು ನೌಕರದಾರರಿಗೆ ಸಾಕಷ್ಟು ಉತ್ತಮವೇ ಆಗಿದೆಯಲ್ಲದೆ ಮುಂದೆ ಮಾರ್ಚ್ ೨೪ ರಿಂದ ಎಪ್ರಿಲ್ ೧೭ ರ ವರೆಗಿನ ಅವಧಿಯಲ್ಲಿ ಬಡತಿಯೂ ದೊರೆಯಬಹುದು. ಮೇ ೧ ಕ್ಕೆ ಮೊದಲೇ ಬದಲಿಯಾದರೆ ಅದು ತೀರ ಅನನುಕೂಲ ಸ್ಥಳಕ್ಕೆ ಹಾಗು ಅನಂತರವಾದರೆ ಒಳ್ಳೆಯ ಸುಖ ಸೌಕರ್ಯಗಳಿರುವ ಊರಿಗಾಗುವುದು. ಫೆಬ್ರುವರಿ ೧೬ ರ ವರೆಗೆ ವರಿಷ್ಠರಿಂದ ತುಸು ತೊಂದರೆಯೇ ಇರುವುದಾದರೂ ಅನಂತರ ಮಾತ್ರ ಅವರು ನಿಮ್ಮ ಬಗ್ಗೆ ಸಂತುಷ್ಟರಾಗಿಯೇ ಇರುವರು. ಉದ್ಯೋಗಸ್ಥರಿಗೆ ಮೇ ೧ ರ ನಂತರ ವ್ಯವಹಾರದ ಹಿಡಿತ ಸಿಕ್ಕಂತಾಗಿ ಅತ್ಯಂತ ರಭಸದ ಪ್ರಗತಿಯುಂಟಾಗತೊಡಗುವುದು. ದೊಡ್ಡ ಜನರಲ್ಲಿ ಪತ್ತು ಪ್ರತಿಷ್ಠೆಗಳು ಬೆಳೆಯುವವು. ಅಂದಾಜಿನಷ್ಟು ದ್ರವ್ಯಲಾಭ ನಿಶ್ಚಿತ ಆಗುವುದು. ವಿಶೇಷತಃ ಜನೆವರಿ ೧೨ ರಿಂದ ಮಾರ್ಚ್ ೧, ಎಪ್ರಿಲ್ ೧೯ ರಿಂದ ಜೂನ್ ೨೬ ಹಾಗು ನಂತರ ಅಗಸ್ಟ ೧೪ ರಿಂದ ಅಕ್ಟೋಬರ್ ೧೨ ರ ವರೆಗಿನ ಕಾಲದಲ್ಲಿ ಯಶಸ್ಸು ಹಾಗು ಲಾಭ ಮನಸ್ಸಿನಂತೆ. ಫೆಬ್ರುವರಿ ೧೭ ರಿಂದ ಮಾರ್ಚ್ ೨೪ ಹಾಗು ಜೂನ್ ೫ ರಿಂದ ಜುಲೈ ೨೫ ರ ವರೆಗಿನ ಕಾಲವು ಸರಕಾರಿ ಕೆಲಸಗಳಲ್ಲಿ ಯಶಸ್ಸಿಗೆ. ಹೊಸ ಸ್ಥಳಗಳಲ್ಲಿ ಪತ್ತು-ಪ್ರತಿಷ್ಠೆಗಳನ್ನು ಹೆಚ್ಚು ಬೆಳೆಸಿಕೊಳ್ಳಲಿಕ್ಕೆ ತುಂಬ ಉತ್ತಮವೆನಿಸಲಿದೆ. ಶನಿಯು ವೃಷಭದಲ್ಲಿ ಬಂದ ನಂತರ ತುಸು ಹಣವನ್ನು ಸಂಗ್ರಹಿಸಲು ಸಾಧ್ಯವಾಗಬಹುದಲ್ಲದೆ ಈ ಮೊದಲು ಕೈಮೀರಿ ಹೋಗಿದ್ದ ಅನೇಕ ವಿಷಯಗಳಲ್ಲಿ ಪುನಃ ಸುಧಾರಿಸಿಕೊಳ್ಳಲು ಶಕ್ಯವಾಗುವುದು. ಅದರಂತೆಯೆ ಸಾಲ, ಕೈಗಡ ಮುಂತಾದುದು ತೀರಬೇಕಿದ್ದಲ್ಲಿ ಅದಕ್ಕೆ ಜೂನ್ ೨೬ ರಿಂದ ಅಗಸ್ಟ ೧೪ ರ ವರೆಗಿನ ಕಾಲವು ಅನುಕೂಲವಾಗಿದೆ. ಡಿಸೆಂಬರ್ ೧೧ ರಿಂದ ಉತ್ತಮ ಮಿತ್ರಸುಖ ದೊರೆಯತೊಡಗುವುದಲ್ಲದೆ ವಿಶೇಷ ಮಹತ್ವದ ಕಾರ್ಯಗಳಲ್ಲಿ ಅವರಿಂದ ಒಳ್ಳೆಯ ಸಹಾಯವೂ ದೊರೆಯುವುದು. ಇದೇ ದಿನದಿಂದ ಮಿತ್ರರ ಹಾಗು ಸೋದರರ ಉನ್ನತಿಯೂ ಒಳ್ಳೆಯ ಭರದಿಂದ ಆಗತೊಡಗುವುದು. ಸೋದರರು ಕಳೆದ ವರ್ಷಕ್ಕಿಂತ ಹೆಚ್ಚು ಸರಳ ರೀತಿಯಿಂದ ಹಾಗು ಪ್ರೇಮದಿಂದ ವರ್ತಿಸುವರು. ಯಾತ್ರಾಪ್ರಯೋಗ ಕಡಿಮೆಯೆ. ಸಮೀಪದ ಯಾತ್ರೆ ಕದಾಚಿತ್ ಮೇ ೧೨ ರಿಂದ ಜೂನ್ ೫ ಅಥವಾ ಜುಲೈ ೧ ರಿಂದ ೧೫ ರ ವರೆಗಿನ ಅವಧಿಯಲ್ಲಿ ಜರುಗಬಹುದು. ವಿವಾಹದಂತಹ ಒಂದೆರಡು ಮಂಗಲಕಾರ್ಯಗಳ ನಿಮಿತ್ತ ಒಂದೆರಡು ಸಲ ಸಾಕಷ್ಟು ದೂರದ ಪ್ರವಾಸವನ್ನೂ ಕೈಕೊಳ್ಳಬೇಕಾಗಿ ಬರಬಹುದು. ಫೆಬ್ರುವರಿ ೧೭ ರ ವರೆಗೆ ಆಪ್ತರು ಮತ್ತು ಆಶ್ರಿತರು ಅಷ್ಟೊಂದು ಸರಳ ರೀತಿಯಲ್ಲಿ ವರ್ತಿಸುವುದಿಲ್ಲ. ವಾಹನಸುಖವೂ ಅಷ್ಟಾಗಿ ದೊರೆಯದು, ಹಾಗು ಊರ ಜನರು ತುಸು ವಿರೋಧದಿಂದ ನಡೆದುಕೊಳ್ಳುವರು. ಆದರೆ ಆ ದಿನದ ನಂತರ ಈ ವಿಷಯಗಳಲ್ಲೆಲ್ಲ ಬಹು ಬೇಗ ಸುಧಾರಣೆ ಕಂಡುಬರತೊಡಗುವುದು. ಶನಿಯು ವೃಷಭವನ್ನು ಪ್ರವೇಶಿಸಿದ ನಂತರ ಸುಖ ಸಮಾಧಾನಗಳು ದೊರೆಯತೊಡಗುವವು.

ದಾವೆ ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಡಿಸೆಂಬರ್ ೧೧ ರ ವರೆಗೆ ಯಶಸ್ಸು ಅಸಂಭವನೀಯ. ಆದರೆ ಅನಂತರ ಪ್ರತಿಪಕ್ಷಿಯ ಜೋರು ಮೆಲ್ಲ ಮೆಲ್ಲನೆ ಕಡಿಮೆಯಾಗಲಾರಂಭಿಸಿ ಫೆಬ್ರುವರಿ ೧೭ ರ ನಂತರ ಉಭಯಪಕ್ಷಗಳೂ ಸಮಬಲರೆನಿಸಿ ಮುಂದೆ ಮೇ ೧ ರ ನಂತರ ಯಶಸ್ಸು ನಿಮಗೆ ದೊರೆಯುವುದೇ ಹೆಚ್ಚು ಸಂಭವನೀಯ.

ಈ ರಾಶಿಯ ಗರ್ಭವತಿಯರು ಡಿಸೆಂಬರ್ ೧೧ ರ ಮೊದಲು ಪ್ರಸೂತರಾದರೆ ಹೆರಿಗೆ ವಿಶೇಷ ಕಷ್ಟಕರವೆನಿಸುವುದಲ್ಲದೆ ಜನಿಸುವ ಮಗು ಹೆಣ್ಣಾಗಬಹುದು; ಆದರೆ ಆಮೇಲೆ ವಿಶೇಷತಃ ಮೇ ೧ ರ ನಂತರವಾದರೆ ಸುಲಭಪ್ರಸೂತಿಯಾಗಿ ಮಗು ಗಂಡಾಗಬಹುದಾಗಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೧ ಕ್ಕೆ ಮೊದಲೇ ಆದರೆ ಯಶಸ್ಸು ನಿಶ್ಚಿತವಲ್ಲ; ಆದರೆ ಅಲ್ಲಿಂದ ಫೆಬ್ರುವರಿ ೩ ರ ವರೆಗೆ. ನಂತರ ಫೆಬ್ರುವರಿ ೨೨ ರಿಂದ ಮಾರ್ಚ್ ೨೮ ರ ವರೆಗಾದರೆ ಸಾಮಾನ್ಯ ರೀತಿಯಲ್ಲಾದರೂ ಉತ್ತೀರ್ಣರಾಗುತ್ತಾರೆ; ಆದರೆ ಮುಂದೆ ಜೂನ್ ೧೭ ರಿಂದ ಜುಲೈ ೨೨ ರ ವರೆಗೆ. ಹಾಗು ಸಪ್ಟೆಂಬರ್ ೨೭ ರಿಂದ ಅಕ್ಟೋಬರ್ ೧೪ ರ ವರೆಗಿನ ಅವಧಿಯಲ್ಲಾದರೆ ಪ್ರಥಮ ಅಥವಾ ದ್ವಿತೀಯ ಶ್ರೇಣಿಯಲ್ಲಿ ಉತ್ತೀರ್ಣರಾಗುವುದು ನಿಶ್ಚಿತ.




ಈ ವರ್ಷ ಈ ರಾಶಿಯವರಿಗೆ ಮೊದಲಿನ ಆರು ತಿಂಗಳು ತುಂಬ ಸುಖಪ್ರದವೆನಿಸಿದರೆ ನಂತರದ ಆರು ತಿಂಗಳುಗಳು ಮಾತ್ರ ಅಷ್ಟೇ ಕಷ್ಟಪ್ರದವೆನಿಸಲಿವೆಯೆಂದು ತಿಳಿಯಬೇಕು.

ಈ ರಾಶಿಯವರಿಗೆ ಇಷ್ಟರಲ್ಲಿಯೆ ಅಂದರೆ ಮೇ ೧ ರಿಂದ ಶನಿಯು ವೃಷಭವನ್ನು ಪ್ರವೇಶಿಸುವುದರಿಂದ ಸಾಡೇಸಾತಿ ಪ್ರಾರಂಭವಾಗಲಿದೆ. ಅಂತೆಯೆ ಆಗಿನಿಂದ ಯಾವುದೇ ವಿಷಯದಲ್ಲಿ ದೊಡ್ಡ ಸಾಹಸ ಕೈಕೊಳ್ಳುವಿಕೆ ಅಥವಾ ನಿಮ್ಮ ಶಕ್ತಿಗೆ ಮೀರಿದ ಕೆಲಸಕ್ಕೆ ಕೈ ಹಾಕುವಿಕೆ ಇಲ್ಲವೆ ಪೂರಯಿಸಲಾಗದಂಥ ವಚನವೀಯುವುದರಿಂದ ಸಹ ದೂರವಿರುವುದು ಹಿತಕರ. ಶನಿಯು ಈ ರಾಶಿಯ ಭಾಗ್ಯ ಮತ್ತು ಆಯುಷ್ಯಸ್ಥಾನಗಳ ಅಧಿಪತಿಯಾಗಿರುವುದರಿಂದ ಸಾಡೇಸಾತಿಯ ಮೊದಲಿನ ಎರಡೂವರೆ ವರ್ಷ ಆರೋಗ್ಯ ಮತ್ತು ಉದ್ಯೋಗಗಳೆರಡರ ವಿಷಯದಲ್ಲಿ ತುಸು ಹೆಚ್ಚು ಕಷ್ಟಕರವೂ ಹಾನಿಕಾರಕವೂ ಆಗಿದೆ. ಅನಿಷ್ಟ ಪರಿಹಾರಾರ್ಥ ಅನುಕ್ರಮವಾಗಿ ಶನಿಯ ೨೩,೦೦೦ ಹಾಗು ಮಹಾಮೃತ್ಯುಂಜಯನ ೧೧,೦೦೦ ಜಪವನ್ನು ಅವಶ್ಯ ಮಾಡಬೇಕು. ಅಂದರೆ ಪೀಡೆ ಬಹುಮಟ್ಟಿಗೆ ಕಡಿಮೆಯಾದೀತು.

ಡಿಸೆಂಬರ್ ೧೧ರ ವರೆಗೆ ಆರೋಗ್ಯ ಚೆನ್ನಾಗಿಯೇ ಇರುವುದು. ಆದರೆ ಮುಂದೆ ಮಾತ್ರ ಒಂದಿಲ್ಲೊಂದು ರೀತಿಯ ಉಪದ್ರವ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಆಗುತ್ತಲೇ ಇರುವುದು. ಯಾಕಂದರೆ ಆ ದಿನದಂದು ಬರುವ ಆರನೆಯ ಗುರುವು ಅಜ್ಞಾತವೆನಿಸುವಂಥ ರೋಗಗಳ ಕಾರಕನಾಗಿದ್ದಾನೆ. ಅದರಲ್ಲಿಯೇ ಎಪ್ರಿಲ್ ೧೯ ರಿಂದ ಜೂನ್ ೨೬ ಹಾಗು ಅಗಸ್ಟ ೧೪ ರಿಂದ ಅಕ್ಟೋಬರ್ ೧೨ರ ವರೆಗಿನ ಅವಧಿಯಲ್ಲಿ ಆಹಾರ ವಿಹಾರಗಳ ವಿಷಯದಲ್ಲಿ ತುಸು ಕಟ್ಟುನಿಟ್ಟಾಗಿರಬೇಕು.

ಗುರುವು ವೃಶ್ಚಿಕವನ್ನು ಪ್ರವೇಶಿಸುವ ದಿನದಿಂದ ಅಂದರೆ ಡಿಸೆಂಬರ್ ೧೧ ರಿಂದ ಹೆಂಡತಿಯ ಆರೋಗ್ಯಕ್ಕೂ ಕಾಲವಷ್ಟು ಅನುಕೂಲವಾಗಿಲ್ಲ. ತಲೆನೋವು, ಹೊಟ್ಟೆನೋವು, ವಾಂತಿಯಂತಹ ವಿಕಾರಗಳಿಂದ ಕೆಲ ಸಲ ಬಹಳ ತೊಂದರೆಯಾಗುವ ಸಂಭವವಿದೆ-ಯಾದರೂ ಗಂಡಾಂತರದ ಭಯವೆಷ್ಟೂ ಇಲ್ಲ. ವರ್ಷಾರಂಭದಲ್ಲಿ ಮಿಥುನೇಶ ಬುಧ ಹಾಗು ಭಾರ್ಯೇಶ ಗುರುಗಳ ಯುತಿ ಶುಭಸ್ಥಾನವಾದ ಪಂಚಮದಲ್ಲಾಗುವುದರಿಂದ ಉಭಯತರಲ್ಲಿ ಒಳ್ಳೆಯ ಮತ್ಯೆಕ್ಯ ಹಾಗು ಪ್ರೇಮವುಳಿಯುವುದು.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗಬೇಕಿದ್ದಲ್ಲಿ ಅದಕ್ಕೆ ಐದನೆಯ ಗುರು ಇರುವ ವರೆಗೆ ಅಂದರೆ ಡಿಸೆಂಬರ್ ೧೧ರ ವರೆಗೆ ಮಾತ್ರ ಬಾಸಿಂಗಬಲವಿದೆ. ಅನಂತರವಾದರೆ ವಿವಾಹ ಹೊಂದುವುದೇ ತೀರ ಕಷ್ಟಕರ. ಆದರೆ ಯಾರ ಜನ್ಮಕುಂಡಲಿಯಲ್ಲಿ ಗುರುವು ದಶಮ, ಏಕಾದಶ ಅಥವಾ ದ್ವಿತೀಯ ಸ್ಥಾನದಲ್ಲಿರುವನೋ ಅಂಥವರ ಮದುವೆ ಕದಾಚಿತ್ ಮಾರ್ಚ್ ೨೪ ರಿಂದ ಎಪ್ರಿಲ್ ೧೭ ಅಥವಾ ಮೇ ೧೨ ರಿಂದ ಜೂನ್ ೫ರ ವರೆಗಿನ ಅವಧಿಯಲ್ಲಿ ಆಗಬಹುದಾಗಿದೆ. ವಧೂವರರು ಅನುರೂಪರಿದ್ದು ಗುಣ ದೃಷ್ಟಿಯಿಂದ ಪರಸ್ಪರ ಮನಸಾ ಒಪ್ಪಿತರಿರುವರು. ಆದರೆ ಆರನೆಯ ಗುರುವಿರುವಾಗ ವಿವಾಹವಾದರೆ ವರದಕ್ಷಿಣೆ ವರೋಪಚಾರ ಮುಂತಾದವು ತೀರ ಕಡಿಮೆ ದೊರೆಯುವವು.

ಅದರಂತೆಯೆ, ನಿಮ್ಮ ಮಕ್ಕಳಲ್ಲಿ ಯಾರದಾದರೂ

ಹುದುವೆ ಮಾಡುವುದಿದ್ದಲ್ಲಿ ಅದಕ್ಕೂ ಡಿಸೆಂಬರ್ ೧೧ರ ವರೆಗೆಯೆ ಒಳ್ಳೆಯ ಬಾಸಿಂಗಬಲವಿದೆ. ಅನಂತರವಾದರೆ ಮಾತ್ರ ಅದಕ್ಕಾಗಿ ಅತೀವ ಪ್ರಯತ್ನ ಮಾಡಬೇಕಾದೀತಲ್ಲದೆ ಪ್ರತಿಪಕ್ಷದ ಮರ್ಜಿ ಹಿಡಿಯಬೇಕಾಗಬಹುದು. ಇಷ್ಟಾದರೂ ವಿವಾಹ ಕಾರ್ಯ ಅಷ್ಟಕ್ಕಷ್ಟೇ ಆಗಬಹುದಾಗಿದೆಯಲ್ಲದೆ ಸೊಸೆ ಇಲ್ಲವೆ ಅಳಿಯ ಅಷ್ಟೊಂದು ಮನಸ್ಸಿಗೆ ಒಪ್ಪುವುದಿಲ್ಲ. ಮಕ್ಕಳ ಉನ್ನತಿಗೆ ಈ ವರ್ಷ ಬಹಳ ಉತ್ತಮವಿದ್ದು ವಿಶೇಷತಃ ಅಕ್ಟೋಬರ್ ೧೦ ರ ಮೊದಲು ಅಥವಾ ನವೆಂಬರ್ ೧ ರಿಂದ ಡಿಸೆಂಬರ್ ೩೧, ಮಾರ್ಚ್ ೨೪ ರಿಂದ ಎಪ್ರಿಲ್ ೧೭, ಮೇ ೧೨ ರಿಂದ ಜೂನ್ ೫ ಹಾಗು ಜುಲೈ ೧ ರಿಂದ ಅಗಸ್ಟ್ ೨೯ ರ ವರೆಗಿನ ಕಾಲದಲ್ಲಿ ಹೆಚ್ಚು ಭರದಿಂದ ಆಗುವುದು. ಆದರೆ ಶನಿ ಹನ್ನೆರಡನೆಯವನಾದ ನಂತರ ಅನೇಕರು ಅತಿ ದೂರ ಪ್ರಯಾಣಿಸಬೇಕಾಗಿ ಬರಬಹುದು. ಪುತ್ರರಿಗಿಂತ ನಿಮಗೆ ಪುತ್ರಿಯಿಂದಲೇ ಹೆಚ್ಚು ಸುಖ ದೊರೆಯುವುದು.

ಉದ್ಯೋಗದಲ್ಲಿ ಮಾತ್ರ ಈ ವರ್ಷ ಭಾರಿ ತೇಜಿ ಇರುವುದಲ್ಲದೆ ಅನೇಕರು ಅತ್ಯುಚ್ಚ ಶಿಖರವನ್ನೇ ತಲುಪಬಹುದು. ಮತ್ತೆ ಅನೇಕರಿಗೆ ಲಾಟರಿ, ಸಟ್ಟಾ, ಜೂಜು ಮುಂತಾದವುಗಳಲ್ಲಿ ವಿಪುಲ ಧನಲಾಭವಾಗಬಹುದು. ಆರನೆಯ ಗುರುವಿರುವಾಗ ಉದ್ಯೋಗಸ್ಥರಿಗಿಂತ ನೌಕರದಾರರಿಗೆ ಹೆಚ್ಚು ಉತ್ಕರ್ಷದ ದಿನಗಳಿರುವವಲ್ಲದೆ ತಪ್ಪೋ ಒಪ್ಪೋ ಮಾರ್ಗದಿಂದ ಅವರು ಏಳ್ಗೆ ಹೊಂದುವರು. ಆದರೆ ಸಾಡೇಸಾತಿ ಪ್ರಾರಂಭವಾದ ನಂತರ ಮಾತ್ರ ಎಲ್ಲರಿಗೂ ಇಳಿಕೆಯ ಕಾಲ ಪ್ರಾರಂಭವಾಗುವುದಲ್ಲದೆ ಕನಸು ಮನಸಿನಲ್ಲೂ ಇಲ್ಲದಿದ್ದಂತಹ ವಿಪರೀತ ವೆಚ್ಚದ ಹಾಗು ಅನೇಕ ದುರ್ಧರ ಪ್ರಸಂಗಗಳನ್ನು ಎದುರಿಸಬೇಕಾಗಬಹುದು. ವ್ಯಾಪಾರದಲ್ಲಿ ಇಳಿತರ, ಮೋಸ, ಕಳವು, ಅಥವಾ ಮಾಲು ನಾಶವಾಗುವಿಕೆಯಂಥ ಒಂದಿಲ್ಲೊಂದು ಕಾರಣದಿಂದ ಹಾನಿಯುಂಟಾಗುವ ಭಯವಿದೆ. ಅದರಂತೆಯೆ ನೌಕರದಾರರು ಲಂಚಗುಳಿತನ ಕಾಯದೆಗೆ ಸಲ್ಲದ ಕೃತ್ಯ ಮುಂತಾದ ಕಾರಣಗಳಿಂದಾಗಿ ವರಿಷ್ಠರ ಕ್ರೋಧಕ್ಕೆ ಪಾತ್ರರಾಗಬೇಕಾಗಬಹುದು. ಅನೇಕರ ನೌಕರಿ ಸ್ಥಗಿತವಾಗುವ ಅಥವಾ ಕಳೆದುಹೋಗುವ ಭಯವೂ ಇದೆ. ವಿಶೇಷತಃ ಜೂನ್ ೨೬ ರಿಂದ ಅಗಸ್ಟ್ ೧೪ ಹಾಗು ಸಪ್ಟೆಂಬರ್ ೧೨ ರ ನಂತರದ ಕಾಲದಲ್ಲಿ ಬಹುವಾಗಿ ಜೋಕೆಯಿಂದಿರಬೇಕು. ಅದರಂತೆಯೆ, ಫೆಬ್ರುವರಿ ೧೨ ರಿಂದ ಬರುವ ಎಂಟನೆಯ ರಾಹು ಅರ್ಥಾತ್ ಎರಡನೆಯ ಕೇತುವಿನಿಂದಾಗಿ ಶತ್ರುಗಳ ಮಿತ್ರರ ಬಗ್ಗೆ ಬಹುವಾಗಿ ಎಚ್ಚರದಿಂದಿರಬೇಕು. ಅಲ್ಲದೆ ಮನೆಯ ಜನರ ಮೇಲೆ ಸಹ ವಿಶೇಷ ಭರವಸೆಯಿಡದೆಯೆ ಪ್ರತಿಯೊಂದು ಶಬ್ದವನ್ನೂ ತೂಕದಿಂದಲೇ ಮಾತಾಡಬೇಕು. ಯಾಕೆಂದರೆ [illegible] ಈ ಎರಡೂ ಗ್ರಹಗಳು ಕಲಹಕ್ಕೆ ತೊಡಗಿಸಿ ಸಂಯುಕ್ತ ಕುಟುಂಬವನ್ನು ಒಡೆದುಬಿಡಬಹುದು. ಅಲ್ಲದೆ ಭಯಾನಕವಾದಂಥ ಇಲ್ಲವೆ ಸಂಶಯಕ್ಕೆ ಕಾರಣವಾದಂತಹ ಸ್ಥಳಕ್ಕೆ ಒಬ್ಬರೇ ಹೋಗಕೂಡದು. ಸಂಗ್ರಹಕ್ಕೆ ಬದಲು ಇದ್ದುದೇ ಕರಗಿಹೋಗುವ ಅಥವಾ ಸಾಲ ಸೋಲ ಮಾಡುವ ಪ್ರಸಂಗ ಅನೇಕರಿಗೆ ಬರಬಹುದು. ಮಂಗಲಕಾರ್ಯಗಳಲ್ಲಿ ವಿಘ್ನಗಳು ಬರಬಹುದು. ಯಾತ್ರಾದಿ ಯೋಗ ಕಡಿಮೆಯೆ. ಸಾಡೇಸಾತಿಯಲ್ಲಿ ಕಷ್ಟಕರವಾದ ಪ್ರವಾಸ ಜರುಗಬಹುದು, ಸರಕಾರಿ ಕೆಲಸಗಳಲ್ಲಿ ಬಹಳ ತೊಂದರೆಯಾಗಬಹುದು. ಭೆಟ್ಟಿಗಿಂತ ಲೇಖನ ಕೆಲಸಗಳು ಹೆಚ್ಚು ನೆಟ್ಟಗೆ.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಸಾಡೇಸಾತಿಯ ಪ್ರಾರಂಭಕ್ಕೆ ಮುನ್ನ ಅರ್ಧಕ್ಕಿಂತ ಹೆಚ್ಚು ಯಶೋದಾಯಕವೆನಿಸಿದರೆ ನಂತರ ಮಾತ್ರ ನಿಶ್ಚಿತ ಯಶಸ್ವಿಯೆಂದು ಭಾವಿಸಲಾಗಿದ್ದಂಥವುಗಳು ಸಹ ನಿಮ್ಮ ವಿರುದ್ಧವೇ ಆಗಬಹುದು.

ಈ ರಾಶಿಯ ಗರ್ಭವತಿಯರು ಡಿಸೆಂಬರ್ ೧೧ ರ ವರೆಗೆ ಪ್ರಸೂತವಾದರೆ ಹೆರಿಗೆ ಸುಲಭವಾಗುವುದಲ್ಲದೆ ಗಂಡು ಮಗು ಜನಿಸುವುದು; ಮುಂದೆ ಮೇ ೧ರ ವರೆಗಾದರೆ ಸುಲಭಪ್ರಸೂತಿಯಾದರೂ ಬಹುತರರ ಮಗು ಹೆಣ್ಣಾಗುವ ಯೋಗವಿದೆ; ಅನಂತರವಾದರೆ ಮಾತ್ರ ಕಷ್ಟಪ್ರಸೂತಿಯಾಗುವುದಲ್ಲದೆ ಬಹುತರರಿಗೆ ಹೆಣ್ಣು ಹಾಗು ಕೆಲವರಿಗೆ ಅವಳಿ ಮಕ್ಕಳು ಜನಿಸಬಹುದಲ್ಲದೆ ಮಗು ಬಹಳ ದಿನ ಅಶಕ್ತವಾಗಿರಬಹುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೧ ರ ವರೆಗಾದರೆ ಒಳ್ಳೆಯ ಶ್ರೇಣಿಯಲ್ಲಿಯೆ ಉತ್ತೀರ್ಣರಾಗುವರು; ಮುಂದೆ ಮೇ ೧ ರ ವರೆಗಾದರೆ ನೂರಕ್ಕೆ ೬೦ ರಷ್ಟು ಜನ ಕನಿಷ್ಠ ಉತ್ತೀರ್ಣರಾದರೂ ಆಗುವರು; ಆದರೆ ಅನಂತರ ಮಾತ್ರ ಬಹುತರರು ಉತ್ತೀರ್ಣರಾಗುವ ಆಶೆಯನ್ನೇ ಬಿಡಬೇಕಾಗುವುದು ಎಂದು ಹೇಳಬಹುದಾಗಿದೆ.




ಈ ರಾಶಿಯವರಿಗೆ ಈ ವರ್ಷದ ಮೊದಲ ಒಂದೂವರೆ ತಿಂಗಳು ಕಷ್ಟಪ್ರದ, ನಂತರದ ನಾಲ್ಕೂವರೆ ತಿಂಗಳು ಕಷ್ಟಸಾಧ್ಯ ಯಶಸ್ಸಿನ; ಆದರೆ ಮುಂದೆ ವರ್ಷಾಂತ್ಯದ ವರೆಗೆ ಪೂರ್ಣ ಯಶೋದಾಯಕ ಈ ರೀತಿ ಹಂತ ಹಂತವಾಗಿ ಮೂರು ಬಗೆಯ ಸ್ಪಷ್ಟ ಅವಸ್ಥೆಗಳನ್ನು ಗುರುತಿಸುವಂತಿದೆ ಎಂದು ಹೇಳಬಹುದು.

ಈ ರಾಶಿಯವರಿಗೆ ವರ್ಷಾರಂಭದಲ್ಲಿ ಗುರು, ಶನಿ, ರಾಹು ಮತ್ತು ಕೇತು ಈ ಪ್ರಮುಖ ಗ್ರಹಗಳು ಅನುಕೂಲವಾಗಿಲ್ಲವಾದ್ದರಿಂದ ಶಾರೀರಿಕ ಹಾಗು ಮಾನಸಿಕ ಸ್ಥಿತಿ ಪ್ರಾರಂಭಕ್ಕೆ ತೀರ ಕಷ್ಟಕರವೂ ಪ್ರತಿಕೂಲವೂ ಆಗಿರಬಹುದಾಗಿದೆ. ಆದರೆ ಡಿಸೆಂಬರ್ ೧೧ ರಿಂದ ಬರುವ ಐದನೆಯ ಗುರುವಿನಿಂದಾಗಿ ಅವೆಲ್ಲ ಸುಧಾರಿಸತೊಡಗುವುವು. ಅನಂತರ ಕಳೆದ ಒಂದೂವರೆ ವರ್ಷದಿಂದ ಅನುಕ್ರಮವಾಗಿ ಎಂಟನೆಯ ಹಾಗು ಎರಡನೆಯವರಾಗಿರುವ ರಾಹು ಮತ್ತು ಕೇತುಗಳು ಫೆಬ್ರುವರಿ ೧೭ ರಿಂದ ಏಳನೆಯ ಹಾಗು ಮೊದಲನೆಯವರಾಗುವುದರಿಂದ ಪರಿಸ್ಥಿತಿ ಹೆಚ್ಚು ಭರದಿಂದ ಸುಧಾರಿಸಲಾರಂಭಿಸುವುದು. ಮೇ ೧ ರಿಂದಂತೂ ಶನಿಯು ಹನ್ನೊಂದನೆಯವನಾಗುವುದರಿಂದ ಇನ್ನಷ್ಟು ಸುಧಾರಣೆ ಕಂಡುಬಂದು ಒಳ್ಳೆಯ ಆರೋಗ್ಯವೃದ್ಧಿಯಾಗುವುದು. ಆದರೆ ಏಳನೆಯ ರಾಹು ಮತ್ತು ಮೊದಲನೆಯ ಕೇತುಗಳಿಂದಾಗಿ ಪತಿ ಪತ್ನಿಯರಲ್ಲಿ ಕ್ಷುಲ್ಲಕ ಕಾರಣಗಳಿಗಾಗಿ [illegible] ಮೇಲಿಂದ ಮೇಲೆ ಮನಸ್ತಾಪವುಂಟಾಗುವುದಲ್ಲದೆ ಶೀಘ್ರಕೋಪಿತ್ವ ಸ್ವಾಭಾವಿಕವೆನಿಸುವುದು. ಆದರೆ ಐದನೆಯ ಗುರು ಹಾಗು ಹನ್ನೊಂದನೆಯ ಶನಿಯರ ಶುಭತ್ವದಿಂದಾಗಿ ಯಾವುದೇ ವಿಷಯವೂ ವಿಶೇಷ ವಿಕೋಪಕ್ಕೆ ಹೋಗಲಾರದು. ರಾಹು ಎಂಟನೆಯವನಾಗಿರುವ ವರೆಗೆ ಯಾವುದೊಂದು ಅಪಘಾತದಿಂದ ತೊಂದರೆಯಾಗುವ ಸಂಭವವಿದೆ. ಅದರ ನಿವಾರಣಾರ್ಥ ರಾಹುವಿನ ಸಂಪೂರ್ಣ ೧೮,೦೦೦ ಜಪ ಮಾಡಬೇಕು. ಆವಶ್ಯಕ ದೇಹಸುಖಕ್ಕೆ ಶನಿಯು ಹನ್ನೊಂದನೆಯವನಾದ ನಂತರ ಹೆಚ್ಚು ಅನುಕೂಲವುಂಟಾಗಬಹುದು.

ಹೆಂಡತಿಯ ಆರೋಗ್ಯಕ್ಕೆ ಕೂಡ ಹನ್ನೊಂದನೆಯ ಶನಿ ತುಂಬ ಅನುಕೂಲನಾಗಿದ್ದಾನೆ. ಅಲ್ಲದೆ ಐದನೆಯ ಗುರು ಬಂದ ನಂತರ ಅವಳ ಮನೋತ್ಸಾಹವೂ ಹೆಚ್ಚುವುದಲ್ಲದೆ ಒಳ್ಳೆಯ ವಿಚಾರಗಳು ಸಹ ಸುಳಿಯತೊಡಗಿ ಕೈಕೊಂಡ ಕೆಲಸಗಳಲ್ಲಿ ಅವಳಿಗೆ ಅಲ್ಪಾಯಾಸದಿಂದಲೇ ಯಶಸ್ಸು ಸಿಕ್ಕುವುದು.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗುವುದಿದ್ದಲ್ಲಿ ಅದಕ್ಕೆ ಡಿಸೆಂಬರ್ ೧೧ರಿಂದ ಬರುವ ಹನ್ನೊಂದನೆಯ ಗುರುವಿರುವಾಗ ಉತ್ತಮ ಬಾಸಿಂಗಬಲವಿದೆಯೆಂದು ತಿಳಿದು ಪ್ರಯತ್ನ ಮಾಡಬೇಕು. ಅಂದರೆ ತೀರ ಅಲ್ಪಾಯಾಸದಿಂದ ಹಾಗು ಮನಸ್ಸಿಗೊಪ್ಪುವಂಥವರೊಡನೆ ವಿವಾಹ ಹೊಂದುವುದಲ್ಲದೆ ವಿವಾಹಕ್ಕೆ ಆವಶ್ಯಕವಾದಂಥ ಎಲ್ಲ ವಿಷಯಗಳಲ್ಲೂ ಅಪೇಕ್ಷೆಗಿಂತ ಹೆಚ್ಚು ಅನುಕೂಲತೆ ಪ್ರಾಪ್ತವಾಗುವುದು. ವಧೂವರರು ಎಲ್ಲ ವಿಷಯಗಳಲ್ಲೂ ಪರಸ್ಪರ ಸಾಮ್ಯವುಳ್ಳವರಿರುವರು.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹವನ್ನು ಈ ಸಲ ಮಾಡುವುದಿದ್ದಲ್ಲಿ ಅದಕ್ಕೂ ಐದನೆಯ ಗುರುವಿರುವಾಗ ಸಹಜವಾಗಿಯೇ ವಿವಾಹ ಹೊಂದುವಷ್ಟು ಬಾಸಿಂಗಬಲವಿದೆಯೆಂದು ತಿಳಿದು ಪ್ರಯತ್ನಕ್ಕೆ ತೊಡಗಿದರೆ ಅಲ್ಪಾವಧಿಯಲ್ಲಿಯೆ ಮನಸ್ಸಿನಂತೆಯೆ ಆಗುವುದು. ಆದರೆ ಹನ್ನೊಂದನೆಯ ಶನಿಯಿರುವಾಗಲಾದರೆ ವಧು ಅಥವಾ ವರ ದೂರದ ಊರಿನವರಾಗಿರಬಹುದಾದರೂ ಎಲ್ಲರ ಮನಸ್ಸಿಗೆ ಒಪ್ಪಿತರಿರುವರು. ಆದರೆ ಮಾರ್ಚ್ ೨೪ ರಿಂದ ಎಪ್ರಿಲ್ ೧೭ ಇಲ್ಲವೆ ಜೂನ್ ೨೬ ರಿಂದ ಅಗಸ್ಟ್ ೧೪ರ ವರೆಗಿನ ಅವಧಿಯಲ್ಲಾದರೆ ಮೊದಲು ನಿಶ್ಚಿತವಾದ ಮುಹೂರ್ತವನ್ನು ಬದಲಿಸಬೇಕಾಗಬಹುದಲ್ಲದೆ ವೆಚ್ಚ ಸಹ ಅಂದಾಜಿಗಿಂತ ಹೆಚ್ಚೇ ಆಗಬಹುದು.

ಮಕ್ಕಳ ಉನ್ನತಿಗೆ ಸಹ ರಾಹು ಬದಲಾದ ನಂತರ ಅಂದರೆ ಫೆಬ್ರುವರಿ ೧೭ ರ ನಂತರ ಹೆಚ್ಚು ಪ್ರಬಲ ಯೋಗ ಬರುತ್ತದೆ. ಫೆಬ್ರುವರಿ ೧೭ ರಿಂದ ಎಪ್ರಿಲ್ ೧೯ರ ವರೆಗಿನ ಕಾಲದಲ್ಲಂತೂ ಒಬ್ಬೊಬ್ಬರ ಸಾಕಷ್ಟು ಪ್ರಶಂಸೆಯಾಗುವಷ್ಟು ಉನ್ನತಿಯಾಗುವುದು. ಆದರೆ ಮಕ್ಕಳೆಲ್ಲರಿಂದಲೂ ನಿಮಗೆ ದೊರೆಯುವ ಸುಖ ಮಾತ್ರ ಸಾಮಾನ್ಯವಾಗಿ ಅಷ್ಟಕ್ಕಷ್ಟೇ ಎಂದೇ ಹೇಳಬೇಕು.

ಉದ್ಯೋಗದಲ್ಲಿ ಐದನೆಯ ಗುರುವು ಬಂದನಂತರ ಅನುಕೂಲ ಘಟನೆಗಳು ಸಂಭವಿಸತೊಡಗುವವಲ್ಲದೆ ಶನಿ ಹನ್ನೆರಡನೆಯವನಾದ ನಂತರ ಬಹು ರಭಸದಿಂದ ಉತ್ಕರ್ಷವಾಗಲಾರಂಭಿಸುವುದು. ಈ ಹಿಂದಿನ ಯಾವ ವರ್ಷವೂ ಆಗದಿದ್ದಷ್ಟು ದ್ರವ್ಯಲಾಭವಾಗ

ಮಹತ್ವಾಕಾಂಕ್ಷೆಯು ಮೆಲ್ಲ ಮೆಲ್ಲನೆ ಸಫಲವಾಗು-ವಂಥ ಮಾರ್ಗ ಸುಗಮವಾಗುವುದು.

ಹೆಂಡತಿಯ ಆರೋಗ್ಯಕ್ಕೆ ಗುರುವು ನಾಲ್ಕನೆಯವನೂ ರಾಹುವು ಏಳನೆಯವನೂ ಆಗಿರುವ ಕಾಲವು ತುಸು ಕ್ಲೇಶಕರವೆನಿಸಿದೆ. ಅರ್ಥಾತ್ ಈ ಅವಧಿ ಡಿಸೆಂಬರ್ ೧೧ ರಿಂದ ಫೆಬ್ರುವರಿ ೧೭ ರ ವರೆಗೆಂದು ತಿಳಿಯಬೇಕು. ಏಳನೆಯ ರಾಹುವಿರುವ ವರೆಗೆ ಉಭಯತರಲ್ಲಿ ಮೇಲಿಂದ ಮೇಲೆ ಮತಭೇದ ಹಾಗು ಪರಸ್ಪರರ ವಿಷಯದಲ್ಲಿ ತಿರಸ್ಕಾರವಿರಬಹುದಾದರೂ ಮುಂದೆ ಅವನು ಆರನೆಯವನಾದ ನಂತರ ಅದೆಲ್ಲವೂ ಮೆಲ್ಲ ಮೆಲ್ಲನೆ ಕಡಿಮೆಯಾಗುತ್ತ ನಡೆದು ಹತ್ತನೆಯ ಶನಿ ಬಂದ ನಂತರ ಒಳ್ಳೆಯ ಪ್ರೇಮ ಮತ್ತು ಮತೈಕ್ಯವುಂಟಾಗುವುದು.

ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ಡಿಸೆಂಬರ್ ೧೧ ರ ವರೆಗೆ ಮಾತ್ರ ಒಳ್ಳೆಯ ಬಾಸಿಂಗಬಲವಿದೆಯಾದರೆ ಮುಂದೆ ಹತ್ತ-ನೆಯ ಶನಿ ಬಂದ ನಂತರ, ಅಂದರೆ ಮೇ ೧ ರ ನಂತರ ಅದು ಮಧ್ಯಮವಾದುದಾಗಿದೆ. ವಧೂವರರು ಪರಸ್ಪರ ಒಳ್ಳೆಯ ಅನುರೂಪರಿರುವರಲ್ಲದೆ ಮೂರನೆಯ ಗುರುವಿರುವ ವರೆಗೆ ವಿವಾಹವಾದರೆ ಎದುರು ಪಕ್ಷ ಹೆಚ್ಚು ಪ್ರಸಿದ್ಧವೂ ಪ್ರತಿಷ್ಠಿತವೂ ಆಗಿರುತ್ತದೆ.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹವನ್ನು ಈ ಸಲ ಮಾಡುವುದಿದ್ದಲ್ಲಿ ಅದಕ್ಕೆ ಸಹ ಡಿಸೆಂಬರ್ ೧೧ ರ ಮೊದಲಿದ್ದಷ್ಟು ಬಾಸಿಂಗಬಲ ಮುಂದೆ ಇರಲಾರದು. ಆಧರೂ ಫೆಬ್ರುವರಿ ೧೭ ರ ವರೆಗೆ ಅತೀವಪ್ರಯತ್ನ ಪಟ್ಟರೆ ಕೆಲವರ ಮದುವೆಯಾಗಬಹುದು. ಆದರೆ ಅನಂತರ ಮಾತ್ರ ವಿವಾಹ ಹೊಂದುವುದರಲ್ಲಿ ಅಥವಾ ಜರುಗುವುದರಲ್ಲಿ ಅನೇಕ ಅಕಲ್ಪಿತ ಅಡೆತಡೆಗಳು ಬಂದು ಮುರಿದು ಹೋಗಬಹುದು ಅಥವಾ ಕನಿಷ್ಠ ಪಕ್ಷ ಮುಂದಿನ ವರ್ಷದ ವರೆಗೆ ಮುಂದೂಡಬೇಕಾಗಬಹುದು. ಆದರೆ ಈ ವರ್ಷ ವಿವಾಹವಾದರೆ ಅಳಿಯ ಅಥವಾ ಸೊಸೆ ಒಳ್ಳೆಯ ಮನಸ್ಸಿಗೊಪ್ಪುವಂತಿರುವರು.

ಮಕ್ಕಳ ಉನ್ನತಿಗೆ ಡಿಸೆಂಬರ್ ೧೧ ರ ಮೊದಲಿನ ಹಾಗು ಮೇ ೧ ರ ನಂತರದ ಕಾಲ ತುಂಬ ಅನುಕೂಲವಿದೆ. ನವೆಂಬರ್ ೨೩ ರಿಂದ ಜನೆವರಿ ೧೨ ಹಾಗು ಜೂನ್ ೨೩ ರಿಂದ ಆಗಸ್ಟ್ ೧೪ ರ ವರೆಗಿನ ಕಾಲದಲ್ಲಿ ಒಬ್ಬೊಬ್ಬರ ಉತ್ಕರ್ಷ ಒಳ್ಳೆಯ ಭರದಿಂದಾಗಬಹುದು. ಆದರೆ ಗುರುವು ನಾಲ್ಕನೆಯವನಿರುವಾಗ ಅಂದರೆ ಡಿಸೆಂಬರ್ ೧೧ ರ ನಂತರ ಚಿಕ್ಕ ದೊಡ್ಡ ವಿಷಯಗಳಲ್ಲಿ ನಿಮ್ಮೊಂದಿಗೆ ಅವರ ಮತಭೇದ ಉಂಟಾಗುವುದರಿಂದ ಮನಸ್ಸು ಉದಾಸವೂ ವಿಷಣ್ಣವೂ ಆಗಿರುವುದು.

ಈ ವರ್ಷ ನಾಲ್ಕನೆಯ ಗುರುವಿರುವಾಗ ಉದ್ಯೋಗದಲ್ಲಿ ಸೇವಕರು ಮುಂತಾದ ಆಶ್ರಿತರಿಂದ ಇಲ್ಲವೆ ಬೇರೆ ಕುಟುಂಬದಲ್ಲಿಯ ಆಪ್ತರಿಂದ ತುಂಬ ತೊಂದರೆಯಾಗಬಹುದು. ಆದರೂ ಮಿತ್ರರಿಂದಲೂ ಅಲ್ಪಪರಿಚಿತ ವ್ಯಕ್ತಿಗಳಿಂದಲೂ ಸಮಯ ಸಮಯಕ್ಕೆ ಒಳ್ಳೆಯ ಸಹಾಯ. ಸಹಾನುಭೂತಿ ದೊರೆಯುತ್ತಲೇ ಇರುವವು. ಅಲ್ಲದೆ ಆರನೆಯ ರಾಹುವು ಬಂದ ನಂತರ. ಅಂದರೆ ಫೆಬ್ರುವರಿ ೧೭ ರಿಂದ ಕೈಗೆತ್ತಿ-ಕೊಂಡ ಕೆಲಸಗಳಲ್ಲಿ ಸಹಸಾ ಅ... ...ದೆಯೆ ಕೊನೆಗೆ ಮನಸ್ಸಿನಂತೆಯೆ ಪೂರ್ತಿಗೊಳ್ಳು-ವವು. ಮೇ ೧ ರಿಂದ ಬರುವ ಹತ್ತನೆಯ ಶನಿ-ಯಿಂದಾಗಿ ವಿಪುಲ ಲಾಭದ ಯೋಗವಿದೆಯಲ್ಲದೆ ಪತ್ತು ಪ್ರತಿಷ್ಠೆಗಳೂ ಚೆನ್ನಾಗಿ ವರ್ಧಿಸುವವು. ಅನೇಕರಿಗೆ ಸರಕಾರಿ ಅಧಿಕಾರಿಗಳಿಂದ ಸಹಾಯ ದೊರೆಯುವುದರಿಂದ ಅಪೇಕ್ಷಿತ ಕಾರ್ಯ-ಗಳಲ್ಲಿ ಲಾಭ, ಯಶಗಳು ದೊರೆಯುವವು. ರಾಹುವು ಆರನೆಯವನಿರುವಾಗ ನೌಕರದಾರರಿಗೆ ಮೇಲಿನ ದರ್ಜೆಯು ಕಾಯಂ ಅಥವಾ ಕನಿಷ್ಠ ತಾತ್ಪೂರ್ತಿಕವಾದರೂ ದೊರೆಯುವುದು ಖಂಡಿತ. ಹತ್ತನೆಯ ಶನಿಯಿರುವಾಗ ಬದಲಿಯಾದರೆ ಅದು ಇಚ್ಛಿಸಿದ ಸ್ಥಳಕ್ಕೆಯೆ; ಆದರೆ ಕೈಕೆಳಗಿನವರಿಗಿಂತ ಮೇಲಿನವರೇ ಹೆಚ್ಚು ಚೆನ್ನಾಗಿ ವರ್ತಿಸುವರು. ವಿಶೇಷತಃ ವರ್ಷಾರಂಭದಿಂದ ನವೆಂಬರ್ ೮. ನವೆಂಬರ್ ೨೮ ರಿಂದ ಫೆಬ್ರುವರಿ ೩. ಫೆಬ್ರುವರಿ ೨೨ ರಿಂದ ಮಾರ್ಚ್ ೧೦. ಎಪ್ರಿಲ್ ೧ ರಿಂದ ಮೇ ೩೧, ಜೂನ್ ೧೭ ರಿಂದ ಜುಲೈ ೩ ಹಾಗೂ ಜುಲೈ ೨೨ ರಿಂದ ಸಪ್ಟೆಂಬರ್ ೨೭ ರ ವರೆಗಿನ ಕಾಲವು ಲಾಭಕ್ಕೆ ಉತ್ತಮವಾಗಿದೆ. ವಾಹನಸುಖವು ಅಷ್ಟಾಗಿ ದೊರೆಯಲಾರದು ಮಾತ್ರವಲ್ಲ, ತದ್ವಿರುದ್ಧ ಅದಕ್ಕಾಗಿ ವ್ಯರ್ಥ ವೆಚ್ಚವನ್ನು ಮಾತ್ರ ಬಹಳ ಮಾಡಬೇಕಾದೀತು. ಎಷ್ಟು ಹಣ ದೊರೆತರೂ ಅಷ್ಟೊಂದು ಸಂಗ್ರಹ ಸಾಧ್ಯವಾಗ-ದಂತಹ ಪ್ರಸಂಗಗಳು ಬರುತ್ತಲೇ ಇರುತ್ತವೆ. ಹೊಸ ಸಾಲಸೋಲಗಳಾಗಲಿಕ್ಕಿಲ್ಲ, ಆದರೆ ಹಳೆಯ ಸಾಲಗಳೂ ತೀರಲಿಕ್ಕಿಲ್ಲ. ಆದರೆ ನಾಲ್ಕನೆಯ ಗುರುವಿರುವಾಗ ಕೆಲವರಿಗೆ ಲಾಟರಿಯಂತಹ ಮಾರ್ಗಗಳಿಂದ ತುಸು ಲಾಭವಾದರೂ ಆಗಬಹುದು. ಪ್ರವಾಸಯೋಗ ಕಡಿಮೆಯೇ ಆದರೂ ಸಾಧು-ಸಂತರ ಅಥವಾ ಅಧ್ಯಾತ್ಮಜ್ಞಾನ ಪ್ರಚಾರಕರ ಸಹವಾಸ ಸಾಕಷ್ಟಾಗಬಹುದು. ನಿಕಟ ಆಪ್ತರ ಮನಸ್ಸು ಮಾತ್ರ ನಿಮ್ಮ ವಿಷಯದಲ್ಲಿ ತಿಳಿಯಾಗಿ-ರದೆಯೆ ಸದಾ ಸಂಶಯಿತವೂ ವ್ಯಗ್ರವೂ ಆಗಿರುತ್ತದೆ.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಆರನೆಯ ರಾಹು ಇರುವಾಗ ಸಾಕಷ್ಟು ಅನುಕೂಲವಿರುವುದು; ಹತ್ತನೆಯ ಶನಿಯಿರುವಾಗ ಕೆಲವು ಪ್ರಕರಣಗಳು ನಿಮ್ಮ ನಿಮ್ಮಲ್ಲಿಯೆ ಒಪ್ಪಂದ-ವಾಗಿ ಬಗೆಹರಿಯಬಹುದು. ಆರನೆಯ ರಾಹು ಬಂದ ನಂತರ ಅನೇಕ ಪ್ರಕಾರದ ಆಪತ್ತುಗಳು ಬಂದು ಪ್ರತಿಪಕ್ಷೀಯು ನಿರುತ್ಸಾಹಿಯಾಗಬಹುದು.

ಈ ರಾಶಿಯ ಗರ್ಭವತಿಯರು ಡಿಸೆಂಬರ್ ೧೧ ರ ಮೊದಲು ಪ್ರಸೂತರಾದರೆ ಕಷ್ಟವೆಷ್ಟೂ ಆಗದೆಯೆ ಮಗುವು ಗಂಡೇ ಆಗಬಹುದು. ಮುಂದೆ ಮೇ ೧ ರ ವರೆಗೆ ಕಷ್ಟಪ್ರಸೂತಿಯಾಗಬಹುದು. ಅನಂತರ ಸುಲಭಪ್ರಸೂತಿಯ ಯೋಗವಿದ್ದು ಬಹುತರರಿಗೆ ಹೆಣ್ಣು ಮಗು ಜನಿಸಬಹುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೧ ರ ಮೊದಲು ಹಾಗು ಜನೆವರಿ ೩೦ ರಿಂದ ಫೆಬ್ರುವರಿ ೨೭. ಮಾರ್ಚ್ ೨೪ ರಿಂದ ಎಪ್ರಿಲ್ ೧೭ ಹಾಗು ಆಗಸ್ಟ್ ೧೭ ರಿಂದ ಸಪ್ಟೆಂಬರ್ ೧ ರ ವರೆಗಿನ ಅವಧಿಯಲ್ಲಾದರೆ ಅವರಿಗೆ ಒಳ್ಳೆಯ ಶ್ರೇಣಿಯೂ ದೊರೆಯಬಹುದಾಗಿದೆ; ಡಿಸೆಂಬರ್ ೧೧ ರಿಂದ ಫೆಬ್ರುವರಿ ೧೭ ರ ವರೆಗಿನ ಕಾಲವನ್ನು ಹೊರತುಪಡಿಸಿ ... ಆದರೂ ಕನಿಷ್ಟ ಉತ್ತೀರ್ಣರಾದರೂ ಆಗುವರು.




ಈ ರಾಶಿಯವರಿಗೆ ಈ ವರ್ಷ ಎಂಟ-ನೆಯ ಶನಿಯಿರುವ ವರೆಗೆ ಅನೇಕ ವಿಷಯ-ಗಳಲ್ಲಿ ಕಷ್ಟಸಾಧ್ಯ ಯಶಸ್ಸು ದೊರೆಯ-ಬಹುದು; ಆದರೆ ಒಂಬತ್ತನೆಯ ಶನಿಯಿರು-ವಾಗ ಬಹುತರ ವಿಷಯಗಳಲ್ಲಿ ಅಲ್ಪಾಯಾಸ-ದಿಂದಲೇ ಸುಯಶ ದೊರೆಯಬಹುದಾಗಿ-ದೆಂಬುದು ನಿಶ್ಚಿತ.

ಶನಿಯು ಎಂಟನೆಯವನಾಗಿರುವ ವರೆಗೆ, ಅಂದರೆ ಮೇ ೧ ರ ವರೆಗೆ ಈ ರಾಶಿಯವರ ಆರೋಗ್ಯ ಹೆಚ್ಚು ಕಡಿಮೆ ಕಿರಿಕಿರಿಯದೇ ಆಗಿರುವುದು; ಆದರೆ ಅನಂತರ ಅವನು ಒಂಬತ್ತನೆಯವನಾಗುವುದರಿಂದ ಆರೋಗ್ಯ ಅತ್ಯುತ್ತಮಗೊಂಡು ಪ್ರತಿಯೊಂದು ಕೆಲಸದಲ್ಲೂ ಮನೋತ್ಸಾಹ ಹೆಚ್ಚುವುದು. ನವೆಂಬರ್ ೨೩ ರಿಂದ ಜನೆವರಿ ೧೨ ರ ವರೆಗೆ ಅಪಘಾತದ ಭಯ ಬಹಳವಾಗಿರುವುದರಿಂದ ಸ್ವತಃ ವಾಹನಗಳನ್ನು ನಡೆಸಬಾರದು. ಇತರ ವಿಷಯ-ಗಳಲ್ಲಿ ದೇಹಸುಖಕ್ಕೆ ಈ ವರ್ಷ ಬಹಳ ಉತ್ತಮ-ವಾಗಿರುವುದು. ಆದರೆ ಐದನೆಯ ಗುರುವು ಬಂದ ನಂತರ, ಅಂದರೆ ಫೆಬ್ರುವರಿ ೧೭ ರ ಮುಂದಿನ ಕಾಲದಲ್ಲಿ ವಿಪರೀತ ಕುವಿಚಾರಗಳಿಂದ ಬುದ್ಧಿಗೆ ತೀವ್ರ ಕಷ್ಟವಾದೀತು. ತೀರ ಹತ್ತಿರದವರೂ ನಂಬಿಗಸ್ತರೂ ಆದವರ ಬಗೆಗೂ ಸಂಶಯ ಮತ್ತು ಕುತರ್ಕದಿಂದಾಗಿ ಮನಸ್ಸು ಸದಾ ಉದಾಸೀನ, ಅಸ್ವಸ್ಥ. ಆದರೆ ಈ ವರ್ಷ ಡಿಸೆಂಬರ್ ೧೧ ರ ವರೆಗೆ ಎರಡನೆಯವನೂ ನಂತರ ಮೂರನೆಯವನೂ ಆಗಿರುವ ಗುರುವು ಬಲಶಾಲಿಯಾಗಿರುವುದರಿಂದ ಮನಸ್ಸು ಮಾತ್ರ ಕೆಡುವುದಿಲ್ಲವಷ್ಟೇ ಅಲ್ಲ, ಮಾತಿ-ನಲ್ಲಾಗಲಿ ಕೃತಿಯಲ್ಲಾಗಲಿ ಪಾಪ ಸಂಭವಿಸು-ವುದಿಲ್ಲ. ಇದ್ದುದರಲ್ಲಿಯೆ ನವೆಂಬರ್ ೮ ರ ವರೆಗೆ ಹಾಗು ನಂತರ ನವೆಂಬರ್ ೨೮ ರಿಂದ ಫೆಬ್ರುವರಿ ೩, ಮೇ ೩೧ ರಿಂದ ಜುಲೈ ೩ ಹಾಗು ಸಪ್ಟೆಂಬರ್ ೨೭ ರ ನಂತರದ ಕಾಲವು ಹೆಚ್ಚು ಸುಖಕರ-ವೆನಿಸುವುದು.

ಹೆಂಡತಿಯ ಆರೋಗ್ಯವು ಗುರುವು ಎರಡನೆ-ಯವನಿರುವ ವರೆಗೆ ತುಸು ಕಿರಿಕಿರಿಯದೆನಿಸಿದರೂ ಮುಂದೆ ಅವನು ಮೂರನೆಯವನಾದನಂತರ ಅವಳು ಒಳ್ಳೆಯ ನಿರೋಗಿಯಾಗುವಳು; ಅಲ್ಲದೆ ಆಗಿನಿಂದ ಉಭಯತರಲ್ಲೂ ತುಂಬ ಮತೈಕ್ಯ ಮತ್ತು ಪ್ರೇಮ-ವುಳಿಯುವುದು. ಮತ್ತು ಎಲ್ಲ ವಿಷಯಗಳಲ್ಲೂ ಅವಳಿಂದ ಉತ್ತಮ ಸುಖ ದೊರೆಯುವದು. ನಿಮಗಿಂತ ಅವಳ ವಿಚಾರಸರಣಿ ಹಾಗು ಸಲಹೆ ಸೂಚನೆಗಳು ಹೆಚ್ಚು ಪರಿಣಾಮದವೂ ಹಿತಕರ ಪರಿಣಾಮವುಂಟುಮಾಡುವಂಥವೂ ಆಗಿರುತ್ತವೆ.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗುವುದಿದ್ದಲ್ಲಿ ಅದಕ್ಕೆ ... ಪ್ರಬಲ ಬಾಸಿಂಗಬಲವಿದೆ. ಅರ್ಥಾತ್ ಡಿಸೆಂಬರ್

ನಮ್ಮ ವ್ಯಾಪಾರಸ್ಥರಿಗೂ, ಪ್ರೋತ್ಸಾಹಕರಿಗೂ
ಮತ್ತು ಹಿತೈಷಿಗಳಿಗೂ

# ದೀಪಾವಳಿಯ ಶುಭಾಶಯುಗಳನ್ನು

ಹೃತ್ಪೂರ್ವಕವಾಗಿ ಅರ್ಪಿಸುತ್ತೇವೆ




## ಕಸ್ತೂರಿ ಸುಗಂಧಿ ಸುಪಾರಿ

ನಿಮ್ಮ ಮೆಚ್ಚಿಗೆ
ಪಡೆದ ಎಲ್ಲ
**ಅಡಿಕೆಪುಡಿಗಳಲ್ಲಿ**
ಅತಿ ಶ್ರೇಷ್ಠವಾದುದು




**ಎಮ್. ಎಸ್. ಅರಕೇರಿ**
ರಾಣೇಬೆನ್ನೂರ
ಇವರ

- ಸುಗಂಧಿ ಸುಪಾರಿ
- ಸ್ಪೇಶಲ್ ಸುಪಾರಿ
- ಮಸಾಲಾ ಸುಪಾರಿ

ಇಂದೇ ಖರೀದಿಸಿರಿ







S.B

*Manufacturers:-* Phone 109

**M. S. ARAKERI, RANEBENNUR**

೧೧ ರ ನಂತರ ಅದು ಅನಾಯಾಸವಾಗಿಯೇ ಅಪೇಕ್ಷೆಗಿಂತ ಹೆಚ್ಚು ಉತ್ತಮ ಪ್ರತಿಪಕ್ಷದೊಂದಿಗೆ ಆಗುವುದು. ವಧೂವರರು ಪೂರ್ಣ ಅನುರೂಪರೂ ಬುದ್ಧಿವಂತರೂ ಆಗಿರುತ್ತಾರೆ. ಅದರಲ್ಲೂ ಒಂಬತ್ತನೆಯ ಶನಿಯಿರುವಾಗ, ಅಂದರೆ ಮೇ ೧ ರ ನಂತರ ವಿವಾಹವಾದರೆ ಮೇಲೆ ಹೇಳಿದ್ದೆಲ್ಲವೂ ಅಕ್ಷರಶಃ ನಿಜ ಬರಬಹುದಾಗಿದೆ.

ಅದರಂತೆಯೇ, ನಿಮ್ಮ ಮಕ್ಕಳ ವಿವಾಹವನ್ನು ಈ ವರ್ಷ ಮಾಡುವುದಿದ್ದರೆ ಅದಕ್ಕೆ ಇಡೀ ವರ್ಷವೂ ಅನುಕೂಲವಾಗಿದೆ. ಅದರಲ್ಲೂ ಜನವರಿ ೧೨ ರಿಂದ ಮಾರ್ಚ್ ೧, ಎಪ್ರೀಲ್ ೧೯ ರಿಂದ ಜೂನ್ ೨೩ ಹಾಗೂ ಅಗಸ್ಟ ೧೪ರಿಂದ ಅಕ್ಟೋಬರ್ ೧೩ರ ವರೆಗಿನ ಅವಧಿಯಲ್ಲಾದರೆ ತೀರ ಅಲ್ಪಾಯಾಸದಿಂದಲೂ ಆಶ್ಚರ್ಯವೆನಿಸುವಷ್ಟು ಉತ್ತಮ ಪಕ್ಷದೊಂದಿಗೆ ಗೊತ್ತಾಗಿ ಮದುವೆ ಸುವ್ಯವಸ್ಥಿತ ರೀತಿಯಲ್ಲಿ ನೆರವೇರುವದು. ಸೊಸೆ ಇಲ್ಲವೆ ಅಳಿಯ ಮನಸ್ಸಿಗೆ ಅತ್ಯಂತ ಒಪ್ಪುವಂತಿರುವರು. ಮಕ್ಕಳ ಉನ್ನತಿಗೆ ಸಹ ಈ ವರ್ಷವು ಬಹಳ ಉತ್ತಮವಾಗಿದೆ. ಎಂಟನೆಯ ಶನಿಗಿಂತ ಅವನು ಒಂಬತ್ತನೆಯವನಾಗಿರುವಾಗ, ಅಂದರೆ ಮೇ ೧೪ರ ನಂತರ ಸರ್ವತ್ರ ಪ್ರಶಂಸೆ ಮತ್ತು ಪ್ರಸಿದ್ಧಿಯಾಗುವಷ್ಟು ಅವರಲ್ಲೊಬ್ಬರ ಉನ್ನತಿಯಾದೀತು. ಅವರೆಲ್ಲರಿಂದಲೂ ನಿಮಗೆ ಒಳ್ಳೆಯ ಸುಖ ದೊರೆಯುವುದು; ಆದರೂ ಫೆಬ್ರುವರಿ ೧೭ರಿಂದ ಬರುವ ಐದನೆಯ ರಾಹುವಿನಿಂದಾಗಿ ನಿಮಗೆ ಮಾತ್ರ ಅವರಿಂದ ಸುಖ ದೊರೆಯುತ್ತಿಲ್ಲವೆಂಬಂತಹ ತಪ್ಪು ಕಲ್ಪನೆ ಮಾತ್ರ ಉಳಿದಿರಬಹುದಾಗಿದೆ. ಅವರಲ್ಲೊಬ್ಬನು ವಿದೇಶಯಾತ್ರೆ ಕೈಕೊಳ್ಳುವ ಯೋಗವಿದ್ದು ಜೂನ್ ೧ರಿಂದ ಜುಲೈ ೧, ಜುಲೈ ೨೫ರಿಂದ ಅಗಸ್ಟ ೮ರ ಅಥವಾ ಸಪ್ಟೆಂಬರ್ ೧ರ ನಂತರ ಇದು ಒದಗಿ ಬರುವದು ನಿಶ್ಚಿತ.

ಉದ್ಯೋಗದಲ್ಲಿ ಎರಡನೆಯ ಗುರುವಿಗಿಂತ ಅವನು ಮೂರನೆಯವನಾಗಿರುವಾಗ ಹಾಗು ಎಂಟನೆಯ ಶನಿಗಿಂತ ಒಂಬತ್ತನೆಯವನಿರುವಾಗ ಹೆಚ್ಚು ಯಶಸ್ಸು, ಅಂದಾಜಿಗಿಂತ ಹೆಚ್ಚು ಲಾಭ ದೊರೆಯುವುದಲ್ಲದೆ ಸಂಗ್ರಹವೂ ಸಾಧ್ಯವಾದೀತು; ಇಲ್ಲವೆ ಸಾಲವಿದ್ದರೆ ಅಷ್ಟಂಶ ತೀರಿಸಬಲು ಸಾಧ್ಯವಾದೀತು. ದೊಡ್ಡ ದೊಡ್ಡ ಜನರೊಂದಿಗೆ ಉದ್ಯೋಗದ ಹಿತಸಂಬಂಧಗಳು ಬೆಳೆದುಬರಬಹುದು. ಒಂಬತ್ತನೆಯ ಶನಿಯಿರುವಾಗ ಅಸಾಧ್ಯ ಸಾಹಸವನ್ನು ಕೈಕೊಂಡರೂ ಅದರಲ್ಲಿ ಒಳ್ಳೆಯ ಯಶಸ್ಸು ಸಿಗುವುದು. ನಿಮ್ಮ ಉದ್ಯೋಗದ ಹೊಸ ಶಾಖೆಗಳನ್ನು ತೆರೆಯಲು ಸಹ ಶಕ್ಯವಾಗಬಹುದು. ಅರ್ಥಾತ್ ಈ ವರ್ಷ ಉದ್ಯೋಗದ ಪ್ರಚಾರ ಹಾಗೂ ಪ್ರಸಾರವಾಗುವುದು. ಒಂಬತ್ತನೆಯ ಶನಿಯು ಪತ್ತು, ಪ್ರತಿಷ್ಠೆ, ಸಾಮಾಜಿಕ ಹಾಗೂ ರಾಜಕೀಯ ಮಹತ್ವವನ್ನು ಬಹಳವಾಗಿ ಹೆಚ್ಚಿಸುವನು. ನೌಕರದಾರರಿಗೆ ಮೇಲಿನ ದರ್ಜೆ ದೊರೆಯಬಹುದು; ಆದರೆ ಆಗಲೇ ಬದಲಿಯಾಗಿ ಅದು ಅತಿ ದೂರದ ಹಾಗೂ ವಾಸಕ್ಕೆ ಅನನುಕೂಲ ಸ್ಥಳಕ್ಕಾಗುವ ಸಂಭವವೇ ಹೆಚ್ಚು. ಎರಡನೆಯ ಗುರುವಿರುವಾಗ ಇರುವಷ್ಟು ಪರಿಷ್ಕರ ದರ್ಜೆ ಅವನು ಮೂರನೆಯವನಾದನಂತರ ಇರಲಾರದು. ಕೆಳಗಿನವರ ವರ್ತನೆಯೂ ಇದೇ ರೀತಿಯಾಗಿರುವುದು. ವರ್ಷಾರಂಭದಿಂದ ಡಿಸೆಂಬರ್ ೩೧, ಫೆಬ್ರುವರಿ ೨೭ರಿಂದ ಮಾರ್ಚ್ ೧೪, ಮೇ ೧೦ರಿಂದ ಜೂನ್ ೬, ಜುಲೈ ೨೫ರಿಂದ ಅಗಸ್ಟ ೧೪ ಹಾಗು ಅಕ್ಟೋಬರ್ ೬ರ ನಂತರದ ಕಾಲವು ಲಾಭಕ್ಕೆ ಹೆಚ್ಚು ಅನುಕೂಲ. ಉತ್ತಮ ವಾಹನಸುಖ ದೊರೆಯುವುದಾದರೂ ಅದಕ್ಕಾಗಿ ಮೂರನೆಯ ಗುರುವಿರುವಾಗ ಮೇಲಿಂದಮೇಲೆ ವೆಚ್ಚವನ್ನೂ ಮಾಡಬೇಕಾಗಬಹುದು. ಪ್ರಿಯ ಹಾಗು ಅಪ್ರಿಯ ಆಪ್ತರ, ಅತಿಥಿಗಳ ಸಹವಾಸ ಪ್ರಸಂಗಗಳೂ ಅನೇಕ. ಮಿತ್ರರು ಸರಳವಾಗಿ ವರ್ತಿಸುತ್ತಿದ್ದಾಗಲೂ ಅವರ ಬಗ್ಗೆ ಫೆಬ್ರುವರಿ ೧೭ರ ನಂತರ ಮನಸ್ಸು ನಿರರ್ಥಕ ಸಂಶಯ ತಳೆಯುವದು; ಆದರೂ ಅವರ ವರ್ತನೆ ಸರಿಯಾಗಿಯೇ ಇರುವದು. ಮೂರನೆಯ ಗುರು ಹಾಗು ಒಂಬತ್ತನೆಯ ಶನಿಯಿರುವಾಗ ದೊಡ್ಡ ಯಾತ್ರೆಯೊಂದನ್ನು ಕೈಕೊಳ್ಳಬೇಕಾಗಬಹುದು.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ನಿರ್ಣಯ ಎರಡನೆಯ ಗುರುವಿರುವಾಗ ದೊರೆತರೆ ಬಹುಶಃ ಹತ್ತರಲ್ಲಿ ಆರೇಳಾದರೂ ನಿಮ್ಮ ವಿರುದ್ಧವೇ ಆಗುವವು; ಅನಂತರ ಮೂರನೆಯ ಗುರು ಹಾಗು ಆರನೆಯ ರಾಹುವು ಇರುವ ವರೆಗೆ ಅಂದರೆ ಡಿಸೆಂಬರ್ ೧೧ರಿಂದ ಫೆಬ್ರುವರಿ ೧೭ರ ವರೆಗಾದರೆ ಹತ್ತರಲ್ಲಿ ಐದರಷ್ಟಾದರೂ ನಿಮ್ಮಂತೆಯೇ ಆಗುವವು; ಹಾಗೂ ಅನಂತರ ವಿಶೇಷತಃ ಒಂಬತ್ತನೆಯ ಶನಿಯಿರುವಾಗಾದರೆ ಹತ್ತಕ್ಕೆ ಎಂಟರಲ್ಲಿಯಾದರೂ ಉತ್ತಮ ಪ್ರಕಾರದ ಯಶಸ್ಸು ದೊರೆಯುವುದು ಖಂಡಿತ.

ಈ ರಾಶಿಯ ಗರ್ಭವತಿಯರು ಫೆಬ್ರುವರಿ ೧೭ರ ಮೊದಲು ಪ್ರಸೂತರಾದರೆ ಅವರಿಗೆ ಕಷ್ಟವೆಷ್ಟೂ ಅನಿಸದಾದರೂ ಬಹುತರರಿಗೆ ಹೆಣ್ಣು ಮಗುವೇ ಆಗಬಹುದಾಗಿದೆ; ಅನಂತರ, ಅಂದರೆ ರಾಹುವು ಐದನೆಯವನೂ ಶನಿಯು ಎಂಟನೆಯವನೂ ಆಗಿರುವಾಗ, ಅರ್ಥಾತ್ ಫೆಬ್ರುವರಿ ೧೭ರಿಂದ ಮೇ ೧೪ರ ವರೆಗಾದರೆ ತುಸುವೇ ಕಷ್ಟವಾಗಿ ಹೆಣ್ಣುಮಗುವು ಜನಿಸುವುದು; ಆದರೆ ಮುಂದಿನ ಕಾಲದಲ್ಲಾದರೆ ಪ್ರಸೂತಿಕಷ್ಟ ವಿಶೇಷವೆನಿಸಿ ಬಹುತರರಿಗೆ ಗಂಡು ಮಗುವೇ ಜನಿಸುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೧ ರಿಂದ ಮೇ ೧ ವರೆಗೆ ಆಗುವುದಾದರೆ ಕನಿಷ್ಠ ಗುಣಗಳನ್ನಾದರೂ ಪಡೆದು ಉತ್ತೀರ್ಣರಾಗುವರು. ಆದರೆ ಅನಂತರ ಆಗುವುದಾದರೆ ಮಾತ್ರ ಬಹುಶಃ ಪ್ರಥಮ ಅಥವಾ ದ್ವಿತೀಯ ಶ್ರೇಣಿ ದೊರೆಯುವುದು ನಿಶ್ಚಿತ ಎಂದು ತಿಳಿಯಬೇಕು.

## ತುಲಾ

ಈ ವರ್ಷ ಮೆಲ್ಲ ಮೆಲ್ಲನೆಯೇ ಆದರೂ ಈ ರಾಶಿಯವರು ಉತ್ಕರ್ಷದ ದಾರಿಯಲ್ಲಿಯೇ ನಡೆದಿರುವರೆಂಬುದರಲ್ಲಿ ಸಂದೇಹವಿಲ್ಲ.

ವರ್ಷಾರಂಭದಲ್ಲಿಯೇ ರಾಶಿಸ್ವಾಮಿ ಶುಕ್ರನು ಇದೇ ರಾಶಿಯಲ್ಲಿ ವಕ್ರ ಅಂದರೆ ಪ್ರಬಲನಾಗಿರುವನಲ್ಲದೆ ಮುಕ್ತುಸ್ಥಾನವಾದ ಅಷ್ಟಮದ ಅಧಿಪತಿಯು ಅವನೇ ಆಗಿರುವುದರಿಂದ ಆರೋಗ್ಯ ಬಹಳ ಉತ್ತಮವೇ ಇರುವುದು. ಮೇ ೧ ರಿಂದ ಎಂಟನೆಯ ಶನಿಯು ಪ್ರವೇಶವಾಗುವುದರಿಂದ ಆಗಾಗ ಬದ್ಧಕೋಷ್ಠತೆಯು ಭಾಸವಾದರೂ ಒಂದು ದಿನ ಕೂಡ ಹಾಸಿಗೆ ಹಿಡಿದು ಮಲಗುವ ಪ್ರಸಂಗ ಬರುವುದಿಲ್ಲ. ಅಲ್ಲದೆ ವರ್ಷಾರಂಭದಿಂದಲೇ ಶುಕ್ರನು ಬುಧ, ರವಿ, ಗುರು ಹಾಗು ಚಂದ್ರರಿಂದ ಯುಕ್ತನಿರುವುದರಿಂದ ಅನೇಕ ಘಟನೆಗಳು ಇಚ್ಛೆಯಂತೆಯೇ ಜರುಗುತ್ತಲೇ ಇರುವುದರಿಂದ ಮನೋತ್ಸಾಹವೂ ಉತ್ತಮವಾಗಿಯೇ ಇರುವುದು. ಡಿಸೆಂಬರ್ ೧೧ ರಿಂದ ಗುರುವು ಧನ–ಕುಟುಂಬ ಸ್ಥಾನವಾದ ದ್ವಿತೀಯಕ್ಕೆ ಬರುವುದರಿಂದ ಅಸಾಧ್ಯ ಕೆಲಸಗಳು ಸಹ ಸಾಧ್ಯವಾಗಿ ಕೌಟುಂಬಿಕ ಉತ್ಕರ್ಷ ಹೆಚ್ಚುವುದಲ್ಲದೆ ಮೇಲಿಂದ ಮೇಲೆ ಒಳ್ಳೆಯ ವಾರ್ತೆಗಳು ಕಿವಿಗೆ ಬೀಳತೊಡಗುವವು. ಒಟ್ಟಿನಲ್ಲಿ ಆವಶ್ಯಕ ವಿಷಯಗಳಲ್ಲಿ ದೇಹಸುಖ ಚೆನ್ನಾಗಿಯೇ ದೊರೆಯುವುದು. ಆದರೆ ಫೆಬ್ರುವರಿ ೧೭ ರಿಂದ ನಾಲ್ಕನೆಯ ರಾಹು ಬಂದುದರಿಂದ ಕೆಲ ನಿಕಟ ಆಪ್ತರೊಂದಿಗೆ ತಪ್ಪು ತಿಳುವಳಿಕೆಯಿಂದಾಗಿ ತೀರ ವಿರುಕ್ತಿಯುಂಟಾಗುವ ಸಂಭವವಿದೆ.

ಸ್ತ್ರೀಸುಖಕ್ಕೂ ಈ ವರ್ಷ ಒಳ್ಳೆಯದೇ ಆಗಿದೆ. ಆದರೆ ನವೆಂಬರ್ ೨೬ ರ ವರೆಗೆ ಹಾಗು ನಂತರ ಫೆಬ್ರುವರಿ ೧೭ ರಿಂದ ಮೇ ೧ ರ ವರೆಗಿನ ಅವಧಿಯಲ್ಲಿ ಹೆಂಡತಿಯ ಆರೋಗ್ಯ ತುಸು ಕಿರಿಕಿರಿಯದಾಗಿರಬಹುದು, ಈ ತೊಂದರೆ ಕಣ್ಣು ನೋವು ಅಥವಾ ಮಾಸಿಕ ರಜೋದರ್ಶನಕ್ಕೆ ಸಂಬಂಧಿಸಿದ್ದಾಗಿರಬಹುದು. ಅದರಂತೆಯೆ ಮೇ ೧ ರ ಒಳಗೆ ಮಹತ್ವದ ಒಂದೆರಡು ವಿಷಯಗಳ ಬಗೆಗೆ ಉಭಯತರಲ್ಲೂ ಮತಭೇದವುಂಟಾಗಿ ಭಾರಿ ವಾಗ್ವಾದವೇ ಆಗಬಹುದು.

ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಈ ವರ್ಷವಿಡಿ ಒಳ್ಳೆಯ ಬಾಸಿಂಗಬಲವಿದೆ. ಆದರೆ ಡಿಸೆಂಬರ್ ೧೧ ರ ವರೆಗಾದರೆ ವಿವಾಹ ಅಲ್ಪಾಯಾಸದಿಂದಲೂ ತೀರ ಹತ್ತಿರದ ಊರವರೊಂದಿಗೆಯೂ ಹೊಂದಬಹುದಾಗಿದೆಯಾದರೆ ಅನಂತರ ಮಾತ್ರ ಅದಕ್ಕಾಗಿ ಮಧ್ಯಸ್ಥರ ಮೂಲಕ ಬಹಳ ಪ್ರಯತ್ನಪಡಬೇಕಾದೀತಲ್ಲದೆ ವಿವಾಹ ದೂರದ ಊರವರೊಂದಿಗೆ ಹೊಂದಬಹುದು. ವಧೂವರರು ರೂಪದಿಂದ ತುಂಬ ಸುಂದರರಿರುವರಾದರೂ ಸ್ವಭಾವತಃ ಒಬ್ಬರು ತೀರ ಶಾಂತರಾಗಿರುವರಾದರೆ ಇನ್ನೊಬ್ಬರು ಅಷ್ಟೇ ಕೋಪಿಷ್ಠರು ಎಂಬುದರ ಅನುಭವ ಬರಲು ಬಹಳ ವೇಳೆ ಬೇಕಾಗಲಿಕ್ಕಿಲ್ಲ.

ಅದರಂತೆಯೇ, ನಿಮ್ಮ ಮಕ್ಕಳ ವಿವಾಹವನ್ನು ಈ ವರ್ಷ ಮಾಡುವುದಿದ್ದಲ್ಲಿ ಅದಕ್ಕೆ ಸಹ ಡಿಸೆಂಬರ್ ೧೧ ರ ವರೆಗೆ ಉತ್ತಮ ಬಾಸಿಂಗಬಲವಿದೆಯಲ್ಲದೆ ನಿಮ್ಮ ಅಪೇಕ್ಷೆಗಿಂತ ಹೆಚ್ಚು ಉತ್ತಮ ಪಕ್ಷದವರೊಂದಿಗೆ ಅತ್ಯಲ್ಪಾಯಾಸದಿಂದ ವಿವಾಹ ಮುಗಿದು ಹೋಗುವುದು. ಅನಂತರವಾದರೆ ಮಾತ್ರ ತುಸು ತೊಂದರೆಯಿದೆ. ಕೆಲವರ ಮನಸ್ಸನ್ನು ಎಷ್ಟೇ ತೊಂದರೆಯಾದರೂ ಸಂಬಾಳಿಸಿಕೊಳ್ಳಬೇಕಾದೀತಲ್ಲದೆ ವೆಚ್ಚವು ಕೂಡ ಅಂದಾಜನ್ನು ಮೀರುವುದು ಖಂಡಿತ. ಸೊಸೆ ಅಥವಾ ಅಳಿಯ ರೂಪದಿಂದಲೂ ಗುಣದಿಂದಲೂ ನಿಮ್ಮ ಅಪೇಕ್ಷೆಗನುಗುಣವಾಗಿಯೇ ಇರುತ್ತಾರೆ. ಮಕ್ಕಳ ಉನ್ನತಿಗೂ ಈ ವರ್ಷವು ಉತ್ತಮವೇ ಆಗಿದೆ. ಮೇ ೧ ರ ನಂತರ ಶನಿಯು ಎಂಟನೆಯವನಾಗುವುದರಿಂದ ಅವರ ಉತ್ಕರ್ಷದ ಮಾರ್ಗ ಹೆಚ್ಚು ಸುಲಭಗೊಳ್ಳುವುದು. ಸಾಮಾನ್ಯ

ಹಾಗಿ ನಿಮ್ಮೊಂದಿಗೆ ಅವರು ಒಳ್ಳೆಯ ಮೈತ್ರಿಕ್ಕೆ ದಿಂವಲೇ ಇರುವವರಾದರೂ ಫೆಬ್ರುವರಿ ೧೭ ರ ವರೆಗೆ ಜ್ಯೇಷ್ಠಪುತ್ರ ಅಥವಾ ಜ್ಯೇಷ್ಠಪುತ್ರಿಯ ವರ್ತನೆ ತುಸು ನಿಮ್ಮ ಮನಸ್ಸಿನ ವಿರುದ್ಧವಿರುವುದರಿಂದ ಮನಸ್ಸು ತುಸು ಚಿಂತಿತವೂ ಖೇದಯುಕ್ತವೂ ಆದು-ದಾಗಬಹುದು.

ಉದ್ಯೋಗವಲ್ಲಿ ಈ ವರ್ಷ ಭಾರೀ ಯಶಸ್ಸು ದೊರೆಯಲಿದ್ದು, ಡಿಸೆಂಬರ್ ೧೧ ರಿಂದ ಗುರು ಎರಡನೆಯವನಾಗುವುದರಿಂದ ವಿಶೇಷ ರಭಸದ ವ್ಯವಹಾರ ನಡೆಯಲಿದೆ. ವಿವಿಧ ಜಾತಿ-ಧರ್ಮಗಳಿಗೆ ಸೇರಿದ ಜನರೊಂದಿಗೆ ಉದ್ಯೋಗ ವಿಷಯದಲ್ಲಿ ಸಂಬಂಧ ಬೆಳೆದುಬರಬಹುದು. ಶನಿಯು ಏಳನೆಯವ ನಾಗಿದ್ದಾಗಿನಕಿಂತಲೂ ಅವನು ಎಂಟನೆಯವನಾದ ನಂತರ, ಅಂದರೆ ಮೇ ೧ ರ ನಂತರ ಉದ್ಯೋಗ ಹೆಚ್ಚು ವ್ಯವಸ್ಥಿತ ರೀತಿಯಲ್ಲಿ ನಡೆದು ದ್ರವ್ಯಲಾಭವೂ ಹೆಚ್ಚತೊಡಗುವುದು. ನೌಕರದಾರರಿಗೆ ಮಾರ್ಚ್ ೧ ರಿಂದ ಎಪ್ರಿಲ್ ೧೯ ಹಾಗು ಜೂನ್ ೨೬ ರಿಂದ ಆಗಸ್ಟ್ ೧೪ರ ವರೆಗಿನ ಅವಧಿಯಲ್ಲಿ ಬಡತಿಯ ಯೋಗ ಬಲಿಷ್ಠವಿದ್ದು, ಬದಲಿಯಾದರೆ ಅದು ವೆಚ್ಚದಾಯಕವಾದ ಆದರೆ ಸುಖಸೌಕರ್ಯಗಳ ದೃಷ್ಟಿಯಿಂದ ಒಳ್ಳೆಯ ಊರಿಗಾಗುವುದು. ಮತ್ತು ವರಿಷ್ಠರ ಮರ್ಜಿ ಉತ್ತಮವಾಗಿರುವುದು. ಆಗಸ್ಟ್ ೧೪ ರಿಂದ ಅಕ್ಟೋಬರ್ ೧೨ ರ ವರೆಗಿನ ಅವಧಿಯಲ್ಲಿ ಕೆಲಸದ ಒತ್ತಡ ಬಹಳವಾಗಬಹುದು. ಪೂರ್ಣ ಕೆಲಸವಾಗದಿದ್ದಾಗ ತುಸು ಕೋಪಾ-ಟೋಪಕ್ಕೆ ಕಾರಣವಾಗಬಹುದು. ವರಿಷ್ಠಾಧಿಕಾರಿ ಸ್ತ್ರೀಯಾಗಿದ್ದರೆ ಅವಳ ಕಿರುಕಳವನ್ನು ಮೇಲಿಂದ ಮೇಲೆ ಸಹಿಸಬೇಕಾದೀತು. ನವೆಂಬರ್ ೮ ರ ವರೆಗಿನ ಹಾಗು ನಂತರ ನವೆಂಬರ್ ೨೮ ರಿಂದ ಫೆಬ್ರುವರಿ ೩, ಫೆಬ್ರುವರಿ ೨೨ ರಿಂದ ಮಾರ್ಚ್ ೧೦, ಮಾರ್ಚ್ ೨೮ ರಿಂದ ಮೇ ೩೧, ಜೂನ್ ೧೭ ರಿಂದ ಸಪ್ಟೆಂಬರ್ ೨೭ ಹಾಗು ಅಕ್ಟೋಬರ್ ೧೪ ರ ನಂತರದ ಕಾಲವು ಲಾಭಕ್ಕೆ ವಿಶೇಷ ಉತ್ತಮ-ವಾಗಿದೆ. ಅನೇಕರಿಗೆ ಶನಿಯು ಎಂಟನೆಯವನಿರು-ವಾಗ ಲಾಟರಿ ಅಥವಾ ಆ ಬಗೆಯ ಮೂಲಗಳಿಂದ ಆಕಸ್ಮಿಕ ಧನಲಾಭದ ಯೋಗವಿದೆ; ವಿಶೇಷತಃ ಜೂನ್ ೫ ರಿಂದ ಜುಲೈ ೧ ಅಥವಾ ಆಗಸ್ಟ್ ೧೮ ರಿಂದ ೨೯ ರ ವರೆಗಿನ ಕಾಲದಲ್ಲಿ ಇದು ಹೆಚ್ಚು ಸಂಭಾವ್ಯವಾಗಿದೆ. ಎಂಟನೆಯ ಶನಿ ದ್ರವ್ಯ-ಲಾಭಕ್ಕೆ ಉತ್ತಮವೇನೊ ನಿಜ. ಆದರೆ ಈ ಲಾಭದಿಂದಾಗಿಯೇ ಮುಂದೆ ಅನೇಕ ವರ್ಷ ಕಾಲ ಒಂದಿಲ್ಲೊಂದು ಗೋಂದಲದಲ್ಲಿ ನೀವು ಸಿಕ್ಕಿಕೊಳ್ಳ-ಬಹುದಾದ ಭಯವಿದೆ. ಅಂತೆಯೇ, ಈ ಬಗೆಯ ದ್ರವ್ಯಲಾಭವನ್ನು ಸ್ವೀಕರಿಸುವ ಮುನ್ನ ಪೂರ್ಣ ವಿಚಾರ ಮಾಡಿಯೇ ಮುಂದಡಿಯಿಡಬೇಕು. ಅಲ್ಲದೆ ಎಂಟನೆಯ ಶನಿಯಿರುವಾಗಲೇ ಮೇಲಿಂದ ಕೆಳಗಡೆ ಆಳದಲ್ಲಿ ಬೀಳುವ ಭಯವೂ ಇದೆಯಾದ್ದರಿಂದ ಅಂಥ ಸ್ಥಳಗಳಲ್ಲಿ ತುಂಬ ಜಾಗ್ರತೆ ವಹಿಸಬೇಕು. ಅದರಂತೆಯೇ ರಾತ್ರಿ ಸಮಯದಲ್ಲಿ ಬಸ್ ಪ್ರವಾಸ-ವನ್ನು ಮಾಡದಿದ್ದರೆಯೇ ಹಿತ. ಈ ಅರಿಷ್ಟ ನಿವಾರಣಾರ್ಥ ಶನಿಯ ಸಂಪೂರ್ಣ ೨೩,೦೦೦ ಜಪ ಮಾಡಬೇಕು. ವರ್ಷಾರಂಭದಲ್ಲಿ ಮಂಗಳನು ವ್ಯಯಸ್ಥಾನದಲ್ಲಿರುವುದರಿಂದ ಹೆಂಡತಿಗಾಗಿ ಅಥವಾ ಅವಳಿಂದ ಅಂದಾಜಿಗಿಂತ ಹೆಚ್ಚೇ ವೆಚ್ಚವಾಗಬಹುದು. ಆದರೆ ಗುರುವು ಎರಡನೆಯವನಾಗಿರುವುದರಿಂದ ಈ ವೆಚ್ಚ ವ್ಯರ್ಥವಾಗದೆ ಯೋಗ್ಯವೂ ಸಮಾಧಾನ ನೀಡುವಂಥವೂ ಆದ ಕೆಲಸಗಳಿಗಾಗಿಯೇ ಆಗುವುದು. ಸಾಲವಿದ್ದರೆ ಈ ವರ್ಷ ಅದು ಬಹ್ವಂಶ ತೀರ-ಬಹುದು; ಅದಿಲ್ಲದಿದ್ದರೆ ಸ್ಥಾವರ-ಜಂಗಮ ಆಸ್ತಿಯ ಸಂಗ್ರಹಣ ಸಾಧ್ಯವಾದೀತು. ಆದರೆ ಇಂಥ ಆಸ್ತಿಯನ್ನು ಫೆಬ್ರುವರಿ ೧೭ ರ ನಂತರ ಕೊಂಡುಕೊಳ್ಳುವುದಿದ್ದರೆ ಆ ಬಗ್ಗೆ ಪೂರ್ಣ ಚಿಕಿತ್ಸಕ ಬುದ್ಧಿಯಿಂದ ಎಚ್ಚರ ವಹಿಸುವುದು ಅಗತ್ಯ. ಯಾತ್ರಾಯೋಗ ಕಡಿಮೆಯೇ ಆದರೂ ಬೇರೆ ಬಗೆಯ ಪ್ರವಾಸ ಸಾಕಷ್ಟಾಗುವುದಲ್ಲದೆ ಅವು-ಗಳಲ್ಲಿನ ಉದ್ದೇಶ ಕೂಡ ಬಹುಮಟ್ಟಿಗೆ ಸಫಲ-ವಾಗುವುದು. ಒಳ್ಳೆಯ ಮಿತ್ರಸುಖವೂ ದೊರೆ-ಯುವುದು. ಆದರೆ ನಾಲ್ಕನೆಯ ರಾಹು ಬಂದ ನಂತರ ಕೈಕೆಳಗಿನವರ ವರ್ತನೆ ಅಷ್ಟೊಂದು ಸರಿ-ಯಿರುವುದಿಲ್ಲ ಮತ್ತು ನೆರೆ-ಹೊರೆಯವರ ವರ್ತನೆ ಸಹ ಮತ್ಸರಯುಕ್ತವಾಗಿರುವುದು.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ನವೆಂಬರ್ ೨೭ ರಿಂದ ಜನವರಿ ೧೨, ಮಾರ್ಚ್ ೧ರಿಂದ ಎಪ್ರಿಲ್ ೧೯, ಆಗಸ್ಟ್ ೧೪ ರಿಂದ ಅಕ್ಟೋಬರ್ ೧೨ ರ ವರೆಗಿನ ಅವಧಿಯಲ್ಲಿ ನಿರ್ಣಯ ದೊರೆಯುವುದಾದರೆ ನಿಮ್ಮಂತೆಯೇ ಆಗುವುದು.

ಈ ರಾಶಿಯ ಗರ್ಭವತಿಯರು ಡಿಸೆಂಬರ್ ೧೧ ರಿಂದ ಫೆಬ್ರುವರಿ ೧೭ ರೊಳಗಾಗಿಯೇ ಪ್ರಸೂತ-ರಾದರೆ ಹೆರಿಗೆ ತೀರ ಕಷ್ಟಕರವಾಗಿದ್ದರೂ ಮಗು ಗಂಡಾಗುವುದು. ಡಿಸೆಂಬರ್ ೧೧ ರ ಮೊದ-

ಲಾದರೆ ಪ್ರಸೂತಿಕಷ್ಟ ಕಡಿಮೆಯಾಗಿ ಮಗು ಹೆಣ್ಣಾಗುವ ಸಂಭವವೇ ಹೆಚ್ಚು; ಹಾಗು ಫೆಬ್ರುವರಿ ೧೭ ರ ನಂತರ ಸುಲಭಪ್ರಸೂತಿಯಾಗಿ ಹೆಣ್ಣುಮಗು ಜನಿಸುವ ಯೋಗವೇ ಹೆಚ್ಚು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಡಿಸೆಂಬರ್ ೧೧ರ ಮೊದಲಾದರೆ ಉತ್ತೀರ್ಣರಾಗುವರಲ್ಲದೆ ಕೆಲವರಿಗೆ ದ್ವಿತೀಯ ಶ್ರೇಣಿ ಸಹಿತ ದೊರೆಯುವ ಸಂಭವ ಇದೆ; ಮುಂದೆ ಫೆಬ್ರುವರಿ ೧೭ರ ವರೆಗಾದರೆ ಏನನ್ನೂ ನಿಶ್ಚಿತ ಹೇಳಲು ಶಕ್ಯವಿಲ್ಲ; ಅನಂತರವಾದರೆ ಮಾತ್ರ ಉತ್ತೀರ್ಣರಾಗುವುದು ನಿಶ್ಚಿತವಷ್ಟೇ ಅಲ್ಲ, ಕೆಲವರಿಗೆ ದ್ವಿತೀಯ ಶ್ರೇಣಿಯೂ ದೊರೆಯಬಹುದು.

## ವೃಶ್ಚಿಕ

**ಈ ವರ್ಷ ಈ ರಾಶಿಯವರಿಗೆ ಡಿಸೆಂಬರ್ ೧೧ರ ವರೆಗಿನ ಕಾಲವು ಕಷ್ಟಮಯ, ಅಲ್ಲಿಂದ ಫೆಬ್ರುವರಿ ೧೭ರ ವರೆಗೆ ಕಷ್ಟಸಾಧ್ಯ ಯಶಸ್ಸಿನ ಕಾಲ, ಮುಂದೆ ಮೇ ೧ ರ ವರೆಗೆ ಕಷ್ಟದ ಪ್ರಮಾಣದಲ್ಲಿಯೇ ಯಶಸ್ಸೂ ದೊರೆಯುತ್ತ ಹೋಗುವುದಾದರೆ ಅಲ್ಲಿಂದ ವರ್ಷಾಂತ್ಯದ ವರೆಗೂ ಅಲ್ಪ ಕಷ್ಟ ಮತ್ತು ಬಹ್ವಂಶ ಸುಯಶಸ್ಸು ಅಥವಾ ಲಾಭ ದೊರೆಯುವುದು-ಈ ರೀತಿಯಾಗಿ ಹಂತ ಹಂತವಾಗಿ ಸುಖ ಮತ್ತು ಉನ್ನತಿಗಳೆಡೆಗೆ ಮುನ್ನಡೆಯುವುದು ನಿಶ್ಚಿತವೆಂದು ತಿಳಿಯಬೇಕು.**

ರಾಶಿಸ್ವಾಮಿ ಮಂಗಳನು ವರ್ಷಾರಂಭದಲ್ಲಿ ಲಾಭ ಸ್ಥಾನದಲ್ಲಿ, ಅಂದರೆ ಹನ್ನೊಂದನೆಯವನಾಗಿರುವುದರಿಂದ ಆರೋಗ್ಯ ಒಟ್ಟಿನಲ್ಲಿ ಸರಿಯಾಗಿಯೇ ಇರುವುದು. ಆದರೆ ಡಿಸೆಂಬರ್ ೧೧ರ ವರೆಗಿರುವ ಹನ್ನೆರಡನೆಯ ಗುರುವು ಜನ್ಮಸ್ಥನಾದ ನಂತರ ಆರೋಗ್ಯ ಮೊದಲಿಗಿಂತ ಚೆನ್ನಾಗುತ್ತ ನಡೆದು ಫೆಬ್ರುವರಿ ೧೭ರ ವರೆಗಿರುವ ನಾಲ್ಕನೆಯ ರಾಹುವು ಮೂರನೆಯವನಾದ ನಂತರ ಉತ್ತಮಗೊಳ್ಳುವುದು. ಹನ್ನೆರಡನೆಯ ಗುರುವಿರುವ ವರೆಗೆ ಯಾವ ಕೆಲಸವೂ ಮನಸ್ಸಿನಂತಾಗದೆಯೆ ಅದಕ್ಕಾಗಿ ಮಾಡಿದ ವೆಚ್ಚ ವ್ಯರ್ಥವೆನಿಸುವುದರಿಂದ ಮನಸ್ಸಿಗೆ ವಿಶೇಷ ಖೇದವೆನಿಸೀತು. ಆದರೆ ಮೊದಲನೆಯ ಗುರು ಬಂದ ನಂತರ ಬಹುತರ ಎಲ್ಲ ಕೆಲಸಗಳೂ ಮನಸ್ಸಿನಂತೆಯೇ ಆಗುವವಲ್ಲದೆ ಉತ್ಸಾಹ ಹೆಚ್ಚಿ, ಭಾವೀ ಉತ್ಕರ್ಷಕಾರಕ ಘಟನೆಗಳು ಜರುಗತೊಡಗುವವು. ಆವಶ್ಯಕ ದೇಹಸುಖಕ್ಕೆ ಸಹ ಆಗಿನಿಂದಲೇ ಅನುಕೂಲತೆ ಒದಗಿಬರುವುದಲ್ಲದೆ ಮೇ ೧ ರ ವರೆಗೆ ಆರನೆಯವನಾಗಿರುವ ಶನಿ ಏಳನೆಯವನಾದ ನಂತರ ಸಮಾಜದಲ್ಲಿ ನಿಮ್ಮ ಪ್ರತಿಷ್ಠೆಯು ಕೂಡ ಬಹು [illegible].

ಸೌಭಾಗ್ಯವತಿಯ ಆರೋಗ್ಯಕ್ಕೆ ಹನ್ನೆರಡನೆಯ ಗುರುವು ತುಸು ತೊಂದರೆದಾಯಕನೆಂಬುದು ನಿಜವಾದರೂ ಅವನು ಡಿಸೆಂಬರ್ ೧೧ ರಂದು ಮೊದಲನೆಯವನಾದ ನಂತರ ಅವಳ ಆರೋಗ್ಯ ಚೆನ್ನಾಗಿ ಸುಧಾರಿಸುವುದು. ಫೆಬ್ರು[illegible] ರಂದು ಮೂರನೆಯ ರಾಹುವು ಬಂದ ನಂತರ ಉಭಯತರಲ್ಲೂ ಪ್ರೇಮ, ಮತ್ತೈಕ್ಯ ಹೊಂದಿಗೆತಲೂ ಚೆನ್ನಾಗಿರುವವು. ಮೂರನೆಯ ರಾಹುವಿರುವಾಗ ಸೋದರರೊಂದಿಗೆ ಅಷ್ಟೊಂದು ಕೂಡಿ ನಡೆಯುವುದಿಲ್ಲವಾದರೂ ಆ ಮೊದಲು ಅವನು ನಾಲ್ಕನೆಯವನಾಗಿದ್ದಾಗ ಇತರ ಆಪ್ತರೊಂದಿಗೆ ಕೆಟ್ಟಿದ್ದ ಸಂಬಂಧಗಳು ಮಾತ್ರ ಸುಧಾರಿಸತೊಡಗುವವು. ಅವನಿಂದಾಗಿಯೆ ಯಾವುದೇ ಕಠಿಣಕಾರ್ಯವನ್ನೂ ಮಾಡಿ ಮುಗಿಸಬಲ್ಲ ಆತ್ಮವಿಶ್ವಾಸವುಂಟಾಗುವುದಲ್ಲದೆಯೆ ಅಂಥ ಕಾರ್ಯಗಳಲ್ಲಿ ಯಶಸ್ಸು ಸಹ ದೊರೆಯುವುದು.

ಈ ರಾಶಿಯ ಅವಿವಾಹಿತರ ವಿವಾಹವು ಈ ವರ್ಷ ಆಗುವುದಿದ್ದಲ್ಲಿ ಮೊದಲನೆಯ ಗುರುವಿರುವಾಗ, ಅಂದರೆ ಡಿಸೆಂಬರ್ ೧೧ರ ನಂತರ ಅಲ್ಪಾಯಾಸದಿಂದಲೇ ಹೊಂದಿ ಪೂರ್ತಿಗೊಳ್ಳುವಷ್ಟು ಬಾಸಿಂಗ ಬಲವಿದೆ. ಆದರೆ ಆರನೆಯ ಶನಿಯಿರುವವರೆಗೆ, ಅರ್ಥಾತ್ ಮೇ ೧ ರ ವರೆಗೆ ವಿವಾಹವಾದರೆ ವಧೂವರರು ರೂಪದಿಂದ, ಬಣ್ಣದಲ್ಲಿ, ಮೈಕಟ್ಟಿನಿಂದ ತೀರ ಇಜ್ಜೋಡು ಎನಿಸಬಹುದಾದರೂ ಅನಂತರವಾದರೆ ಮಾತ್ರ ಪರಸ್ಪರ ಒಳ್ಳೆಯ ಅನುರೂಪರಿರುವರು, ಮಾತ್ರವಲ್ಲದೆ ಸ್ವಭಾವದಲ್ಲಿ ಕೂಡ ಒಳ್ಳೆಯ ಸಾಮ್ಯವಿದ್ದು, ಉಭಯತರ ಮನೆತನಗಳು ಪೂರ್ವಪರಿಚಿತವಿರಬಹುದು ಕೂಡ.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹವನ್ನು ಈ ವರ್ಷ ಮಾಡುವುದಿದ್ದಲ್ಲಿ ಅದಕ್ಕೆ ಸಹ ಡಿಸೆಂಬರ್ ೧೧ರ ನಂತರವೇ ಒಳ್ಳೆಯ ಬಾಸಿಂಗಬಲವಿದ್ದು ಅಲ್ಪಾಯಾಸದಿಂದ ಹೊಂದಿ ಯಾವ ಅಡೆತಡೆಗಳೂ ಇಲ್ಲದಂತೆಯೆ ನಿಶ್ಚಿತ ಮುಹೂರ್ತಕ್ಕೆಯೆ ಅಪೇಕ್ಷೆಗಿಂತ ಹೆಚ್ಚು ವೈಭವದಿಂದ ಮದುವೆ ನಡೆಯುವುದು. ಗುರುವು ಹನ್ನೆರಡನೆಯವನಿರುವಾಗ ವಿವಾಹವಾದರೆ ಸೊಸೆ ಇಲ್ಲವೆ ಅಳಿಯ ಅಷ್ಟೊಂದು ಮನಸ್ಸಿಗೊಪ್ಪುವಂತಿರಲಾರರು, ಆದರೆ ಅವನು ಮೊದಲನೆಯವನಾದ ನಂತರವಾದರೆ ಅವರು ಮನಸ್ಸಿಗೆ ಪೂರ್ಣ ಒಪ್ಪಿತರಿರುವದಲ್ಲದೆಯೆ ಸುದೈವಿಗಳೂ ಆಗಿರುವುದು ಬಹು ಬೇಗ ಅನುಭವಕ್ಕೆ ಬಂದೀತು. ಮೊದಲನೆಯ ಗುರುವು ಬಂದ ನಂತರ ಮಕ್ಕಳ ಉತ್ಕರ್ಷವೂ ಚೆನ್ನಾಗಿ ಆಗತೊಡಗುವುದಲ್ಲದೆ ನಿಮ್ಮೊಂದಿಗೆ ಅವರು ಹೆಚ್ಚು ಮತ್ತೈಕ್ಯದಿಂದಿರುವರು.

ಈ ವರ್ಷ ಡಿಸೆಂಬರ್ ೧೧ರ ವರೆಗೆ, ಅಂದರೆ ಹನ್ನೆರಡನೆಯ ಗುರುವಿರುವವರೆಗೆ ತುಂಬ ತೊಂದರೆ ಇದೆಯಲ್ಲದೆ ಲಾಭಕ್ಕಿಂತ ವೆಚ್ಚವೇ ಹೆಚ್ಚು. ಅನಂತರ ನಾಲ್ಕನೆಯ ರಾಹುವಿರುವಾಗ ಲಾಭದಲ್ಲಿ ಹೆಚ್ಚಳವಾಗುವುದಾದರೂ ಮನೆಯಲ್ಲಿಯ ಜನ ಅಥವಾ ಆಪ್ತರಲ್ಲಿ ಒಬ್ಬರ ಹಟ ಅಥವಾ ದುರ್ಲಕ್ಷ್ಯದಿಂದಾಗಿ ಮನಸ್ಸಿನ ವಿರುದ್ಧವೇ ವೆಚ್ಚ ಮಾಡಬೇಕಾಗಿಬರಬಹುದು. ಆದರೆ ಆ ಮುಂದೆ ಫೆಬ್ರುವರಿ ೧೭ ರಿಂದ ಮೂರನೆಯ ರಾಹು ಬಂದ ನಂತರ ಲಾಭದ ಪ್ರಮಾಣ ಕಾಲು ಭಾಗದಷ್ಟಾದರೂ ಹೆಚ್ಚುವುದು ಹಾಗು ಮೇ ೧ ರಿಂದ ಶನಿಯು ಏಳನೆಯವನಾದ ನಂತರ ಲಾಭದ ಪ್ರಮಾಣ ಒಂದೂವರೆ ಎರಡು ಪಟ್ಟು ಹೆಚ್ಚುವುದಾದರೂ ವೆಚ್ಚವು ಕೂಡ ಬಹುವಾಗಿ ಬೆಳೆಯುವುದು. ತುಸು ನಿಯಮಿತ ಪ್ರಮಾಣದಲ್ಲಿ ಸಂಗ್ರಹವೂ ಸಾಧ್ಯವಾದೀತು. ನೌಕರದಾರರಿಗೆ ಕೆಲ ಸಮಯದ ಮಟ್ಟಿಗೆ ತಾತ್ಪೂರ್ತಿಕ ಬಡತಿ ನಿಶ್ಚಿತ ದೊರೆಯುವುದು. ಬದಲಿಯಾದರೆ ಅದು ಕೆಲಸದ ದೃಷ್ಟಿಯಿಂದ ಅನುಕೂಲವಾದರೂ ಕೌಟುಂಬಿಕ ದೃಷ್ಟಿಯಿಂದ ಪ್ರತಿಕೂಲ ಸ್ಥಳಕ್ಕೆಯೆ. ಫೆಬ್ರುವರಿ [illegible] ರ ವರೆಗೆ ಪರಿಷ್ಕರ ಮರ್ಜಿ ಕಡಿಮೆಯೆನಿಸಿದರೆ ನಂತರ ಮಾತ್ರ ತುಂಬ ಉತ್ತಮವಾಗಿರುವುದು. ವಿಶೇಷತಃ ನವೆಂಬರ್ ೮ ರಿಂದ ೨೮ರ ವರೆಗೆ ಮತ್ತೆ ಫೆಬ್ರುವರಿ ೩ ರಿಂದ ೨೨, ಜೂನ್ ೧ ರಿಂದ ಜು[illegible] ೨೨ ಹಾಗು ಸಪ್ಟೆಂಬರ್ ೨೭ ರಿಂದ ಅಕ್ಟೋಬ[illegible] ೨೮ರ ವರೆಗಿನ ಕಾಲವು ಲಾಭಕ್ಕೆ ಹೆಚ್ಚು ಅನುಕೂಲವೆನಿಸಿದೆ. ಮೊದಲನೆಯ ಗುರುವಿರುವಾಗ [illegible] ಯಾತ್ರಾಯೋಗವಿದೆ. ಈ ಕಾಲದಲ್ಲಿಯೆ [illegible] ಉತ್ಕರ್ಷಕ್ಕೆ ಅನುಕೂಲವೆನಿಸುವಂಥ ಘಟನೆಗಳು ಸಹಜವಾಗಿಯೇ ಸಂಭವಿಸುವವು. ಫೆಬ್ರುವರಿ ೧೭ ನಂತರ ಸೇವಕರು ಆತ್ಮೀಯತೆಯಿಂದ ವರ್ತಿಸುವರು. ಮೇ ೧ ರ ನಂತರ ಒಳ್ಳೆಯ ವಾಹನಸುಖವಿದೆ. ಅದರಂತೆಯೆ, ಫೆಬ್ರುವರಿ ೧೭ ರಿಂದ ಮಿತ್ರಸುಖ ತುಂಬ ಉತ್ತಮವಾಗಿರುವುದಾದರೆ ಜೊತೆಗೆ ಆಪ್ತರು ಸಹ ಒಳ್ಳೆಯ ಪ್ರೇಮದಿಂದ ಆತ್ಮೀಯತೆಯಿಂದ ವರ್ತಿಸುವರು. ಪ್ರವಾಸ ಹಾಗು ಲೇಖ[illegible] ಕೆಲಸಗಳಿಗಿಂತ ಭೆಟ್ಟಿ ಹೆಚ್ಚು ನೆಟ್ಟಗೆ.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಗುರುವು ಹನ್ನೆರಡನೆಯವನಿರುವಾಗ ನಿರ್ಣಯ ದೊರೆತರೆ ಅದು ಸಂಪೂರ್ಣ ನಿಮ್ಮ ವಿರುದ್ಧ; ಮುಂದೆ ಮೊದಲನೆಯ ಗುರು ಮತ್ತು ನಾಲ್ಕನೆಯ ರಾಹು ಬಂದ ನಂತರ ಅಂದರೆ ಡಿಸೆಂಬರ್ ೧೧ ರಿಂದ ಫೆಬ್ರುವರಿ ೧೭ ರ ವರೆಗಿನ ಅವಧಿಯಲ್ಲಾದರೆ ನಿಮ್ಮಂತೆಯೇ ಆದರೂ ಯಶಸ್ಸು ಪೊಳ್ಳೆನಿಸುವುದು; ಆದರೆ ಅನಂತರ ವಿಶೇಷವಾಗಿ ಮೇ ೧ ರಿಂದ ಮುಂದೆ ಏಳನೆಯ ಶನಿ ಬಂದ ಮೇಲೆ ರೂಪಾಯಿಯಲ್ಲಿ ಕನಿಷ್ಟ ಹನ್ನೆರಡು ಹದಿಮೂರಾಣೆಯಷ್ಟಾದರೂ ಒಳ್ಳೆ ಯಶಸ್ವಿಯೆನಿಸಲಿವೆ.

ಈ ರಾಶಿಯ ಗರ್ಭವತಿಯರು ಡಿಸೆಂಬರ್ ೧೧ ರ ಮೊದಲು ಪ್ರಸೂತರಾದರೆ ಹೆರಿಗೆ ಕಷ್ಟತಮವಾಗಿ ಜನಿಸುವ ಮಗು ಹೆಣ್ಣಾಗಬಹುದು; ಮುಂದೆ ಫೆಬ್ರುವರಿ ೧೭ ರ ವರೆಗಾದರೆ ಸಹ ಹೆರಿಗೆ ತುಸು ಕಷ್ಟಕರವೇ ಆದರೂ ಮಗು ಗಂಡಾಗುವ ಸಂಭವವಿದೆ; ಆದರೆ ಮುಂದೆ ವರ್ಷಾಂತ್ಯದ ವರೆಗೂ ಸುಲಭಪ್ರಸೂತಿಯಾಗಿ ಮಗುವು ಗಂಡಾಗುವ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೧೭ ರ ಮೊದಲು ಆಗುವುದಾದರೆ ಕೇವಲ ಉತ್ತೀರ್ಣರಾಗುವಷ್ಟಾದರೂ ಗುಣಗಳು ದೊರೆಯಬಹುದಾಗಿದೆ; ಆದರೆ ಅನಂತರದ ಕಾಲದಲ್ಲಿಯಾದರೆ ಮಾತ್ರ ಒಳ್ಳೆಯ ಶ್ರೇಣಿಯು ಸಹ ದೊರೆಯುವ ಸಂಭವವು ಸಾಕಷ್ಟಿದೆ.

## ಧನು

ಈ ರಾಶಿಯವರಿಗೆ ಈ ವರ್ಷ ಗುರು ಹನ್ನೊಂದನೆಯವನಿರುವಾಗ ಎಷ್ಟೊಂದು ಸುಖಕರವಾಗಿರುವುದೊ ಮುಂದೆ ಅಷ್ಟಿರದೆಯೆ ಕಷ್ಟದ ಮಾನದಿಂದ ಅಲ್ಪ ಯಶಸ್ಸೂ

[illegible] ಆದರೆ ಆರನೆಯ ಶನಿಯಿರುವಾಗ ಕಷ್ಟದ ಪ್ರಮಾಣದಲ್ಲಿಯೇ ಯಶಸ್ಸು ದೊರೆಯ ಬಹುದಾಗಿದೆ.

ವರ್ಷಾರಂಭದಲ್ಲಿ ರಾಶಿಸ್ವಾಮಿ ಗುರುವಿನೊಂದಿಗೆ ರವಿ, ಬುಧ, ಶುಕ್ರರು ಸಹ ಹನ್ನೊಂದನೆಯ ಸ್ಥಾನ ದಲ್ಲಿರುವುದರಿಂದ ಆರೋಗ್ಯ ಮತ್ತು ಮನೋತ್ಸಾಹ ಉತ್ತಮವಾಗಿರುವವು. ಆದರೆ ಡಿಸೆಂಬರ್ ೧೧ ರಿಂದ ಗುರುವು ಹನ್ನೆರಡನೆಯವನಾಗುವುದರಿಂದ ಆರೋಗ್ಯದಲ್ಲಿ ಏರಿಳಿತಗಳಾದಂತೆ ಭಾಸವಾಗತೊಡಗಬಹುದು. ಮುಂದೆ ಫೆಬ್ರುವರಿ ೧೬ ರಿಂದ ರಾಹುವು ಎರಡನೆಯವನಾಗುವುದರಿಂದ ಕಲಹ ರೂಪದಲ್ಲಿ ಪ್ರಾಪಂಚಿಕ ಕಷ್ಟ ಮೆಲ್ಲ ಮೆಲ್ಲನೆ ಹೆಚ್ಚಲಾರಂಭಿಸಿ ಮಾನಸಿಕ ಸ್ವಾಸ್ಥ್ಯವು ಕೆಡಬಹುದಾಗಿದೆ. ಆದರೆ ಮೇ ೧ ರಿಂದ ಶನಿಯು ಆರನೆಯವನಾಗಿ ಬಲಿಷ್ಠನಾಗುವುದರಿಂದ ಯಾವುದೇ ಅಶುಭ ಫಲವೂ ಅತಿರೇಕಕ್ಕೆ ಹೋಗದೆಯೆ ಧೈರ್ಯ-ವಿವೇಕಗಳು ಉಳಿಯುವವು. ಅರ್ಥಾತ್ ಹನ್ನೆರಡನೆಯ ಗುರು ಹಾಗು ಎರಡನೆಯ ರಾಹುವು ಏಕಕಾಲದಲ್ಲಿರುವಷ್ಟು ಕಾಲದಲ್ಲಿ ಅಂದರೆ ಫೆಬ್ರುವರಿ ೧೬ ರಿಂದ ಮೇ ೧ ವರೆಗಿನ ಅವಧಿಯಲ್ಲಿ ಆರೋಗ್ಯ ಅಷ್ಟೊಂದು ಸರಿಯಿರಲಾರದು ಮಾತ್ರವಲ್ಲ, ಪ್ರಾಪಂಚಿಕಸುಖದಲ್ಲಿ ಮನೋಭಂಗವುಂಟುಮಾಡುವಂತಹ ಪ್ರಸಂಗಗಳು ಮೇಲಿಂದ ಮೇಲೆ ಆಕಸ್ಮಾತ್ ಬರುತ್ತಲಿರುವವು. ಇತರ ಆವಶ್ಯಕ ದೇಹಸುಖಕ್ಕೆ ಜನವರಿ ೧೨ ರ ವರೆಗೆ, ನಂತರ ಜೂನ್ ೨೬ ರಿಂದ ಆಗಸ್ಟ್ ೧೪ ರ ವರೆಗಿನ ಕಾಲವು ಒಳ್ಳೆಯ ಅನುಕೂಲವಾದದ್ದಾಗಿದೆ. ಗುರುವು ಈ ರಾಶಿಸ್ವಾಮಿಯಾಗಿದ್ದು ಹನ್ನೆರಡನೆಯವನಾಗಿರುವುದರಿಂದ ಶಾರೀರಿಕ ಹಾಗು ಬೌದ್ಧಿಕ ಕಷ್ಟದರ್ಶಕನಾಗಿದ್ದಾನೆ. ಪರಿಹಾರಾರ್ಥ ಗುರುವಿನ ಸಂಪೂರ್ಣ ೧೯,೦೦೦ ಜಪ ಮಾಡಬೇಕು.

ಅದರಂತೆಯೆ, ಹನ್ನೆರಡನೆಯ ಗುರುವಿರುವಾಗ ಹೆಂಡತಿಯ ಆರೋಗ್ಯ ಉಷ್ಣತೆಯಿಂದ ಕೆಡಬಹುದಾದ ಭಯವಿದೆ. ಮುಂದೆ ಎರಡನೆಯ ರಾಹುವು ಬಂದ ನಂತರ ದೃಷ್ಟಿಬಾಧೆ, ಭೂತಬಾಧೆ ಅಥವಾ ಮನಸ್ಸಿಗೆ ಆಘಾತವಾಗುವಂಥ ವಾರ್ತೆಯೊಂದು ಕಿವಿಗೆ ಬೀಳುವಿಕೆ ಮುಂತಾದವುಗಳಿಂದ ತೊಂದರೆಯಾಗುವ ಸಂಭವವಿದೆ. ಸರಳ ವಿಷಯದಲ್ಲೂ ಅವಳು ತಪ್ಪು ಕಲ್ಪನೆ ಮಾಡಿಕೊಳ್ಳುವುದರಿಂದ ಮನೆಯಲ್ಲಿಯ ಅನೇಕರೊಂದಿಗೆ ಮಾತಿನ ಕಿಡಿಗಳು ಹಾರಬಹುದು. ಅಂತೆಯೆ, ಅನಿಷ್ಟ ಪರಿಹಾರಾರ್ಥ ರಾಹುವಿನ ಸಂಪೂರ್ಣ ೧೮,೦೦೦ ಜಪ ಮಾಡಬೇಕು, ಹಾಗು ಎರಡನೆಯ ರಾಹುವಿರುವವರೆಗೆ ಶಿವಾಲಯದಲ್ಲಿ ಅಥವಾ ಕುಲದೇವತೆಯೆದುರು ನಂದಾದೀಪವನ್ನಿಡಬೇಕು.

ಈ ರಾಶಿಯ ಅವಿವಾಹಿತರ ವಿವಾಹ ಈ ವರ್ಷ ಆಗುವುದಿದ್ದಲ್ಲಿ ಆದಕ್ಕೆ ಗುರುವು ಹನ್ನೊಂದನೆಯವನಿರುವವರೆಗೆ ಮಾತ್ರ ಉತ್ತಮ ಬಾಸಿಂಗಬಲವಿದ್ದು ಅದು ಅಲ್ಪಾವಧಿಯಲ್ಲಿಯೇ ಆಗಿಬಿಡಬಹುದು. ಆದರೆ ಅವನು ಹನ್ನೆರಡನೆಯವನಾದನಂತರ, ಅಂದರೆ ಡಿಸೆಂಬರ್ ೧೧ ರ ನಂತರ ಮಾತ್ರ ವಿವಾಹಯೋಗ ತೀರ ಕನಿಷ್ಠವಾಗುವುದರಿಂದ ಪ್ರಯತ್ನದಲ್ಲಿ ಹತ್ತಾರು ಅಡ್ಡಿ ಆತಂಕಗಳು ಬರುವವಲ್ಲದೆ ಕೊನೆಗೆ ಆ ವಿಚಾರವನ್ನೇ ಕೈಬಿಡುವ ಪ್ರಸಂಗ ಬರಬಹುದು. ಎರಡನೆಯ ರಾಹು ಬಂದನಂತರ ವಿವಾಹ ನಿಶ್ಚಿತವಾಗಿದ್ದಾಗಲೂ ಕೊನೆಯ ಗಳಿಗೆಯಲ್ಲಿ ಮುರಿದು ಹೋಗುವ ಭಯವೂ ಇದೆ. ವಧೂವರರಲ್ಲಿ ಮಾತ್ರ ರೂಪ ಗುಣಗಳಿಂದ ಸಾಕಷ್ಟು ಸಾಮ್ಯವಿರುವುದು ಕಂಡುಬರುತ್ತದೆ.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹವನ್ನು ಈ ಸಲ ಮಾಡುವುದಿದ್ದಲ್ಲಿ ಅದಕ್ಕೆ ಸಹ ಹನ್ನೊಂದನೆಯ ಗುರುವಿರುವಾಗ ಮಾತ್ರ ಒಳ್ಳೆಯ ಬಾಸಿಂಗಬಲವಿದೆ. ಮುಂದೆ ಶನಿಯು ಆರನೆಯವನಾದ ನಂತರ ಅಂದರೆ ಮೇ ೧ ರ ಮುಂದೆ ಸಹ ಮಧ್ಯಮ ಬಾಸಿಂಗಬಲ ಇದೆ. ಆದರೆ ಆಗ ಅತಿಶಯ ಪ್ರಯತ್ನಪಡಬೇಕಾಗುವುದಲ್ಲದೆಯೆ ಅಂದಾಜಿಗಿಂತ ಬಹಳ ಹೆಚ್ಚು ವೆಚ್ಚವನ್ನೂ ಸಹಿಸಬೇಕಾದೀತು. ಸೊಸೆ ಅಥವಾ ಅಳಿಯ ರೂಪದಿಂದ ಸಾಮಾನ್ಯರೆನಿಸಿದರೂ ಗುಣದಿಂದ ಮನಸ್ಸಿಗೆ ಪೂರ್ಣ ಒಪ್ಪುವಂತಹರಿರುವರು. ವಿವಾಹ ಹನ್ನೊಂದನೆಯ ಗುರುವಿರುವವರೆಗಾದರೆ ಎದುರು ಪಕ್ಷ ಬಹು ದೂರಿನ ಊರಿನವರಾದರೆ ಆರನೆಯ ಶನಿಯಿರುವಾಗ ತೀರ ಹತ್ತಿರದ ಊರಿನವರಾಗಿರಬಹುದಾಗಿದೆ. ಆರನೆಯ ಶನಿಯು ಮಕ್ಕಳ ಉನ್ನತಿಗೆ ಅತ್ಯುತ್ತಮನಾಗಿದ್ದಾನೆ. ಮೇ ೧ ರ ವರೆಗೆ, ಅಂದರೆ ಐದನೆಯ ಶನಿಯಿರುವವರೆಗೆ ಅವರೊಂದಿಗೆ ನಿಮಗೆ ಅಷ್ಟೊಂದು ಹೊಂದಾಣಿಕೆಯಿರದು ಆದರೆ ಮುಂದೆ ಮಾತ್ರ ತದ್ವಿರುದ್ಧ ಬಹು ಚೆನ್ನಾಗಿ ಪರಸ್ಪರ ಕೂಡಿನಡೆಯುವುದು.

ಉದ್ಯೋಗದಲ್ಲಿ ಈ ವರ್ಷ ಗುರು ಹನ್ನೆರಡನೆಯವನಿರುವಾಗ ಹಾಗು ನಂತರ ಶನಿಯು ಆರನೆಯವನಿರುವಾಗ ಉತ್ತಮ ಅನುಕೂಲತೆಯಿದೆ. ಅರ್ಥಾತ್ ಮಧ್ಯಂತರದ ಅವಧಿಯಲ್ಲಿ, ಅಂದರೆ ಡಿಸೆಂಬರ್ ೧೧ ರಿಂದ ಮೇ ೧ ರ ವರೆಗೆ, ಅದರಲ್ಲೂ ವಿಶೇಷತಃ ಎರಡನೆಯ ರಾಹುವು ಇರುವಾಗ ಅಂದರೆ, ಫೆಬ್ರುವರಿ ೧೬ ರಿಂದ ಮೇ ೧೮ ವರೆಗೆ ತುಂಬ ಕಷ್ಟಕರವೂ ಹಾನಿಕರವೂ ಎನಿಸಿದೆ. ಉದ್ಯೋಗಸ್ಥರಲ್ಲಿ ಬಹು ದೊಡ್ಡ ಕಳವಾಗುವ ಭಯವಿದೆ. ಹನ್ನೆರಡನೆಯ ಗುರುವಿರುವಾಗ ಕಠಿಣ ಕಾರ್ಯಗಳಿಂದ ಶಕ್ಯವಿದ್ದಷ್ಟು ದೂರವಿರುವುದು ಒಳಿತು. ಈ ಕಾಲದಲ್ಲಿ ನೌಕರದಾರರೂ ತುಂಬ ಜಾಗ್ರತೆಯಿಂದಿರಬೇಕು; ಯಾಕಂದರೆ ದೊರೆತಿರುವ ಮೇಲಿನ ದರ್ಜೆಯಿಂದ ಹಿಂಬಡತಿಯಾಗುವ ಭಯವೂ ಇದೆ. ಬದಲಿಯಾದರೆ ಅದು ಮನಸ್ಸಿಗೆ ಒಪ್ಪಿತವಿರುವ ಸ್ಥಳಕ್ಕೆಯೇ ಆದರೂ ಹನ್ನೆರಡನೆಯ ಗುರು ಹಾಗು ಎರಡನೆಯ ರಾಹುವಿರುವಾಗ ಮಾತ್ರ ನಾನಾ ಪ್ರಕಾರದ ತೊಂದರೆಗಳು ಬಂದು ಅಲ್ಲಿರಲೊ ಬಿಟ್ಟು ಹೋಗಲೊ ಎಂಬಂಥ ಅವಸ್ಥೆಯುಂಟಾದೀತು. ಆದರೆ ವರ್ಷಾರಂಭದಲ್ಲಿ ಮಂಗಳನು ದಶಮದಲ್ಲಿ ಹಾಗು ಚಂದ್ರನೊಂದಿಗೆ ಗುರು, ಬುಧ, ರವಿ ಹಾಗು ಶುಕ್ರರು ಲಾಭಸ್ಥಾನವಾದ ಏಕಾದಶದಲ್ಲಿರುವುದರಿಂದ ನೌಕರದಾರರು ನೌಕರಿಯಿಂದ ಸ್ಥಗಿತಗೊಳ್ಳುವ ಅಥವಾ ಸ್ವತಂತ್ರ ಉದ್ಯೋಗಸ್ಥರಿಗೆ ದಂಡ ಅಥವಾ ಶಿಕ್ಷೆಯಾಗುವಂತಹ ವಿಪರೀತ ಘಟನೆಗಳು ಜರುಗುವ ಭಯ ಮಾತ್ರ ಎಷ್ಟೂ ಇಲ್ಲ. ಡಿಸೆಂಬರ್ ೩೧ ರ ವರೆಗೆ ನಂತರ ಫೆಬ್ರುವರಿ ೧೧ ರಿಂದ ಮಾರ್ಚ್ ೨೪, ಏಪ್ರಿಲ್ ೧೬ ರಿಂದ ಜೂನ್ ೫, ಜುಲೈ ೧ ರಿಂದ ೨೫ ಹಾಗು ಅಕ್ಟೋಬರ್ ೬ ರ ಮುಂದಿನ ಕಾಲವು ಲಾಭಕ್ಕೆ ಅನುಕೂಲವಾಗಿದೆ. ಕೈಕೆಳಗಿನ ಸೇವಕರು ಗುರುವು ಹನ್ನೊಂದನೆಯವನಾಗಿರುವಾಗಿನಕಿಂತಲೂ ಹನ್ನೆರಡನೆಯವನಾದ ನಂತರವೇ ಹೆಚ್ಚು ಚೆನ್ನಾಗಿ ವರ್ತಿಸುವರು. ಆರನೆಯ ಶನಿಯಿರುವಾಗ ವರಿಷ್ಠರು ಹೆಚ್ಚು ಚೆನ್ನಾಗಿ ವರ್ತಿಸುವರು. ಹನ್ನೆರಡನೆಯ ಗುರುವಿರುವಾಗ ಕೆಲವರು ಮಿತ್ರರೊಂದಿಗಾದರೆ ಎರಡನೆಯ ರಾಹುವಿರುವಾಗ ಆಪ್ತರಲ್ಲಿ ಕೆಲವರೊಂದಿಗೆ ವಿತುಷ್ಟಿ ಉಂಟಾಗಬಹುದು. ಆರನೆಯ ಶನಿಇರುವಾಗ ಒಂದು ಯಾತ್ರೆ ಅಥವಾ ದೊಡ್ಡದೊಂದು ಧಾರ್ಮಿಕ ಕಾರ್ಯ ಜರುಗಬಹುದು. ಒಟ್ಟಿನಲ್ಲಿ ಒಳ್ಳೆಯ ವಾಹನಸುಖ ದೊರೆಯಬಹುದು. ಆದರೆ ಎಪ್ರಿಲ್ ೧೯ ರಿಂದ ಜೂನ್ ೨೬ ರ ವರೆಗೆ ತುಸು ಅಪಘಾತ ಭಯವಿರುವುದರಿಂದ ಯಾವುದೇ ವಾಹನವನ್ನು ಸ್ವತಃ ನಡೆಯಿಸಬಾರದು. ಪ್ರತ್ಯಕ್ಷ ಭೆಟ್ಟಿಗಿಂತ ಪ್ರವಾಸ ಹಾಗು ಲೇಖನ ಕೆಲಸಗಳು ಉತ್ತಮ. ಸರಕಾರಿ ಕೆಲಸಗಳಲ್ಲಿ ಲಂಚ ಮುಂತಾದವಕ್ಕಾಗಿ ಬಹಳ ವೆಚ್ಚ ಮಾಡಬೇಕಾದೀತು. ಎಂಟನೆಯ ಕೇತುವಿರುವಾಗ ಅಂದರೆ ಫೆಬ್ರುವರಿ ೧೬ ರ ನಂತರ ಮೇಲಿಂದ ಮೇಲೆ ವಿಚಿತ್ರ ಮತ್ತು ಭಯಾನಕ ಸ್ವಪ್ನಗಳನ್ನು ಕಾಣುವಿರಿ; ಆದರೆ ಅದೇ ಕಾಲಕ್ಕೆ ಅಷ್ಟಮದ ಮೇಲೆ ಗುರುವಿನ ಶುಭ ದೃಷ್ಟಿಯಿರುವುದರಿಂದ ಈ ಸ್ವಪ್ನಗಳ ಅನುಭವ ಅಷ್ಟೊಂದು ಕಟು ಅಥವಾ ಅಶುಭವೆನಿಸಲಾರದು.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ನಿರ್ಣಯವು ಹನ್ನೊಂದನೆಯ ಗುರುವು ಇರುವ ವರೆಗೆ ದೊರೆತರೆ ಭಾರಿ ಯಶಸ್ಸು ಸಿಗುವುದು; ಆರನೆಯ ಶನಿಯಿರುವಾಗ ದೊರೆತರೆ ಲೌಕಿಕ ದೃಷ್ಟಿಯಿಂದ ಉತ್ತಮವೆನಿಸಿದರೂ ಪ್ರತ್ಯಕ್ಷ ಯಶಸ್ಸು ತೀರ ಪೊಳ್ಳೆನಿಸಬಹುದು; ಆದರೆ ಎರಡನೆಯ ರಾಹು ಮತ್ತು ಹನ್ನೆರಡನೆಯ ಗುರುವಿದ್ದಾಗ, ಅಂದರೆ ಫೆಬ್ರುವರಿ ೧೬ ರಿಂದ ಮೇ ೧ ರ ವರೆಗೆ ನಿರ್ಣಯವಾದರೆ ಮಾತ್ರ ಪೂರ್ಣತಃ ನಿಮ್ಮ ವಿರುದ್ಧವೇ ಆಗುವುದು. ಆದರೆ ಆರನೆಯ ಶನಿಯು ಶತ್ರುಗಳಲ್ಲಿ ಕೆಲವರಿಗೆ ಬೇರೆ ರೀತಿಯಲ್ಲಿ ಹೊರಗಿಂದ ಹೊರಗೆಯೆ ಬಹಳ ಹಾನಿಯನ್ನುಂಟುಮಾಡುವ ಯೋಗವಿದೆ.

ಈ ರಾಶಿಯ ಗರ್ಭವತಿಯರಲ್ಲಿ ಬಹುತರರಿಗೆ ಪ್ರಸೂತಿಕಷ್ಟ ಆಗಿಯೇ ಆಗುತ್ತದೆಯಾದರೂ ಹನ್ನೊಂದನೆಯ ಗುರುವಿರುವ ವರೆಗೆ ಹಾಗು ಮುಂದೆ ಆರನೆಯ ಶನಿಯು ಬಂದ ನಂತರ ಹೆರಿಗೆಯಾದವರಿಗೆ ಜನಿಸುವ ಮಗು ಬಹುಶಃ ಗಂಡು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಹನ್ನೊಂದನೆಯ ಗುರುವಿರುವವರೆಗಾದರೆ ಒಳ್ಳೆಯ ಶ್ರೇಣಿಯೂ ದೊರೆಯಬಹುದಾಗಿದೆ; ನವೆಂಬರ್ ೨೬ ರ ವರೆಗೆ ಹಾಗು ಮುಂದೆ ಮಾರ್ಚ್ ೧ ರಿಂದ ಎಪ್ರಿಲ್ ೧೯ ಹಾಗು ಆಗಸ್ಟ್ ೧೪ ರಿಂದ ಆಕ್ಟೋಬರ್ ೧೨ ರ ವರೆಗಿನ ಅವಧಿಯಲ್ಲಾದರೆ ಕನಿಷ್ಠ ಉತ್ತೀರ್ಣರಾದರೂ ಆಗುವರು ಎಂಬಂತಹ ಯೋಗವಿದೆ.

ಈ [illegible] ರಾಹುವಿನಿಂದಾಗಿ ಆ ವರೆಗೆ ಆರೋಗ್ಯ ಸರಿಯಿರಲಾರದು. ಮೇಲಿಂದ ಮೇಲೆ ವಾತಜನ್ಯ ತೊಂದರೆಯೆನಿಸಬಹುದಲ್ಲದೆ ನವೆಂಬರ್ ೨೫ರ ವರೆಗಿರುವ ಎಂಟನೆಯ ಕುಜಗಳಿಂದಾಗಿ ಅದು ಆ ವರೆಗೆ ಹೆಚ್ಚು ತೀವ್ರವೆನಿಸಬಹುದು. ಆದರೆ ಹನ್ನೆರಡನೆಯ ರಾಹು ಅರ್ಥಾತ್ ಆರನೆಯ ಕೇತು ಬಂದನಂತರ ಆರೋಗ್ಯ ಉತ್ತಮಗೊಳ್ಳತೊಡಗುವುದು. ಡಿಸೆಂಬರ್ ೧೧ರಿಂದ ಗುರುವು ಹತ್ತನೆಯವನಾದ ನಂತರ ದೇಹಸುಖಕ್ಕೆ ಆವಶ್ಯಕವಾದ ವಿಷಯಗಳಲ್ಲೂ ತುಂಬ ಅನುಕೂಲತೆ ಕಂಡುಬರಲಾರಂಭಿಸುವುದು. ಆದರಂತೆಯೆ ವರ್ಷಾರಂಭದಲ್ಲಿ ಬಲಿಷ್ಠಸ್ಥಾನವಾದ ತೃತೀಯದಲ್ಲಿ ಆದರೆ ಮೇಷದಲ್ಲಿ ಶನಿ ನೀಚನಾಗಿರುವುದರಿಂದ ಪ್ರತಿಯೊಂದು ಕೆಲಸದಲ್ಲೂ ಅನಿರೀಕ್ಷಿತ ಅಡೆತಡೆಗಳು ಬಂದು ಮನಸ್ಸು ಹತಾಶಗೊಳ್ಳುವುದು. ಮುಂದೆ ಮೇ ೧ ರಿಂದ ಅವನು ನಾಲ್ಕನೆಯವನಾದ ನಂತರದಲ್ಲಿ ಸತ್ಫಲಗಳು ದೊರೆಯತೊಡಗುವವಲ್ಲದೆ ಯೋಜಿತ ಕಾರ್ಯಗಳೆಲ್ಲ ಯಶಸ್ವಿಯಾಗುವವು ಮತ್ತು ಮಾನಸಿಕ ಸಮಾಧಾನ ಉತ್ತಮವಾಗಿರುವುದು.

ಹೆಂಡತಿಯ ಆರೋಗ್ಯಕ್ಕೆ ಸಹ ಕೇತುವು ಏಳನೆಯವನಿರುವ ವರೆಗೆ ಒಂದಿಲ್ಲೊಂದು ಬಗೆಯ ಕಿರಿಕಿರಿ ಇದ್ದದ್ದೆ. ಅಲ್ಲದೆ ಅದು ವರೆಗೆ ಉಭಯತರಲ್ಲೂ ಬಹುತರ ವಿಷಯಗಳಲ್ಲಿ ತೀವ್ರ ವಿರೋಧವೇ ಇರುವುದು. ಆದರೆ ಅವನು ಆರನೆಯವನಾದಂದಿನಿಂದ, ಅಂದರೆ ಫೆಬ್ರುವರಿ ೧೭ರ ನಂತರ ಈ ವಿರೋಧ ತೀವ್ರ ಕಡಿಮೆಯಾಗತೊಡಗಿ ಒಳ್ಳೆಯ ಮತ್ಯೈಕ್ಯ ಹಾಗು ಪ್ರೇಮ ಕಂಡುಬರುವುದು.

ಈ ರಾಶಿಯ ಅವಿವಾಹಿತರ ವಿವಾಹ ಈ ಸಲ ಆಗುವುದಿದ್ದಲ್ಲಿ ಅದಕ್ಕೆ ಒಂಬತ್ತನೆಯ ಗುರುವಿರುವ ವರೆಗೆ, ಅಂದರೆ ಡಿಸೆಂಬರ್ ೧೧ ರ ವರೆಗೆ ಎಷ್ಟು ಬಾಸಿಂಗಬಲ ಉತ್ತಮವಿರುವುದೋ ಮುಂದೆ ಮಾತ್ರ ಅಷ್ಟಿರಲಾರದು. ಅರ್ಥಾತ್ ಒಂಬತ್ತನೆಯ ಗುರು ಇರುವಾಗ ವಿವಾಹ ಅಲ್ಪಾಯಾಸದಿಂದಲೇ ಆದರೆ ಮುಂದೆ ಬಹಳ ಪ್ರಯತ್ನ ಮಾಡಬೇಕಾಗುವುದು. ಆದರೆ ವಿವಾಹ ಮಾತ್ರ ಯಾವಾಗ ಆದರೂ ನಿರ್ವಿಘ್ನವಾಗಿಯೇ ಆಗುವುದಲ್ಲದೆ ವಧೂವರರು ಪೂರ್ಣ ಅನುರೂಪರಿರುವರು.

ಆದರಂತೆಯೇ, ನಿಮ್ಮ ಮಕ್ಕಳ ವಿವಾಹವನ್ನು ಈ ಸಲ ಮಾಡುವುದಿದ್ದಲ್ಲಿ ಅದಕ್ಕೆ ಸಹ ಹತ್ತನೆಯ ಗುರುವಿಗಿಂತ ಒಂಬತ್ತನೆಯ ಗುರುವಿರುವಾಗಲೆ ಹೆಚ್ಚು ಪ್ರಬಲ ಬಾಸಿಂಗಬಲವಿದೆ. ಒಂಬತ್ತನೆಯ ಗುರುವಿರುವಾಗಲಾದರೆ ಸೊಸೆ ಅಥವಾ ಅಳಿಯ ಅತ್ಯಂತ ಸುಂದರರೂ ಗುಣದಲ್ಲಿ ನಿರೀಕ್ಷೆಗಿಂತ ಒಳ್ಳೆಯವರೂ ಆಗಿರುವರಾದರೆ ಅವನು ಹತ್ತನೆಯವನಾದ ನಂತರ ಈ ಎರಡೂ ವಿಷಯಗಳಲ್ಲಿ ಸರ್ವಸಾಧಾರಣರೇ ಆಗಿರುವರು; ಅಲ್ಲದೆ ಮದುವೆ ಪೂರ್ವನಿಶ್ಚಿತ ಮುಹೂರ್ತಕ್ಕೆ ನೆರವೇರದೆಯೆ ಅದನ್ನು ಬೇರೊಂದು ಮುಹೂರ್ತಕ್ಕೆ ಮುಂದೂಡಬೇಕಾಗಬಹುದು. ವರ್ಷಾರಂಭದಲ್ಲಿ ಸುತೇಶ ಬುಧನು ಭಾಗ್ಯಸ್ಥಾನವಾದ ನವಮದಲ್ಲಿರುವನಲ್ಲದೆ ಈ ಸ್ಥಾನದ ಮೇಲೆ ಲಾಭೇಶ ಗುರುವಿನ ಪೂರ್ಣದೃಷ್ಟಿ ಇರುವುದರಿಂದ ಮಕ್ಕಳೆಲ್ಲರೂ ಒಳ್ಳೆಯ ಉನ್ನತಿ ಹೊಂದುವುದು ನಿಶ್ಚಿತ. ವಿಶೇಷತಃ ನವೆಂಬರ್ ೮ ರ ವರೆಗೆ, ಅಥವಾ ನವೆಂಬರ್ ೨೮ ರಿಂದ ಫೆಬ್ರುವರಿ ೩, ಫೆಬ್ರುವರಿ [illegible] ರಿಂದ [illegible] [illegible], ಜೂನ್ [illegible] ರಿಂದ ಜುಲೈ ೩, ಜುಲೈ ೨೨ ರಿಂದ ಸಪ್ಟೆಂಬರ್ ೨೨ ಹಾಗು ಅಕ್ಟೋಬರ್ ೧೮ ರಿಂದ ೧೯ರ ವರೆಗಿನ ಕಾಲದಲ್ಲಿ ಅವರ ಉನ್ನತಿಯಾದುದು ಸ್ಪಷ್ಟ ನಿದರ್ಶನಕ್ಕೆ ಬರಬಹುದು. ಅಲ್ಲದೆ ಎಲ್ಲ ಮಕ್ಕಳಿಂದಲೂ ನಿಮಗೆ ಒಳ್ಳೆಯ ಸುಖ ದೊರೆಯುವುದು. ಒಬ್ಬ ಮಗ ಅಥವಾ ಮಗಳು ಶಿಕ್ಷಣ ಅಥವಾ ನೌಕರಿಗಾಗಿ ವಿದೇಶಕ್ಕೆ ತೆರಳುವ ಯೋಗ ಸಹ ಇದೆ.

ಉದ್ಯೋಗದಲ್ಲಿ ಈ ವರ್ಷವು ಅಪ್ರತಿಮವಾಗಿರುವುದು ಗಮನಕ್ಕೆ ಬಾರದಿರದು. ಒಂಬತ್ತನೆಯ ಗುರುವಿರುವಾಗ ವ್ಯಾಪಾರಿಗಳಿಗೂ ಬುದ್ಧಿಜೀವಿಗಳಿಗೂ ಉತ್ಕರ್ಷದ ಬಹು ದೊಡ್ಡ ದೊಡ್ಡ ಅವಕಾಶಗಳು ಒದಗಿ ಬರಬಹುದಾದರೆ, ನೌಕರದಾರರಿಗೆ ಇಂತಹ ಅವಕಾಶಗಳು ಹತ್ತನೆಯ ಗುರುವು ಬಂದ ನಂತರ ಒದಗುವವು. ಫೆಬ್ರುವರಿ ೧೭ ರಿಂದ ಮೇ ೧ ರ ವರೆಗಿನ ಅವಧಿಯಲ್ಲಿ ಬಹುಶಃ ಬಡತಿ ದೊರೆಯುವುದು; ಆಗಲ್ಲದಿದ್ದರೆ ಜುಲೈ ೧ ರಿಂದ ೨೫ ರ ಅವಧಿಯಲ್ಲಿ ದೊರೆಯುವುದು. ಬದಲಿಯಾದರೆ ಆ ಊರು ಕೆಲಸದ ದೃಷ್ಟಿಯಿಂದ ಎಷ್ಟು ಅನುಕೂಲವಾಗಿರುವುದೊ ವಾಸದ ದೃಷ್ಟಿಯಿಂದ ಅಷ್ಟಿರಲಾರದು. ಒಂಬತ್ತನೆಯ ಗುರುವಿಗಿಂತ ಹತ್ತನೆಯ ಗುರುವಿರುವಾಗ ವರಿಷ್ಠರ ಮರ್ಜಿ ಹೆಚ್ಚು ಚೆನ್ನಾಗಿರುವುದು. ಕೈಕೆಳಗಿನವರು ನಾಲ್ಕನೆಯ ಶನಿಯಿರುವಾಗ ಹೆಚ್ಚು ತತ್ಪರತೆಯಿಂದ ವರ್ತಿಸುವರು. ವರ್ಷಾರಂಭದಿಂದ ಡಿಸೆಂಬರ್ ೩೧, ಮಾರ್ಚ್ ೨೬ ರಿಂದ ಏಪ್ರಿಲ್ ೧೭, ಜೂನ್ ೫ ರಿಂದ ಜುಲೈ ೨೫, ಅಗಸ್ಟ್ ೧೮ ರಿಂದ ಸಪ್ಟೆಂಬರ್ ೧ ಹಾಗು ಅಕ್ಟೋಬರ್ ೬ ರ ಮುಂದಿನ ಕಾಲವು ಲಾಭಕ್ಕೆ ಮತ್ತು ಒಳ್ಳೆಯ ಭವಿಷತ್ಸೂಚಕ ಘಟನೆಗಳಿಗೆ ಹೆಚ್ಚು ಅನುಕೂಲವಾಗಿದೆ. ಹತ್ತನೆಯ ಗುರುವಿದ್ದಾಗ ಸಂಗ್ರಹವು ಸಾಧ್ಯವಾಗುವುದಲ್ಲದೆ ಸಾಲವಿದ್ದರೆ ಅದರಿಂದ ಋಣಮುಕ್ತರಾಗಲು ಸಹ ಶಕ್ಯವಾಗುವುದು. ಮತ್ತು ಒಳ್ಳೆಯ ವಾಹನಸುಖ ಸಿಗುವುದು. ಒಂಬತ್ತನೆಯ ಗುರುವಿರುವಾಗ ಒಂದು ಯಾತ್ರಾಯೋಗವಿದೆಯಾದರೆ ಅವನು ಹತ್ತನೆಯವನಾದ ನಂತರ ಬೇರೆ ಕೆಲಸಗಳಿಗಾಗಿ ದೂರದ ಪ್ರವಾಸ ಕೈಕೊಳ್ಳಬೇಕಾಗಬಹುದು. ಆದರೆ ಒಳ್ಳೆಯ ಮಿತ್ರಸುಖ ದೊರೆಯುವುದಕ್ಕೆ ಹತ್ತನೆಯ ಗುರುವಿಗಿಂತ ಒಂಬತ್ತನೆಯವನೇ ಉತ್ತಮನು; ಹತ್ತನೆಯ ಗುರುವಿರುವಾಗ ಅನೇಕ ಮಿತ್ರರೊಂದಿಗೆ ತಪ್ಪು ಕಲ್ಪನೆಯಿಂದಾಗಿ ಗುಪ್ತ ಅಥವಾ ಬಹಿರಂಗ ವಿರೋಧವೂ ಪ್ರಾಪ್ತವಾಗಬಹುದು. ಅಲ್ಲದೆ ನಿಮ್ಮ ಮಿತ್ರರಲ್ಲನೇಕರಿಗೆ ಈ ವರ್ಷವು ತುಸು ಹೆಚ್ಚು ಕಡಿಮೆ ತೊಂದರೆದಾಯಕವೇ ಆಗಿದೆ.

ದಾವೆ. ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಒಂಬತ್ತನೆಯ ಗುರುವಿನಿಂದ ತುಂಬ ಅನುಕೂಲವಿದೆ. ಆದರೆ ಡಿಸೆಂಬರ್ ೧೧ ರಿಂದ ಫೆಬ್ರುವರಿ ೧೭ ರ ವರೆಗಿನ ಅವಧಿಯಲ್ಲಿ ನಿರ್ಣಯ ದೊರತರೆ ಬಹುಶಃ ನಿಮ್ಮ ವಿರುದ್ಧವೇ ಆಗಬಹುದು; ಅನಂತರ ವಿಶೇಷತಃ ಮೇ ೧ ರ ಮುಂದಿನ ಅವಧಿಯಲ್ಲಾದರೆ ಕನಿಷ್ಠ ಹತ್ತರಲ್ಲಿ ಎಂಟಾದರೂ ನಿಮ್ಮ ಪರವಾಗಿಯೆ ಅತ್ಯಂತ ಯಶಸ್ವಿಯಾಗುವವೆಂಬುದು ನಿಶ್ಚಿತ.

ಈ [illegible] ಡಿಸೆಂಬರ್ [illegible] ವರೆಗೆ, ಅಂದರೆ ಒಂಬತ್ತನೆಯ ಗುರುವಿರುವಾಗ ಪ್ರಸೂತರಾದರೆ ಹೆರಿಗೆ ಸುಲಭವಾಗುವುದಲ್ಲದೆ ಮಗು ಗಂಡು, ಆದರೆ ಹತ್ತರಲ್ಲಿ ಮೂರು ನಾಲ್ಕು ಜನರ್ಾದರೂ ಅವಳಿ ಮಕ್ಕಳಾಗುವ ಯೋಗವಿದೆ; ಮುಂದೆ ಹತ್ತನೆಯ ಗುರುವಿರುವಾಗ ಪ್ರಸೂತಿ ತುಸು ಕಷ್ಟಕರವೆನಿಸಿ ಬಹುತರರಿಗೆ ಹೆಣ್ಣು ಮಗು ಜನಿಸುವ ಯೋಗವಿದೆ. ನಾಲ್ಕನೆಯ ಶನಿ ಇರುವಾಗ, ಅಂದರೆ ಮೇ ೧ ರ ನಂತರ ಪ್ರಸೂತರಾಗುವವರ ಮಗು ಒಳ್ಳೆಯ ಸಶಕ್ತವೂ ಸುಂದರವೂ ಆಗಿರಬಹುದಾಗಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಒಂಬತ್ತನೆಯ ಗುರುವಿರುವಾಗ, ಅಂದರೆ ಡಿಸೆಂಬರ್ ೧೧ರ ಮೊದಲಾದರೆ ಸಹಜವಾಗಿಯೆ ಉತ್ತೀರ್ಣರಾಗುವರಲ್ಲದೆ ಕೆಲವರಿಗೆ ಉಚ್ಚ ಶ್ರೇಣಿಯು ಸಹ ದೊರೆಯಬಹುದು; ಮುಂದೆ ಡಿಸೆಂಬರ್ ೧೧ ರಿಂದ ಫೆಬ್ರುವರಿ ೧೭ರ ವರೆಗಾದರೆ ಕನಿಷ್ಠ ಸಾಮಾನ್ಯ ದರ್ಜೆಯಲ್ಲಾದರೂ ಉತ್ತೀರ್ಣರಾಗುವರು; ಆದರೆ ಅನಂತರದ ಅವಧಿಯಲ್ಲಾದರೆ ಮಾತ್ರ ಯಶಸ್ಸಿನ ಬಗ್ಗೆ ನಿಶ್ಚಿತ ಏನನ್ನೂ ಹೇಳಲು ಬರುವಂತಿಲ್ಲ.

## ಮೀನ

ಈ ರಾಶಿಯವರಿಗೆ ಈ ವರ್ಷವು ಎಂಟನೆಯ ಗುರುವಿರುವಾಗ ಸಾಮಾನ್ಯವೂ, ಎರಡನೆಯ ಶನಿಯಿರುವಾಗ ಮಧ್ಯಮವೂ; ಆದರೆ ಒಂಬತ್ತನೆಯ ಗುರು ಮತ್ತು ಮೂರನೆಯ ಶನಿ ಬಂದ ನಂತರ, ಅಂದರೆ ಮೇ ೧ ರ ನಂತರದ ಕಾಲವು ಉತ್ಕೃಷ್ಟವೂ ಭಾಗ್ಯವರ್ಧಕವೂ ಆಗಿದೆಯೆಂಬುದು ಸುನಿಶ್ಚಿತ.

ಕಳೆದ ಏಳು ವರ್ಷಗಳಿಂದ ಈ ರಾಶಿಗಿರುವ ಸಾಡೇಸಾತಿಯು ಕೆಲ ದಿನಗಳಲ್ಲಿಯೇ, ಅಂದರೆ ಮೇ ೧ ರಂದು ಮುಕ್ತಾಯಗೊಳ್ಳಲಿದ್ದು ಅದರ ಕರ್ತನಾದ ಶನಿಯು ಮೂರನೆಯವನಾಗುವುದರಿಂದ ಆರೋಗ್ಯ ಸುಧಾರಿಸುವುದು ಮಾತ್ರವಲ್ಲ;ಗೃಹಕಲಹ, ಧನಸಂಕೋಚ. ಭಯಭೀತಿಗಳು ಸಹ ತೀವ್ರವಾಗಿ ಕಡಿಮೆಯಾಗುತ್ತ ಧೈರ್ಯ, ಪರೋಪಕಾರ, ಕಠಿಣ ಕಾರ್ಯಗಳನ್ನು ನಿರ್ವಹಿಸುವಂಥ ಶಕ್ತಿಗಳೆಲ್ಲ ಭರದಿಂದ ಬೆಳೆಯಲಾರಂಭಿಸುವವು. ಆದರೆ ಈ ಶನಿಯು ಸೋದರರೊಂದಿಗೆ ಮಾತ್ರ ವಿರೋಧವನ್ನುಂಟು ಮಾಡಬಹುದಾಗಿದೆ. ವರ್ಷಾರಂಭದಲ್ಲಿ ರಾಶಿಸ್ವಾಮಿ ಗುರುವು ಎಂಟನೆಯವನಿದ್ದ ಕಾರಣ ಪ್ರತಿಯೊಂದು ಕೆಲಸದಲ್ಲೂ ಕಂಡುಬರುತ್ತಿದ್ದ ಆತ್ಮವಿಶ್ವಾಸದ ಅಭಾವವು ಡಿಸೆಂಬರ್ ೧೧ ರಿಂದ ಅವನು ಒಂಬತ್ತನೆಯವನಾದ ನಂತರ ಒಮ್ಮೆಲೆ ಕಡಿಮೆಯಾಗತೊಡಗಿ ಮನಸ್ಸು ಸದಾ ಆನಂದದಿಂದಿರುತ್ತದೆ. ಅಲ್ಲದೆ ಈ ಗುರುವು ಭಾಗ್ಯವೃದ್ಧಿಕಾರಕವೂ ದೇಹಸುಖಕ್ಕೆ ಆವಶ್ಯಕವೂ ಆದಂಥ ಅನೇಕ ಘಟನೆಗಳಿಗೆ ಕಾರಕನಾಗಿದ್ದಾನೆ. ಆದರೆ ಮಂಗಳ ಗುರುಗಳಿಬ್ಬರೂ ಅಷ್ಟಮದಲ್ಲಿ ಒಂದೆಡೆಯಿರುವ ಕಾಲದಲ್ಲಿ, ಅಂದರೆ

**ನವೆಂಬರ್ ೨೬ ರಿಂದ ಡಿಸೆಂಬರ್ ೧೨ ರ ವರೆಗಿನ** ಅವಧಿಯಲ್ಲಿ ಆಹಾರ ವಿಹಾರದ ಬಗ್ಗೆ ಮತ್ತು ಆರೋಗ್ಯದ ಬಗ್ಗೆ ತುಸು ಎಚ್ಚರದಿಂದಿರಬೇಕು. ಶಕ್ಯವಿದ್ದ ಮಟ್ಟಿಗೆ ಈ ಕಾಲದಲ್ಲಿ ಸ್ವತಃ ವಾಹನವನ್ನು ನಡೆಯಿಸಬಾರದು. ಮಂಗಳನ ಸಂಪೂರ್ಣ ಅಂದರೆ ೧೦,೦೦೦ ಜಪ ಮಾಡಿದರೆ ಯಾವುದೇ ಪ್ರಕಾರದ ಅನಿಷ್ಟ ಪರಿಣಾಮವಾಗದು.

ಹೆಂಡತಿಯ ಆರೋಗ್ಯ ನವೆಂಬರ್ ೨೬ ರ ವರೆಗೆ ತುಸು ಕಿರಿಕಿರಿಯದಾಗಿರಬಹುದಾಗಿದೆಯಾದರೂ ಅನಂತರ ಮಾತ್ರ ಅದು ತುಂಬ ಉತ್ತಮಗೊಳ್ಳುವುದು. ವರ್ಷಾರಂಭದಲ್ಲಿ ರಾಶಿಸ್ವಾಮಿ ಗುರು ಮತ್ತು ಭಾರ್ಯೇಶ ಬುಧರ ಯುತಿಯಾಗಿರುವುದರಿಂದ ಉಭಯತರಲ್ಲಿ ಒಳ್ಳೆಯ ಪ್ರೇಮವಿರುವುದು. ಶನಿಯು ಮೂರನೆಯವನಾದ ನಂತರ ಎಲ್ಲ ವಿಷಯಗಳಲ್ಲೂ ಉತ್ತಮ ಮತ್ಯೆಕ್ಯವಿರುವುದು.

ಈ ವರ್ಷ ಈ ರಾಶಿಯ ಅವಿವಾಹಿತರ ವಿವಾಹವಾಗುವುದಿದ್ದಲ್ಲಿ ಅದಕ್ಕೆ ಬಾಸಿಂಗಬಲವಿದೆಯಾದರೂ ಎಂಟನೆಯ ಗುರುವಿರುವಾಗಿನಕಿಂತ, ಅಂದರೆ ಡಿಸೆಂಬರ್ ೧೧ರ ಮೊದಲಿಗಿಂತ ಅನಂತರವೇ ಹೆಚ್ಚು ಅನುಕೂಲವಿದೆ. ಒಂಬತ್ತನೆಯ ಗುರುವಿರುವಾಗಲಾದರೆ ಬಹು ದೊಡ್ಡ ಮನೆತನದೊಡನೆ ಸಂಬಂಧ ಬೆಳೆದುಬಂದು ಪೂರ್ವನಿಶ್ಚಿತ ಮುಹೂರ್ತದಲ್ಲಿಯೆ ಅತ್ಯಂತ ಸಂಭ್ರಮದಿಂದ ವಿವಾಹ ಜರುಗುವುದು. ವಧೂವರರು ರೂಪ ಗುಣಗಳೆರಡರಿಂದೂ ಅತ್ಯಂತ ಅನುರೂಪರಿರುವರು.

ಅದರಂತೆಯೆ, ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದಲ್ಲಿ ಅದಕ್ಕೆ ಮಾತ್ರ ಈ ವರ್ಷ ಒಂಬತ್ತನೆಯ ಗುರು ಬಂದ ನಂತರವೇ ಒಳ್ಳೆಯ ಬಾಸಿಂಗಬಲವಿದೆ. ಆಗ ಬಹು ಅಲ್ಪಾವಧಿಯಲ್ಲಿ ವಿವಾಹ ಒಳ್ಳೆಯ ಮನೆತನದೊಂದಿಗೆಯೆ ನಿಶ್ಚಿತಗೊಂಡು ವ್ಯವಸ್ಥಿತ ರೀತಿಯಲ್ಲಿ ಪೂರ್ತಿಗೊಳ್ಳುವುದು. ಆದರೆ ಡಿಸೆಂಬರ್ ೧೧ರ ಮೊದಲು, ಅಂದರೆ ಎಂಟನೆಯ ಗುರುವಿರುವಾಗ ವಿವಾಹ ಗೊತ್ತಾಗಿದ್ದರೆ ಮೊದಲು ಅನೇಕ ತೊಂದರೆಗಳೂ ಅನಿರೀಕ್ಷಿತ ಅಡೆತಡೆಗಳೂ ಬಂದು ಮನೋಭಂಗವಾಗಿ ನಂತರವೇ ವಿವಾಹವಾಗುವುದು. ಎಂಟನೆಯ ಗುರುವಿಗಿಂತ ಅವನು ಒಂಬತ್ತನೆಯವನಿರುವಾಗ ವಿವಾಹವಾದರೆ ಸೊಸೆ ಅಥವಾ ಅಳಿಯ ಹೆಚ್ಚು ಮನಕ್ಕೊಪ್ಪುವಂತಿರುವರು. ಮಕ್ಕಳೆಲ್ಲರ ಉತ್ಕರ್ಷಕ್ಕೆ ಸಹ ಒಂಬತ್ತನೆಯ ಗುರುವೇ ಹೆಚ್ಚು ಉತ್ತಮನು. ಆದರೆ ಫೆಬ್ರುವರಿ ೧೬ರ ನಂತರ ಕೇತುವು ಐದನೆಯವನಾದಂದಿನಿಂದ ಅವರಲ್ಲೊಬ್ಬೊಬ್ಬರೊಡನೆ ಅಷ್ಟೊಂದು ಕೂಡಿ ನಡೆಯಲಾರದಲ್ಲದೆ **ಅವರ ಕೃತಿಗಳು ಸಹ ನಿಮ್ಮ ಮನಸ್ಸಿನ ವಿರುದ್ಧವಾಗಿ** ಆಗಿರಬಹುದು.

ಉದ್ಯೋಗದಲ್ಲಿ ಸಹ ಈ ವರ್ಷ ದೇಹೇಶನೂ ಕರ್ಮೇಶನೂ ಆದ ಗುರುವು ಎಂಟನೆಯವನಾಗಿರುವ ವರೆಗೆ, ಅಂದರೆ ಡಿಸೆಂಬರ್ ೧೧ರ ವರೆಗಿನ ಕಾಲವು ವಿಶೇಷ ಹಿತಕರವೆನಿಸುವುದಿಲ್ಲ. ಆದರೆ ಅನಂತರ ಅವನು ಒಂಬತ್ತನೆಯವನಾದೊಡನೆಯೆ ಒಮ್ಮಿಂದೊಮ್ಮೆಲೆ ಉತ್ತೇಜನಕಾರಕ ಘಟನೆಗಳು ಒಂದರ ಹಿಂದೊಂದರಂತೆ ಜರುಗತೊಡಗುವವು ಮತ್ತು ದಿನ ದಿನಕ್ಕೆ ಭಾಗ್ಯೋತ್ಕರ್ಷವಾಗಲಾರಂಭಿಸುವುದು. ಶನಿಯು ಮೂರನೆಯವನಾಗಿ ಸಾಡೇಸಾತಿ ಮುಗಿದ ನಂತರ, ಅಂದರೆ ಮೇ ೧ರ ನಂತರವಂತೂ ಉತ್ಕರ್ಷ ಕಲ್ಪನಾತೀತವೆನಿಸುವಂತಾಗುವುದು. ಅದರಂತೆಯೆ ನೌಕರದಾರರಿಗೆ ಸಹ ಮಾರ್ಚ್ ೧ ರಿಂದ ಏಪ್ರಿಲ್ ೧೯ ಅಥವಾ ಜೂನ್ ೨೬ ರಿಂದ ಅಗಸ್ಟ ೧೪ರ ವರೆಗಿನ ಅವಧಿಯಲ್ಲಿ ಬಡತಿಯ ನಿಶ್ಚಿತ ಯೋಗವಿದೆ. ಬದಲಿಯಾದರೆ ಅದು ಸಹ ಎಲ್ಲ ದೃಷ್ಟಿಯಿಂದಲೂ ಯೋಗ್ಯವೂ ಸುಖಕರವೂ ಅದ ಸ್ಥಳಕ್ಕೆಯೆ. ಅದರಂತೆಯೆ, ವರ್ಷಾರಂಭದಲ್ಲಿ ಅಷ್ಟಮದಲ್ಲಿರುವ ಶುಕ್ರನು ಸ್ವಕ್ಷೇತ್ರಿಯಾಗಿರುವುದರಿಂದ ಅನೇಕರಿಗೆ ಲಾಟರಿ, ರೇಸ್ ಮುಂತಾದವುಗಳಲ್ಲಿ ಆಕಸ್ಮಿಕ ಧನ ಲಾಭವು ಸಾಕಷ್ಟು ದೊಡ್ಡ ಪ್ರಮಾಣದಲ್ಲೇ ಆಗುವ ಯೋಗವಿದೆ. ಇದಕ್ಕೆ ನವೆಂಬರ್ ೧ ರಿಂದ ಡಿಸೆಂಬರ್ ೩೧, ಫೆಬ್ರುವರಿ ೨೭ ರಿಂದ ಮಾರ್ಚ್ ೨೪, ಮೇ ೧೨ ರಿಂದ ಜೂನ್ ೫, ಜುಲೈ ೧ ರಿಂದ ೨೫ ಹಾಗು ಆಕ್ಟೋಬರ್ ೬ರ ನಂತರ ವರ್ಷಾಂತ್ಯದ ವರೆಗಿನ ಕಾಲದಲ್ಲಿ ಈ ಅನುಕೂಲ ಯೋಗ ವಿಶೇಷವಾಗಿದೆಯೆಂದು ತಿಳಿಯಬೇಕು. ಬುದ್ಧಿಜೀವಿಗಳಿಗಿಂತ ಶ್ರಮಜೀವಿ ಉದ್ಯೋಗಸ್ಥರಿಗೆಯೆ ಈ ವರ್ಷವು ಹೆಚ್ಚು ಉನ್ನತಿಕರವಿದೆ. ಜನೆವರಿ ೧೨ ರಿಂದ ಮಾರ್ಚ್ ೧, ಏಪ್ರಿಲ್ ೧೯ ರಿಂದ ಜೂನ್ ೧೬, ಜುಲೈ ೩ ರಿಂದ ಸಪ್ಟೆಂಬರ್ ೨೭ ರ ವರೆಗಿನ ಕಾಲವು ಲಾಭಕ್ಕೆ ವಿಶೇಷ ಅನುಕೂಲವಿದೆ. ಸಾಡೇಸಾತಿ ಮುಗಿದ ನಂತರ ದ್ರವ್ಯದ ಅಥವಾ ಅಮೂಲ್ಯ ವಸ್ತುಗಳ ಸಂಗ್ರಹ ಸಾಧ್ಯವಾಗುವುದು. ಅದರಂತೆಯೆ, ಮಿತ್ರರಲ್ಲಿ ಹಾಗು ಸಮಾಜದಲ್ಲಿ ನಿಮ್ಮ ವಿಷಯಕ್ಕೆ ಅಭಿಪ್ರಾಯ ಕಲುಷಿತವಾಗಿದ್ದರೂ ಅದು ಸಹ ತಂತಾನೆ ಇಲ್ಲವಾಗಿ ಪ್ರೇಮ ಮತ್ತು ಪ್ರತಿಷ್ಠೆ ಪುನಃ ಮೊದಲಿನಂತೆಯೆ ನೆಲೆಗೊಳ್ಳುವವು. ಒಂಬತ್ತನೆಯ ಗುರುವಿರುವಾಗ ಒಂದೆರಡು ಯಾತ್ರೆಗಳು ನಡೆಯಬಹುದು, ಮಾತ್ರವಲ್ಲದೆ ಇಷ್ಟದೇವತೆಯ ಪ್ರತಿಷ್ಠಾಪನೆ ಅಥವಾ ಆರಾಧನೆ ನಡೆಯಬಹುದು, ಹಾಗು ಒಂದಿಲ್ಲೊಂದು ಬಗೆಯ ಶುಭ ಘಟನೆಗಳು **ಸಂಗಳಾದ ಮಂತ್ರಿ ಸಂಸ್ಥೆಯೊಡನೆಯೂ ಆಗುವವು.** ಸಾಹಸನೀತಿ ಮಾತ್ರ ಸಾಧ್ಯ. ಕೈಕೆಳಗಿನ ಸೇವಕರು ಅಥವಾ ಆಶ್ರಿತರು ಸಾಡೇಸಾತಿಯು ಮುಗಿದು ಹೋದ ನಂತರ ಅತ್ಯಂತ ನಮ್ರತೆಯಿಂದಲೂ ಕರ್ತವ್ಯನಿಷ್ಠೆಯಿಂದಲೂ ವರ್ತಿಸಲಾರಂಭಿಸುವರು. ಒಂಬತ್ತನೆಯ ಗುರುವಿರುವಾಗಲೇ ಮಹತ್ವದ ಸರಕಾರಿ ಕೆಲಸಗಳು ಅನುಕೂಲವಾಗುವವು. ಆದರೆ ಪ್ರತ್ಯಕ್ಷ ಭೆಟ್ಟಿಯ ಕೆಲಸಗಳಿಗೆ ಒಬ್ಬರೇ ಹೋಗುವುದಕ್ಕಿಂತ ಸಂಗಡ ಯಾರನ್ನಾದರೂ ಕರೆದುಕೊಂಡು ಹೋದಲ್ಲಿ ಆ ಕೆಲಸಗಳು ಅಲ್ಪಾಯಾಸದಿಂದ ಮನಸ್ಸಿನಂತೆಯೆ ಆಗುವವು. ಯಾರ ಜನ್ಮಕುಂಡಲಿಯಲ್ಲಿ ಗುರುವು ಪ್ರಥಮ ಅಥವಾ ಪಂಚಮ ಇಲ್ಲವೆ ನವಮ ಸ್ಥಾನದಲ್ಲಿರುವನೋ ಅಂಥವರಿಗೆ ವಿದೇಶಯಾತ್ರೆಯ ಅಥವಾ ತತ್ಸಮ ದೂರ ಪ್ರವಾಸದ ಯೋಗವಿದೆ. ಹನ್ನೊಂದನೆಯ ರಾಹುವಿರುವಾಗ, ಅಂದರೆ ಫೆಬ್ರುವರಿ ೧೭ ರ ನಂತರ ಪರಧರ್ಮಿಯರ ಮೂಲಕ ಹೆಚ್ಚು ಲಾಭವಾಗುವ ಯೋಗವಿದೆ.

ದಾವೆ, ಫಿರ್ಯಾದಿ ಅಥವಾ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಎಂಟನೆಯ ಗುರುವಿರುವ ವರೆಗೆ ಹಿನ್ನಡೆ ಅಥವಾ ಅಪಯಶವೆನಿಸಿದರೂ ಮುಂದೆ ಅವನು ಒಂಬತ್ತನೆಯವನಾದಂದಿನಿಂದ ಸಾಡೇಸಾತಿಯ ಮುಕ್ತಾಯದ ವರೆಗೆ, ಅಂದರೆ ಡಿಸೆಂಬರ್ ೧೧ ರಿಂದ ಮೇ ೧ ರ ವರೆಗಿನ ಅವಧಿಯಲ್ಲಿ ನಿರ್ಣಯ ನಿಮ್ಮ ಪರವಾಗಿಯೇ ದೊರೆತರೂ ಯಶಸ್ಸು ಪೊಳ್ಳೆನಿಸಬಹುದು; ಆದರೆ ಅನಂತರ ಮಾತ್ರ ಹತ್ತರಲ್ಲಿ ಎಂಟರಷ್ಟಾದರೂ ತುಂಬ ಯಶಸ್ವಿಯಾಗುವುದು ನಿಶ್ಚಿತ.

ಈ ರಾಶಿಯ ಗರ್ಭವತಿಯರು ಎಂಟನೆಯ ಗುರುವಿರುವ ವರೆಗೆ ಪ್ರಸೂತರಾದರೆ ಹೆರಿಗೆ ತುಸು ಹೆಚ್ಚು ಕಷ್ಟದ್ದೆನಿಸುವುದು; ಮುಂದೆ ಒಂಬತ್ತನೆಯ ಗುರು ಬಂದ ನಂತರ ಮಾತ್ರ ಸುಲಭಪ್ರಸೂತಿಯ ಯೋಗವಿದ್ದು ಜನಿಸುವ ಮಗು ಗಂಡೇ ಆಗಲಿ ಹೆಣ್ಣೇ ಆಗಿರಲಿ ತುಂಬ ಸಶಕ್ತವೂ ಅತ್ಯಂತ ಬುದ್ಧಿಶಾಲಿಯೂ ಆಗಿರುತ್ತದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎಂಟನೆಯ ಗುರುವಿರುವಾಗ, ಅಂದರೆ ಡಿಸೆಂಬರ್ ೧೧ ರ ವರೆಗಾದರೆ ಯಶಸ್ಸು ನಿಶ್ಚಿತವಲ್ಲ; ಒಂಬತ್ತನೆಯ ಗುರು ಬಂದ ನಂತರವಾದರೆ ಉತ್ತೀರ್ಣರಾಗುವುದು ನಿಶ್ಚಿತ; ಹಾಗು ಸಾಡೇಸಾತಿಯ ಮುಕ್ತಾಯದ ನಂತರ, ಅಂದರೆ ಮೇ ೧ ರ ನಂತರವಾದರೆ ಬರಿ ಉತ್ತೀರ್ಣರಾಗುವರಲ್ಲದೆ ಬಹುತರರಿಗೆ ಉಚ್ಚ ಶ್ರೇಣಿ ದೊರೆಯುವುದು ಸಹ ನಿಶ್ಚಿತವೆಂದು ತಿಳಿಯಬೇಕು.

॥ ಶುಭಂ ಭವತು ॥

## ಯಾವ ಜಾತಿ ?

ಅಂದು ಶಿರಹಟ್ಟಿಯಲ್ಲಿ ಕವಿ ಶ್ರೀ ಬೇಂದ್ರೆಯವರ ೬೦ನೆಯ ಹುಟ್ಟುಹಬ್ಬದ ಆಚರಣೆಯ ಸಂದರ್ಭ. ಅವರು ಭಾಷಣ ಪ್ರಾರಂಭಿಸುವ ಮುನ್ನ ನನ್ನ ಪರಿಚಿತ ರೈತನೊಬ್ಬ ಬಂದು ನನ್ನನ್ನು ಕೇಳಿದ : "ಯಪ್ಪಾ, ಇವರು ಯಾವ ಜಾತಿ?" ಪ್ರಶ್ನೆ ಅನಿರೀಕ್ಷಿತವಾಗಿತ್ತು. "ಬರೆ ಬರೆಕಿ ಜಾತಿ" ಎಂದೇನೋ ಹೇಳಿ ನಾನು ಅವನ ಪ್ರತಿಕ್ರಿಯೆಗಾಗಿ ಕಾಯದೆಯೆ ಅಲ್ಲಿಂದ ಕಾಲು ಕಿತ್ತೆ.

ಬೇಂದ್ರೆಯವರ ಭಾಷಣ ಮುಗಿದ ನಂತರ ಆ ರೈತ ನನ್ನನ್ನು ಹುಡುಕಿಕೊಂಡು ಬಂದ. ಅವನ ಕಣ್ಣುಗಳು ತೇವಗೊಂಡಿದ್ದುವು: "ನೀ ಹೇಳಿದ್ದು ಖರೇಯಪಾ. [illegible] ಬರೆಕಿ ಜಾತಿ! ತಲ್ಯಾಗಿನ ಕೂದಲ ನೆರತಿದ್ದರೂ ಮೀಸಿ ಮಾತ್ರ ಕಪ್ಪs ನೋಡು!"

—ಮಾ. ನಾ. ಮ.

# ಒಲವೆ ನಮ್ಮ ಬದುಕು

ಸಮಾಜ ತನ್ನ ಸಮಸ್ಯೆಗಳಿಗೆ ತಾನೇ ಉತ್ತರ ಕಂಡುಕೊಳ್ಳುತ್ತದೆ. ಹತ್ತಾರು ಧರ್ಮಗಳಿಗೆ ನೂರಾರು ಜಾತಿ-ಉಪಜಾತಿಗಳಿಗೆ ಜನ್ಮವಿತ್ತಿರುವ ನಾಡು ಭಾರತ. ಒಂದು ಧರ್ಮದವರು ಮತ್ತೊಂದು ಧರ್ಮದವರನ್ನು, ಒಂದು ಜಾತಿಯವರು ಇನ್ನೊಂದು ಜಾತಿಯವರನ್ನು ವಿವಾಹವಾಗುವುದು ಸಾಮಾಜಿಕ ಅಪರಾಧವೇ ಎಂಬಂತಹ ಭಾವನೆ ನಮ್ಮಲ್ಲಿ ಬಲಿತು ಬಂದಿದೆ. ಇಪ್ಪತ್ತನೆಯ ಶತಮಾನದ ಆಧುನಿಕತೆಯ ಗಾಳಿ ಇಲ್ಲೂ ಪರಿವರ್ತನೆಯನ್ನು ತರುತ್ತಿದೆಯೋ? ಅಂತರ್ಜಾತೀಯ, ಅಂತರ್ ಭಾಷಿಯ, ಅಂತರ್ರಾಜ್ಯ ವಿವಾಹವಾದ ಮೂವರು ಸೋದರಿಯರ ಅನುಭವಗಳನ್ನು ಇಲ್ಲಿ ನೋಡಿ .... ....

## ನನ್ನವರ ಕೈಹಿಡಿದ ನಾನು ಸುಖಿ

**—ವನಮಾಲಾ ಆಚಾರ್**

Marriages are made in heaven ಎಂದು ಹೇಳುತ್ತಾರೆ. ನಮ್ಮ ದಾಂಪತ್ಯ ಜೀವನದ ಮಾಧುರ್ಯವನ್ನು ಎಳೆಎಳೆಯಾಗಿ ಬಿಡಿಸಿ ನೋಡಿದರೆ ಈ ಮಾತು ಸತ್ಯ ಎಂದು ಅಡಿಗಡಿಗೆ ನೆನಪಿಗೆ ಬರುತ್ತದೆ.

ಮಾರ್ಚ್ ತಿಂಗಳಿಗೂ ನಮ್ಮ ಜೀವನದ ರಸನಿಮಿಷಗಳಿಗೂ ಅದೆಂತಹದೋ ಮಧುರ ಸಂಬಂಧವಿರಬೇಕು ಇಲ್ಲವೆ ದೈವದ ಸಂಕೇತವಿರಬೇಕು. I came, I saw, I conquered ಎನ್ನುವ ಹಾಗೆ ನನ್ನವರನ್ನು ನಾನು ಮೊದಲ ಸಲ ನೋಡಿದ್ದು ೧೯೫೯ರ ಮಾರ್ಚ್‌ನಲ್ಲಿ. ೬೦ರ ಮಾರ್ಚ್‌ನಲ್ಲಿ ನನ್ನ ಎಮ್ ಎ ಪರೀಕ್ಷೆಗಾಗಿ ಕೆಲವು ಪುಸ್ತಕಗಳು ಬೇಕಾದಾಗ ಧಾರವಾಡದಿಂದ ಬೆಳಗಾವಿಗೆ ಬಂದು ಅವರಿಂದ ತೆಗೆದುಕೊಂಡೆ. ಮರುವರುಷ ಮಾರ್ಚ್‌ನಲ್ಲಿ, ಪಾಪ, ಅವರನ್ನು ಮದುವೆಯಾದೆ!

ಮೊದಲ ಸಲ ಅವರನ್ನು ನೋಡಿದಾಗ ನಾನು ಧಾರವಾಡ ಆಕಾಶವಾಣಿಯಲ್ಲಿ 'ನಿಲಯದ ಕಲಾವಿದೆ' ಎಂದು ಕೆಲಸ ಮಾಡುತ್ತಿದ್ದೆ. ಆಗ ವಸಂತೋತ್ಸವಕ್ಕಾಗಿ ಐದಾರು ನಾಟಕಗಳ ರೆಕಾರ್ಡಿಂಗ್ ಮಾಡುತ್ತಿದ್ದೆವು. ಅದೇ ವೇಳೆ ಇವರದು, ಎಂದರೆ ಪ್ರೊ. ಹಯಗ್ರೀವಾಚಾರ್‌ದು ಒಂದು ಭಾಷಣದ ರೆಕಾರ್ಡಿಂಗ್ ಇತ್ತು. ಡಾ. ಎಚ್. ಕೆ. ರಂಗನಾಥ ಆಗ ನಾಟಕ ಶಾಖೆಯ ಮೇಲಧಿಕಾರಿ. ಒಂದು ಕಾಲಕ್ಕೆ ಡಾ. ರಂಗನಾಥ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಇವರು ರಂಗನಾಥರ ವಿದ್ಯಾರ್ಥಿಯಂತೆ. ಸರಿ, ವ್ಯಾವಹಾರಿಕವಾಗಿ ನಮ್ಮಿಬ್ಬರ ಪರಿಚಯ ಮಾಡಿಕೊಟ್ಟಾಗ ಒಬ್ಬರನ್ನೊಬ್ಬರು ಸೌಜನ್ಯದಿಂದ ಮಾತನಾಡಿಸಿದೆವು. ಆಮೇಲೆ ಒಂದು ನಾಟಕದ ರೆಕಾರ್ಡಿಂಗ್ ನಡೆದಾಗ ಇವರು ಸ್ಟುಡಿಯೋದಲ್ಲಿ ಬಂದು ಕುಳಿತಿದ್ದರು. ಇನ್ನೊಂದು ನಡೆದಾಗ ಹೊರಗೆ ಹೋಗಿದ್ದರು. ಆಗ ನಾನು,

"ಎಲ್ರೀ ರಂಗನಾಥ, ನಲವತ್ತು ವರುಷದ ಮುದುಕನಂತೆ ಕಾಣೋ ಅನ್ವರ್ಥನಾಮದ ತರುಣ ಆಚಾರ್ ಪ್ರೊಫೆಸರ್?" ಎಂದು ಕೇಳಿದ್ದೆ.

ಆಗ ಇವರು ಮಾರ್ಚ್ ತಿಂಗಳಿನ ಬೇಸಿಗೆಯಲ್ಲೂ ಹಾಕಿದ್ದ ಸ್ವೆಟರ್, ಡೊಗಳೆಯಾಗಿರುವ ಉಲನ್ ಪ್ಯಾಂಟು-ಕೋಟು ಕೆದರಿದ ಕೂದಲು, ತಂತಿಯ ತರಹದ ಕನ್ನಡಕ, ಸಿಡರಿಸಿದ ಮುಖ ನೋಡಿ ನನ್ನ ತುಂಟತನಕ್ಕೆ ತಡೆಯಾಗಲಿಲ್ಲ. ಆದರೂ ಆಗ ನೋಡಲು ತಮಾಷೆ ಎನಿಸುವಂತಿದ್ದರೂ-ಈಗಲ್ಲ, ಖಂಡಿತ! ಅಲ್ಲ. ಅವರ ಭಾಷಣದ ರೆಕಾರ್ಡಿಂಗ್ ಕೇಳಿದಾಗ ಅವರ ಧ್ವನಿಗೆ ಸ್ಪಷ್ಟವಾದ ಇಂಗ್ಲೀಷ್ ಶಬ್ದಗಳ ಉಚ್ಚಾರಣೆಗೆ, ಪಾಂಡಿತ್ಯಕ್ಕೆ ಆಗಲೇ ಮಾರುಹೋದೆ. ಹಾಗೆನ್ನುವದಕ್ಕಿಂತ ಅವರ ಬಗೆಗೆ ಗೌರವ ಬೆಳೆಸಿಕೊಂಡಿದ್ದೆ. ನಾನಿನ್ನೂ ಆಗ ಇಂಗ್ಲಿಷ್ ಎಮ್. ಎ. ಗೆ ಓದುತ್ತಿದ್ದುದರಿಂದ ವಿಷಯ ಒಂದೇ ಎಂದು ಬೇಗ ಪರಿಚಯವಾಗಿ ಅಂದು ಸಂಜೆ ಆಕಸ್ಮಿಕವಾಗಿ ಆಕಾಶವಾಣಿಯ ಭಾಷಣ ಶಾಖೆಯ ಇನ್ನೊಬ್ಬ ಅಧಿಕಾರಿ ಎಮ್. ಶಂಕರ ಅವರ ಜೊತೆ ನಮ್ಮ ಮನೆಗೆ ಪ್ರೊ. ಆಚಾರ್ ಬಂದರು. ಆಗ ಮಿಸೆಸ್. ಶಂಕರ ಊರಲ್ಲಿರಲಿಲ್ಲ. ನಾವು ಮೂವರೂ ದಾರಿಯಲ್ಲಿ ಮೊದಲು ಅವರ ಮನೆಗೆ ಹೋಗಿ ನಾನೇ ಕಾಫಿ ಮಾಡಿದ್ದನ್ನು ಕುಡಿದು ಆ ಮೇಲೆ ನಮ್ಮ ಮನೆಗೆ ಬಂದೆವು. ಕಾಫಿ ಬಟ್ಟಲನ್ನು ಕೈಗೆ ತೆಗೆದುಕೊಂಡು :



"ಕೋಮಲವಾದ ಕೈಗಳೆರಡು ಇಂತಹ ಅಮೃತ ಮಧುರವಾದ ಕಾಫಿ ಮಾಡಿಕೊಟ್ಟರೆ ಅದು ಸ್ವರ್ಗಸಮಾನವಲ್ಲದೆ ಇನ್ನೇನು?" ಎಂದು ಅರ್ಥ ಬರುವ ಅವರ ಇಂಗ್ಲಿಷ್ ನುಡಿ ನೆನೆಸಿಕೊಂಡರೆ ಆ ಮೆಚ್ಚುಗೆಯ ಮಾತು ಇಂದಿಗೂ ನನ್ನನ್ನು ಪುಲಕಿತಗೊಳಿಸುತ್ತದೆ. ಆಗ ಮಾತ್ರ, ಓಹೊ, ಈ ಶೆಲ್ಲಿ ಮಾದರಿಯ ಭಾವನಾಜೀವಿ ಹುಡುಗನನ್ನು ಮದುವೆಯಾಗುವ ಹುಡುಗಿ ಇಂತಹ ಮೆಚ್ಚುಗೆಯ ನುಡಿಗಳಿಂದಲೇ ಧನ್ಯಳಾಗುತ್ತಾಳೆ ಎಂದು ಮನಸ್ಸಿನಲ್ಲಿ ಅಂದುಕೊಂಡೆ. ನಾನೇ ಆ ಧನ್ಯಜೀವಿ ಆಗುವೆ ಎಂದು ಖಂಡಿತ ಕನಸು-ಮನಸಿನಲ್ಲೂ ನೆನೆಸಿರಲಿಲ್ಲ. ಅಂದಿನ ಪರಿಚಯ

ಅಲ್ಲಿಗೆ ಮುಗಿದು ಅವರನ್ನು ಮತ್ತೆ ನಾನು ನೆನೆಸಲಿಲ್ಲ; ಅವರೂ ನೆನೆಸಿರಲಾರರು. ನನ್ನನ್ನು ನೋಡಿದಾಗ ಅವರ ಮೊದಲ ಪ್ರತಿಕ್ರಿಯೆ ಏನು ಎಂದು ಅವರ ಬಾಯಿಂದಲೇ ಕೇಳಬೇಕು.

"ಚಂಚಲತೆ-ಚಪಲತೆಗಳು ಮೂರ್ತಿವೆತ್ತ ಈ ವಯ್ಯಾರಿ ಯಾರು ರಂಗ-ನಾಥ? ಅವಳ ಪರಿಚಯ ಮಾಡಿಸಿ ಎಂದು ಕೇಳಿ ನಾನೇ ತಾಪತ್ರಯ ತಂದುಕೊಂಡು ಬುಟ್ಟಿಗೆ ಬಿದ್ದೆ" ಎನ್ನುತ್ತಾರೆ.

ಸರಿ. ೧೯೬೦ ರಲ್ಲಿ ಬೆಳಗಾಂವಿಯ ಸಾಯನ್ಸ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಿಕೆಯಾಗಿ ಬಂದಾಗ ಎಂತಹರಿಗೂ ಚಳ್ಳಹಣ್ಣು ತಿನ್ನಿಸುವ ಬೆಳ-ಗಾಂವಿಯ ಹುಡುಗರನ್ನು ಹೇಗಪ್ಪಾ ಎದುರಿಸುವದು ಎಂದು ಅಳುಕುತ್ತಿದ್ದಾಗ ಇಂಗ್ಲಿಷ್ ಡಿಪಾರ್ಟಮೆಂಟಿನಲ್ಲಿ ಗುರುತಿನ ಪ್ರೊ. ಆಚಾರ್ ಇದ್ದದ್ದು ನನಗೆ ಸ್ವಲ್ಪ ಧೈರ್ಯ ಕೊಟ್ಟಿತ್ತು. ಆ ವರುಷ ನಾನು ಜ್ಯೂನಿಯರ್ ಬಿ.ಎ.ಗೆ ಹಾರ್ಡಿಯ ಕಾದಂಬರಿ ಕಲಿಸಿದೆ ಅವರು ಬಾಯ್‌ರನ್ನನ ಕಾವ್ಯ ಕಲಿಸಿದರು. ಒಂದೊಂದು ಸಲ ನಮ್ಮಿಬ್ಬರ ವಿಚಾರ ಸರಣಿ ಒಂದೇ ಆದಾಗ ವಿದ್ಯಾರ್ಥಿಗಳಿಗೆ ಆಶ್ಚರ್ಯವಾಗುತ್ತಿತ್ತಂತೆ!

ಮರುವರುಷ ಮಾರ್ಚ್‌ನಲ್ಲಿ ನಾವು ಮದುವೆಯಾದಾಗ ಎಲ್ಲರಿಗೂ ಆಶ್ಚರ್ಯ. ಏಕೆಂದರೆ ನನ್ನ ತಂದೆಯವರ ಮಾತಿನಲ್ಲಿ ಹೇಳುವದಾದರೆ ನಾನೊಬ್ಬ ಪುರುಷದ್ವೇಷಿಯಾದ 'ಸಿನಿಕಿ'ಯಾಗಿದ್ದೆ (Cynic). ನಮ್ಮ ವಿದ್ಯಾರ್ಥಿನಿಯರ ಭಾಷೆಯಲ್ಲಿ ಹೇಳುವದಾದರೆ ಹುಡುಗಿಯರನ್ನು ಕಟುವಾಗಿ ಟೀಕಿಸುವ ಪ್ರೊ. ಆಚಾರ್ ಸ್ತ್ರೀದ್ವೇಷಿ, ಕ್ಲಾಸಿನಲ್ಲಿ ಒಮ್ಮೆ ಪ್ರೊ. ಕುಲಕರ್ಣಿಯವರು–

"Who is a misoginist?" (ಸ್ತ್ರೀದ್ವೇಷಿ ಎಂದರೆ ಅರ್ಥವೇನು?") ಎಂದು ಕೇಳಿದಾಗ

"ಅದರ ಅರ್ಥ ಪ್ರೊ. ಆಚಾರ್, ಸ್ಯಾರ್" ಎಂದು ತಕ್ಷಣ ಹುಡುಗಿಯರು ಉತ್ತರ ಕೊಟ್ಟಿದ್ದರಂತೆ! ಅಂತಹ ಉತ್ತರ ಧ್ರುವ-ದಕ್ಷಿಣ ಧ್ರುವಗಳಾದ ನಾವು ಮದುವೆಯಾದಾಗ, ಒಬ್ಬರನ್ನೊಬ್ಬರು ಮೆಚ್ಚಿ ಪ್ರೇಮವಿವಾಹವಾದಾಗ ಎಲ್ಲರಿಗೂ ಆಶ್ಚರ್ಯವಾಗದೆ ಏನು?

ಅಂತರ್ಜಾತೀಯ ವಿವಾಹಕ್ಕೆ ಯಾರ ಗೌರವವೂ ಸಿಕ್ಕಲಾರದು. ಹಲವಾರು ಜನರ ಟೀಕೆ ಕುಹಕ-ನುಡಿಗಳಿಗೆ ಸಿಕ್ಕು ಬೀಳುತ್ತೇವೆ ಎಂದು ಮದುವೆಯ ಮೊದಲೇ ಊಹಿಸಿದ್ದೆವು. ಸಹೋ-ದ್ಯೋಗಿಗಳಲ್ಲಿ ನಮ್ಮನ್ನು ಗೌರವದಿಂದ ಕಂಡ ಒಬ್ಬಿಬ್ಬರು ಹಿರಿಯರನ್ನು ಬಿಟ್ಟರೆ. 'ಇಬ್ಬರೂ ಎಷ್ಟು ದಿನ ಒಟ್ಟಿಗೆ ಇರುತ್ತಾರೋ' ಎಂದು ಶಂಕಿಸಿದವರೇ ಹೆಚ್ಚು ಜನ. ಧಾರವಾಡದ ನನ್ನ ತವರುಮನೆಯ ಓಣಿಯಲ್ಲಿದ್ದ ಹೆಂಗಳೆಯರೂ ಮೂಗು ಮುರಿದರು. ಅನ್ಯಜಾತಿಯವರೆಂದು ಗೌರಿ ಪೂಜೆಯ ಅರಿಷಣ-ಕುಂಕುಮಕ್ಕೆ ಕೂಡ ನಮ್ಮನ್ನು ಕರೆಯುವಷ್ಟು ಸಹೃದಯತೆ ಇಲ್ಲದ ಅವರಿಗೆ ನಾನು ಬ್ರಾಹ್ಮಣನನ್ನು ವಿವಾಹವಾದದ್ದು . ಹಿಡಿಸದಿರುವದು ಸ್ವಾಭಾವಿಕವೇ. ಒಬ್ಬರಂತೂ. "ಈ ಬ್ರಾಹ್ಮಣನಿಗೇನು ಬಂದಿತ್ತೋ ಕೇಡು ಪರಜಾತಿಯಲ್ಲಿ ಮದುವೆ ಮಾಡಿಕೊಳ್ಳೋದಕ್ಕೆ" ಎಂದರಂತೆ. ಪಾಪ! ಮರುವರುಷವೇ ಅವರ ಒಬ್ಬ ಮಗಳು ಲಿಂಗಾಯತ ಹುಡುಗನೊಡನೆ ಮದುವೆಯಾದಾಗ ಅವರ ಮುಖ ನೋಡಬೇಕಿತ್ತು!

ಹೊರಗಿನವರ ಪ್ರತಿಕ್ರಿಯೆ ಈ ತರಹವಾದರೆ ನಮ್ಮ ನಮ್ಮ ತಂದೆ ತಾಯಿಯರ ಪ್ರತಿಕ್ರಿಯೆ ನಾವು ಊಹಿಸಿದಷ್ಟೇ ತೀವ್ರತಮವಾಗಿತ್ತು. ಎಮ್. ಎ. ವರೆಗೆ ಓದಿ ಪ್ರತಿಭಾಶಾಲಿನಿಯಾಗಿ ಮೆರೆಯಬೇಕಾಗಿದ್ದ ಮಗಳು ಸಾಮಾನ್ಯರಂತೆ ದಾಂಪತ್ಯದ ಬಂಧನಕ್ಕೆ ಮೋಹಗೊಂಡುದು ನನ್ನ ತಂದೆಗೆ ಹಿಡಿಸಿರಲಿಲ್ಲವೇನೊ. ಇವರ ಚಿಕ್ಕಮ್ಮನಂತೂ (ಎರಡನೆಯ ತಾಯಿ) ಮದುವೆಯ ಮೊದಲು ಅಷ್ಟೊಂದು ಸ್ನೇಹದಿಂದ ನನ್ನೊಡನೆ ಇದ್ದವರು :

"ನಮ್ಮ ಸ್ವಂತ ಮನೆಗೆ ನಾವು ಮೈಸೂರಿಗೆ ಹೋಗುತ್ತೇವೆ. ನೀವು ಅದು ಹೇಗೆ ಸಂಸಾರ ಮಾಡುತ್ತೀರೋ ನೋಡುವೆ" ಎಂದು ಹಟದಿಂದ ಮನೆಯಲ್ಲಿ ಒಂದು ಹರಕು ಚಾಪೆ ಬಿಟ್ಟು, ಎಲ್ಲ ಕಟ್ಟಿಕೊಂಡು ನಡೆದರು.

"ನಾನು ಬಡವಿ, ಆತ ಬಡವ;ಒಲವೆ ನಮ್ಮ ಬದುಕು"ಎಂಬ ನಾಂದಿಯೊಂದಿಗೆ ನಮ್ಮ ಸಂಸಾರ ಪ್ರಾರಂಭವಾಯಿತು.

ಈ ತರಹದ ತೊಡಕುಗಳು ಜೀವನದಲ್ಲಿ ಸ್ವಾಭಾವಿಕವೇ. ಅದರಲ್ಲೇನೂ ಹೆಚ್ಚಳವಿರಲಿಲ್ಲ, ಆದರೆ. ಅಂತರ್ಜಾತೀಯ ವಿವಾಹವಾದ ಕಾರಣ ನಮ್ಮ ಊಟ ಉಡಿಗೆ, ಅಭಿರುಚಿಗಳಲ್ಲಿಯ ಭಿನ್ನತೆ–ಇಷ್ಟೇ ಏಕೆ ನಾವು ಪೂಜಿಸುವ ದೇವರುಗಳಲ್ಲಿ ಕೂಡ ಏಕರೂಪತೆಯಿಲ್ಲದುದರಿಂದ ಒಂದು ತರಹದ ವಿರೋಧಾಭಾಸಗಳ ಕಂತೆ ಎನಿಸುತ್ತದೆ, ನಮ್ಮ ಜೀವನ. ಆದರೂ ಈ ಭಿನ್ನತೆಯೇ ಒಂದೊಂದು ಸನ್ನಿವೇಶವನ್ನು ರಸನಿಮಿಷವನ್ನಾಗಿಸಿ ಮರೆಯಲಾರದ ನೆನಪನ್ನು ಉಳಿಸಿ, ನಮ್ಮನ್ನು ಒಂದುಗೂಡಿಸಿವೆ. ಒಂದೊಂದು ರಸಗಳಿಗೆಯನ್ನೂ ಮೆಲುಕು ಹಾಕುವುದರಲ್ಲಿ ನನಗೆ ಅನಿರ್ವಚನೀಯ ಆನಂದ.

ಮದುವೆಯಾದ ಎರಡು ತಿಂಗಳಿಗೇ ನನ್ನವರಿಗೆ 'ಬುದ್ಧಿ'ಬರಬೇಕೆ? ವಿವಾಹವಾಗಿ ಹತ್ತು ದಿವಸವೂ ಹಾಯಾಗಿ ಕಳೆಯಲಿಲ್ಲ. ಹೊರೆಗಟ್ಟಲೆ ಪರೀಕ್ಷೆಯ ಪೇಪರುಗಳು ಬಂದವು. ಇಂಗ್ಲೀಷ್ ವಿಷಯ ಕಲಿಸುವ ಪತಿಯನ್ನು ಕೈಹಿಡಿದದ್ದು ತಪ್ಪಾಯಿತೇನೋ ಎನಿಸಿದ್ದು ಆಗಲೇ. "ವನಮಾಲಾ, please. ಇದೊಂದು ನೂರು ಪೇಪರು ತಿದ್ದಮ್ಮಾ" ಎಂದು ಮರದ ಮೇಲಿನ ಮಂಗ ಕೈ ಬಿಡುವಷ್ಟು ನಯವಾಗಿ ಅವರು ಹೇಳಿದಾಗ ಇಲ್ಲವೆನ್ನಲಾಗುತ್ತದೆಯೇ? ನಾನು ಪೇಪರು ತಿದ್ದುವಾಗ ಇವರು ಹಾಯಾಗಿ ಮಲಗಿ ಬಿಡುತ್ತಿದ್ದರು. ಪೇಪರಿನ ಕೆಲಸ ಮುಗಿದ ತಕ್ಷಣ ಮೂರು ವಾರ ಟಾಯಿಫಾಯ್ಡಿನಿಂದ ಮಲಗಿದರು. ಜ್ವರ ಬಿಟ್ಟ ತಕ್ಷಣ 'ಬುದ್ಧಿಯ ಹಲ್ಲು' ಒಂದು ವಿಪರೀತ ತೊಂದರೆಯಾಗಿ ಮತ್ತೆ ಹಾಸಿಗೆ ಹಿಡಿದಾಗ ನನ್ನ ತಮ್ಮ, ತಂಗಿಯರಿಗೆ ಕುಚೋದ್ಯವೇ. "ಭಾವಯ್ಯನಿಗೆ ಮದುವೆಯಾದ ಮೇಲಾದರೂ ಬುದ್ಧಿ ಬಂತು ನಮ್ಮಕ್ಕನಿಗೆ ಇನ್ನೂ ಬರಲಿಲ್ಲ" ಎನ್ನುತ್ತಿದ್ದರು.

ಊಟದ ವಿಷಯದಲ್ಲಿಯಂತೂ ಮೊದಲ ಕೆಲದಿನ ದೊಡ್ಡ ಸಮಸ್ಯೆಯೇ ಎದುರು ನಿಂತಿತ್ತು. ಅವರು ಮೈಸೂರಿನವರು-ಬರೀ ಅನ್ನ ತಿಳಿಸಾರಿನ ಭಕ್ತರು. ಉತ್ತರ ಕರ್ನಾಟಕದ ನನಗೆ ಚಪಾತಿ ಇಲ್ಲದಿದ್ದರೆ ನಡೆಯುತ್ತಿರಲಿಲ್ಲ. ಸಹಧರ್ಮಿಣಿಯ ಕರ್ತವ್ಯ ಮಾಡೋಣ ಎಂದುಕೊಂಡು ಕೆಲ ದಿನ ನಾನೂ ಅವರಂತೆಯೇ ಬರೀ ಅನ್ನ ಊಟ ಮಾಡಿ ನಿಭಾಯಿಸಲು ನೋಡಿದೆ ಕೈಕಾಲಿನ ಶಕ್ತಿ ಉಡುಗಿ ಕ್ಲಾಸಿನಲ್ಲಿ ಧ್ವನಿಯೇ ಏರುತ್ತಿರಲಿಲ್ಲ.

"Can't hear, madam" ಎಂದು ವಿದ್ಯಾರ್ಥಿಗಳ ಕೂಗು ಪ್ರಾರಂಭವಾಯಿತು. ಕೆಲ ಸಲ "ಮ್ಯಾಡಂ ಸ್ಯಾರ್ ಜೊತೆ ಜಗಳ ಏನಾದರೂ ಮಾಡಿ ಉಪವಾಸ ಬಂದಿದ್ದಾರೇನಪಾ. ಧ್ವನಿ ಕ್ಷೀಣ ಆಗೇದ" ಎಂದು ಮುಂದಿನ ಬೆಂಚಿನ ಹುಡುಗರು ನನಗೆ ಕೇಳುವ ಹಾಗೇ ಪಿಸುಗುಟ್ಟುತ್ತಿದ್ದರು. ಇನ್ನು ಹುಡುಗಿಯರೋ ಮದುವೆಯಾದ ಹೆಂಗಸಿನ ಮುಖ ಚಿಕ್ಕದಾದರೆ ಒಂದೇ ಕಾರಣ ಎಂದು ತಮ್ಮ ತಮ್ಮಲ್ಲಿ ಮುಖ ನೋಡಿಕೊಂಡು ತುಂಟತನದ ನಗು ನಗುತ್ತಿದ್ದರು. ಇದೆಲ್ಲ ನಾನು ಊಹಿಸಿದಾಗ ನಗು ಬರುತ್ತಿತ್ತು ಕೊನೆಗೆ ನನ್ನ ಪೇಚಾಟ ನೋಡಲಾರದೆ ನನ್ನವರೇ. "ಹೋಗಲಿ ಬಿಡು. ಚಪಾತಿಯನ್ನು ಮಾಡು-ನಾನೇ ತಿನ್ನಲು ಕಲಿಯುವೆ" ಎಂದರು. ಮೊದಮೊದಲು ಹೊಟ್ಟೆನೋವು ಬಂದು ಅವರು ಗೋಳಾಡಿದರು.ಈಗ ಹಾವೇರಿಯ ನ್ಯಾಯವಾಗಿ ಅವರು ಚಪಾತಿ ತಿನ್ನಲು ಕಲಿತಿದ್ದಾರೆ. ನಾನು ಅನ್ನವನ್ನೂ ಮೆಚ್ಚಲು ಕಲಿತೆ. ಕಾಫಿ-ಚಹಾಗಳ ವಿಷಯದಲ್ಲೂ ಹಾಗೆಯೇ. ಇಬ್ಬರಿಗೂ ಒಂದೇ common drink ಇರಲಿ ಎಂದು ಕೆಲ ದಿನ ಬರೀ ಕಾಫಿ. ಕೆಲ ದಿನ ಬರೀ ಚಹಾ ಕುಡಿದು ಸರಿಹೋಗದೆ ಈಗ ಬೆಳಗಿಗೆ ಅವರಿಗೆ ಮೊದಲ ಸಲ ಕಾಫಿ. ನನಗ ಚಹಾ ನಡೆಯುತ್ತದೆ.

ಇಡ್ಲಿ-ದೋಸೆ ಅವರಿಗೆ ತುಂಬಾ ಇಷ್ಟ ಆ ಪ್ರಿಯವಾದ ತಿಂಡಿ ಸಿಕ್ಕದೆ ಯಾಕಾದರೂ ಉತ್ತರ ಕರ್ನಾಟಕದ ಹೆಣ್ಣನ್ನು ಮದುವೆಯಾದೆನಪ್ಪಾ ಎಂದು ಅವರು ಹಳಹಳಿಸಬಾರದೆಂದು ನನಗೆ ಗೊತ್ತಿದ್ದ ಅಲ್ಪಸ್ವಲ್ಪ ಜ್ಞಾನ ಉಪಯೋಗಿಸಿ ಮೊದಲ ಸಲ ಇಡ್ಲಿ ಮಾಡಲು ಅಣಿಯಾಗಿದ್ದೆ. ಅವರಿಗೆ surprise ಕೊಡೋಣ ಎಂದುಕೊಂಡು ಅವರು ಮನೆಗೆ ಬರುವ ಮೊದಲೇ ಹಿಟ್ಟು ರುಬ್ಬಿಟ್ಟು ಅವರು ಏಳುವ ಮೊದಲೇ ಇಡ್ಲಿ ಪಾತ್ರೆಯಲ್ಲಿ ಹಿಟ್ಟು ಹಾಕಲು ನೋಡಿದೆ ತಕ್ಕ ಪ್ರಮಾಣಕ್ಕಿಂತ ಒಂದೂವರೆ ಪಟ್ಟು ನೀರು ಹೆಚ್ಚಾಗಿತ್ತು. ಪ್ರಥಮ ಗ್ರಾಸೇ ಮಕ್ಷಿಕಾ ಪಾತಃ ಎಂದಾಗಿ ಮೋರೆ ಪೆಚ್ಚಾಯ್ತು. ನನ್ನ ಪ್ರಯತ್ನವೆಲ್ಲ ವಿಫಲವಾಗಿ ಕೈ ಚೆಲ್ಲಿದಾಗ ಅವರು ಎದ್ದು ಬಂದರು. "ಹೋಗಲಿ ಬಿಡು. ಇದರಲ್ಲಿಯೇ ಇನ್ನಷ್ಟು ಹಿಟ್ಟು ಕೂಡಿಸಿ ದೋಸೆ ಮಾಡೋಣ" ಎಂದರು. ಎಷ್ಟೊಂದು ಹಿಟ್ಟು ಕೂಡಿಸಿದರೂ ದೋಸೆಯ ಹಿಟ್ಟಿನ ಹದಕ್ಕೂ ಬಾರದೆ ತಮಾಷೆಯಾಕಾರದ, ಭಾರತ ದೇಶದ ನಕಾಶೆಯಾಕಾರದ ದೋಸೆಯಾಗಿ ಅರ್ಧ ಹಿಟ್ಟನ್ನು ಕೆಲಸದ ಹುಡುಗಿಗೆ ಕೊಟ್ಟು ಕಳಿತೆ. ಆದರೂ ಹಟ ಬಿಡದೆ ಇಡ್ಲಿ ಮಾಡಲೇಬೇಕು ಎಂದು ಪಟ್ಟು ಹಿಡಿದು ಮತ್ತೂ ನಾಲ್ಕಾರು ಸಲ ಕೆಡಿಸಿ ಈಗ ಹೂವಿನಂತೆ ಹಗುರವಾಗಿ ಮಾಡಲು ಕಲಿತಿದ್ದೇನೆ. ಇಷ್ಟಪಟ್ಟು ಅವರು ಹೊಟ್ಟೆ ತುಂಬಾ ತಿಂದಾಗ ಸಾರ್ಥಕವೆನಿಸುತ್ತಿದೆ. ಅವರ ಕಡೆಯ ಬಿಸಿಬೇಳೆಯ ಹುಳಿಯನ್ನ, ಮಳಿಯೋಗರ ಗೊಜ್ಜು ಎಲ್ಲ ಹೀಗೆಯೇ

ಆದರೂ ಅವರ ಜೊತೆ ಸಂಸಾರ ಮಾಡುವದು ತುಂಬಾ ಹಗುರ. ಏಕೆಂದರೆ ಊಟದ ಕಡೆಗೆ ಗಮನವೇ ಇಲ್ಲದೆ ಪೇಪರೋದುತ್ತ ಇಲ್ಲವೇ ಯಾವದೋ ಪುಸ್ತಕ ಓದುತ್ತ ಊಟ

ಮುಗಿಸಿಬಿಡುತ್ತಾರೆ. ಅವರಿಗೆ ರುಚಿಯೇ ತಿಳಿಯುವದಿಲ್ಲ. ಎಷ್ಟೋ ಸಲ ಸಾರಿಗೆ ಉಪ್ಪು ಹಾಕುವದನ್ನು ಮರೆತಿದ್ದು ನಾನು ಊಟ ಮಾಡಿದಾಗಲೇ ಗೊತ್ತಾಗಬೇಕು. ಅದನ್ನು ನಾನು ಅವರ ಗಮನಕ್ಕೆ ತಂದಾಗ- "ಹೌದು. ಏನೋ ಕಡಿಮೆಯಾಗಿದೆ ಎನಿಸಿತ್ತು. ಏನು ಅಂತಾ ತಿಳೀಲಿಲ್ಲ' ಅನ್ನುತ್ತಾರೆ. ಇದನ್ನು ಒಂದೆರಡು ಸಲ ಕೇಳಿದ ನನ್ನ ತಮ್ಮ ತಾಯಿಗೆ ಹೇಳುತ್ತಿರುತ್ತಾನೆ: "ಅವ್ವ ವನಕ್ಕನಿಗೆ ಭಾವಯ್ಯ ಎಷ್ಟು ಹೆದರತಾರ ಅಂದ್ರ ಸಾರಿಗೆ ಉಪ್ಪು ಹಾಕದಿದ್ದರೂ ಹೇಳೋದಿಲ್ಲ ಚಹಾಕ್ಕ ಸಕ್ಕರಿ ಹಾಕದಿದ್ದರೂ ಹೇಳೋದಿಲ್ಲ. ಎಲ್ಲಿ ಲತ್ತೀಡಿ ತಗೋತಾಳೋ ಅಂತ!" ಎಂದೆಲ್ಲ ತಮಾಷೆ ಮಾಡುತ್ತಾನೆ. ಈ ವಿಷಯಕ್ಕಾಗಿ ಒಂದೊಂದು ಸಲ ಕೋಪವೂ ಬರುತ್ತದೆ. ಏಕೆಂದರೆ ಎಷ್ಟೇ ಚೆನ್ನಾಗಿ ಅಡಿಗೆ ಮಾಡಿದ್ದರೂ ಅದನ್ನು ಮೆಚ್ಚಿ ಹೊಗಳಿ ಊಟ ಮಾಡುವದೇ ಇಲ್ಲ. ನಾನು ತುಂಬಾ ಚೆನ್ನಾಗಿ ಅಡಿಗೆ ಮಾಡಿದಾಗ ತಪ್ಪದೆ ಯಾರಾದರೂ ಅವರ ಗೆಳೆಯರನ್ನು ಊಟಕ್ಕೆ ಕರೆಯುವೆ. ಅತಿಥಿಗಳು ಹೊಗಳಿದಾಗ ಇವರಿಗೂ ಊಟದೆಡೆ ಗಮನ ಬಂದು- "ಹೌದು- ಊಟ ತುಂಬಾ ಸೊಗಸಾಗಿತ್ರೀ." ಅನ್ನುತ್ತಾರೆ ಅಷ್ಟೇ. ನಮ್ಮ ಕಡೆಯ ಕಾಳಿನ ಪಲ್ಲೆ, ಪಚ್ಚಡಿಗಳನ್ನು ಬಡಿಸಿದಾಗ- "ಆ ಮೇಲೆ ತಗೊಳ್ಳೀನ್ರೀ" ಎಂದು ಬೇರೆ ತೆಗೆದು ಇಡುತ್ತಾರೆ. ನನಗೆ ಬೇಡ ಅದು ಹಿಡಿಸುವದಿಲ್ಲ ಎಂದು ಅವರು ಹೇಳುವ ರೀತಿ ಅದು. ಮೊದಮೊದಲು ಪೆದ್ದಿಯ ಹಾಗೆ "ಆಮೇಲೆ ತಗೊಳ್ತೀನಿ ಅಂದ್ರಲ್ಲಾ ತಗೊಳ್ಳಿ" ಎಂದು ಮತ್ತೆ ಕೊಡ ಹೋಗುತ್ತಿದ್ದೆ. ಈಗ ನಮ್ಮದೇವರ ಸತ್ಯ ನನಗೆ ಗೊತ್ತಾಗಿದೆ.

ಊಟದಲ್ಲಿ ಮಜ್ಜಿಗೆ, ಉಪ್ಪಿನಕಾಯಿ ಇಲ್ಲದೆ ಅವರಿಗೆ ನಡೆಯುವದಿಲ್ಲ. ನನಗೋ ಅದೇಕೋ ಎರಡನ್ನೂ ಕಂಡರೆ ದ್ವೇಷ. ಸ್ವಲ್ಪಾದರೂ ತಂಪು ಎಂದು ಮಜ್ಜಿಗೆ ಅನ್ನ ತಿನ್ನಲಿ ಎಂದು ತಮ್ಮ ತಟ್ಟೆಯ ಅನ್ನ ನನಗೆ ಹಾಕಿಬಿಡುತ್ತಾರೆ. ಅದರಂತೆಯೇ ನಾನು ಸಾರನ್ನು ಸ್ವಲ್ಪವೇ ಹಾಕಿಕೊಂಡು ಅನ್ನ ಗಟ್ಟಿಯಾಗಿ ಕಲಿಸಿಕೊಳ್ಳುವೆ ಎಂದು ತಮ್ಮಂತೆಯೇ ಸಾರನ್ನು ಸಿಕ್ಕಾಪಟ್ಟೆ ನನ್ನ ತಟ್ಟೆಗೆ ಸುರಿಯುತ್ತಾರೆ. ಅವರು ಅಷ್ಟೊಂದು ಒಲವಿನಿಂದ ಕೊಟ್ಟಾಗ ತಿನ್ನದೆ ಇರಲು ಮನಸ್ಸು ಬಾರದೆ ಗಟ್ಟಿಮನಸ್ಸು ಮಾಡಿ ಅವರು ಕೊಟ್ಟ ಮಜ್ಜಿಗೆ ಅನ್ನ ತಿನ್ನಲೇಬೇಕು ಅದನ್ನು ನೋಡಿ ಇವರ ಗೆಳೆಯ ಗೋಪಿನಾಥ "ಯಾಕೇರೀ ಮದುವೆ ಭೂಮ ಮರೀಬಾರದು ಅಂತಾ ಹೀಗೆ ಮಾಡ್ತೀರಾ?" ಎಂದು ತಮಾಷೆ ಮಾಡುತ್ತಾರೆ.

ಮದುವೆಯ ಮೊದಲು ಒಂದು ವರುಷ ಸಹೋದ್ಯೋಗಿಗಳಾಗಿದ್ದ ಕಾರಣ ಮದುವೆಯಾದ ಮೇಲೆಯೂ ಅವರು ನನಗೆ 'ರೀ' ಹಚ್ಚಿಯೇ ಮಾತನಾಡುತ್ತಾರೆ. ಅದರ ಒಂದು ಅನುಕೂಲವೆಂದರೆ ಅವರು ಎಷ್ಟೇ ಕೋಪದಿಂದ ಮಾತನಾಡಿದರೂ ಬಯ್ದ ಹಾಗೆಯೇ ಅನ್ನಿಸುವದಿಲ್ಲ. ಮೆಚ್ಚಿಗೆಯನ್ನೂ ಒರಟು ಮಾತಿನಲ್ಲೇ ಹೇಳುವ ಉತ್ತರ ಕರ್ನಾಟಕದ ನನಗೆ ಮೈಸೂರಿನ ಪತಿಯ ಕೋಪದ ಪರಾಕಾಷ್ಠೆಯ ನುಡಿಗಳೂ ತಮಾಷೆ ಎನ್ನಿಸುತ್ತವೆ. ಒಂದು ಸಲ ಮಾತ್ರ ನಾನೆಂದೂ ಮರೆಯದಷ್ಟು ಕೋಪಗೊಂಡು ಅವರು ಬಯ್ದರು. ಅದನ್ನು ಎಷ್ಟು ದಿನವಾದರೂ ಮರೆಯುವ ಹಾಗಿಲ್ಲ. ಅದು ನಡೆದದ್ದು ಹೀಗೆ: ಇವರಿಗೆ ಬಿಸಿ ಸಾರು, ಕಾಫಿ ಎಂದರೆ ಹಿಡಿಸದು. ಒಮ್ಮೆ ಹತ್ತೂವರೆಗೆ ಅವರು ಊಟಕ್ಕೆ ಕುಳಿತಾಗ ಎಂದಿನಂತೆ ಸಾರು ಆರಿಸಿ ಬಡಿಸದೆ ಅವಸರದಲ್ಲಿ ಮರೆತು ಹಾಗೆಯೇ ಒಲೆಯ ಮೇಲಿಂದ ತಂದು ಬಡಿಸಿದೆ. ಅವರಿಗೆ ಹನ್ನೊಂದರ ಕ್ಲಾಸಿತ್ತು. ಬಿಸಿ ಸಾರು ನೋಡಿ ಅಬ್ಬಾ ಎಂತಹ ಕಟು ಭಾಷೆ ಉಪಯೋಗಿಸಿ ಬಯ್ದರು ಅಂತ- "ವನಮಾಲಾ. ಎಂಥಾ ಪಾಪಿಷ್ಠೇರಿ ನೀವು" ಅನ್ನಬೇಕೆ? - ಸಾರ್ಥಕವಾಯಿತು ಮೈಸೂರಿನ ಗಂಡಿನ ಕೈ ಹಿಡಿದಿದ್ದು ಅಂದುಕೊಂಡೆ.

ನಮ್ಮ ಜೀವನ ಉಳಿದವರ ಜೀವನಕ್ಕಿಂತ ಬೇರೆಯಾಗಿರುವದಕ್ಕೆ ಕಾರಣವೂ ಇದೆ. ನಮ್ಮ ನಮ್ಮ ಸ್ವಭಾವಗಳ ವೈಪರೀತ್ಯ ಇದಕ್ಕೆ ಕಾರಣ. ಇವರು ಚಿಕ್ಕಂದಿನಲ್ಲಿ ಮೂರು ಜನ ಅಕ್ಕಂದಿರೊಡನೆ ಬೆಳೆದುಬಂದಿದ್ದಾರೆ ಸ್ವಂತ ತಾಯಿಯಿಲ್ಲದ ಕಾರಣ ಅಕ್ಕಂದಿರೊಡನೇ ಒಡನಾಟ ಹೆಚ್ಚು. ಅವರೊಡನೆ ಕವಡೆ, ಆಣೆಕಲ್ಲು ಆಡಿ ಬೆಳೆದವರವರು. ನಾನು ನನ್ನ ಇಬ್ಬರು ಅಣ್ಣಂದಿರೊಡನೆ ಗಂಡು ಮಗುವಿನಂತೆಯೇ ಗಂಡು ಹುಡುಗರ ಗೋಲಿಯಾಟ ಆಡಿ ಬೆಳೆದವಳು. ತಂದೆಯ ಮುದ್ದಿನ ಮಗಳೂ ಹೌದು. ಅವರೆಲ್ಲರ ಒಡನಾಟದಲ್ಲಿ ಬೆಳೆದರೂ ಗಂಡುಬೀರಿಯಾಗಿಲ್ಲ; ಅದೇ ಪುಣ್ಯ. ನನ್ನ ತಾಯಿ-ಗಂಡಿನ ಮನೋದಾರ್ಢ್ಯ ಇರಲಿ, ಆದರೆ ಗಂಡುಬೀರಿಯಾಗಬೇಡ- ಎಂದು ಆಗಾಗ ಪರ್ಯಾಯವಾಗಿ ಸೂಚಿಸಿದ್ದೇ ಕಾರಣ ಇರಬೇಕು ಅದಕ್ಕೆಂದೇ ಗಂಡಸಿನ ಮನೋಭಾವನೆಯ ನನಗೆ ಎಂತಹ ಪ್ರಸಂಗ ಬಂದರೂ ಎದುರಿಸುವ ಹುಚ್ಚು ಧೈರ್ಯ ಬಂದಿದೆ. ಆದರೂ ನನ್ನವರ ಒಂದೇ ಪುಣ್ಯ ಎಂದರೆ ಇಂತಹ ಮನೋಭಾವ ಇದ್ದರೂ ಮನೆಯಲ್ಲಿ ಅಡಿಗೆ ಮಾಡಿಕೊಂಡೇ ನವಕರಿ ಮಾಡಬೇಕು ಎನ್ನುವ ಆಸಕ್ತಿ ಇರುವದು. ಗಂಡಸಿನಂತೆ ನವಕರಿ ಮಾಡಬೇಕು, ಸಾಹಿತ್ಯಸೇವೆ ಸಲ್ಲಿಸಬೇಕು ಎನ್ನುವ ಆಸಕ್ತಿ ನನಗಿರುವಂತೆ ಅಕ್ಕಂದಿರ ಒಡನಾಟದ ಫಲವಾಗಿ ಅವರಿಗೆ ಹೆಣಿಕೆ. embroidery, ಆಣೆಕಲ್ಲು ಆಟಗಳೆಂದರೆ ಇಷ್ಟ. ಹೆಂಗರುಳಿನವರೂ ಸೂಕ್ಷ್ಮ ಮನಸ್ಸಿನವರೂ ಆದ ಕಾರಣ ಪರರ ದುಃಖವನ್ನು ಸ್ವಲ್ಪವೂ ಸಹಿಸದ ಧರ್ಮರಾಯನ ಮನೋವೃತ್ತಿಯನ್ನು ಬೆಳೆಸಿಕೊಂಡಿದ್ದಾರೆ. ಇರುವ ಹಣವನ್ನೆಲ್ಲ ಕೇಳಿದವರಿಗೆಲ್ಲ ಕೊಟ್ಟು ಬರಿಗೈಯಿಂದ ಇರುವದಕ್ಕೂ ಹಿಂಜರಿಯದ ದೊಡ್ಡ ಮನಸ್ಸು ಅವರದು.

ಅವರ ಹೆಂಗರುಳಿನ ಉದಾಹರಣೆ ಕೊಡಬೇಕೆಂದರೆ ಮಾತೆತ್ತಿದರೆ 'ಪಾಪ' ಎನ್ನುವ ಅವರ ನುಡಿ. 'ಪಾಪ! ಎನ್. ಸಿ. ಸಿ. ಆಫೀಸಿನವರು ಇಂದೇ ಹಣ ಕೊಟ್ಟರು ವನಮಾಲಾ ಎಂದು ಅವರು ಒಂದನೇ ತಾರೀಖು ಹಣ ತಂದು ನನ್ನ ಕೈಯಲ್ಲಿಟ್ಟಾಗ ನಕ್ಕುಬಿಟ್ಟೆ. ಬೆಕ್ಕು ಪಾಪ ಹಾಲು ಕುಡಿದಿದೆ ಅಂತಲೋ ಅಥವಾ ಪಾಪ ನಲ್ಲಿ ನೀರು ಇನ್ನೂ ಬರ್ತಾ ಇದೆ ಅಂತಲೋ ಅಂದಾಗ ನಗದೇ ಇರುವದು ಕಷ್ಟ.

ಇಂತಹ ಗಂಡನ ಜೊತೆ ಜಗಳ ಕಾಯುವದೂ ಕಷ್ಟ. ಒಂದೊಂದು ಸಲ ಯಾವುದೋ ಕಾರಣಕ್ಕಾಗಿ ಜಗಳ ಬಂದಾಗ ಮಾತು ಬಿಟ್ಟು ನಾನು ಮೌನವಾಗಿರೋಣ ಎಂದರೆ ಬಂದು ಮಾತನಾಡಿಸಿಯೇ ಬಿಡುತ್ತಾರೆ. ಒಂದೆರಡು ವಿಷಯಗಳಲ್ಲಿಯೇ ನಮಗೆ ಸದಾ ಭಿನ್ನಾಭಿಪ್ರಾಯ ಬರುವದು. - ಹೆಚ್ಚಾಗಿ ಮೀಸೆ- ಸಿಗರೇಟು ಎರಡರ ವಿಷಯ. ಮದುವೆಯ ಮೊದಲು "ಸಿಗರೇಟು ಸೇದಬೇಡಿ- ನನಗೆ ಹಿಡಿಸುವದಿಲ್ಲ" ಎನ್ನುತ್ತಿದ್ದೆ. ಆಗ "ನೀವಿಲ್ಲದೆ ಬೇಜಾರು, ಮದುವೆಯಾದ ನಂತರ ಖಂಡಿತ ಬಿಡ್ತೀನಿ ಆಯ್ತಾ ಮರಿ?" ಎಂದವರು ಹೇಳಿದಾಗ ನಿಜ ಎಂದೇ ನಂಬಿದ್ದೆ ಮದುವೆಯಾದ ಮೇಲೆಯೂ ಅವರೇನೂ ಸಿಗರೇಟು ಸೇದುವದನ್ನು ಬಿಟ್ಟಿಲ್ಲ ಎಂದು ಬೇರೆ ಹೇಳಬೇಕಾಗಿಲ್ಲ ಹಾಗೇಕೆ ಭಾಷೆಕೊಟ್ಟು, ಮೋಸಮಾಡಿದಿರಿ ಎಂದರೆ "ಅಂಥ ಸೊಗಸಾದ ಅಡಿಗೆ ಮಾಡಿ ಬಡಿಸಿ ನಿನ್ನ ಒಲವಿನಿಂದ ನನ್ನನ್ನು ತಣಿಸಿದಾಗ ಒಂದು ಸಿಗರೇಟಿನಿಂದ ಅದನ್ನ celebrate ಮಾಡಬೇಡವೆ?" ಎಂದವರು ಹೇಳಿದಾಗ

ಹೊಗಳಿಕೆಗೆ ಉಬ್ಬಿ ಮೈಮರೆಯದೆ ಇನ್ನೇನು ಮಾಡಲಿ?

ಅವರ ಮೀಸೆಯ ವಿಷಯವಂತೂ ತೀರಾ ಸ್ವಾರಸ್ಯವಾಗಿದೆ. ಅವರ ಜಾತಿಯಲ್ಲಿ ತೆಗೆಯದವರು ಮೀಸೆ ಇಟ್ಟುಕೊಳ್ಳಕೂಡದಂತೆ. ನನಗೋ ಮೀಸೆಯಿಲ್ಲದ ಅವರ ಮುಖ ಕಂಡರೆ ಹಿಡಿಸುವದಿಲ್ಲ. ಅವರನ್ನು ಕಣ್ಣೆತ್ತಿ ನೋಡಲೂ ಬೇಡ ಎನ್ನಿಸುತ್ತದೆ. ಇದು ಯಾವ Complex ಏನೋ ನಾ ಕಾಣೆ. ಅದಕ್ಕೆಂದೇ ನನಗೋಸ್ಕರ ತಮಗೆ ಹಿಡಿಸದೆ ಹೋದರೂ ಮೀಸೆಯಿಡುತ್ತಾರೆ. ವರುಷದಲ್ಲಿ ಎರಡು ಮೂರು ಸಲ ರಜೆಗೆ ಅವರ ತಂದೆ–ತಾಯಿಯವರನ್ನು ನೋಡಲು ಅವರೊಬ್ಬರೇ ಹೋಗುತ್ತಿದ್ದರು ಭಾರತದಲ್ಲಿದ್ದಾಗ. ಆಗ ನಡೆಯುತ್ತಿದ್ದ ತಮಾಷೆಯನ್ನು ಅತಿಶಯೋಕ್ತಿ ಮಾಡಿ ತುಂಬಾ ಸ್ವಾರಸ್ಯವಾಗಿ ಹೇಳುತ್ತಾರೆ: ಅರಸೀಕೆರೆಯವರೆಗೆ ಆಚಾರ್ ಮೀಸೆ ಹೊತ್ತ ಗಂಡಸು. ನಂತರ ಟ್ರೇನಿನಲ್ಲಿ ಕಕ್ಕಸಿಗೆ ಹೋಗಿ ಮೀಸೆ ಬೋಳಿಸಿ ತನ್ನ ಸ್ಥಳದಲ್ಲಿ ಬಂದು ಕುಳಿತು ತಮ್ಮ ಸೂಟ್‌ಕೇಸ್ ತೆಗೆದಾಗ ಒಂದೆರಡು ಸಲ ಸಹಪ್ರಯಾಣಿಕರು ಸಂಶಯದ ದೃಷ್ಟಿಯಿಂದ ನೋಡಿದರಂತೆ. ನೋಡಿ, "ರೀ ಮಿಸ್ಟರ್ ಯಾರ್‍ರೀ ನೀವು ಬೇರೆಯವರ ಪೆಟ್ಟಿಗೆ ಮುಟ್ಟುತ್ತೀರಿ. ಆ ಮನುಷ್ಯ ಕಕ್ಕಸಿಗೆ ಹೋಗಿದ್ದಾರೆ" ಎಂದು ಗದರಿಸಿದರಂತೆ ನಾನೇ ಸ್ವಾಮಿ ಆ ಬಡಪ್ರಾಣಿ ಎಂದು ಅವರಿಗೆ ತಿಳಿಸಿ ಹೇಳುವದರಲ್ಲಿ ಅವರಿಗೆ ಸಾಕುಬೇಕಾಗಿ ಹೋಗಿತ್ತಂತೆ. ಮೈಸೂರಿನಿಂದ ಹೊರಡುವಾಗ ಎರಡು ದಿನ ಮೀಸೆ ಗಡ್ಡ ಬೋಳಿಸದೆ ಹೊರಟಾಗ ಹೀಗೇಕೆ ಎಂದು ಅವರ ತಂದೆ ತಾಯಿಗೂ ಆಶ್ಚರ್ಯವಾಗುತ್ತಿರಬೇಕು.

ಮೀಸೆ, ಸಿಗರೇಟುಗಳ ಹೊರತಾಗಿ ನಮಗೆ ಜಗಳ ಬರಬೇಕಾಗಿದ್ದು ಇನ್ನು ದೇವರ ವಿಷಯವಾಗಿ- 'ಆನೆ ಅಟ್ಟಿಸಿಕೊಂಡು ಬಂದರೂ ಆಲಯಕ್ಕೆ (ಶಿವಾಲಯಕ್ಕೆ) ಹೋಗುವದಿಲ್ಲ' ಎನ್ನುವ ಶ್ರೀವೈಷ್ಣವರವರು. ನನ್ನ ದೇವರು ಶಿವ ಪಾರ್ವತಿ; ಅವರ ದೇವರು ವಿಷ್ಣು. ಈ ವಿಷಯದಲ್ಲಂತೂ ನಿತ್ಯ ಜಗಳ ಆಗಬಹುದಿತ್ತೇನೋ-ಆದರೆ ಸಧ್ಯ ನಮ್ಮಿಬ್ಬರಿಗೂ ಹೊರನೋಟದ ಎಂದರೆ ಹೊರಗೆ ಕಾಣುವ ಪೂಜೆ-ಪುರಸ್ಕಾರಗಳ ವಿಷಯದಲ್ಲಿ ನಂಬಿಗೆಯಿಲ್ಲದ್ದು. ಆ ಒಂದು ವಿಷಯದಲ್ಲಿ ನಾವಿಬ್ಬರೂ ಸುಖಿ-ಏಕೆಂದರೆ ಇಬ್ಬರ ಧರ್ಮವೂ ಒಂದೇ. ನಮ್ಮ ಧರ್ಮ ಎಂದರೆ ಮನಸಾ ಒಬ್ಬರನ್ನೂ ನಾವು ದ್ವೇಷಿಸುವದಿಲ್ಲ. ಒಬ್ಬರನ್ನೂ ನಿಂದಿಸುವದಿಲ್ಲ. ಒಬ್ಬರಿಗೆ ಕೇಡು ಬಯಸಿಲ್ಲ ಆದರೂ ಶ್ರೀವೈಷ್ಣವರಾಗಿ ಲಿಂಗಾಯತ ಹುಡುಗಿಯನ್ನು ಮದುವೆಯಾಗಿದ್ದ ಕಾರಣ ಅವರ ಗೆಳೆಯರು ಅವರನ್ನು "ಏನಯ್ಯಾ ಆನೆ ಬಾರದೇ ಇದ್ದರೂ ಆಲಯದ ಮೊರೆಹೊಕ್ಕೆಯಲ್ಲ" ಎಂದೋ, ಅಥವಾ "ಏನ್ರೀ ಆಚಾರ್ ಮಠ ಅವರೇ" ಎಂದೋ ಇಲ್ಲವೆ "ಲಿಂಗಯ್ಯಂಗಾರ್‍ರಿ ಆದಿರಲ್ರೀ" ಎಂದೋ ಹಾಸ್ಯ ಮಾಡುತ್ತಾರೆ.

ಈ ತೊಡಕನ್ನು ಕೂಡ ನಾವು ಎದುರಿಸಿದರೂ ಸಹ ಭಾಷೆಯ ತೊಡಕು ಇದ್ದದ್ದೇ. ರೇಡಿಯೋ ಸ್ಟೇಶನ್ನಿನಲ್ಲಿ ನಾನು ಕೆಲಸ ಮಾಡುತ್ತಿದ್ದಾಗ ಮೈಸೂರಿನ ಹಲವಾರು ಸಹೋದ್ಯೋಗಿಗಳಿಗೆ ತಮಾಷೆಮಾಡಿ ಸರಾಗವಾಗಿ ಮೈಸೂರು ಕನ್ನಡದಲ್ಲಿ ಮಾತನಾಡುವದನ್ನು ಕಲಿತಿದ್ದೆ. ಈಗ ಮದುವೆಯಾದ ಮೇಲೆ ಉತ್ತರ ಕರ್ನಾಟಕದ ಭಾಷೆಯಲ್ಲೇ ಮಾತನಾಡುತ್ತೇನೆ. ಅದಕ್ಕೆ ಅವರು, "ಮದುವೆಯ ಮೊದಲು ಮೈಸೂರು ಕನ್ನಡ ಮಾತನಾಡಿ ಮರುಳು ಮಾಡಿ ಬುಟ್ಟಿಗೆ ಹಾಕಿಕೊಂಡು ಈಗ ನಿನ್ನ ಒರಟು ಭಾಷೆ ಶುರು ಮಾಡಿದೆಯಲ್ಲೇ ಮೋಸಗಾರ್ತೀ" ಎಂದು ಕೆನ್ನೆ ಹಿಂಡುತ್ತಾರೆ.

ಮದುವೆಯಾದ ಕೆಲದಿನಗಳ ನಂತರ ಒಂದು ಸಲ ಪೆನ್ನು ಸರಿಯಾಗಿ ಬರೆಯಲಿಲ್ಲ ಅದನ್ನ ಕೊಡವಿ "ಹಾಳು ಪೆನ್ನು ಬರೀತಾ ಇಲ್ಲ" ಎಂದು ಗೊಣಗಿದೆ ಅದಕ್ಕೆ ಅವರು, "ಅದ್ಯಾಕೆ ಹಾಗೆ ಒದರತೀರಿ, ಇಂಕ್ ಇಲ್ಲವೇನೋ ನೋಡಿ" ಎಂದರು. ನನಗೆ ವಿಪರೀತ ಕೋಪ ಬಂತು. "ನಾನೇನು ಒದರೋದಕ್ಕೆ ಪ್ರಾಣಿ ಏನ್ರೀ? ಏನೂ ಮಾತೇ ಆಡಬಾರದ? " ಎಂದು ಧ್ವನಿ ಏರಿಸಿದಾಗ ಅವರೂ ತಬ್ಬಿಬ್ಬಾದರು. ಆ ಮೇಲೆ ನೆನಪಿಗೆ ಬಂತು, ಮೈಸೂರು ಕನ್ನಡದಲ್ಲಿ 'ಒದರು' ಎಂದರೆ 'ಕೊಡವು' ಎಂದರ್ಥ ಎಂದು! ಅವರಿಗೆ ಭಾಷೆಯ ಪ್ರಮಾದ ಹೇಳಿ ನಾನೂ ನಕ್ಕು ಬಿಟ್ಟೆ. ಇನ್ನೊಂದು ಸಲ ನನಗೂ ತರಲು ಹೇಳಿ ತಾವೂ ಬಾಳೆಹಣ್ಣು ತಂದಾಗ ಎರಡು ಡಜನ್ ಬಾಳೆ ಹಣ್ಣು ನೋಡಿ "ಇದೇನು ಉದ್ಯೋಗ ನಿಮ್ಮದು–ನನಗೂ ಏಕೆ ತರಲು ಹೇಳಿದಿರಿ? " ಎಂದು ನಾನು ಕೇಳಿದಾಗ ಅವರಿಗೆ ವಿಪರೀತ ಕೋಪ ಬಂತು. ಉದ್ಯೋಗ ಎಂದರೆ ಅವರ ಭಾಷೆಯ ಅರ್ಥವೇ ಬೇರೆಯಂತೆ!

ಈ ರೀತಿಯ ಭಾಷೆಯ ದ್ವಂದ್ವ ನಮ್ಮ ಮಗು ರಾಜೀವನ ಮೇಲೆ ಬಹಳ ಪರಿಣಾಮ ಮಾಡಿದೆ. ಅವನ ಮಾತು ಅರ್ಧ ಉತ್ತರ ಕರ್ನಾಟಕದ್ದು ಅರ್ಧ ಮೈಸೂರಿನದು ತಂದೆಯ ಪ್ರಭಾವವೇ ಹೆಚ್ಚು. ಆದರೂ ಕೆಲ ಶಬ್ದ ಅವನ ಬಾಯಲ್ಲಿ ಚೆಂದ. ನನಗೆ ಹೇಳುವಾಗ – ಚಿಗರೆ ಆಡು, ಮಂಗ, ಒಗೆ, ಹೊಡೆತ- ಎಂದರೆ ಅವರೊಡನೆ ಮಾತನಾಡುವಾಗ ಅವೇ ಶಬ್ದಗಳು– ಜಿಂಕೆ, ಮೇಕೆ, ಕೋತಿ, ಬಿಸಾಕು, ಏಟು ಆಗುತ್ತವೆ. ನನಗೆ ಹೇಳುವಾಗ 'ನನ್ನ ಗೆಳೆಯ ಚಿವುಟಿದ ಎನ್ನುತ್ತಾನೆ ಅವರ ಜೊತೆಗೆ – 'ನನ್ನ ಗೆಳೆಯ ಗಿಂಡಿದ' ಎನ್ನುತ್ತಾನೆ.

ನನ್ನವರು ಪ್ರೊಫೆಸರ್ ಎಂದಾಗ ಅವರು ಮರಗುಳಿಯಾಗಿರಬೇಕು ಎಂದು ನೀವಾಗಲೇ ಊಹಿಸಿರಬೇಕು. ಅವರ ಮರಗುಳಿತನವಂತೂ ಬೆಳಗಾಂವಿಯಲ್ಲಿ ಎಲ್ಲರಿಗೂ ಗೊತ್ತಿತ್ತು. ಕಾಲೇಜಿನಿಂದ ಮನೆಗೆ ಬಂದು ಆರೆಗಳಿಗೆ ಹಾಯಾಗಿದ್ದು ನಿತ್ಯದ ಅಡಿಗೆ ಮಾಡಿಕೊಂಡು ಮಕ್ಕಳಿಗೆ ಊಟ ಮಾಡಿಸಿ ಮಲಗಿಸಿ ಇನ್ನೇನು ನಾವಿಬ್ಬರೂ ಊಟ ಮಾಡಬೇಕು ಎನ್ನುವ ಹೊತ್ತಿಗೆ ಅತಿಥಿಗಳು ಬರುತ್ತಿದ್ದರು. ಆಗ ಇವರು "ವನಮಾಲಾ, ಇಂದು ಅವರನ್ನು ಊಟಕ್ಕೆ ಕರೆದಿದ್ದೆ. ಹೇಳೋದಕ್ಕೆ ಮರೆತೆ ನಿಮಗೆ. ಪರವಾಗಿಲ್ಲ. ಇದ್ದದ್ದನ್ನೇ ಬಡಿಸಿ" ಎಂದಾಗ ನಾನೇನು ಮಾಡಲಿ? ಮತ್ತೆ ಬುದ್ಧಿಯೋಡಿಸಿ ಸಮಯೋಚಿತವಾಗಿ ಒಂದೆರಡು ಚಟ್ನಿ, ಇನ್ನೊಂದು ಪಲ್ಯ, ಚಪಾತಿಗಳನ್ನು ಮಾಡಿ ಬಡಿಸುತ್ತಿದ್ದೆ. ಇನ್ನು ಕೆಲ ಸಲ ಅಡಿಗೆ ಮಾಡಿ, "ಏಳ್ರೀ ಊಟಕ್ಕೆ" ಎಂದು ನಾನು ಕರೆದಾಗ ಒಮ್ಮೆಲೆ ನೆನಪಾಗುತ್ತಿತ್ತು ಅವರಿಗೆ: "ಮರೆತಿದ್ದೆ ವನಮಾಲಾ ಇವೊತ್ತು ಕುಲಕರ್ಣಿಯವರ ಮಗನ ಹುಟ್ಟುಹಬ್ಬ- ಊಟಕ್ಕೆ ಹೇಳಿದ್ದರು. ಹೋಗೋಣ ಈಗ" ಎಂದಾಗ ಅಳಬೇಕೋ ನಗಬೇಕೋ ಗೊತ್ತಾಗುತ್ತಿರಲಿಲ್ಲ ಮಾಡಿದ ಅಡುಗೆಯಲ್ಲ ವ್ಯರ್ಥವಾಗುತ್ತಿತ್ತು. ಅದಕ್ಕೆಂದೇ ಈಚೀಚೆ ಯಾರು ಊಟಕ್ಕೆ ಹೇಳಿದರೂ ನನ್ನ ಹತ್ತಿರವೇ ಹೇಳುತ್ತಿದ್ದರು. ಮರೆವಿನಿಂದ ಒಂದೊಂದು ಸಲ ಬೇರೆ ಕ್ಲಾಸಿಗೆ ಹೋಗುತ್ತಿದ್ದರು. ಇಲ್ಲವೆ ಮಾಡಿದ ಪಾಠವನ್ನೇ ಮತ್ತೆ ಮಾಡುತ್ತಿದ್ದರಂತೆ. ಇವರನ್ನು ಕಂಡರೆ ವಿದ್ಯಾರ್ಥಿಗಳಿಗೂ ಅಳುಕು. ಅವರೂ ಸುಮ್ಮನಿರುತ್ತಿದ್ದರು. ಪಾಠ ಮುಗಿಸಿದಾಗ ಮೊದಲೊಮ್ಮೆ ಆ ಪಾಠ ಮುಗಿಸಿದ ನೆನಪು ಬಂದು, "Bloody fellows, why did you not tell me I say?" ಎಂದು ಹುಡುಗರನ್ನೇ ದಬಾಯಿಸಿದಾಗ ಅವರೇನು ಮಾಡಬೇಕು? ಇವರ ಮರೆವು ಎಷ್ಟು ಹೆಚ್ಚು ಎಂದರೆ ಮನೆಯಲ್ಲಿ ಹೆಂಡತಿ ಮಕ್ಕಳು ಇದ್ದಾರೆ ಎನ್ನುವದನ್ನೂ ಮರೆತು ಕಾಲೇಜಿನಲ್ಲೇ ಕೇರಂ ಆಡುತ್ತ ಕುಳಿತು ಬಿಡುತ್ತಿದ್ದರು. ಒಂದು ಸಲವಂತೂ ಮಾರ್ಕೆಟ್ಟಿನಿಂದ ತರಕಾರಿಯ ಚೀಲ ಒಡಿದುಕೊಂಡು ತಾವು ಮದುವೆಯಾಗುವ ಮೊದಲ ಒಬ್ಬರ ಮನೆಯಲ್ಲಿ ರೂಮ್ ಹಿಡಿದು ಬಾಡಿಗೆ ಇದ್ದರು- ಅಲ್ಲಿ ಹೋದರಂತೆ! ಮನೆಗೆ ಬಂದು ಹೇಳಿದಾಗ ನಗು ತಡೆಯಲಿಲ್ಲ. ಆ ಮನೆಯ land lady ಯ ಮಗಳು ಮದುವೆಯಾಗಿ ಹೋಗಿದ್ದ ವಿಷಯ ನನಗೆ ಗೊತ್ತಿಲ್ಲದಿದ್ದರೆ ಮನೆ ಎಷ್ಟು ದಿನ ಕುರುಕ್ಷೇತ್ರವಾಗುತ್ತಿತ್ತೋ!

ಮದುವೆಯಾಗಿ ಏಳೂವರೆ ವರುಷಗಳಾದರೂ ನಮ್ಮ ಪ್ರೇಮಕ್ಕೆ ಚ್ಯುತಿ ಬಂದಿಲ್ಲ ಇದಕ್ಕೆ ಕಾರಣ ಅವರೋ ನಾನೋ ಗೊತ್ತಿಲ್ಲ. ಬಹುಶಃ ಅವರೇ ಇರಬೇಕು. ಆದರಲ್ಲಿಯೂ ನಾವಿಬ್ಬರೂ ಒಬ್ಬರನ್ನೊಬ್ಬರು ಅಗಲಿದಾಗ ಅವರು ಬರೆಯುವ ಪತ್ರಗಳನ್ನು ಓದಿದರೆ ಅಂಥವರನ್ನು ಮದುವೆಯಾಗಲು ಹತ್ತು ಜನ್ಮದ ಪುಣ್ಯ ಪಡೆದು ಬಂದಿರಬೇಕು, ಎನ್ನಿಸುತ್ತದೆ. ಆ ಪತ್ರಗಳಲ್ಲಿ ಪ್ರೇಮದ ಹುಚ್ಚು ಹೊಳೆಯಿಲ್ಲ ಆದರೆ, ಪ್ರತಿಯೊಂದು ಶಬ್ದವೂ ನಿರ್ಮಲವಾದ, ಪವಿತ್ರವಾದ ಪ್ರೇಮದ ಮಾಧುರ್ಯವನ್ನು ಸೂಸುತ್ತವೆ. ಅಷ್ಟೊಂದು ಸುಂದರವಾಗಿ ರಸವತ್ತಾಗಿ ಇಂಗ್ಲೀಷಿನಲ್ಲಿ ಬರೆದ ಪತ್ರಗಳನ್ನು ಪರಿದೋಗೆಯಲು ಮನಸ್ಸೇ ಬರಲಾರದು. ನಾನೊಮ್ಮೆ ಆರು ವಾರ ಮೈಸೂರಿಗೆ Summer Institute ನ ಟ್ರೇನಿಂಗ್ ಸಲುವಾಗಿ ಹೋದಾಗ ಇವರು ನಲವತ್ತೈದು ಪತ್ರಗಳನ್ನು ಬರೆದರು. ಒಂದು ದಿನ ನಾಲ್ಕು ಪತ್ರ ಬಂದಾಗ ಸಹಾಧ್ಯಾಯಿಗಳು ತಮಾಷೆ ಮಾಡಿ, "ನಿಮ್ಮ ಗಂಡನಿಗೆ ಬೇರೆ ಕೆಲಸವೇ ಇಲ್ಲವೇನ್ರೀ ? " ಎಂದಾಗ ನಾಚಿ ಕೆಂಪಾಗಿದ್ದೆ.

ಯಾವುದೋ ಹುಚ್ಚು ಆಕರ್ಷಣೆಗೆ ಸಿಕ್ಕು ಮದುವೆಯಾದ ಅಂತರ್ಜಾತೀಯ ದಾಂಪತ್ಯವಲ್ಲ ನಮ್ಮದು. ಮದುವೆಯ ಮೊದಲೇ ಇಬ್ಬರೂ ಒಬ್ಬರೊಬ್ಬರು ಮನೆತನದ ಸಂಸ್ಕೃತಿಗಳನ್ನು ತೂಗಿ ನೋಡಿ ಮದುವೆಯಾದ ಕಾರಣದಿಂದಲೇ ಏನೋ ದಿನದಿನಕ್ಕ ನಮ್ಮಲ್ಲಿ ಸಾಮರಸ್ಯ ಹೆಚ್ಚಾಗುತ್ತಲೇ ಇದೆ. ಅದಕ್ಕೆ ಕಾರಣ ಮಕ್ಕಳೂ ಇರಬೇಕು. ನನಗೆ ಪ್ರಿಯವಾದ ಗಂಡು ಮಗು, ಅವರಿಗೆ ಮುದ್ದಿನ ಹೆಣ್ಣು ಮಗು, ಸುಖವೋ. ದುಃಖವೋ. ಒಟ್ಟಿಗೇ ಅನುಭವಿಸೋಣ ಎಂದು ಅವರಿಗೆ ಸ್ವಲ್ಪವೂ ಸ್ವಾತಂತ್ರ್ಯ ಕೊಡದೆ ಅವರ ನೆರಳಿನಂತೆ ಹಿಂಬಾಲಿಸಿ ಅರಿಯದ ರಾಜ್ಯ ಇಥಿಯೋಪಿಯಾಕ್ಕೆ ಬಂದಿದ್ದೇನೆ ಈಗ

ಅಂತೂ ಅದೆಷ್ಟೋ ವಿರೋಧಾಭಾಸಗಳಿದ್ದರೂ ನೂರರಲ್ಲಿ ಒಬ್ಬರಂತಿದ್ದ ನನ್ನವರ ಕೈ ಹಿಡಿದ ನಾನು ಸುಖಿ!

# ಜಾತಿಯ ಕಟ್ಟುನಿಟ್ಟುಗಳಿಲ್ಲ

## —ಎಸ್ತರ್ ಅನಂತಮೂರ್ತಿ

ನಾನು ಮದುವೆಯಾಗಿ ಒಂಭತ್ತು ವರುಷಗಳಾದುವು. ಹಾಸನದಲ್ಲಿ ಪಿ. ಯು. ಸಿ. ಓದುತ್ತಿದ್ದಾಗ ನನಗೆ ಅನಂತಮೂರ್ತಿಯವರ ಭೇಟಿಯಾಯಿತು. ಅವರು ಅಲ್ಲಿ ಇಂಗ್ಲಿಷಿನ ಉಪನ್ಯಾಸಕರಾಗಿದ್ದರು. ಅವರ ಕ್ಲಾಸುಗಳಿಗೆ ನಾವು ಹಾತೊರೆಯುತ್ತಿದ್ದೆವು.

ನಮ್ಮ ಮದುವೆ ತುಂಬ ತೊಂದರೆಗಳಿಂದಲೇ ಆಯಿತು. ಇಬ್ಬರದೂ ಬೇರೆ ಬೇರೆ ಜಾತಿ. ಆಚಾರ ವ್ಯವಹಾರ, ಊಟ, ಎಲ್ಲದರಲ್ಲೂ ತುಂಬಾ ವ್ಯತ್ಯಾಸವಿತ್ತು. ನಮ್ಮ ಮನೆಯವರಿಗೆ ನಾನು ಹೀಗೆ ಮದುವೆಯಾಗುವುದು ಸ್ವಲ್ಪವೂ ಇಷ್ಟವಿರಲಿಲ್ಲ. ಊರಿನವರೆಲ್ಲಾ ಬಂದು ಅವರನ್ನು ನನ್ನ ವಿಚಾರ ಕೇಳುತ್ತಿದ್ದರು. ಇದರಿಂದ ಅವರಿಗೆ ತುಂಬಾ ತೊಂದರೆಯೇ ಆಯಿತು. ಕಾಲೇಜಿನಲ್ಲಿ ನನ್ನ ಸಂಗಡ ಓದುತ್ತಿದ್ದ ಹುಡುಗರು ಗೋಡೆಯ ಮೇಲೆಲ್ಲಾ ನಮ್ಮಿಬ್ಬರ ಹೆಸರುಗಳನ್ನು ಜೊತೆಯಾಗಿ ಸೇರಿಸಿ ಬರೆಯುತ್ತಿದ್ದರು. ನನ್ನ ಮನೆಯವರು ನನ್ನನ್ನು ಬೆಂಗಳೂರಿಗೆ ಕಳುಹಿಸಿಬಿಟ್ಟರು. ಅಲ್ಲಿಯೂ ತೊಂದರೆ ತಪ್ಪಲಿಲ್ಲ. ನಾನು ಒಂದು ಮಿಶನ್ ಹಾಸ್ಟೆಲ್‌ನಲ್ಲಿದ್ದೆ. ವಾರ್ಡನ್ ತುಂಬಾ ಕಿರುಕುಳ ಕೊಡುತ್ತಿದ್ದರು. ನಾವಿಬ್ಬರೂ ಪತ್ರ ವ್ಯವಹಾರ ನಡೆಸುತ್ತಿದ್ದೇವೆಂದು ಮನೆಯವರಿಗೆ ಬರೆದರು. ನನ್ನ ಜೊತೆಯ ಹುಡುಗಿಯರು ನನ್ನ ಕಾಗದಗಳನ್ನು ಕದ್ದು ಓದುತ್ತಿದ್ದರು. ಒಟ್ಟಿನಲ್ಲಿ ನನ್ನ ಇರುವಿಕೆಯನ್ನೇ ಹಿಂಸೆಮಾಡಿಬಿಟ್ಟರು.

ಇತ್ತೀಚೆ ಅನಂತಮೂರ್ತಿಯವರ ತಂದೆ ತಾಯಿಗಳಿಗೂ ಈ ಮದುವೆ ಒಪ್ಪಿತವಿರಲಿಲ್ಲ. ತಡೆಹಾಕಲು ತುಂಬಾ ಪ್ರಯತ್ನ ಮಾಡಿದರು. ಆದರೆ ಇವರ ಮನಸ್ಸು ಬದಲಾಗಲಿಲ್ಲ. ಅಂತೂ ೫ ವರುಷ ಕಾದಾಡಿದ ನಂತರ ಮದುವೆಯಾಯಿತು. ನನ್ನ ತಾತ ಮುತ್ತಾತಂದಿರು ಬ್ರಾಹ್ಮಣರಾಗಿದ್ದರಿಂದ ನಮ್ಮ ಮನೆಯವರು ಕೊನೆಗೆ ಸರಿಯಾದರು. ಆದರೆ ಮಾವನ ಮನೆಯವರು ದೂರವಾದರು. ಅವರು ನಮ್ಮ ಮನೆಗೆ ಬರುತ್ತಿರಲಿಲ್ಲ. ನಾವು ಅಲ್ಲಿಗೆ ಹೋದರೂ ಮಾವ ಮಾತನಾಡಿಸುತ್ತಿರಲಿಲ್ಲ. ನಮ್ಮ ಮಗ ಶರತ್ ಹುಟ್ಟಿದ ಮೇಲೆ ಎಲ್ಲವನ್ನೂ ಮರೆತರು. ಈಗ ವರುಷ ವರುಷವೂ ಅಲ್ಲಿಗೆ ಹೋಗಿಬರುತ್ತೇನೆ. ಆದರೆ ನಮ್ಮ ಅತ್ತೆಯವರು ಮಾತ್ರ ಅಡಿಗೆ ಮನೆಗೆ ನನ್ನನ್ನು ಸೇರಿಸುವುದಿಲ್ಲ. ಆದರೆ ಮಕ್ಕಳಿಗೆ ಅಡ್ಡಿಮಾಡುವುದಿಲ್ಲ. ಪಾಪ, ಅವರು ಸಮಾಜಕ್ಕೆ ಹೆದರಿ ಹೀಗೆ ಮಾಡುತ್ತಾರೆಂದು ನನಗೆ ಗೊತ್ತಿದ್ದರಿಂದ ನನಗೆ ಇದರಿಂದ ನೋವಾಗುವುದಿಲ್ಲ.

ನಾವು ಮದುವೆಯಾದಾಗ ಇವರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದದೇ ನನ್ನನ್ನು ಮದುವೆಯಾದರು. ಆದರೆ ಮತಾಂತರದ ಪ್ರಶ್ನೆ ಬಹಳ ಮುಖ್ಯ ಎಂದು ನನಗೆ ಯಾವತ್ತೂ ಅನ್ನಿಸಿರಲಿಲ್ಲ. ಈಗ ವಿವಾಹವಾಗಿ ೯ ವರುಷಗಳಾಗಿವೆ. ಒಂದು ದಿನವಾದರೂ ನಾವು ಬೇರೆ ಬೇರೆ ಜಾತಿಯವರು ಎಂದು ನನಗೆ ಅನ್ನಿಸಿಲ್ಲ. ಊಟ, ವ್ಯವಹಾರಗಳಲ್ಲೂ ನಮ್ಮಿಬ್ಬರಲ್ಲಿ ಯಾವ ತೊಂದರೆಯೂ ಇಲ್ಲ. ಇಂಗ್ಲೆಂಡಿಗೆ ಹೋಗಿ ಬಂದಮೇಲಂತೂ ಈ ವಿಷಯದಲ್ಲಿ ಸ್ವಲ್ಪವೂ ತೊಂದರೆಯೇ ಇಲ್ಲ.

ನಮಗೆ ಈಗ ಎರಡು ಮಕ್ಕಳಿದ್ದಾರೆ; ಶರತ್ ಮತ್ತು ಅನುರಾಧ. ಅವರನ್ನು ತುಂಬಾ ಸ್ವತಂತ್ರರಾಗಿ ಬೆಳೆಸುತ್ತಿದ್ದೇವೆ. ಅವರನ್ನು ಯಾವುದೇ ಒಂದು ಜಾತಿಯ ಕಟ್ಟುನಿಟ್ಟುಗಳಿಗನುಸಾರವಾಗಿ ಬೆಳೆಸುತ್ತಿಲ್ಲ. ಸಮಾಜದ ಎಲ್ಲ ಮಕ್ಕಳ ಜೊತೆ ಬೆರೆತು ಬೆಳೆಯುತ್ತಿದ್ದಾರೆ. ಎಲ್ಲ ಹಬ್ಬಗಳನ್ನೂ ಮಕ್ಕಳಿಗಾಗಿ ಮನೆಯಲ್ಲಿ ಆಚರಿಸುತ್ತೇವೆ. ಶರತ್ ಬೇರೆ ಹುಡುಗರು ಮಾಡುವುದನ್ನು ನೋಡಿ ಪೂಜೆ ಇತ್ಯಾದಿಗಳನ್ನು ಮನೆಯಲ್ಲಿ ಆಗಾಗ ಮಾಡುತ್ತಿರುತ್ತಾನೆ. ನಾನು ಇದಕ್ಕೆ ಅಡ್ಡಿಮಾಡುವುದಿಲ್ಲ. ಅವರು ದೊಡ್ಡವರಾದ ಮೇಲೆ ಅವರಿಗೆ ಬೇಕಾದ ಧರ್ಮವನ್ನು ಅವರೇ ಯೋಚಿಸಿ ಅನುಸರಿಸಲಿ, ಎಂದು ನಾವು ಅವರಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದೇವೆ. ಇನ್ನು ಹೆಣ್ಣುಮಗಳ ಮದುವೆ ಹೇಗೆ ಮಾಡುವುದು ಎಂಬ ಯೋಜನೆ ಇನ್ನೂ ಹೊಳೆದಿಲ್ಲ. ಕಾಲ ತುಂಬ ಬದಲಾಗುತ್ತಿರುವುದರಿಂದ ಮುಂದಿನ ಯೋಚನೆಯನ್ನು ಈಗ ಸದ್ಯಕ್ಕೆ ಬಿಟ್ಟಿದ್ದೇವೆ. ಶರತ್‌ಗೆ ಪುಸ್ತಕಗಳೆಂದರೆ ತುಂಬ ಇಷ್ಟ. ತಂದೆ ಮಕ್ಕಳು ಕೂತು ಮಾತನಾಡುವುದನ್ನು ಕೇಳಲು ತುಂಬಾ ಚೆನ್ನಾಗಿರುತ್ತದೆ. ಹೆಚ್ಚು ವಿಷಯಗಳನ್ನು ತಂದೆಯಿಂದಲೇ ಕಲಿಯುತ್ತಿದ್ದಾರೆ. ನಮ್ಮಿಬ್ಬರಿಗೂ ನಾವು ಬೇರೆ ಬೇರೆ ಜಾತಿಯವರು ಎಂದು ಅನ್ನಿಸುವುದೇ ಇಲ್ಲ. ಇಬ್ಬರಿಗೂ ವಿರಸ ಇದ್ದದ್ದೇ ಆದರೆ ಅದಕ್ಕೆ ಕಾರಣವೇ ಬೇರೆ. ಸದಾ ಸ್ನೇಹಿತರ ಜೊತೆಯಲ್ಲೇ ಮಾತನಾಡುತ್ತಿರುತ್ತಾರೆಂದು, ಅಥವಾ ಯಾವಾಗಲೂ ಹೊರಗೆ ಇದ್ದು ಮನೆಗೆ ಹೊತ್ತಾಗಿ ಬರುತ್ತಾರೆಂದು, ಅಥವಾ ತುಂಬಾ ಸಿಗರೇಟ್ ಸೇದುತ್ತಾರೆಂಬ ಕಾರಣವೇ ಹೊರತು ಬೇರೇನೂ ಇರುವುದಿಲ್ಲ. ಆದರೂ ಒಬ್ಬ ಬರೆಹಗಾರನ ಜೊತೆಯಲ್ಲಿ ಜೀವನ ನಡೆಸುವುದು ಬಹಳ ಕಷ್ಟ. ಕಾಲದ ನಿಗದಿಯಿರುವುದಿಲ್ಲ. ಮಾತನಾಡುತ್ತ ಕುಳಿತರೆ ತಮ್ಮನ್ನು ತಾವೇ ಮರೆಯುತ್ತಾರೆ. ಹೀಗಾಗಿ ಹೊತ್ತೊತ್ತಿಗೆ ಆಗಬೇಕಾದ ಕಾರ್ಯಗಳು ಸರಿಯಾಗಿ ಆಗುವುದಿಲ್ಲ. ಎಲ್ಲ ಬುದ್ಧಿಜೀವಿಗಳ ಹಣೆಬರಹ ಇಷ್ಟೇ ಎಂದು ಕಾಣುತ್ತದೆ.

ನಾನು ಈ ಲೇಖನವನ್ನು ಬಹಳ ಒತ್ತಾಯಕ್ಕಾಗಿ ಬರೆದಿರುವೆ. ನನಗೆ ಹಿಂದೆ ಯಾವುದನ್ನೂ ಬರೆದು ಅಭ್ಯಾಸವಿಲ್ಲ. ಈ ಲೇಖನಕ್ಕಾಗಿ ಈ ವಿಷಯಗಳನ್ನೆಲ್ಲಾ ಜ್ಞಾಪಿಸಿಕೊಳ್ಳಬೇಕಾಯಿತು. ನನ್ನ ಜೀವನವನ್ನು ಕುರಿತ ವಿಷಯಗಳನ್ನು ನಾನು ಸಾಮಾನ್ಯವಾಗಿ ಯೋಚಿಸುವುದೇ ಇಲ್ಲ.



# ನಾವು 'ಸ್ಥಿತಪ್ರಜ್ಞ'ರು!

—ಶಾಂತಿ ಕೆ. ಶಹಾ

ತಂದೆ ತಾಯಿಗಳಿಗೆ ಒಬ್ಬಳೇ ಮಗಳು, ಆರು ಜನ ಸಹೋದರರಿಗೆ ಒಬ್ಬಳೇ ತಂಗಿಯಾದ ನಾನು ಚಿಕ್ಕಂದಿನಲ್ಲಿ ನನ್ನ ಬಾಲ್ಯವನ್ನೆಲ್ಲಾ ರಾಜಕುಮಾರಿಯಂತೆ ಕಳೆದೆ ನನ್ನ ತಂದೆ ತಾಯಿಗಳು ನನ್ನನ್ನು ಬಹಳ ಪ್ರೀತಿಯಿಂದ ಬೆಳೆಸಿದರೂ ಜೀವನದ ಸರ್ವತೋಮುಖ ವಿಚಾರಗಳ ಬಗ್ಗೆ ಸಾಕಷ್ಟು ತರಬೇತಿ ಕೊಟ್ಟರು. ಜ್ಞಾನಾರ್ಜನೆಯ ದಾಹ ಹುಟ್ಟಿಸಿ, ನಮ್ಮ ಜೀವನದ ಕಡಿವಾಣವನ್ನು ನಮ್ಮ ಹತೋಟಿಯಲ್ಲೇ ಇಟ್ಟುಕೊಂಡು. ಸರಿ ತಪ್ಪುಗಳ ವಿಚಾರ ಪರಿಶೀಲಿಸಿ ಒಂದು ಸಂಯಮ, ಸಹನೆಯಿಂದ ಜೀವನ ನಡೆಸುವುದಕ್ಕೆ ಮಾರ್ಗದರ್ಶನ ನೀಡಿದರು. ಅಂತಹ ಅಮೂಲ್ಯವಾದ ನನ್ನ ಜೀವನದ ಕಡಿವಾಣವನ್ನೇ ನಾನು ಇನ್ನೊಬ್ಬರ ಕೈಯಲ್ಲಿಟ್ಟು ಲಗ್ನವಾದೆ.

ನಮ್ಮ ವಿವಾಹ ಎಲ್ಲಾ ರೀತಿಯಿಂದಲೂ ಸಾಮೀನ್ಯಪೂರ್ಣವಾದುದು. ಇಬ್ಬರ ವಿಚಾರಸರಣಿ ಪೂರ್ವ-ಪಶ್ಚಿಮದಂತೆ, ರುಚಿಯೂ ಭಿನ್ನ, ಸ್ವಭಾವವೂ ಭಿನ್ನ. ಊಟ ತಿಂಡಿ, ಉಡಿಗೆ ತೊಡಿಗೆಯೂ ಬೇರೆ. ನನ್ನ ಆಶಾ ಜೀವನಕ್ಕೂ, ಅವರ ನಿರಾಶಾ ಜೀವನಕ್ಕೂ ಒಂದೇ ಬೆಸಗೆಯೆಂದರೆ ನಮ್ಮ ಮಗಳು "ಗೋಬಿ" (ಅವಳ ನಿಜವಾದ ಹೆಸರು ಅನುರಾಧಾ). ಅವರ ತರ್ಕವನ್ನೂ ನನ್ನ ಒಲುಮೆತನವನ್ನೂ ಬೆರೆಸಿ ತನ್ನದೇ ಆದ ಒಂದು ಸ್ವಭಾವವನ್ನು ಅವಳು ಬೆಳೆಸಿಕೊಂಡಿದ್ದಾಳೆ ಬೆಳದಿಂಗಳನ್ನು ನೋಡಿ ಸುಖಸ್ವಪ್ನಗಳನ್ನು ಕಾಣುವವಳು ನಾನು. ಅಂತಹ ರಾತ್ರಿಯಲ್ಲಿ ತತ್ತ್ವಜ್ಞಾನದ ವಿಚಾರದ ಬಗ್ಗೆ ಚಿಂತಿಸುವವರು ಅವರು. ಸೃಷ್ಟಿಯಲ್ಲಿ ಕಲೆಯನ್ನು ಕಾಣುವವಳು ನಾನು. ಸೃಷ್ಟಿಯಲ್ಲಿ ಸಮಸ್ಯೆಯನ್ನು ಕಾಣುವವರು ಅವರು. ಎಲ್ಲಾ ಕಲಿಯಬೇಕು. ನೋಡಬೇಕು. ಅನುಭವಿಸಬೇಕು ಅನ್ನುವವಳು ನಾನು. ಕೆಲವೇ ವಿಷಯವನ್ನು ಕಲಿತು ಅದರಲ್ಲಿ ಪಾಂಡಿತ್ಯ ಪಡೆಯಬೇಕೆನ್ನುವವರು ಅವರು. ಸಮಾಜದಲ್ಲಿದ್ದು ಅದರ ವಿವಿಧ ಕ್ಷೇತ್ರಗಳಲ್ಲಿ ವಿವಿಧ ಸಮಸ್ಯೆಗಳಿಗೆ ಉತ್ತರ ಕಂಡುಹಿಡಿಯಬೇಕೆನ್ನುವವಳು ನಾನು. ತನ್ನದೇ ಆದ ಒಂದು ಪ್ರಪಂಚವನ್ನು ನಿರ್ಮಿಸಿಕೊಂಡು ಅದರಲ್ಲೇ ತೇಲಿ ಮುಳುಗಬೇಕು ಎನ್ನುವವರು ಅವರು. ಒಮ್ಮೊಮ್ಮೆ ಅವರ ಶಾಂತ ಪ್ರವೃತ್ತಿ ನನ್ನ ನೆಮ್ಮದಿಯನ್ನು ಕಲಕಿದ್ದೂ ಉಂಟು. ಹೀಗೆ ನಮ್ಮ ವಿಚಾರಸರಣಿಗಳು ಭಿನ್ನವಾದರೂ ನಮ್ಮ ಜೀವನದ ಧ್ಯೇಯ ಒಂದೇ ಆಗಿರುವುದರಿಂದ ಹನ್ನೆರಡು ವರ್ಷಗಳು ಒಟ್ಟಿಗೆ ಜೀವಿಸಲು ಅನುಕೂಲವಾಗಿದೆ. ಈ ಸಮಾಜದಲ್ಲಿ ಹುಟ್ಟಿದ್ದಕ್ಕೆ ಸಮಾಜ ಸೇವೆ. ಪರೋಪಕಾರ. ಒಳ್ಳೆಯತನ ಕರ್ತವ್ಯನಿಷ್ಠೆ, ಪ್ರಾಮಾಣಿಕತನ, ನ್ಯಾಯ, ಸತ್ಯ, ಧರ್ಮದಿಂದ ಬಾಳಬೇಕೆಂಬುದು. ಇದುವರೆಗೂ ದೇವರ ಕೃಪೆಯಿಂದ ಹಾಗೆ ಬಾಳುತ್ತಿದ್ದೇವೆ.



ನಾನು ನಮ್ಮ ಯಜಮಾನರ ಕೈಗೆ ಸಿಕ್ಕಿಹಾಕಿಕೊಂಡಿದ್ದು ನಾನು ಎಂ.ಎ. ಓದುತ್ತಿದ್ದಾಗ. ಅದೇ ಹೊಸದಾಗಿ ಇಂಗ್ಲೆಂಡ್‌ನಿಂದ ಬಂದಿದ್ದ ಅವರು ಎಲ್ಲ ವಿಧದಲ್ಲೂ ತತ್ತ್ವಜ್ಞಾನಿ ಆಗಿ ಬಂದಿದ್ದರು. ಅವರು ಬರ್ಟ್ರೆಂಡ್ ರಸೆಲ್, ಜಿ. ಇ. ಮೂರ್, ಸಿ. ಡಿ. ಬ್ರಾಡ್ ಮತ್ತು ವಿಟೆಂಗ್‌ಸ್ಟೀನ್ ಅವರ ವಿದ್ಯಾರ್ಥಿ. ಆದರೆ ಸ್ವಭಾವದಲ್ಲಿ ಪಕ್ಕಾ ಭಾರತೀಯ. ಅವರ ಈ ಎಲ್ಲಾ ಗುರುಗಳ Eccentricities ಇವರಿಗೆ ಪೂರ್ಣವಾಗಿ ಬಂದಿದೆ ನಾನು ಕೆಲವು ಆದರ್ಶಗಳನ್ನು ಇಟ್ಟುಕೊಂಡಿದ್ದ ವಿದ್ಯಾರ್ಥಿನಿ. ನಾನು ಮನಸ್ಸಿನಲ್ಲಿ ಯೋಚಿಸಿದ್ದ, ಸ್ವಪ್ನ ಕಂಡಿದ್ದ ಜೀವನದ ಆದರ್ಶಗಳೆಲ್ಲವೂ ಇವರಲ್ಲಿದ್ದುವು. ಮೇಲೆ ಸಾಧು ಪ್ರಾಣಿ ಎಂದುಕೊಂಡಿದ್ದೆ (ಈಗಿಲ್ಲ) ! ನಮ್ಮ ಅಣ್ಣನವರ ಮೂಲಕ ಈ ಲಗ್ನ ಗೊತ್ತಾಯಿತು. ೧೯೫೨ರ ನೇ ಜೂನ್ ತಿಂಗಳು ವಿವಾಹವಾಯಿತು. ನಮ್ಮ ಅತ್ತೆಮನೆಯವರು ಬಹಳ ಒಳ್ಳೆಯ ಜನ ನನಗೆ ಯಾವ ತರಹದ ಸಮಸ್ಯೆಗಳೂ ಬಂದಿಲ್ಲ. ಶ್ರೀಮಂತರು ಸುಸಂಸ್ಕೃತರು ಮತ್ತು ದಯಾಳುಗಳು. ನಮ್ಮ ತವರು ಮನೆಯವರೂ ಇದೇ ರೀತಿ ಇರುವುದರಿಂದ ಈ ಲಗ್ನದಿಂದಾಗಿ ನಮ್ಮ ನಮ್ಮಲ್ಲಿ ಯಾವ ಸಮಸ್ಯೆಯೂ ಹುಟ್ಟಲಿಲ್ಲ ಆದರೆ ಮುಖ್ಯವಾಗಿ ಇವರ ಸ್ವಭಾವವೇ ನನಗೆ ದೊಡ್ಡ ಸಮಸ್ಯೆ!

ಮೊದಲ ಸಲ ನಾನು ಅತ್ತೆಯ ಮನೆಗೆ ಹೋದಾಗ ಅವರ ಮನೆಯ ಜನಸಂಖ್ಯೆ ನೋಡಿ ಹೆದರಿದೆ. ಮಕ್ಕಳ ಗಲಾಟೆ, ಹೆಂಗಸರ ಗುಜುಗುಜು ನೋಡಿ ಅವಿಭಕ್ತ ಕುಟುಂಬದ ಪೂರ್ಣ ಪರಿಚಯ ಸಿಕ್ಕಿತು. ಮೊದಲು ಗಂಡಸರ ಊಟ. ನಂತರ ಗಂಡಸರ ಊಟ. ಹೆಂಗಸರ ಊಟದ ಸರದಿ ಬರುವ ಹೊತ್ತಿಗೆ ನಾನು ಮೂರ್ಛೆ ಹೋಗಿದ್ದೆ. ದಯಾಳುಗಳಾದ ಅವರು ನನಗೆ ಅರ್ಥವಾಗದ ಗುಜರಾತಿಯಲ್ಲಿಯೇ ಏನೋ ಮಾತಾಡಿಕೊಂಡು ಮಾರನೆಯ ದಿನ ಮಕ್ಕಳ ಪಂಕ್ತಿಯಲ್ಲಿಯೇ ಕೂಡಿಸಿದ್ದರು. ಬೇರೆ ಸೊಸೆಯರು ಯಾರೂ ಹೆಚ್ಚು ಓದಿದವರಲ್ಲ ಆದುದರಿಂದ ನಾನು ಅವರ ಸಮಕ್ಕೇ ಬರಬೇಕಾಯಿತು. ನಾನೂ ಕಲಿತಿರುವುದನ್ನು ಮರೆತು ಅವರ ಜೊತೆ ಅನ್ಯೋನ್ಯವಾಗಿದ್ದೆ— ಈಗಲೂ ಇದ್ದೇನೆ ಏನೂ ತಿಳಿಯದವಳ ತರಹ ಅವರು ಹೇಳಿದ್ದನ್ನು ಕೇಳಿಕೊಂಡಿದ್ದೆ ಇರುವ ಒಂದು ತಿಂಗಳು ಯಾಕೆ ಅವರಿಗೆ ತೊಂದರೆ ಕೊಟ್ಟು ಅವರ ಮನಸ್ಸು ನೋಯಿಸುವುದು ಅಂತ ಅವರು ಹೇಳಿದ್ದನ್ನು ಕೇಳಿದರೆ ನನಗೆ ಸ್ವಲ್ಪ ತೊಂದರೆಯಾಗಬಹುದು ನಿಜ ಆದರೆ ಕೇಳದೆ ಇದ್ದರೆ, ನನ್ನ ಬಗ್ಗೆ ಅವರಿಗೆ ತಪ್ಪು ಕಲ್ಪನೆ ದ್ವೇಷ ಹುಟ್ಟಬಹುದು ಹುಟ್ಟಿದ ಮನೆಗೆ ಕೀರ್ತಿ ತರಬೇಕಾದರೆ ಹೋದ ಮನೆಯಲ್ಲಿ ಒಳ್ಳೇ ರೀತಿಯಿಂದ ನಡೆದುಕೊಳ್ಳಬೇಕು. ನಾನು ಅವರ ಮನೆಯ ರೀತಿ ನೀತಿಗಳಿಗೆ ಹೊಂದಿಕೊಂಡೆ ದೊಡ್ಡವರಲ್ಲಿ ಗೌರವ, ಚಿಕ್ಕವರಲ್ಲಿ ಪ್ರೀತಿ, ಹೆಂಗಸರಿಗೆ ಮನೆಯ ಕೆಲಸದಲ್ಲಿ ಸಹಾಯ ಮಾಡಿ, ಇದರಿಂದ "ಬಡೇ ಖಾನ್‌ದಾನ್ ಘರ್‌ಕಾ ಲಡಕಿ, ಅಚ್ಚಿ ಹೈ" ಅಂತ ಅನ್ನಿಸಿಕೊಂಡೆ. ಇದು ನಾನು ಬೆಳೆದ ಮನೆಯ ವಾತಾವರಣದ ಪ್ರಭಾವ. "Love is expressed best in self-sacrifice" (ಸ್ವಾರ್ಥತ್ಯಾಗದಲ್ಲಿಯ ಪ್ರೇಮ ಚೆನ್ನಾಗಿ ವ್ಯಕ್ತಗೊಳ್ಳುತ್ತದೆ) ಅನ್ನೋ ಮತದವಳು ನಾನು.

ಮೊದಲು ನನಗೆ ಸ್ವಲ್ಪ ತೊಂದರೆ

ಯಾಗಿದ್ದು ಊಟ ಅವರ ಅಡಿಗೆಯಲ್ಲಿ ಸ್ವಲ್ಪ ಸಿಹಿ ಹೆಚ್ಚು, ಎಣ್ಣೆ ಹೆಚ್ಚು. ನಮ್ಮಲ್ಲಿ ಹುಳಿ, ಖಾರ, ತೆಂಗಿನಕಾಯಿ ಹೆಚ್ಚು ಒಂದು ಉಪ್ಪಿನಕಾಯಿ ಬಾಟ್ಲಿ ತಂದು ಕೆಲವು ದಿನಗಳು ಬರೀ ಮೊಸರನ್ನದಲ್ಲೇ ಕಾಲ ಕಳೆದೆ. ನಮ್ಮತ್ತೆ ಮನೆಯವರು ಹೊಸದಾಗಿ ಲಗ್ನವಾದ ನಾನು ನಾಚಿ ಹೀಗೆ ಮಾಡುತ್ತೇನೆ ಅಂದುಕೊಂಡರು ಆದರೆ ನಿಜವಾದ ಸಂಗತಿ ಅಂದರೆ ನನಗೆ ಅವರ ಅಡಿಗೆ ಸೇರುತ್ತಿರಲಿಲ್ಲ ಈಗ ನಾನು ಗುಜರಾಥಿ ಅಡಿಗೆ ಮಾಡುತ್ತೇನೆ ಗುಜರಾಥಿ ಮಾತಾಡುತ್ತೇನೆ. ನಮ್ಮತ್ತೇ ಮನೆಯಲ್ಲಿದ್ದಾಗ ಅವರಂತೆ ಗುಜರಾಥಿ ತರಹ ಸೀರೆ ಉಡುತ್ತೇನೆ. ನಮ್ಮ ಭಾವ ಅತ್ತಿಗೆ ನನ್ನನ್ನು ನಮ್ಮ ತಂದೆ-ತಾಯಿಯ ತರಹ ನೋಡಿಕೊಂಡರು ನಮ್ಮ ಅತ್ತೆಯವರು ತೀರಿ ಹೋಗಿ ಬಹಳ ವರ್ಷವಾಗಿತ್ತು ನಮ್ಮ ಮಾವನವರಿಗೆ ಖಾಯಿಲೆಯಾಗಿತ್ತು. ಅವರನ್ನು ಆಕ್ಸಿಜನ ಮೇಲೆ ಇಟ್ಟಿದ್ದರು. ಅವರು ಯಾವಾಗ ಪ್ರಾಣ ಬಿಡುತ್ತಾರೋ, ಎಲ್ಲಿ ನನ್ನ ಮೇಲೆ ಇವಳ ಕಾಲ್ಗುಣ ಎಷ್ಟು ಕೆಟ್ಟದ್ದು. ಮನೆಗೆ ಕಾಲಿಟ್ಟ ಕೂಡಲೇ ಮನೆ ಯಜಮಾನರು ಸತ್ತರು ಅನ್ನುವ ಆರೋಪಣೆ ಬರುತ್ತೋ ಅಂತ ಹೆದರಿದ್ದೆ. ದೇವರನ್ನ ಈ ತರಹ ಅಪವಾದ ಹೊರಿಸಬೇಡಪ್ಪ ಅಂತ ಬೇಡುತ್ತಿದ್ದೆ. ನನ್ನ ಅದೃಷ್ಟಕ್ಕೆ ಅವರ ಖಾಯಿಲೆ ವಾಸಿಯಾಯಿತು ಅವರು ನಂತರ ಎರಡು ವರ್ಷ ಬದುಕಿದ್ದರು.

ಮೊಟ್ಟ ಮೊದಲು ನನಗೆ ಆಶ್ಚರ್ಯವಾದದ್ದು, ಅವರ ಮನೆಯ ವಯಸ್ಸಾದ ಆಳು ಎಲ್ಲಾ ಸೊಸೆಯರಿಗೂ ಅಪ್ಪಣೆ ಮಾಡುತ್ತಿದ್ದುದು ಮನೆಯ ಮಕ್ಕಳೆಲ್ಲಾ "ರತ್ನ" (ಅವನ ಹೆಸರು) ಅಂದರೆ ಅವನ ಹೊಡೆತಕ್ಕೆ ಹೆದರುತ್ತಿದ್ದರು ನನಗೆ ಇದನ್ನು ನೋಡಿ ಕಸಿವಿಸಿಯಾಗುತ್ತಿತ್ತು ಆಳಿಗೆ ನಮ್ಮ ಮಾವನವರಿಗಿಂತ ಹೆಚ್ಚು ಮರ್ಯಾದೆ! ಅವನು ಹೇಳಿದ ಹಾಗೆ ಎಲ್ಲರೂ ಕೇಳುತ್ತಾರಲ್ಲ ಅಂತ. ನನ್ನ ನೋಡಿದ ಕೂಡಲೇ ಅವನು ಮರಾಠಿಯಲ್ಲಿ "ಕಾಯ್ ಗ ಪೋರ್ ಗೀ" (ಏನೇ ಹುಡುಗೀ) ಅಂತಲೇ ಕರೀತಿದ್ದ ನಮ್ಮ ಯಜಮಾನರಿಗೆ "ಕಸ ಆಹೆ ಶಾ, ದುಸರ ಕೋಣೀರಿ ತಸ ಎ ಳೀಲ್ ಕಾ?" (ಹೇಗಿದಾನೆ ಶಾ, ಬೇರೆ ಯಾರಾದರೂ ಅಂತಹವರು ಸಿಗ್ತಾರಾ?) ಅಂತಿದ್ದ. ನನಗೆ ಏನು ಉತ್ತರ ಕೊಡಬೇಕೋ ಗೊತ್ತಾಗುತ್ತಿರಲಿಲ್ಲ ಒಮ್ಮೆ ನಮ್ಮ ಓರಗಿತ್ತಿ (ಸಾಧಾರಣ ೫೫ ವರ್ಷದವರು) ನಮಗೆಲ್ಲರಿಗೂ ಇವತ್ತು ಅಡಿಗೆ ಚೆನ್ನಾಗಿರಲಿಲ್ಲ ಹೀಗೆ ಮಾಡಬೇಕಿತ್ತು ಅಂತ ಹೇಳಿಕೊಡುವಾಗ ರತ್ನ, ಏಕವಚನದಲ್ಲೇ ಅವರನ್ನು ನಮ್ಮೆದುರಿನಲ್ಲೇ "ನೀನು ಈ ಮನೆಗೆ ಬಂದಾಗ ಎಷ್ಟು ಚೆನ್ನಾಗಿ ಅಡಿಗೆ ಮಾಡ್ತಿದ್ದೆ!" ಎಂದು ಹಾಸ್ಯ ಮಾಡಿದ್ದ. ನಂತರ ನಮ್ಮೆಜಮಾನರನ್ನು ನಾನು ಕೇಳಿದೆ, "ಯಾವ ಮನೆಯಲ್ಲೂ ಆಳಿಗೆ ಇಷ್ಟು ಅಧಿಕಾರವಿರುವದನ್ನು ನಾನು ನೋಡಿಲ್ಲ." ಅಂತ. ಅವರು ನನಗೆ ವಿವರಿಸಿ ಹೇಳಿದರು: ಅವರ ತಾಯಿ ಸತ್ತಾಗ ಎಲ್ಲಾ ಚಿಕ್ಕ ಮಕ್ಕಳಂತೆ. ದೊಡ್ಡ ಭಾವನವರಿಗೆ ಆದೇ ಇನ್ನೂ ಲಗ್ನವಾಗಿತ್ತಂತೆ, ಸೊಸೆ ೧೪ ವರ್ಷದವಳು ಅವಳ ಮೇಲೆ ಇನ್ನುಳಿದ ೫ ಮಕ್ಕಳ ಹೊಣೆ. ಈಗಲೂ ನನಗೆ ಅವರ ಬಗ್ಗೆ ಬಹಳ ಗೌರವ, ಇಷ್ಟು ಸಣ್ಣ ವಯಸ್ಸಿಗೆ ೫ ಮಕ್ಕಳ ತಾಯಾಗಿ ಅವರನ್ನು ಸಾಕುವುದಕ್ಕೆ ಎಷ್ಟು ದೊಡ್ಡ ಹೃದಯವಿದ್ದಿರಬೇಕೂಂತ. ಆಗಿನಿಂದ ರತ್ನ ಇವರಿಗೆಲ್ಲಾ ತಂದೆ ತಾಯಿ ಎರಡೂ. ಆದರಿಂದ ರತ್ನ ಆಳಲ್ಲ – ಮನೆಯ ಹಿರಿಯ ಅಂತ. ಆ ಮೇಲೆ ರತ್ನನ ಬಗ್ಗೆ ನನಗೂ ಬಹಳ ಅಭಿಮಾನ, ಗೌರವ ಮೂಡಿತು.

ಜೀವನ! ಆದರೂ ಈ ಭಿನ್ನತೆಯೇ ಒಂದೋದು ಸನ್ನಿವೇಶವನ್ನೂ ರಸನಿಮಿಷವನ್ನಾಗಿಸಿ ಮರೆಯಲಾರದೆ ನೆನಪನ್ನು ಉಳಿಸಿ ನಮ್ಮನ್ನು ಒಂದುಗೂಡಿಸಿವೆ. ಒಂದೊಂದು ರಸ ಗಳಿಗೆಯನ್ನೂ ಮೆಲಕು ಹಾಕುವದರಲ್ಲಿ ನನಗೆ ಅನಿರ್ವಚನೀಯ ಆನಂದ.

ನನ್ನ ಉಡಿ ತುಂಬಿಸಿಕೊಂಡಾಗ ನಮ್ಮತ್ತೇಮನೆಯಲ್ಲಿ ಪೂಜೆ ಏರ್ಪಡಿಸಿದ್ದರು. ಅದು "ಗೋತ್ರಜ್" ವಿಧಿ. ಆಗ ತೆಂಗಿನಕಾಯಿಯ ಸಣ್ಣ ಹೋಳುಗಳನ್ನು ಕತ್ತರಿಸಿ ನನಗೆ ಒಂದೊಂದನ್ನೇ ಕೊಟ್ಟರು. ನಾನು ೪–೫ ಚೂರುಗಳನ್ನು ತಿಂದೆ, ಕಡೆಗೆ ಸಾಕಾದ ಮೇಲೆ 'ಸಾಕು ನನಗೆ ಇನ್ನು ತಿನ್ನಲಾಗುವುದಿಲ್ಲ" ಅಂದೆ. ಆಗ ನಮ್ಮ ಓರಗಿತ್ತಿ ಹೌಹಾರಿ "ಅಯ್ಯೋ ನಾನು ಕೊಟ್ಟಿದ್ದನ್ನೆಲ್ಲಾ ತಿಂದು ಬಿಟ್ಟೆಯಾ? ದೇವರ ಮುಂದೆ ಇಡಬೇಕಾಗಿತ್ತು" ಅಂದರು. ಇನ್ನೊಂದು ತೆಂಗಿನಕಾಯಿ ಒಡೆದು ಪೂಜೆ ಮಾಡಿದರು ಆದರೆ ನನ್ನ ಮೇಲೆ ಸಿಟ್ಟಾಗಲಿಲ್ಲ.

ನಮ್ಮ ಅತ್ತೇಮನೆಯಲ್ಲಿ, ಪ್ರತಿ ವರ್ಷವೂ ಒಂದೊಂದು ಮದುವೆ, ನಾದಿನಿ ಮಕ್ಕಳು, ಭಾವನ ಮಕ್ಕಳು, ಚಿಕ್ಕಮ್ಮನ ಮಕ್ಕಳು ಹೀಗೆ ಬಹಳ ಹಳೇ ಸಂಪ್ರದಾಯದವರು. ಅವರಿಗೆ ಸರಿಯಾಗಿ ಹೊಂದಿಕೊಂಡು ನಡೆಯು

ವಾಗ ಆಗುವ ಕಷ್ಟ ನನಗೇ ಗೊತ್ತು. ಆದರೆ ಜನ ಮಾತ್ರ ಸುಸಂಸ್ಕೃತರು. ರಜದಲ್ಲಿ ನಾವೂ ಹೋಗುತ್ತೇವೆ, ಅವರು ಮುಂಬಯಿ ಬೇಜಾರಾದಾಗ ನಮ್ಮಲ್ಲಿಗೆ ಒರುತ್ತಾರೆ. ಇದೇ ರೀತಿ ಹೆಚ್ಚಿಗೆ ಇಲ್ಲದಿದ್ದರೂ ನಮ್ಮ ಕುಟುಂಬಕ್ಕೆ ನಮ್ಮ ಯಜಮಾನರೂ ಹೊಂದಿಕೊಂಡಿದ್ದಾರೆ.

ಇಂತಹ ಲಗ್ನದಲ್ಲಿ ಬೇಕಾದಷ್ಟು ವೈಯಕ್ತಿಕ ಭಿನ್ನಾಭಿಪ್ರಾಯಗಳೂ ಇರಒಹುದು; ಕುಟುಂಬದ ನಡವಳಿಕೆ, ರೀತಿ ನೀತಿ ಬೇರೆ ಬೇರೆಯಾಗಿರಬಹುದು. ಆದರೆ ಮನೆಯ ಹಿರಿಯರು ಮತ್ತು ಲಗ್ನವಾದ ನಾವು ಸರಿಯಾಗಿ ನಡೆದುಕೊಂಡರೆ ಕೌಟುಂಬಿಕ ಸಮಸ್ಯೆಗಳಿರುವದಿಲ್ಲ. ನಮ್ಮ ಯಜಮಾನರ ಹಟವಾರಿತನವನ್ನೂ ಮರೆವನ್ನೂ ಹೆಚ್ಚು ಹಚ್ಚಿಕೊಳ್ಳದೆ ನಿರ್ಲಿಪ್ತ ಭಾವದೊಂದಿಗೆ ಜೀವನವನ್ನು ಕಳೆಯುವವರ ಜೊತೆ ಸಂಸಾರ ಮಾಡುವುದು ಸಂನ್ಯಾಸಿಯನ್ನು ಸಂಸಾರಿ ಮಾಡಿದಷ್ಟು ಕಷ್ಟ ಇಂಥ ಒಂದು ಪ್ರಸಂಗ ಮಾತ್ರ ಹೇಳುವೆ. ನಾನು ಏಳು ತಿಂಗಳು ಬಸುರಿಯಿದ್ದಾಗ ಬೇಗಳೂರಿನಿಂದ ನನ್ನ ಸ್ನೇಹಿತೆಯ ತಾಯಿ ನನ್ನ ಭೆಟ್ಟಿಗೆ ಬಂದಿದ್ದರು. ಚಹಾ ಮಾಡಲು ನೀರು ಮರಳಿಸಿ ಎತ್ತಿದಾಗ ಎಲ್ಲವೂ ನನ್ನ ಹೊಟ್ಟೆಯ ಮೇಲೆ ಬಿತ್ತು. ಹೊಟ್ಟೆ ಒಳಗೆ ತಕ್ಷಣ ಮಗು ತಿರುಗುವುದು. ನೋವು ಬಂದು ನನಗೆ ಗಾಬರಿಯಾಗಿ ಏನು ಮಾಡಬೇಕೋ ತಿಳಿಯಲಿಲ್ಲ ನಾವು ಊರಿನ ಹೊರಗೆ ಇರುವುದರಿಂದ ತಕ್ಷಣ ಡಾಕ್ಟರರ ಹತ್ತಿರ ಹೋಗಲ. ಯಾವ ವಾಹನವೂ ಸಿಗುವ ಹಾಗಿರಲಿಲ್ಲ ಪಕ್ಕದ ಮನೆಯವರನ್ನು ಸಹಾಯಕ್ಕೆ ಕರೆದು, ನಮ್ಮೆಜಮಾನರನ್ನು ಕರೆದುಕೊಂಡು ಬರುವಂತೆ ಹೇಳಿ ಕಳುಹಿಸಿದೆವು. ನಮ್ಮೆಜಮಾನರು ಬಂದು ವಿಷಯ ತಿಳಿದುಕೊಂಡು ವ್ಯಾನ್ ತರಲು ಹೋದರು. ಸಾಯಂಕಾಲ ೪ ಘಂಟೆಯಾದರೂ ಬರಲಿಲ್ಲ ನನಗ ೩ ಘಂಟೆ ಕಾಲ ಒದ್ದಾಡಿ ಅತ್ತೂ ಕರೆದೂ ಸಾಕಾಗಿತ್ತು. ಮತ್ತೆ ಪಕ್ಕದ ಮನೆಯಾಕೆ ಹೋಗಿ ವ್ಯಾನ್ ತೆಗೆದುಕೊಂಡು ಬಂದರು. ನಾನು ಡಾಕ್ಟರ ಹತ್ತಿರ ಹೋಗಿ ಚೆಕ್ ಮಾಡಿಸಿಕೊಂಡು ಬಂದೆ. ಅದೇ ರಾತ್ರಿ ನಮ್ಮ ಫೆಕಲ್ಟಿ ಕ್ಲಬ್ಬಿನ ಭೋಜನ ಸಮಾರಂಭ. ಸೀರೆ ಉಡಲು ಬರದಷ್ಟು ಬೊಜ್ಜೆಬಂದಿತ್ತು. ಆದರೂ ಹಾಗೇ ಸೀರೆ ಉಟ್ಟುಕೊಂಡು ವ್ಯಾನಿನಲ್ಲಿ ನಮ್ಮ ಯಜಮಾನರನ್ನು ಹುಡುಕಿಕೊಂಡು ಹೊರಟೆ. ಭೋಜನ ಇದೆ ಅಂತ ತಿಳಿದಿದ್ದ ಅವರು ತಿರುಗಿ ಮನೆಗೆ ಹೋಗಿ ಯಾಕೆ ಬರಬೇಕೂಂತ ಆಫೀಸಿನಿಂದ ನೇರವಾಗಿ ಬಂದಿದ್ದರು. ಪಾಪ ನನ್ನನ್ನು ನೋಡಿದ ಮೇಲೆ ಅವರಿಗೆ ವ್ಯಾನಿನ ಜ್ಞಾಪಕ ಬಂದಿರಬೇಕು. ಏನೂ ಆಗದ ತರಹ ನಿರ್ಲಿಪ್ತತೆಯಿಂದ "I went to ask for the van. It was not there. So I went t the library" ಅಂತ ಹೇಳಿ ಮುಗಿಸಿಬಿಟ್ಟರು. ಆದರೆ ಇನ್ನೇನಾದರೂ ಅನಾಹುತವಾಗಿದ್ದರೆ ಅವಳ ಗತಿ ಏನು? ಅನ್ನುವುದು ಅವರಿಗೆ ಹೊಳೆದಂತೆ ತೋರಲೇ ಇಲ್ಲ.

ನನಗೆ ಎಲ್ಲಾದರಲ್ಲೂ ಆಸಕ್ತಿ. ಏನು ಮಾಡಿದರೂ ಅದರಲ್ಲಿ ನಾವೀನ್ಯ ಇರಬೇಕು. ಕಲಾತ್ಮಕ ಗಿರಬೇಕು ಎಲ್ಲರ ಮನೆಯ ತರಹ ನಮ್ಮ ಮನೆಯಲ್ಲಿ Monotonous routine ಇರಬಾರದು. ಎಂತಹ ಭೇದ ಭಾವಗಳೂ ಇರಬಾರದು (ಆಳು ಕಾಳುಗಳಿಗೆ ಸಹ ನಮ್ಮಲ್ಲಿ ಭೇದವಿಲ್ಲದ ಆದರ ಸತ್ಕಾರ ಇಂದಿಗೂ ನಡೆಯುತ್ತದೆ.) ನಮ್ಮ ಸ್ನೇಹಿತರು ಇಷ್ಟ ಮಿತ್ರರು ಬಂಧು ಬಳಗದವರು ನಿಸ್ಸಂಕೋಚವಾಗಿ ಬರಬೇಕು. ನಾವು ಸಹ ಮುಕ್ತ ಮನಸ್ಸಿನಿಂದ ಆದರ ಸತ್ಕಾರ ಮಾಡಬೇಕು. ಎರಡು ಮೂರು ಸರ್ತಿ ನಾವು ಅಮೇರಿಕಾಕ್ಕೆ ಹೋಗಿ ಬಂದ ಪ್ರಭಾವದಿಂದಾಗಿ ನಮ್ಮ ಮನೆಯಲ್ಲಿ ಭಾರತೀಯ-ಪಾಶ್ಚಾತ್ಯ ಸಂಸ್ಕೃತಿಯ ಕಲಸು ಮೇಲೋಗರದ ಜೀವನವನ್ನು ಅರ್ಥ ಮಾಡಿಕೊಳ್ಳದ ಸಂಕುಚಿತ ಮನಸ್ಸಿನ ಹಲವು ಜನರು ನಮ್ಮ ಬಡಾವಣೆಯಲ್ಲಿ ನಾನಾ ತರಹ ಸಣ್ಣ ಮಾತಾಡಿದ್ದುಂಟು. ಆದರ ಬಗ್ಗೆ ನಾನು ಮತ್ತು ನಮ್ಮ ಯಜಮಾನರು ಕೂಲಂಕಷವಾಗಿ ನಮ್ಮ ಅನುಭವಸ್ಥ ಸ್ನೇಹಿತರೊಡನೆ ಚರ್ಚಿಸಿ ಈ ರೀತಿ ಮಾತಾಡಿದವರ ಬಾಲ್ಯದ ವಾತಾವರಣ, ಶಿಕ್ಷಣ, ಸಂಸ್ಕೃತಿ, ಜೀವನದ ಅನುಭವ, ಇನ್ನೊಬ್ಬರನ್ನು ಅರ್ಥ ಮಾಡಿಕೊಳ್ಳುವ ಗ್ರಹಣಶಕ್ತಿ ಕಡಿಮೆಯಿರುವುದರಿಂದಲೂ ಹೊಸತನ್ನು ನೋಡುವ ದೃಷ್ಟಿಕೋನ ಬೇರೆಯಾಗಿರುವುದರಿಂದ ಈ ರೀತಿ ನಡೆದುಕೊಳ್ಳುತ್ತಾರೆಂದು ನಿಷ್ಕರ್ಷಿಸಿ. ಉದಾತ್ತಭಾವದಿಂದ, ಸೌಹಾರ್ದತೆಯಿಂದ ಅವರೊಂದಿಗೆ ನಡೆದುಕೊಂಡೆವು. ಅವರು ತಮ್ಮನ್ನು ತಾವೇ ಅರಿತುಕೊಳ್ಳುವಂತೆ ಮಾಡಿದೆವು. ಮತ್ತೆ ಕೆಲವರಿಗೆ ನಮ್ಮ ಲಗ್ನ ಮನಸ್ಸಿಗೆ ಬಂದಿರಲಿಲ್ಲ ಹಲವು ದಿನ ಅವರು ದೂರವಾಗಿಯೇ ಇದ್ದರು. ನಂತರ ನಮ್ಮ ಸ್ವಭಾವದಲ್ಲಿ ಬದಲಾವಣೆ ಕಾಣದ ಮೇಲೆ ಅವರೂ ಹತ್ತಿರ ಬಂದರು. ನಮ್ಮ ಜೀವನ ನಿಷ್ಕಳಂಕವಾದುದು. ಯಾವುದೇ ತರಹದ "ಅಪರಾಧೀ ಭಾವ" ನಮ್ಮಲ್ಲಿಲ್ಲ. ಆ ತರಹ ಭಾವನೆ ಬರುವ ಯಾವುದೇ ಕೆಲಸವನ್ನೂ ನಾವು ಮಾಡಿಲ್ಲ. ಇದರಲ್ಲಿ ನಾವಿಬ್ಬರೂ ಸ್ಥಿತಪ್ರಜ್ಞರು. ನಮಗೆ ಸರಿ ಕಂಡದ್ದನ್ನು ಮಾಡುವವರು. ಬಂದವರಿಗೆ ಆದರ. ಬರದವರಿಗೆ ಆಗ್ರಹ ವಿಲ್ಲ. ನಮ್ಮದೂ ಅಷ್ಟೇ ಸರಿ ತೋರಿದರೆ ಅಕ್ಕರೆವುಳ್ಳವರು. ಅಭಿಮಾನಿಗಳು, ಬಿಚ್ಚು ಮನಸ್ಸಿನವರು. ಹಿಂದೊಂದು ಮುಂದೊಂದು ಮಾಡದವರು ಅಂತ ಗೊತ್ತಾದವರೊಂದಿಗಷ್ಟೇ ನಮ್ಮದು ಹೆಚ್ಚು ಸ್ನೇಹ. ಮಿಕ್ಕ ಕಡೆಯಲ್ಲಿ ನಮಗೆ ಹೋಗುವುದಕ್ಕೇ ಹೆದರಿಕೆ, ನಮ್ಮ ಸತ್ಯ ಧರ್ಮ ನಮ್ಮನ್ನು ಕಾಯುತ್ತದೆ, ನಮ್ಮ ಮಕ್ಕಳನ್ನು ಏಳಿಗೆಗೆ ತರುತ್ತದೆ. ಈ ನಮ್ಮ ಜೀವನದ ಅರ್ಥ ಸಮಾಜದ ಏಳಿಗೆಗೆ, ಸಮಾಜಕ್ಕೆ ಕಂಟಕವಾಗಿ ಬಾಳಬಾರದೆಂಬ ಆದರ್ಶ ಇಟ್ಟುಕೊಂಡು ಬಾಳುತ್ತಿದ್ದೇವೆ. ಕರುಣೆಯೇ ಜೀವನದ ಮೂಲ. ಈ ಉದಾತ್ತ ಧ್ಯೇಯಗಳೂ ಇಬ್ಬರಲ್ಲೂ ಇರುವುದರಿಂದಲೇ ನಮ್ಮ ವಿಚಾರಸರಣಿಗಳು ಬೇರೆ-ಯಾದರೂ ಎಷ್ಟೇ ನಮ್ಮ ನಮ್ಮಲ್ಲಿ ಎಲ್ಲ ಕುಟುಂಬದಂತೆ ಕೆಲವು ಸಲ ವಿರಸವುಂಟಾದರೂ "ಸಮರಸವೇ ಜೀವನ"ವೆಂದು ನಮ್ಮ ಬಾಳ ನೌಕೆ ಸಾಗಿದೆ. ಅಂತೆಯೇ, ಭಾರತದಲ್ಲಾಗಲೀ, ವಿದೇಶದಲ್ಲಾಗಲೀ, ಎಲ್ಲೇ ಇರಲಿ ನಮ್ಮನ್ನೂ, ನಮ್ಮನ್ನು ನಂಬಿದವರನ್ನೂ ದೇವರು ಸುರಕ್ಷಿತವಾಗಿ, ಇಟ್ಟಿರಲಿ, ನಮ್ಮ ಒಳ್ಳೆಯತನ (ನಾವೇನಾದರೂ ಮಾಡಿದ್ದರೆ?) ನಮ್ಮ ಮಗಳಿಗೆ ರಕ್ಷೆಯಾಗಿರಲಿ ಅಂತ ಯಾವಾಗಲೂ ನಾನು ಭಗವಂತನನ್ನು ಪ್ರಾರ್ಥಿಸುತ್ತೇನೆ.

ನಮ್ಮ ವಿವಾಹದ ಸಿಹಿಕಹಿಗಳು ಏನೇ ಇದ್ದರೂ ನಮ್ಮಿಬ್ಬರ ಸ್ಫೂರ್ತಿ, ನಿಷ್ಠೆ, ಕರ್ತವ್ಯಪರತೆ ಹೀಗೇ ಸಾಗಿ ನಮ್ಮಿಂದ ನಮ್ಮ ಸಮಾಜಕ್ಕೆ ಸ್ವಲ್ಪವಾದರೂ ಉಪಯೋಗವಾದರೆ ನಮ್ಮ ಬಾಳು ಸಾರ್ಥಕ. ಈ ನವೀನತೆಯುಳ್ಳ ಲಗ್ನದ ಧ್ಯೇಯ ಈಡೇರಿದಂತೆ. ಅಂದಲ್ಲಿ ಮಾತ್ರವೇ ಈ ಜೀವನಕ್ಕೆ ಒಂದು ಅರ್ಥ. ಇಲ್ಲದಿದ್ದಲ್ಲಿ ಎಲ್ಲಾ ಪ್ರಾಣಿಗಳಂತೆ ನಾವೂ ಬದುಕಿ ಸತ್ತ ಹಾಗೆ.

## ಶೀತದಿಂದ ನಿಜವಾಗಿಯೂ ತೊಂದರೆಯಾಗ್ತಾ ಇತ್ತು ಮಗೂಗೆ.

ಪಾಪ ಮೂಗು
ಕಟ್ಟಿಕೊಂಡಿತ್ತು,
ಉಸಿರಾಟ
ಕಷ್ಟವಾಗಿತ್ತು,
ಮತ್ತದು ಬಹಳ
ಚಡಪಡಿಸುತ್ತಾ ಇತ್ತು

ಆದರೆ ಈಗ, ಆರಾಮವಾಗಿ ನಿದ್ದೆ ಹೋಗ್ತಾ ಇದೆ.



## ವಿಕ್ಸ್ ವೆಪೋರಬ್ ಶೀತದಿಂದುಂಟಾದ ಎಲ್ಲಾ ಕಷ್ಟಗಳನ್ನು ನಿವಾರಿಸುತ್ತದೆ. ಕಟ್ಟಿದ ಮೂಗು ತೆರೆಯುತ್ತದೆ, ಉಸಿರಾಟ ಸುಲಭವಾಗುತ್ತದೆ, ಅಳುವುದನ್ನು ನಿಲ್ಲಿಸಿ ಮಗು ಆರಾಮವಾಗಿ ನಿದ್ದೆ ಹೋಗ್ತಾಇದೆ.

ಮೂಗು, ಗಂಟಲು, ಎದೆ ಮತ್ತು ಬೆನ್ನು ಹೆಚ್ಚಾಗಿ ಶೀತದ ಭಾಧೆಗೊಳಗಾಗುವ ದೇಹದ ಭಾಗಗಳು. ಅವುಗಳ ಮೇಲೆ ನೇರವಾಗಿ ತಿಕ್ಕಲು ವಿಕ್ಸ್ ವೆಪೋರಬ್ ಅನುಕೂಲವಾಗಿದೆ.

ವಿಕ್ಸ್ ವೆಪೋರಬ್‌ನ ಬೆಚ್ಚತನ ಮಗುವಿಗೆ ತಕ್ಷಣ ಆರಾಮ ನೀಡುತ್ತದೆ. ಉಸಿರಾಟ ಸುಲಭವಾಗಿ, ಮಗು ಹಾಯಾಗಿ ಮಲಗುತ್ತದೆ.

ವಿಕ್ಸ್ ವೆಪೋರಬ್‌ನ ವಿಶೇಷ ಗುಣವೆಂದರೆ, ಅದು ನಿವಾರಣೆಗೆ ಎರಡು ರೀತಿಯಲ್ಲಿ ಪರಿಣಾಮಕಾರಿ.




ಮೈಯ ಮೇಲೆ     ಶ್ವಾಸ ದೊಂದಿಗೆ

1. ವಿಕ್ಸ್ ವೆಪೋರಬ್ ತಿಕ್ಕುವುದರಿಂದ ಸ್ನಾಯುಗಳ ಜಡತೆ ಸಡಿಲಾಗಿ ಶರೀರದ ನೋವು ದೂರಾಗುತ್ತದೆ.

2. ಶರೀರದ ಬೆಚ್ಚತನದಿಂದ ವಿಕ್ಸ್ ವೆಪೋರಬ್ ಆವಿಯಾಗುತ್ತದೆ. ಈ ಆವಿಯಲ್ಲಿ ವಿಕ್ಸ್ ವೆಪೋರಬ್‌ನ ಮದ್ದು ಕೂಡಿ ಕೊಂಡಿದೆ. ಉಸಿರಾಡುವಾಗ ಮದ್ದಿನಿಂದ ಕೂಡಿದ ಆವಿ ಒಳಹೊಕ್ಕು, ಕಟ್ಟಿದ ಮೂಗು ತೆರೆದಂತಾಗುತ್ತದೆ, ಗಂಟಲ ಕೆರೆತ ಮಾಯವಾಗುತ್ತದೆ ಮತ್ತು ಎದೆಯ ಜಡತನ ಸಡಿಲಾಗುತ್ತದೆ. ಈ ರೀತಿ ಶೀತದ ಎಲ್ಲ ಕಷ್ಟಗಳು ದೂರಾಗುತ್ತವೆ.

ಉತ್ತಮ ಫಲಿತಾಂಶಕ್ಕಾಗಿ ಸಾಕಷ್ಟು ವಿಕ್ಸ್ ವೆಪೋರಬ್ ತಿಕ್ಕಿರಿ... ಹತ್ತೊಂಬತ್ತು ಗ್ರಾಮ್‌ನ ಸೀಸೆ, ಮಕ್ಕಳಿಗೆ ಏಳು ಅಥವಾ ಎಂಟು ಬಾರಿ ಹಾಗೂ ದೊಡ್ಡವರಿಗೆ ಮೂರು ಅಥವಾ ನಾಲ್ಕು ಬಾರಿ ಹಚ್ಚಲು ಯಥೇಷ್ಟ ಸಾಕು.



ವಿಕ್ಸ್ ವೆಪೋರಬ್‌ನ್ನು ಮೂಗು ಮತ್ತು ಗಂಟಲಿನ ಮೇಲೆ ನಯವಾಗಿ ಹಚ್ಚಿರಿ, ಎದೆ ಮತ್ತು ಬೆನ್ನ ಮೇಲೆ ಚೆನ್ನಾಗಿ ತಿಕ್ಕಿರಿ. ಶೀತ ಸಂಪೂರ್ಣ ದೂರಾಗುವ ವರೆಗೆ ಈ ಚಿಕಿತ್ಸೆಯನ್ನು ತಪ್ಪದೆ ಮಾಡುತ್ತಿರಿ.




12 ಗ್ರಾಮ್ ದೊಡ್ಡ ಡಬ್ಬಿ




**ಶೀತದ ಕಾಟ ಮಕ್ಕಳಿಗೆ ತಪ್ಪಿದ್ದಲ್ಲ, ವಿಕ್ಸ್ ವೆಪೋರಬ್ ಸದಾ ನಿಮ್ಮ ಮನೆಯಲ್ಲಿರಲಿ.**

489





# ದಕ್ಷಿಣ ಭಾರತದ ಗೋಪುರಗಳು




—ಡಾ. ಪಿ. ಬಿ. ದೇಸಾಯಿ

ಮೇಲ್ ನೋಟಕ್ಕೆ ಬಾದಾಮಿಯಿಂದ ರಾಮೇಶ್ವರದ ವರೆಗೆ ದಕ್ಷಿಣ ಭಾರತದಲ್ಲಿ ಸಹಜ ಸಂಚಾರ ಮಾಡುವ ಪ್ರವಾಸಿಯೂ ಒಂದು ಅಪೂರ್ವ ದೃಶ್ಯದಿಂದ ಪ್ರಭಾವಿತನಾಗುತ್ತಾನೆ. ಆ ದೃಶ್ಯವು ಊರೂರಲ್ಲಿ, ದಾರಿಬೀದಿಗಳ ಪಾರ್ಶ್ವದಲ್ಲಿ ತಲೆಯೆತ್ತಿ ನಿಂತ ಗೋಪುರಗಳಿಂದ ಸೊಬಗುಗೊಂಡಿರುವ ದೇವಮಂದಿರಗಳದು. ಕುತೂಹಲದಿಂದ ಸಮೀಪಕ್ಕೆ ಹೋಗಿ ಇಂಥ ರಚನೆಗಳ ಸೂಕ್ಷ್ಮ ಅವಲೋಕನ, ಪರೀಕ್ಷಣ ನಡೆಯಿಸುವ ಅಭ್ಯಾಸಿಗೆ ತಾನೊಂದು ಅದ್ಭುತ ಸೃಷ್ಟಿಯಲ್ಲಿಯೇ ಪ್ರವೇಶ ಮಾಡಿದಂತೆ ಭಾಸವಾಗುತ್ತದೆ. ದಕ್ಷಿಣ ಭಾರತದ ದೇವಾಲಯಗಳ ಹೆಚ್ಚಳವಾದ ಈ ಗೋಪುರ ಪ್ರಪಂಚದ ಒಂದು ಇಣುಕು ನೋಟವನ್ನು ಈ ಕಿರುಬರಹದಲ್ಲಿ ಬೀರಲಾಗಿದೆ.

ಗೋಪುರ ಎಂದೊಡನೆ ದೇವಾಲಯದ ಮೇಲ್ ಬದಿಯಲ್ಲಿ ಎತ್ತರದಿಂದ ಬಿತ್ತರಗೊಂಡ ಒಂದು ಕಟ್ಟಡದ ಚಿತ್ರವು ನಮ್ಮ ಕಣ್ಣ ಮುಂದೆ ಸುಳಿಯುತ್ತದೆ. ಆದರೆ ಇದು ಸಾಮಾನ್ಯ ದೃಷ್ಟಿ. ದೇವಾಲಯದ ಮೇಲ್ ಮಟ್ಟದಲ್ಲಿ ಕಣ್ ಸೆಳೆಯುವುದೆಲ್ಲವೂ ಬರಿ ಗೋಪುರವಲ್ಲ. ಈ ಊರ್ಧ್ವಮುಖಿ ಮಾಟದಲ್ಲಿ ಮೂರು ಘಟ್ಟಗಳಿದ್ದು ಅವುಗಳಿಗೆ ಬೇರೆ ಬೇರೆ ಹೆಸರುಗಳಿವೆ. ಅವು ವಿಮಾನ, ಗೋಪುರ ಮತ್ತು ಶಿಖರ.

ದೇವಮಂದಿರದ ಅಂತರಾಳದ ಅಂತರಂಗವೇ ಗರ್ಭಗೃಹ; ಭಕ್ತನು ಆರಾಧಿಸುವ ದೈವೀಸತ್ವದ ಸಂಕೇತರೂಪ ಸಾಕಾರ ವಸ್ತುವಿನ ನಿವಾಸವು ಇದು; ಅತ್ಯಂತ ಪವಿತ್ರವಾದುದು. ಗರ್ಭಗೃಹವನ್ನು ಅಳವಡಿಸಿಕೊಂಡು ಕೆಳಗಿನಿಂದ ಮೇಲಕ್ಕೆ ರಚಿತವಾದ ಸಮಗ್ರ ಕಟ್ಟಡವನ್ನು ಶಾಸ್ತ್ರೀಯ ಪರಿಭಾಷೆಯಲ್ಲಿ ವಿಮಾನ ಎಂದು ಕರೆಯಲಾಗಿದೆ. ಈ ವಿಮಾನವು ಒಂದರ ಮೇಲೊಂದರಂತೆ ಹೊಂದಿಕೊಂಡು ಬೆಳೆದು ಒಂದ ಅಧಿಷ್ಠಾನ ಸ್ತಂಭ-ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಈ ಐದು ಅಂಗೋಪಾಂಗಗಳಿಂದ ಕೂಡಿರುತ್ತದೆ.

ಆರಂಭದೆಸೆಯಲ್ಲಿ ವಿಮಾನದ ಉಪ್ಪರಿಗೆ ಇತರ ಕಟ್ಟಡಗಳಿಗಿಂತ ಎತ್ತರವಾಗಿದ್ದರೂ ಅಳತೆಮೀರಿ ಎತ್ತರವಾಗಿರಲಿಲ್ಲ. ಬರಬರುತ್ತ ಈ ವಿಮಾನವೆಂಬ ಮೇಲ್ ಮನೆ ಬೆಳೆಯುತ್ತ ಹೋಗಿ ಅದಕ್ಕೆ ವಿಶೇಷವಾದ ಉನ್ನತ ಸ್ವರೂಪವು ಮೂಡಿ ನಿಂತಿತು. ಅದವೇ ಗೋಪುರ. ಗಗನ(ಗೋ)ದಲ್ಲಿಯ ನಗರವೋ ಎಂಬಂತೆ ತೋರುತ್ತಿರುವುದರಿಂದ ಗೋಪುರ ಎಂಬ ಹೆಸರು ಅನ್ವರ್ಥಕವಾಯಿತು.

ಬಳಿಕ ದೇವಮಂದಿರಗಳ ವಿಸ್ತಾರವು ವಿಸ್ತೀರ್ಣವಾದಂತೆ, ಗೋಪುರದ ಸೃಷ್ಟಿ ಗರ್ಭಗೃಹಕ್ಕೆ ಮಾತ್ರ ಪರಿಮಿತವಾಗಿ ನಿಲ್ಲದೆ ಮುಖಮಂಟಪ, ಪರಿವಾರಮಂಟಪ, ಮಹಾದ್ವಾರಮಂಟಪ, ಮುಂತಾದ ಕಟ್ಟಡಗಳ ಮೇಲೆ ತನ್ನ ವರ್ಚಸ್ಸನ್ನು ಸ್ಥಾಪಿಸಿ ದೇವಾಲಯಗಳಿಗೆ ವ್ಯಾಪಕವಾದ, ಭವ್ಯವಾದ, ಕಲಾಮಯವಾದ, ಸಿರಿವಂತಿಕೆಯನ್ನು ಸಲ್ಲಿಸಿತು. ಇದರಲ್ಲಿ ಮಹಾದ್ವಾರ ಮಂಟಪದ ಗೋಪುರಗಳ ವೈಭವವೇ ತಾನೇ ತಾನಾಯಿತು.

ವಿಮಾನ ಮತ್ತು ಗೋಪುರಗಳ ಕ್ರಮ ವಿಕಾಸದ ಅಧ್ಯಯನವು ಕಲಾರಸಿಕರಿಗೆ ಒಂದು ರಸದೂಟವಾಗಿದೆ. ಪ್ರಾರಂಭದಲ್ಲಿ ದೇವಾಲಯಗಳ ಶಿರೋಭಾಗವು ಮೊಟಕಾಗಿಯೇ ಇರುತ್ತಿತ್ತು. ಅವುಗಳಿಗೆ ಗರ್ಭಗೃಹದ ಮೇಲಿನ ಶಿಖರದಿಂದ ಒಪ್ಪುವ ವಿಮಾನದ ಕಟ್ಟಡವು ಇರುತ್ತಿರಲಿಲ್ಲ. ಬಳಿಕ ಅದಕ್ಕೆ ಶಿಖರದಿಂದ ಶೋಭಿಸುವ ವಿಮಾನದ ಅಲಂಕಾರವನ್ನು ತೊಡಿಸಲಾಯಿತು.

ಭಾರತೀಯ ಶಿಲ್ಪಕಲೆಯ ಹುಟ್ಟು ಮತ್ತು ಬೆಳವಣಿಗೆಯ ತಾಯ್ಮನೆ ಎನಿಸಿದ ಐಹೊಳೆಯಲ್ಲಿ ಮತ್ತು ಪರಿಸರದ ಬಾದಾಮಿ, ಮಹಾಕೂಟ, ಪಟ್ಟದಕಲ್ ಗ್ರಾಮಗಳಲ್ಲಿ ಔತ್ತರೇಯ ಮತ್ತು ದಾಕ್ಷಿಣಾತ್ಯ ರೀತಿಯ ದೇವ ಮಂದಿರಗಳನ್ನು ಸೃಷ್ಟಿಸುವ ಪ್ರಯೋಗಗಳು ಐನೂರನೆಯ ಶತಮಾನದಲ್ಲಿ ನಡೆದವು. ಅದೇ ಪ್ರಯೋಗ ಶಾಲೆಯಲ್ಲಿ ಅದೇ ಕಾಲಕ್ಕೆ ದೇವ ಮಂದಿರಗಳಿಗೆ ವಿಮಾನ ಶಿಖರಗಳನ್ನು ಅಣಿಗೊಳಿಸುವ ಯೋಜನೆಗಳು ಮುಂದುವರಿದವು. ಈ ಯೋಜನೆಯ ಸಾಫಲ್ಯದಿಂದಾಗಿ ವಿಮಾನ ಶಿಖರ ವಿಭೂಷಿತ ಪೂರ್ಣ ಸ್ವರೂಪದ ಪ್ರಥಮ ದೇವಾಲಯವು ನಿರ್ಮಾಣವಾದುದು ಈ ಕೇಂದ್ರ ಕಾರ್ಯಾಲಯದಲ್ಲಿಯೇ ಎಂದು ವಿಮರ್ಶಕರು ಅಭಿಪ್ರಾಯ ಪಟ್ಟಿರುವರು.

ಮೇಲಿನ ವಿವೇಚನೆಗೆ ಕೈಗನ್ನಡಿಯಾಗಿ ದೇವಾಲಯಗಳ ಊರ್ಧ್ವಗಾಮಿ ಕ್ರಮವಿಕಾಸದ ಅನೇಕ ಉದಾಹರಣೆಗಳು ದೊರೆಯುತ್ತವೆ. ಅವನ್ನು ಇಲ್ಲಿ ಜೊತೆಯ ಚಿತ್ರಗಳಲ್ಲಿ ಪ್ರದರ್ಶಿಸಲಾಗಿದೆ.

ಮೊದಲನೆಯದಾಗಿ ವಿಮಾನಶಿಖರವಿಲ್ಲದೆ ನಿರಾಭರಣವಾಗಿ ನಿಂತಿರುವ (ಚಿತ್ರ ೧) ಮಹಾಕೂಟದ ಮೊಟಕು ಶಿವಮಂದಿರವನ್ನು ನೋಡಬಹುದು. ಎರಡನೆಯದು, ಬಾದಾಮಿಯ ಗುಡ್ಡದ ಕೆಳಗಿನ ನಯ ಸೂಕ್ಷ್ಮ ವರಿಯದ ಶುದ್ಧ ಶಿವಾಲಯ (ಚಿತ್ರ ೨). ಇಲ್ಲಿ ಗರ್ಭಾವಸ್ಥೆಯಲ್ಲಿರುವ ಅಸ್ಫುಟ ವಿಮಾನದ ರೂಪರೇಖೆಯನ್ನು ಗುರುತಿಸಬಹುದು. ಮೂರನೆಯದು, ಐಹೊಳೆಯ ಮಲ್ಲಿಕಾರ್ಜುನ (ಚಿತ್ರ ೩). ಇಲ್ಲಿ ಕಿರಿದಾಗಿದ್ದರೂ ಮೈತುಂಬಿಕೊಂಡ, ಶಿಖರದಿಂದ ಕೂಡಿದ ದಾಕ್ಷಿಣಾತ್ಯ ರೀತಿಯ ವಿಮಾನದ ಬಾಲ್ಯಾವಸ್ಥೆಯನ್ನು ಗಮನಿಸಬಹುದು.

—೯೫ ನೆಯ ಪುಟಕ್ಕೆ



ಮಹಾಕೂಟ : 
ಕೆರೆಯೊಳಗಿನ ಶಿವಾಲಯ



ಬಾದಾಮಿ : 
ಗುಡ್ಡದ ಕೆಳಗಿನ ಶಿವಾಲಯ



ಐಹೊಳೆ :
 ಮಲ್ಲಿಕಾರ್ಜುನ ಗುಡಿ

ಶ್ರವಣಬೆಳಗೊಳ
ಅಕ್ಕನ ಬಸದಿಯ ಗೋಪುರದ
ಮೇಲ್ಭಾಗ →





ಮಹಾಬಲಿಪುರ : ↑
ಸಮುದ್ರ ತೀರದ ದೇವಾಲಯ

ಫೋಟೊ :
( ೪ ರಿಂದ ೧೫ )
ಬಿ. ಕೇಸರಸಿಂಗ್



ಶೃಂಗೇರಿ :
ವಿದ್ಯಾಶಂಕರ ದೇವಾಲಯದ
ಗೋಪುರ →



ತಿರುಪತಿ : ↑
ವೆಂಕಟೇಶ್ವರ ದೇವಾಲಯದ
ಗರ್ಭಗೃಹದ ಮೇಲಿನ ಚಿನ್ನದ ಗೋಪುರ

ಹಂಪೆ :
ವಿರೂಪಾಕ್ಷ ದೇವಾಲಯದ ಗೋಪುರ ↓



ಕಾಳಹಸ್ತಿ :
ಈಶ್ವರ ದೇವಾಲಯ, ಗೋಪುರ ↓





ನಂಜನಗೂಡು : ↑
ಶ್ರೀಕಂಠೇಶ್ವರ ದೇವಾಲಯದ ಗೋಪುರ





ಮೈಸೂರು : ↑
ಚಾಮುಂಡೇಶ್ವರಿ ದೇವಾಲಯದ
ಗೋಪುರ

ಕಂಚಿ : ೧೨ ↑
ವರದರಾಜಸ್ವಾಮಿಯ
ದೇವಾಲಯದ ಗೋಪುರ





ತಂಜಾವೂರ : ↑
ಬೃಹದೀಶ್ವರ ದೇವಾಲಯ,
ಗೋಪುರ ( ೨೦೦ ಅಡಿ )

ಮಧುರೆ : →
ಮೀನಾಕ್ಷಿ ದೇವಾಲಯದ
ಗೋಪುರ ( ೧೫೦ ಅಡಿ )



ರಾಮೇಶ್ವರ : ರಾಮೇಶ್ವರ ದೇವಾಲಯದ ಗೋಪುರ

( ೯೦ ನೇ ಪುಟದಿಂದ )

ಬಾಲ ವಿಮಾನವು ಪ್ರೌಢ ಗೋಪುರವಾಗಿ ಉತ್ಕ್ರಾಂತಿ ಹೊಂದಿತು. ಪಲ್ಲವರ ಆಳಿಕೆಯಲ್ಲಿ ಸುಮಾರು ಎಂಟನೆಯ ಶತಮಾನದ ಆದಿಯಲ್ಲಿ, ಮಹಾಬಲಿಪುರದ ಸಮುದ್ರ-ತೀರದಲ್ಲಿ ನಿರ್ಮಾಣವಾದ ಈ ಮಂದಿರವನ್ನು ನಿರುಕಿಸುವ (ಚಿತ್ರ ೪) ಇದರ ಶಿರೋಭಾಗ-ವನ್ನು ಗೋಪುರದ ಪೂರ್ವಭಾವಿ ವಿಮಾನ ಎಂಬುದಾಗಿ ವರ್ಣಿಸಬಹುದು.

ಹೊಯ್ಸಳರು ತಾವು ರೂಪಿಸಿದ ದೇವ-ಮಂದಿರಗಳ ಅಂಗಾಂಗಗಳ ಸೌಂದರ್ಯದಲ್ಲಿ ಆಸಕ್ತಿ ವಹಿಸಿದಷ್ಟು ವಿಮಾನ. ಗೋಪುರಗಳ ಉನ್ನತಿಗೆ ಗಮನ ಪೂರಯಿಸಲಿಲ್ಲ. ಹೊಯ್ಸಳ ಕಾಲದ ಸೃಷ್ಟಿಯಾದ ಶ್ರವಣಬೆಳಗೊಳದ ಅಕ್ಕನ ಬಸದಿಯ ಮೇಲ್ಬದಿಗೆ ನಳನಳಿಸುವ ಚಿತ್ತಾರದ ಜನ ಬೊಂಬೆಗಳ ಕೆತ್ತನೆಯ ಕೆಲಸವು ಕಮನೀಯವೇ ಆಗಿದೆ (ಚಿತ್ರ ೫).

ಹದಿನಾಲ್ಕನೆಯ ಶತಮಾನದ ಸಂತಾನವಾದ ಶೃಂಗೇರಿಯ ವಿದ್ಯಾಶಂಕರ ದೇವಾಲಯದ ವೈಶಿಷ್ಟ್ಯಗಳಲ್ಲಿ ಅದರ ಗೋಪುರವು ಒಂದು. ನಕ್ಷತ್ರಾಕಾರದ ನಿರಿಗೆಯಿಂದ ಒಪ್ಪ ಪಡೆದು, ಮುಂಬದಿಗೆ ಕೀರ್ತಿಮುಖದ ಮುಖವಾಡ-ದಿಂದ ಶೋಭೆವೆತ್ತ ಇದರ ಹಿತಮಿತ ಪ್ರಮಾ-ಣದ ಗೋಪುರವು ಕಲೆಯ ಸೊಬಗಿಗೆ ಒಂದು ಸಾಕ್ಷಿ (ಚಿತ್ರ ೬).

ಅತ್ತ ಆಂಧ್ರ ಪ್ರದೇಶದಲ್ಲಿ ತಿರುಪತಿಯ ವೆಂಕಟೇಶದೇವಮಂದಿರವು ತಮಿಳುನಾಡಿನ ಚೋಳ ಮಹಾರಾಜರ ಕಾಲದಿಂದ ಊರ್ಜಿತವಾದುದು. ಅದರ ಗರ್ಭಗೃಹದ ಮೇಲುಗಡೆ ಸುವರ್ಣ ದೀಪ್ತಿಯಿಂದ ತಳತಳಿಸುವ ಸೊಗ-ಸಿನ ಗೋಪುರವು (ಚಿತ್ರ ೭) ನಿರಂತರ ಯಾತ್ರಿಕರ ಅಂತಃಕರಣದಲ್ಲಿ ಭಾವೋದ್ರೇಕದ ಹೊನಲನ್ನು ಹೊಮ್ಮಿಸುತ್ತದೆ. ಅದೇ ಭಾಗದ ಇನ್ನೊಂದು ಯಾತ್ರಾಸ್ಥಳವಾದ ಕಾಳಹಸ್ತಿಯ ಈಶ್ವರ ಮಂದಿರದ ಗೋಪುರವು (ಚಿತ್ರ ೮). ಭಾವುಕರ ಕಣ್ಗಳಿಗೆ ಹಬ್ಬವಾಗಿದೆ.

ಕರ್ನಾಟಕದಲ್ಲಿ ಸಾಮಾನ್ಯವಾಗಿ ಗೋಪುರ-ಗಳಿಗೆ ಪ್ರಾಧಾನ್ಯವು ಬಂದುದು ವಿಜಯ-ನಗರದ ಕಾಲದಿಂದ. ಈಗ ನಾಡಿನಲ್ಲಿ ದೃಗ್ಗೋಚರವಾಗುವ ಗೋಪುರಗಳಲ್ಲಿ ಕೆಲವು ವಿಜಯನಗರದ ಕಾಲದವಾಗಿದ್ದರೆ, ಹೆಚ್ಚಿನವು ಅನಂತರದ ಮೈಸೂರು ರಾಜರ ಮತ್ತು ಈಚಿನ ಕಾಲದವಾಗಿವೆ.ಹಂಪೆಯ ಗೋಪುರವು (ಚಿತ್ರ ೯) ಈಚಿನ ಕಾಲದಲ್ಲಿ ನವಸಂಸ್ಕಾರ ಹೊಂದಿದ ಕೃತಿ. ನಂಜನಗೂಡಿ ನ ಶ್ರೀಕಂಠೇಶ್ವರ (ಚಿತ್ರ ೧೦) ಮತ್ತು ಮೈಸೂರಿನ

ಚಾಮುಂಡೇಶ್ವರಿಯ (ಚಿತ್ರ ೧೧) ಗೋಪುರಗಳು ಚಿತ್ತಾಕರ್ಷಕ ಕಲಾನೈಪುಣ್ಯದಿಂದ ಮನೋಜ್ಞವಾಗಿವೆ.

ತಮಿಳುನಾಡು ಗೋಪುರಗಳ ಆಗರವೆನಿಸಿದೆ. ಇಲ್ಲಿ ಸುಮಾರು ಹತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಚೋಳವಂಶದ ಪ್ರತಾಪಿ ನರೇಂದ್ರರು ಉತ್ಕರ್ಷಪರರಾದರು. ಅಂದಿನಿಂದ ಅವರ ಪುರಸ್ಕಾರದ ಫಲವಾಗಿ ಉತ್ತುಂಗ ಗೋಪುರಾಂಕಿತ ದೇವಾಲಯಗಳು ನಾಡಿನಲ್ಲಿ ಊರ್ಜಿತವಾದವು, ವಿಪುಲವಾದವು. ಈ ಅಭಿವೃದ್ಧಿ ಕ್ರಮವು ಅನಂತರ ವಿಜಯನಗರದ ರಾಯರ, ಮಧುರೆ, ತಂಜಾವೂರಿನ ನಾಯಕರ ಕಾಲದಲ್ಲಿ ಮುಂದುವರಿಯಿತು. ವಿಜಯನಗರದ ಅರಸರು ಹಿಂದೆ ಚೋಳ ರಾಜರು ಕಟ್ಟಿದ ಹಲವು ಹಳೆಯ ಗೋಪುರಗಳನ್ನು ಬೆಳೆಯಿಸಿ, ನವಸಂಸ್ಕಾರ ಕೊಟ್ಟು, ಅವುಗಳಿಗೆ ಹೊಸ ಕಳೆಯನ್ನು ಒದಗಿಸಿದರು. ಅದಕ್ಕಾಗಿ ಇಂತಹವುಗಳಿಗೆ ರಾಯಗೋಪುರವೆಂಬ ನಾಮಕರಣವು ಪ್ರಚಲಿತವಾಯಿತು.

ತಮಿಳು ನಾಡಿನಲ್ಲಿ ವಿಶೇಷ ಪ್ರಖ್ಯಾತಿ ಹೊಂದಿದ ಕೆಲವು ಗೋಪುರಗಳ ನಾವು ನಿರ್ದೇಶಮಾಡಬಹುದು. ಚಿತ್ರ ಮ ಯ ವಿಸ್ತೀರ್ಣತೆಯಿಂದ ದರ್ಶನೀಯವಾಗಿದೆ. ಕಾಂಚಿಯ ವರದರಾಜ ಸ್ವಾಮಿಯ ಗೋಪುರವು ಚಿತ್ರ ೧೨). ತಂಜಾವೂರಿನ ಬೃಹದೀಶ್ವರ ದೇವಾಲಯದ (ಚಿತ್ರ ೧೩) ಮಹೋನ್ನತ (೨೦೦ ಅಡಿ) ಗೋಪುರದ ಕಲಾಪ್ರೌಢಿಮೆ ಅದ್ಭುತರಮ್ಯವಾಗಿದೆ. ಮಧುರೆಯ ಮೀನಾಕ್ಷಿ ದೇವಾಲಯದ ಗಗನಭೇದಿ ೧೫೦ ಅಡಿ) ಉತ್ತುಂಗ ಗೋಪುರವು (ಚಿತ್ರ ೧೪) ವಿಸ್ಮಯಕಾರಕ ಕಲಾವೈಖರಿಯಿಂದ ವೀಕ್ಷಕರನ್ನು ಮೈಮರೆಸುತ್ತ ನಿಂತಿದೆ. ರಾಮೇಶ್ವರದ ಗೋಪುರದ ದೃಶ್ಯವು (ಚಿತ್ರ ೧೫) ಹೃದಯಂಗಮವಾಗಿದೆ. ಅದು ತನ್ನ ರಚನಾಚಾತುರಿಯಿಂದ ನೋಡುವವರ ಕಣ್ ಮನಗಳನ್ನು ತಣಿಸಿ ರೋಮಾಂಚಿತರನ್ನಾಗಿ ಮಾಡುತ್ತದೆ.

ಸಹೃದಯ ಕಲಾರಸಿಕನನ್ನು ಕೃತಾರ್ಥನನ್ನಾಗಿ ಮಾಡುವುದು ಈ ಗೋಪುರ ಪ್ರಪಂಚವು. ಗೋಪುರದ ದರ್ಶನವು ಸದಾ ಶುಭಪ್ರದ; ಶಿಖರಾವಲೋಕನವು ಪುಣ್ಯಪ್ರದ. ಇದು ಧರ್ಮ ಭಾವನೆ. ಭಾರತೀಯರಿಗೆ ಧರ್ಮವೇ ಜೀವನದ ಜೀವಾಳ. ಅದುವೇ ಸೌಂದರ್ಯ, ಕಲಾಸಿದ್ಧಿ, ಆನಂದ, ಧಾರ್ಮಿಕತೆಯ ಒಂದು ಕೇಂದ್ರಬಿಂದು ದೇವಮಂದಿರ. ಅದರ ನಿರ್ಮಿತಿಗೆ ಅವರು ಸರ್ವಸ್ವವನ್ನೂ ಸೂರೆ ಮಾಡಿದರು. ದೇವ ದೇವನಲ್ಲಿ ಭಾವ, ಪ್ರಜ್ಞೆ ವಿಶಾಲವಾದಂತೆ, ದೇವ ಮಂದಿರಗಳು ವ್ಯಾಪಕವಾದವು, ಕಲಾಪೂರ್ಣವಾದವು, ಉನ್ನತೋನ್ನತವಾದವು. ಭಕ್ತನ ಭಾವ ಪ್ರಪಂಚದ ವೈಶಾಲ್ಯ, ಸಮೃದ್ಧಿಯ ಬಹಿರಂಗ ಪ್ರಮಾಣವೇ ಈ ಗೋಪುರಗಳ ವಿಶ್ವವು. ಅದು ಭಾರತೀಯರ ಅಧ್ಯಾತ್ಮಪರ ಸರ್ವ ಸಮರ್ಪಣ ನಿಷ್ಠೆಯ ಸಾಕಾರ ನಿದರ್ಶನ. ಅಂತದಿಂದ ಅನಂತದೆಡೆಗೆ, ತಮದಿಂದ ಜ್ಯೋತಿಯ ಕಡೆಗೆ ಅಧ್ಯಾತ್ಮದ ಅಂತರಿಕ್ಷ ಲೋಕದಲ್ಲಿ ಮಾರ್ಗಕ್ರಮಣ ಮಾಡುವ ಭಾಗ್ಯಶಾಲಿ ಭಕ್ತನಿಗೆ ದಾರಿದೀಪವಾಗಿ ಬೆಳಕನ್ನು ತೋರುವ ದಿವ್ಯಜ್ಯೋತಿಗಳು ಈ ಗೋಪುರಗಳು.

ಓಂ ಸತ್ಯಂ ಶಿವಂ ಸುಂದರಂ

# ಬಾಲ ಪ್ರಪಂಚ





## ಕಲೆ-ಕಲಾವಿದ-ಕಲ್ಲು



ಒಂದು ದಿನ ಶಿಲ್ಪಿ ಮತ್ತು ಅವನ ಕಲೆ ಇಬ್ಬರ ನಡುವೆ ವಿವಾದ ಹುಟ್ಟಿತು. ಅವರೀರ್ವರೂ ತಾವೇ ಶ್ರೇಷ್ಠ ಎಂದುಕೊಂಡು ವಾದಿಸ ತೊಡಗಿದರು ಕಲೆ ಹೇಳಿತು– "ನನ್ನ ಕಾರಣ ವಾಗಿಯೇ ನಿನ್ನ ಹೆಸರು ಜಗತ್ತಿನಲ್ಲಿ ಜೀವಿಸಿದೆ. ಆದ ಕಾರಣ ನಾನೇ ಶ್ರೇಷ್ಠ."

ಕಲಾವಿದ ಸಿಟ್ಟಿನಿಂದ ಹೇಳಿದ– "ಮೂರ್ಖ. ನಿನ್ನ ಜನ್ಮದಾತನೇ ನಾನು. ನನ್ನ ಕಾರಣ ವಾಗಿಯೇ ನಿನಗೆ ಅಮರತ್ವ ಪ್ರಾಪ್ತವಾಗಿದೆ. ಕಾರಣ ನಾನೇ ಶ್ರೇಷ್ಠ."

"ಇಲ್ಲ. ನಾನು ಇರುವನಂತಲೇ ನಿನಗೆ ಅಮರತ್ವ ಪ್ರಾಪ್ತವಾಗಿದೆ. ಕಾರಣ ನಾನೇ ಶ್ರೇಷ್ಠ."

"ಇಲ್ಲ. ನಾನು ಇರುವನಂತಲೇ ನಿನಗೆ ಕೀರ್ತಿ-ಶ್ರೇಯಸ್ಸು ಎಲ್ಲವೂ ಇದೆ." ಕಲೆ ಹೇಳಿತು.

"ಛೆ. ಛೆ. ಎಂದಿಗೂ ಇಲ್ಲ. ನಾನು ಇರುವನಂತಲೇ ನಿನಗೆ ಅಸ್ತಿತ್ವವಿದೆ." ಎಂದ ಕಲಾವಿದ.

ಇವರ ವಾದ ವಿವಾದವನ್ನು ಕೇಳುತ್ತಲಿದ್ದ, ಅಲ್ಲಿಯೇ ಇದ್ದ ಕಲ್ಲು ಹೇಳಿತು– "ನಿಮ್ಮಿಬ್ಬರಿಗಿಂತಲೂ ನಾನೇ ಶ್ರೇಷ್ಠ. ನಾನು ಇರುವನಂತಲೇ ನೀವೀರ್ವರೂ 'ಅಮರ' ರಾಗಿದ್ದು." ★★

–ಗಂಗಾಧರ ಚಂ. ದಲಭಂಜನ






ಅಮ್ಮ ನೋಡಮ್ಮ! ಭಾವ ನಮಗಾಗಿ ಒಂದು ಬುಟ್ಟಿ ಪಟಾಕಿ ತಂದಿದಾರೆ!

# ಕಿಟ್ಟು ಮುಟ್ಟಿ ದೀಪಾವಳಿ

ಕೆ. ಆರ್. ಸ್ವಾಮಿ



ತಡೀ, ತಡೀ, ನಾನು ಇವಿಷ್ಟು ದೀಪಾವಳಿ ಸಂಚಿಕೆಗಳನ್ನು ಓದಿ ಪೂರೈಸಿದ ಮೇಲೆ ನಿಂಗೆ ಓದೋಕೆ ಕೊಡ್ತೀದು.




ನಮ್ಮನೇಗೆ ಆರು ದೀಪಾವಳಿ ಸಂಚಿಕೆಗಳು ಬಂದಿವೆ ನಿಮಗೆ ತೋರ್ಸಿ ಹೊಟ್ಟೆ ಉರಿಸಿ ಹೋಗೋಣಾ ಅಂತ ಬಂದೆವು.


ಆಟಂಬಾಂಬು ಆಚೆಮನೆ ಕೆಟ್ಟಬಾಯಿ ಕಿಟ್ಟಜ್ಜನ ಮೇಲೆ ಪ್ರಯೋಗಿಸ್ಬೇಕು.


ರಾಕೆಟ್ ಜೋಕಾಲಿ


OIL
ಎಣ್ಣೆ ನೀರು ಹಾಕ್ಕೊಳ್ತಿದೀವಮ್ಮಾ.



   




"ಕೂ. ಕುಹೂ, ಕುಹೋ, ಕುಹೋ, ಕುಹೋ!" ಎಂದು ನರಿಯೊಂದು ಕೂಗಿತು. ಹುಲುಸಾಗಿ ಬೆಳೆದ ಕಬ್ಬಿನ ಹೊಲದಲ್ಲಿ ನುಸುಳಿ ಬಂದಿತ್ತು ಆ ನರಿ. ಸಿಹಿ ಸಿಹಿ ಕಬ್ಬಿನ ಕೋಲುಗಳನ್ನು ಜಗಿದು ತಿಂದ ನರಿಗೆ ಭಾರಿ ಸಂತೋಷವಾಯಿತು. ಕಬ್ಬು ಜಗಿಯಲು ಸ್ವಲ್ಪ ತ್ರಾಸವಾದರೂ ಬಾಯಿಗೆ ಭಾರಿ ರುಚಿಯಾಗಿತ್ತು. ಚಪ್ಪರಿಸಿತು. ಗಂಟಲು ಬಿರಿಯುವಂತೆ ಬೊಬ್ಬಿಟ್ಟಿತು. ತೋಟದ ಕಾವಲಿನ ಆಳು 'ಹೊ, ಹೋ, ಹೋಯ್, ಹೋಯ್' ಎಂದು ಗದರಿಸಿ ದೂರದಿಂದ ಓಡಿ ಬಂದನು. ನರಿ ತಲೆಮರೆಸಿ ಕಾಲಿಗೆ ಬುದ್ಧಿಹೇಳಿತು.

ಚೆನ್ನಾಗಿ ಬೆಳೆದ ಒಳ್ಳೆ ತಳಿಯ ಕಬ್ಬಿನ ಪೈರು ಕೊಯ್ಲಿಗೆ ಸಿದ್ಧವಾಗಿತ್ತು. ಅಂದೇ ಮುಂಜಾವಿಗೆ ರೈತ ಆಳುಗಳನ್ನು ಕೂಡಿಸಿ ಕಬ್ಬಿನ ಜಲ್ಲೆಗಳನ್ನು ಜಾಗ್ರತೆಯಿಂದ ಕಡಿಸಿದನು. ಕಡಿದ ಕಬ್ಬನ್ನು ಕಟ್ಟು ಕಟ್ಟಿಸಿ ಬಂಡಿಗಳ ಮೇಲೆ ಹೇರಿಸಿ ಭಾರಿ ಹಿಗ್ಗಿನಿಂದ ಹೊರಟನು. ಒಂದು ವರ್ಷಕ್ಕಿಂತ ಹೆಚ್ಚು ಪರಿಶ್ರಮ ವಹಿಸಿ ಶ್ರದ್ಧೆಯಿಂದ ಬೆಳೆಸಿದ ಕಬ್ಬಿನ ಕೊಯ್ಲು ಅಲ್ಲವೆ ಅದು! ....

ನರಿ ದೂರದಲ್ಲಿ ಮರೆಯಲ್ಲಿ ನಿಂತು ಇದನ್ನು ಮಿಟಮಿಟನೆ ನೋಡುತ್ತಿತ್ತು. ತನ್ನ ಮೇಲಿನ ಒಂದು ಕೋಪಕ್ಕೆ ದೈತ್ಯ ರೈತ ಹೀಗೆ ಮಾಡಿರಬೇಕೆಂದು ಅದಕ್ಕೆ ಶಂಕೆ. ಹೊಲದ ಅಂಚಿನಲ್ಲಿ ಹರಿಯುವ ನೀರಕಾಲುವೆಯ ಹತ್ತಿರ ಬೆಳೆದ ಹಂಬುಹಲ್ಲುಗಳ ಪೊದೆಗಳಲ್ಲಿಯೇ ಅಡಗಿಕೊಂಡು ಬಂಡಿಗಳು ಹೋಗುವ ದಾರಿಯನ್ನು ಅದೂ ಹಿಡಿಯಿತು. ಈ ಸ್ವಾರ್ಥಿ ರೈತ ಒಂದೇ ಸಿಟ್ಟಿಗೆ ಇಷ್ಟೆಲ್ಲಾ ಕಬ್ಬನ್ನು ಕಡಿದು ಏನು ಕರ್ಮ ಮಾಡುವನೋ ಎಂಬುದನ್ನು ನೋಡಬೇಕೆಂದು ನರಿಗೆ ಕುತೂಹಲ.

ಬಂಡಿಗಳೆಲ್ಲಾ ರೈತನ ಮನೆಯ ಅಂಗಳವನ್ನು ಮುಟ್ಟಿದವು. ಅಲ್ಲಿಯೇ ಅಂಚಿನಲ್ಲಿದ್ದ ಒಂದು ದೊಡ್ಡ ಆಲದ ಮರದ ಪೊಟರೆಯೊಳಕ್ಕೆ ನರಿ ನುಗ್ಗಿತು. ಅಲ್ಲಿಂದ ಇಣಿಕಿ ಅಂಗಳದಲ್ಲಿ ಏನೆಲ್ಲಾ ಸಾಗುತ್ತದೆ ಎಂದು ನರಿ ಕಣ್ಣು ಬಿಟ್ಟು ನೋಡತೊಡಗಿತು.

ಕಬ್ಬಿನ ಜಲ್ಲೆಗಳ ತುತ್ತ ತುದಿ ಕತ್ತಿಯಿಂದ ಹಾರಿಸಿ ಕಬ್ಬಿನ ಸೋಗೆಯನ್ನು ಆಳುಗಳು ಪ್ರತ್ಯೇಕಿಸುತ್ತಿದ್ದರು. ಹೀಗೆ ಸೋಗೆಯಿಂದ ಬೇರ್ಪಡಿಸಿದ ಕೋಲುಗಳ ಮೈಯನ್ನು ಬೇರೆ ಕೆಲವು ಆಳುಗಳು ಹೆರೆದು ಗಾಣದ ಪಕ್ಕದಲ್ಲಿ ರಾಶಿಹಾಕುತ್ತಿದ್ದರು. ಕಣ್ಣುಗಳನ್ನು ಅಗಲ ಮಾಡಿ ನರಿ ದಿಟ್ಟಿಸಿತು. ಕಬ್ಬಿನ ಕೋಲುಗಳನ್ನು ಗಾಣದ ಉರುಳುಗಳ ನಡುವೆ ಸೇರಿಸಲು ಒಬ್ಬ ಹೆಂಗಸಿದ್ದಳು. ಆಕೆ ಚೊಕ್ಕಪಡಿಸಿದ ಕಬ್ಬಿನ ಕೋಲುಗಳನ್ನು ಹೀಗೆ ಒಡ್ಡಿಕೊಟ್ಟಾಗ ಬಂಡಿ ಹೊಡೆಯುವ ಆಳು ತನ್ನ

## ದಾಮೋದರ ಬಾಳಿಗಾ

ಎತ್ತುಗಳ ಜೋಡಿಯೊಂದನ್ನು ಅಲ್ಲಿಯ ನೊಗಕ್ಕೆ ಕಟ್ಟಿ ಅವನ್ನು ಅಟ್ಟುತ್ತಾನೆ. ಅರರೆ! ಎತ್ತುಗಳು ಉದ್ದಕ್ಕೆ ಓಡುವ ಬದಲು ಗರಗರನೆ ಗಾಣದ ಸುತ್ತು ಸುತ್ತು ನಡೆಯುತ್ತಿವೆ. ಇದೆಂಥ ಹುಚ್ಚು ಎನ್ನಿಸಿತು ನರಿಗೆ. ಆಗ 'ಕರ್ರ, ಕರ್ರ, ಕರ್ರ, ಕರ್ರಾ' ಎಂಬ ಶಬ್ದವು ನರಿಯ ಕಿವಿಗೆ ಬಿತ್ತು. ಉರುಳುಗಳಲ್ಲಿ ಕಬ್ಬಿನ ಕೋಲುಗಳು ನಜ್ಜುಗುಜ್ಜಾಗಿ, ಹಿಪ್ಪೆಯಾಗಿ, ಉಬ್ಬಿದ ಕೋಲುಗಳು ಚಪ್ಪಟೆಯಾಗುವಾಗ ಸಿಹಿ ಸಿಹಿ ರಸವು ಧಾರಾಕಾರವಾಗಿ ಕೆಳಕ್ಕೆ ಸುರಿಯುತ್ತಿತ್ತು. ಹೀಗೆ ಸುರಿದ ರಸವನ್ನು ಶೇಖರಿಸಲು ಕೆಳಗೆ ಒಂದು ಗಂಗಾಳವಿತ್ತು.

ಹೀಗೆ ಜಮೆಯಾದ ರಸವನ್ನು ಒಲೆಯ ಮೇಲೆ ಇರಿಸಿದ ಆಳವಿಲ್ಲದ ಅಗಲ ಭಾಂಡಗಳಿಗೆ ಸುರಿಯುತ್ತಿದ್ದರು. ಭಾಂಡವನ್ನು ಒಲೆಯಲ್ಲಿ ಚೆನ್ನಾಗಿ ಬೆಂಕಿ ಹಾಕಿ ಕಾಯಿಸುತ್ತಿದ್ದರು. ನರಿ ಎವೆ ಇಕ್ಕದೆ ಭಾಂಡದ ಕಡೆಗೆ ನೋಡಿತು. ಭಾಂಡದ ಸಮೀಪ ನಿಂತಿದ್ದ ಆಳು ಒಂದು ರೀತಿ ವಿಚಿತ್ರ ಸೌಟನ್ನು ಹಿಡಿದು ರಸದ ಮೇಲ್ಮೈಯಲ್ಲಿ ಏಳುತ್ತಿದ್ದ ನೊರೆಯನ್ನು ಜತನದಿಂದ ಎತ್ತಿ ಕಳೆಯುತ್ತಿದ್ದನು. ತೇಲುವ ನೊರೆಯಲ್ಲಿ ಕಸಕಲ್ಮಶಗಳ ಬುರುಗೇ! "ಒಳ್ಳೆಯ ಕಬ್ಬನ್ನು ಹೀಗೆ ಹಾಳು ಮಾಡುವುದೂ ಉಂಟೆ" ಎಂದುಕೊಂಡಿತು ನರಿ. ಹೀಗೆ ಕಸಕಲ್ಮಶಗಳನ್ನು, ಕಳಪೆಯನ್ನು ಪ್ರತ್ಯೇಕಿಸಿದ ಬಳಿಕ ಭಾಂಡವನ್ನು ಹಾಗೆಯೇ ಸ್ವಲ್ಪ ಆರಬಿಡುತ್ತಿದ್ದರು. ಆರಿ ತಂಪಾದ ಬಳಿಕ ಭಾಂಡದಲ್ಲಿರುವ ಕುದಿದ ರಸದ ರುಚಿ ಹೇಗಿರಬಹುದೋ? ಸಾಧ್ಯವಾದರೆ ಒಂದು ಗುಟುಕು ರುಚಿ ನೋಡಬೇಕೆಂದು ನರಿಗೆ ಹಂಬಲ. ಆದರೆ ಹಿಂದೊಮ್ಮೆ ಕುತೂಹಲ ಮಾಡಿ ನೇಯ್ಗೆಗಾರನ ರಂಗಿನ ಭಾಂಡದಲ್ಲಿ ಬಿದ್ದು ಪಟ್ಟ ಪೇಚಾಟದ ನೆನಪು ನರಿಗೆ ಆಯಿತು. ಅದು ಅಡಗಿಕೊಂಡು ಸಮಯ ಸಾಧಿಸುತ್ತಿತ್ತು.

ರೈತನ ಹೆಸರು ಶ್ಯಾಮಣ್ಣ. ಶ್ಯಾಮಣ್ಣ ನುರಿತ ವ್ಯವಸಾಯಗಾರ. ಸ್ವತಃ ಭಾಂಡದ ಕಡೆಗೆ ಬಂದು ಭಾಂಡದೊಳಗೆ ಅಳತೆ ಪ್ರಕಾರ ಸುಣ್ಣದ ನೀರನ್ನು ಸುರಿದೇಬಿಟ್ಟ! 'ಛೆ! ಇವನೆಂತಹ ಕಿಡಿಗೇಡಿ!' ಎನ್ನಿಸಿತು ನರಿಗೆ. ಸಿಹಿ

ರಸಕ್ಕೆ ಬಾಯಿ ಸುಡುವ ಸುಣ್ಣದ ನೀರು! ಆ ಮೇಲೆ ಭಾಂಡದ ಕೆಳಗಡೆ ಸುತ್ತಲೂ ಇನ್ನಷ್ಟು ಬೆಂಕಿ ಹಾಕಿ ಚೆನ್ನಾಗಿ ಕಾಯಿಸಹತ್ತಿದರು. ಭಾಂಡಾರದಲ್ಲಿ ಒಂದೇ ಸವನೆ ಕಳಪೆ (Scum) ಏರುತ್ತಿತ್ತು. ತಕ್ಕ ನಮೂನೆಯ ಸಟ್ಟುಗಗಳ ಮೂಲಕ ಕಳಪೆಯನ್ನು ಕಳೆದಾದ ಬಳಿಕ ಭಾಂಡವನ್ನು ಆರಬಿಡುವರು. ಆರಿದ ದ್ರವವನ್ನು ಜಾಳಿಗೆ ಮೂಲಕ ಸೋಸಿ ಇನ್ನೊಂದು ಒಲೆಯ ಮೇಲೆ ಇರಿಸಿದ ಚೊಕ್ಕ ಭಾಂಡಕ್ಕೆ ತುಂಬಿಸುವುದನ್ನು ನರಿ ನೋಡಿತು. ಶ್ಯಾಮಣ್ಣ ಭಾರಿ ನಾಜೋಕಿನವ. ಎಲ್ಲವೂ ಪರಿಷ್ಕಾರವಾಗಬೇಕು. ದ್ರವ ಶುಭ್ರವಾಗಿತ್ತು. ಅದರ ಬಣ್ಣ ಬಂಗಾರದಂತಹದ್ದು. ಇನ್ನೇನೆಲ್ಲಾ ಮಾಡುತ್ತಾರೊ ನೋಡೋಣ ಎಂದು ನರಿ ಅಲ್ಲಿಯೇ ಕಣ್ಣುಗಳನ್ನು ಮಿಟಿಮಿಟಿಸಿ, ಮೈಕೈ ನಿಗುರಿಸಿ ಊರಿಕೊಂಡಿತು.



ಶುಭ್ರವಾದ ದ್ರವ ತುಂಬಿದ ಭಾಂಡವನ್ನು ಒಲೆಯಲ್ಲಿ ನಾಲ್ಕು ಸುತ್ತಲೂ ಚೆನ್ನಾಗಿ ಬೆಂಕಿ ಹಾಕಿ ಕಾಯಿಸತೊಡಗಿದರು. ಸ್ವಲ್ಪ ಸಮಯದಲ್ಲಿಯೇ ಭಾಂಡದೊಳಗಿನಿಂದ "ತಕಪಕ! ತಕಪಕ!" ಎಂದು ಶಬ್ದ ಕೇಳಿಸಿತು. ಊರಿಕೊಂಡಲ್ಲಿಂದಲೆ ನರಿ ಕುತ್ತಿಗೆ ಉದ್ದಮಾಡಿ ಭಾಂಡದೊಳಕ್ಕೆ ದೃಷ್ಟಿ ಹಾಕಿತು. ಭಾಂಡದೊಳಗೆ ರಸವು ಕುದಿಯುತ್ತಿತ್ತು. ಅಲ್ಪ ಸ್ವಲ್ಪ ನೊರೆ ಮತ್ತು ಕಳಪೆ ಭಾಂಡದಲ್ಲಿ ಮೇಲಕ್ಕೆದ್ದು ಕಾಣಿಸುತ್ತಿದ್ದವು. ಜರಡೆಯಂತಿರುವ ಸಟ್ಟುಗಗಳಿಂದ ಈ ಬಗೆಯ ಕಳಪೆಯನ್ನು ಎತ್ತಿ ಒಂದೆರಡು ಆಳುಗಳು ಬೀಸಾಡುತ್ತಿದ್ದರು. ಬೇರೆಯೇ ಕೆಲವು ಆಳುಗಳು ದೋಣಿ ತಳ್ಳುವ ಹುಟ್ಟುಗಳಂತೆ ಉದ್ದದ ಸೌಟುಗಳಿಂದ ಆ ಭಾರಿ ಜಾಣಲೆಯಲ್ಲಿ ಕುದಿಯುತ್ತಿರುವ ರಸವನ್ನು ಎಡಬಿಡದೆ ಅಡಿಯಿಂದಲ್ಲೆ ಕದಡಿಸುತ್ತಿದ್ದರು. ತೆಳ್ಳಗಿದ್ದ ರಸ ಕುದಿದಂತೆ ಮಂದವಾಗುತ್ತಿತ್ತು. ಭಾಂಡದಿಂದ ಏಳುತ್ತಿದ್ದ 'ತಕಪಕ, ತಕಪಕ!' ಶಬ್ದ ಈಗ 'ಟಕ್-ಟಕ್, ಪಕ್-ಪಕ್' ಎಂದು ಕೇಳಿಸುತ್ತಿತ್ತು. ಅಂದರೆ ದ್ರವ ಪಾಕಕ್ಕೆ ಬರುತ್ತಿತ್ತು. ಉದ್ದ ಸೌಟಿನ ಆಳುಗಳು ಭಾರಿ ಚುರುಕಿನಿಂದ ಭಾಂಡದ ಸುತ್ತಲೂ ತಿರುಗಿ ಪಾಕವನ್ನು ಕದಡಿಸುತ್ತಲೇ ಇದ್ದರು. ರೈತ ಶ್ಯಾಮಣ್ಣ ಬಿದಿರ ಕೈ ಹಾಕಿ ಗೆರಟೆಯಿಂದ ಮಾಡಿದ ಒಂದು ಸೌಟನ್ನು ಮುಳುಗಿಸಿ ಭಾಂಡದಿಂದ ಮಂದಮಂದವಾಗುತ್ತಿದ್ದ ಪಾಕವನ್ನು ತೆಗೆದು ನೀರಿರಿಸಿದ ಒಂದು ಪಾತ್ರೆಗೆ ಹೊಯ್ದನು. ತಣಿದ ಪಾಕವನ್ನು ಕೈಬೆರಳುಗಳಲ್ಲಿ ತೀಡಿ ಅದರ ಹದವನ್ನು ಅಂದಾಜುಮಾಡುತ್ತಿದ್ದನು. ಪಾಕ ಹದಕ್ಕೆ ಬರುವಾಗ ಭಾಂಡದಿಂದ ಹೊರಟ ಪರಿಮಳ ನರಿಯ ಮೂಗಿಗೆ ತಾಟಿತು. ಹೀಗೆ ಆಗಾಗ ಪರೀಕ್ಷಿಸುತ್ತ ಸಾಕಷ್ಟು ಜಿಗುಟಾದಾಗ ಒಲೆಯ ಬೆಂಕಿಯನ್ನು ಕಡಿಮೆ ಮಾಡುತ್ತಾರೆ. ಆಗಲೇ ಭಾಂಡದ ಅಕ್ಕಪಕ್ಕದಲ್ಲಿ ಅಚ್ಚಿನ ಮಣೆಗಳನ್ನು ಹಾಕುತ್ತಾರೆ. ಮರದ ಕೈ ಇರುವ ಸಣ್ಣ ಪಾತ್ರೆ ಉಪಯೋಗಿಸಿ ಭಾಂಡದಲ್ಲಿಯ ಪಾಕವನ್ನು ಈ ಅಚ್ಚು ಮಣೆಗಳಿಗೆ ಹೊಯ್ಯುತ್ತಾರೆ. ಮೊದಲು ಹೆಪ್ಪುಗಟ್ಟಿ, ಮಣೆಗಳಿಗೆ ಹೊಯ್ದ ಪಾಕ ಒಂದು ಗಂಟೆಯಲ್ಲಿ ಗಟ್ಟಿಯಾಗುತ್ತವೆ. ಮಣೆಗಳನ್ನು ಎತ್ತಿ ಹಾಸಿದ ಚಾಪೆಗಳ ಮೇಲೆ ಕವಚಿಬಿಡುತ್ತಾರೆ. ಆಗ ಚಾಪೆಯ ಮೇಲೆ ತಟ ತಟ ಎಂದು ಬೆಲ್ಲದ ಅಚ್ಚುಗಳು ಮಣೆಯಿಂದ ಉದುರುವುವು. 'ಅಬ್ಬಬ್ಬಾ!' ಎಂದಿತು ನರಿ. ಕಬ್ಬಿನ ಜಲ್ಲೆಗಳನ್ನು ಹಿಸುಕಿ; ಹಿಪ್ಪೆ ಮಾಡಿ ಸಿಹಿರಸ, ರಸದ ಶುದ್ಧೀಕರಣ, ಅದನ್ನು ಕುದಿಸಿ ಒಳ್ಳೆ ಪಾಕ, ಪಾಕದ ಎರಕ, ಬಿಳಿ ಬಿಳಿ ಬೆಲ್ಲದ ಅಚ್ಚುಗಳು. ವಾಃ! ವಾಃ! ವಾಃ!

ಅಷ್ಟರಲ್ಲಿಯೇ ಮುಸ್ಸಂಜೆಯಾಯಿತು. ಸಾಲೆ ಬಿಟ್ಟು ಮಕ್ಕಳು ಮನೆಗೆ ಬರುತ್ತಿದ್ದರು. ಅಂಗಳದಲ್ಲಿ ಕಾಲಿಡುವಾಗ ಸುತ್ತುಮುತ್ತಲೂ ಗಾಳಿಯಲ್ಲಿ ಅಚ್ಚುಬೆಲ್ಲದ ಘಮ ಘಮ. ಚಿಣ್ಣರ ಬಾಯಲ್ಲಿ ನೀರೂರಿತು. ಲಗುಬಗೆಯಿಂದ ಅವರೆಲ್ಲ ರೈತ ಶ್ಯಾಮಣ್ಣನನ್ನು ಮುತ್ತಿದರು. ಶ್ಯಾಮಣ್ಣನಿಗೂ ಮಕ್ಕಳೆಂದರೆ ಬಲು ಅಕ್ಕರೆ! ಬೆಲ್ಲದ ಅಚ್ಚಿಗಿಂತ ಹೆಚ್ಚು ಅಕ್ಕರೆ! ಮುದ್ದು ಮಕ್ಕಳಿಗೆ ಆತ ಮುಗುಳು ನಗುತ್ತ ಒಂದೊಂದು ತುಂಡು ಬೆಲ್ಲ ಕೊಟ್ಟನು.

ಆಗ ಮಕ್ಕಳೆಲ್ಲ ಹಿಗ್ಗಿನ ಬುಗ್ಗೆಗಳೆ! ಬೆಲ್ಲ ಮೆಲ್ಲುತ್ತ ಅವರೆಲ್ಲ ಕುಣಿಕುಣಿದು ಓಡಾಡುತ್ತಿದ್ದರು. ಒಬ್ಬ ತುಂಟ ಹುಡುಗ ಓಡಾಡುತ್ತ ಆಲದ ಮರದಡಿಗೆ ಮುಟ್ಟಿದ. ಅದೊ! ಅಲ್ಲಿ ಪೊಟರೆಯಲ್ಲಿ ಅಡಗಿದ್ದ ಆ ನರಿ ಅವನ ಕಣ್ಣಿಗೆ ಬಿತ್ತು. ಆ ಮೇಲೆ ತಡ ಉಂಟೇ! ಹೋ! ನರಿ! ನರಿ! ಎಂದು ಆತ ಹುಯಿಲೆಬ್ಬಿಸಿಯೇ ಬಿಟ್ಟ! ತಬ್ಬಿಬ್ಬಾದ ನರಿ ಥಟಕ್ಕನೆ ಅಲ್ಲಿಂದ ಕಂಬಿ ಕೀಳಿತು. ಬಾಲ ಮುದುರಿ ಅತ್ತ ನೋಡಿ ಥಟಕ್ಕನೆ ಮುಂದೆ ಹಾರಿತು. ಹಾಗೆ ನೆಗೆದು ಜಿಗಿದು ಒಂದೇ ಸವನೆ ಓಡಿ ಹತ್ತಿರದ ಕಾಡನ್ನು ಕ್ಷಣಾರ್ಧದಲ್ಲಿ ಸೇರಿತು. ಹಿಂದೆ ಸರಿದು ನೋಡಿತು. ಬೆಲ್ಲದ ಕೆಲಸದಲ್ಲಿಯೇ ಮಗ್ನರಾದ ಯಾರೂ ಈ ಪುಕ್ಕಲು ನರಿಯ ಬೆನ್ನುಹತ್ತಿರಲಿಲ್ಲ.

ಓಡೋಡಿ ಸುಸ್ತಾದ ನರಿ ಆಯಾಸ ಕಳೆಯಲು ಒಂದು ಬಂಡೆಗೆ ಒರಗಿ ಹಾಯಾಗಿ ಕುಳಿತುಕೊಂಡಿತು. ಅದರ ಕಟ್ಟೆದುರಿನಲ್ಲಿ ಒಂದು ದೊಡ್ಡ ಕರಡಿ! ಅಂಗಾಲುಗಳ ಮೇಲೆಯೇ ನೆಟ್ಟಗೆ ನಿಂತು ಮುಂಗಾಲುಗಳಿಂದ ನೇರಳೆ ಮರದ ಕಾಂಡವನ್ನು ಪರಚುತ್ತ ಏನನ್ನೊ ಎಟಕಲು ಹವಣಿಸುತ್ತಿತ್ತು ಆ ಮುದಿ ಕರಡಿ! ಹಾಗೂ ಹೀಗೂ ಮಾಡಿ ಅಲ್ಲಿಯೇ ಕೊಂಬೆಯಲ್ಲಿ ನೇತಾಡುತ್ತಿದ್ದ ದೊಡ್ಡ ಜೇನುಹುಟ್ಟಿಯ ತುಂಡನ್ನು ಭಾರಿ ಮೇಹನತ್ತಿನಿಂದ ಕಟ್ಟಿ ಕೆಳಕ್ಕೆ ಉದುರಿಸಿತು. ಕೆದರಿದ ಜೇನುಹುಳುಗಳ ಸಮೂಹ ಗೊಯ್ಯೆಂದು ಬೋರ್ಗರೆದು ಮೇಲೆ ಮೊರೆಯುತ್ತಿತ್ತು. ಕರಡಿ ಮೈ ಕೈ ಕಾಲು, ಬಾಲ ಎಲ್ಲಾ ಮುದ್ದೆ ಮಾಡಿ ಮುಸುಡನ್ನು ಅಡಗಿಸಿ ಅಲ್ಲಿಯೇ ತಲೆಮರೆಸಿಕೊಂಡು ಬಿದ್ದಿತು. ಸ್ವಲ್ಪ ಸಮಯದ ನಂತರ ರೊಚ್ಚಿಗೆದ್ದ ಜೇನುನೊಣಗಳು ಶಾಂತವಾದುವು. ಅವೆಲ್ಲ ಒಟ್ಟುಗೂಡಿ ಹರಿಹಂಚಾದ ತಮ್ಮ ಗೂಡಿನ ರಿಪೇರಿಗೆ ತೊಡಗಿದವು.

ಆ ಮೇಲೆ ಆ ಕಳ್ಳಕರಡಿ ತಾನು ಕೆಳಕ್ಕೆ ಉದುರಿಸಿದ ಜೇನುಗೂಡಿನ ತುಂಡಿನ ಸಮೀಪಕ್ಕೆ ಹೋಯಿತು. ಸವಿ ಸವಿ ಸುವಾಸನೆಯ ಜೇನನ್ನು ತನ್ನ ಕೆಂಪು ಉದ್ದ ನಾಲಗೆಯಿಂದ ನೆಕ್ಕತೊಡಗಿತು. ತುಟಿಗಳನ್ನು ಚಪ್ಪರಿಸಿ ಮತ್ತೆ ಅತ್ತಿತ್ತ ನೋಡಿತು. ಅರರೆ! ಒಂದು ನರಿ! ಇದೇಕೆ ತಟಸ್ಥ ಬಂಡೆಗೊರಗಿ ಕುಳಿತುಕೊಂಡಿದೆ?



ಕರಡಿ ಕೇಳಿತು :- "ನರಿಯಣ್ಣಾ ಏನು ಸಮಾಚಾರ ! ಏಕೆ ಸುಮ್ಮನಾಗಿ ಕುಳಿತುಕೊಂಡೆ?" ನರಿ ಎಂದಿತು :- "ಅಜ್ಜಯ್ಯಾ ನಿನ್ನ ಈ ಕಳ್ಳಾಟ ನೋಡಿ ನನಗೆ ಬಗ್ಗುಬಡಿದಂತಾಯಿತು. ಅಷ್ಟೆ !" ಕರಡಿ ಹೀಗೆಂದು ಹಾರಿಸಿಬಿಟ್ಟಿತು :- "ಅದೆಲ್ಲಾ ಇರಲಿ, ನೀನು ಎಲ್ಲಿಂದ ಬಂದೆ? ಮುಂದೆ ಎಲ್ಲಿಗೆ ಹೋಗುವೆ ? ಹೇಳಿಬಿಡು."

"ಆಹ್ಹಾಹಾ ! ನಿನ್ನ ಚಾಲಕಿ? ದರೋಡೆ ಮಾಡಿಯೂ ಅದನ್ನು ಮರೆಯಿಸಲು ನೋಡು ವೆಯಾ ? ಸಾವಿರಾರು ಕೀಟಗಳು ತಮ್ಮ ಹೊಟ್ಟೆ ಪಾಡಿಗಾಗಿ ಹಗಲೆಲ್ಲ ದುಡಿದು ಕೂಡಿಟ್ಟ ಆಹಾರವರನ್ನು ನೀನು ದೊಡ್ಡ ಟೊಣ್ಣಪ್ಪ ಅಪಹರಿಸಿ ಬಿಟ್ಟೆಯೆ ? ಛೆ ! ಛೆ !" ಎಂದು ನರಿ ಉದ್ಗಾರ ಹೀಯಾಳಿಸಿತು.

ಕರಡಿ ಹೀಗೆಂದು ಶಬ್ದಾಲಿಸ್ಟ್ರ ಕೊಟ್ಟಿತು :- "ನರಿಯಣ್ಣಾ ! ಈ ಇಳಿವಯಸ್ಸಿನಲ್ಲಿ ದೇಹಶಕ್ತಿ ಬರಬೇಕಾದರೆ ಸಾಕಷ್ಟು ಸವಿ ತಿನ್ನಬೇಕು ನೋಡು ! ಆದುದರಿಂದ ನಾವೆಲ್ಲ ಕಾಡಿನಲ್ಲಿ ಸಿಕ್ಕುವ ಜೇನನ್ನು ತಿಂದು ಸುಖಿಸುವುದು ರೂಢಿಯೇ ಆಗಿಬಿಟ್ಟಿದೆ. ಜೇನುನೊಣಗಳೂ ಈ ಜೇನನ್ನು ಬೇರೆ ಬೇರೆ ಹೂವುಗಳಿಂದ ದೋಚಿಕೊಂಡು ಬಂದು ತಂದು ಸಂಗ್ರಹಿಸಿದ್ದು. ಅದೂ ನಿನಗೆ ತಿಳಿದಿರಲಿ."

ನರಿಯಣ್ಣನಿಗೆ ಏನು ಹೇಳಬೇಕೊ ತಿಳಿಯಲಿಲ್ಲ. ತಲೆ ಕುಡುಕಿ, ಬಾಲ ಅರಳಿಸಿ ಸುಮ್ಮನೆ ನಿಂತ ನರಿಯನ್ನು ಹೀಗೆಂದು ಕೆಣಕಿತು. "ಏನು ನರಿಯಣ್ಣ! ಒಮ್ಮೆಗೇ ಹೇಳಿಬಿಡು – ಈ ದಿನ ಏನೆಲ್ಲಾ ಕೀರ್ತಿ ಮಾಡಿದಿ ?"

ನರಿ ಮಾತಾಡಿತು:- "ಕೀರ್ತಿಯೋ ಎಂಥ ಕರ್ಮವೊ ? ಅಜ್ಜಯ್ಯಾ ! ಹಳ್ಳಿಯ ಕಬ್ಬಿನ ಹೊಲಗಳೆಲ್ಲಾ ಖಾಲಿಯಾಗಿಬಿಟ್ಟಿವೆ. ಇನ್ನು ಸದ್ಯಕ್ಕೆ ನಮಗೆ ಸವಿಹೋಲು ಇಲ್ಲದಾಯಿತು. ಆದರೆ 'ಮಗ ಸೋತರೂ ಜೂಜಿನ ಒಳವು ಕಲಿತ' ಎಂದಹಾಗೆ ಕಬ್ಬಿನಿಂದ ರೈತರು ಏನು ಮಾಡುತ್ತಾರೆಂದು ನಾನು ಕಣ್ಣಾರೆ ಕಂಡು ತಿಳಿಕೊಂಡೆ, ಅಜ್ಜಯ್ಯ !"

ಕರಡಿ ನಡುವೆ ಬಾಯಿ ಹಾಕಿ ಹೇಳಿತು:- "ಮನುಷ್ಯರು ಕಬ್ಬಿನಿಂದ ಬೆಲ್ಲ ಪಡೆಯುತ್ತಾರೆ. ದೊಡ್ಡ ಕಾರ್ಖಾನೆಗಳಲ್ಲಿ ಲಕ್ಷೋಪಲಕ್ಷ ಖಂಡಿ ಸಕ್ಕರೆ ತಯಾರಿಸುತ್ತಾರೆ. ಬೆಲ್ಲ, ಸಕ್ಕರೆ ಅವರ ಜೀವನಾವಶ್ಯಕಗಳಲ್ಲಿ ದವಸಧಾನ್ಯಗಳಷ್ಟೆ ಮುಖ್ಯ."

"ಸರಿ ! ಈಗ ತಿಳಿಯಿತು ! ಅಜ್ಜಯ್ಯ ಈ ಕಬ್ಬಿನ ಕೃಷಿಯನ್ನು ಶ್ರದ್ಧೆಯಿಂದ ಏಕೆ ಮಾಡುತ್ತಾರೆಂದು ಈಗ ನನಗೆ ಹೊಳೆಯಿತು" ಎಂದು ನರಿ ಹೇಳಿತು.

ಕರಡಿ ಮಾತು ಮುಂದುವರಿಸುತ್ತ :-"ಅವರು ಕಬ್ಬಿನಿಂದ ಮಾತ್ರ ಬೆಲ್ಲ ಪಡೆಯುವುದಲ್ಲ. ಈಚಲ ಮರ, ತಾಳೆ ತೆಂಗುಗಳ ರಸವನ್ನು ಪಡೆದು ಪನಬೆಲ್ಲ ಅಥವಾ ತಾಳೆ ಬೆಲ್ಲ ತಯಾರಿಸುತ್ತಾರೆ."

ಇದನ್ನು ಕೇಳಿ ನರಿಗೆ ಆಶ್ಚರ್ಯವಾಯಿತು. ಈಚಲು, ತಾಳೆ, ತೆಂಗುಗಳನ್ನು ಎಲ್ಲಿಯೂ ಗಾಣಕ್ಕೆ ಕೊಟ್ಟದ್ದು ಯಾರೂ ಹೀಗೆ ಹೇಳಿದ್ದೂ ಇಲ್ಲ ! ಕೇಳಿದ್ದೂ ಇಲ್ಲ. ಈ ತಾಳೆಗಳಿಂದ ರಸ ಹೇಗೆ ಪಡೆಯುತ್ತಾರೆ ಎಂಬುದೇ ಅದರ ಪ್ರಶ್ನೆ.

ಕರಡಿ ವಿವರಿಸಿತು :- "ಮರದ ತುದಿ ಏರಿ ಅಲ್ಲಿ ಯೋಗ್ಯ ರೀತಿಯಲ್ಲಿ 'ಸುರಿತ' ಮಾಡಿ ತಾಳೆರಸವನ್ನು ಸಂಗ್ರಹಿಸುತ್ತಾರೆ. ರಸವನ್ನು ಕಾಯಿಸಿ ಪಾಕಕ್ಕೆ ತಂದು ಬೆಲ್ಲ ತಯಾರಿಸುವ ವಿಧಾನ ತೋಟಮಟ್ಟಿಗೆ ಒಂದೇ."

ನರಿ ಕೇಳಿತು :- "ಅಜ್ಜಯ್ಯಾ ! ಈ ಮನುಷ್ಯರು ಹೀಗೇಕೆ ಬೆಲ್ಲಕ್ಕೆ ಬಾಯಿಬಿಡುತ್ತಾರೆ?"

ಕರಡಿಯ ಉತ್ತರ :- "ನರಿಯಣ್ಣಾ, ಹಿಂದೊಮ್ಮೆ ಶಿವಪೂಜೆ ನಡೆಯುತ್ತಿದ್ದ ಜನಸಂದಣಿಯೊಳಕ್ಕೆ ನಾನೂ ಹೊಕ್ಕಿದ್ದೆ. 'ಬೆಲ್ಲ



ಮುಟ್ಟಿದರೆ ಅನ್ನ ಗಟ್ಟಿ, ಸೊಸೆ ಬಂದರೆ ಮಾಂಸ (ಅತ್ತೆ?) ಗಟ್ಟಿ' ಎಂಬ ನಾಣ್ಣುಡಿ ಅಲ್ಲಿ ನೆರೆದ ಹೆಂಗಸರು ಗೊಜಗೊಜ ಆಡಿಕೊಂಡದನ್ನು ನಾನು ಕೇಳಿದ್ದೇನೆ. ಆಯಿತೇ? ಅಲ್ಲಿ ಕೀರ್ತನಕಾರರ – 'ಎಲ್ಲ ದೋಷ ಬೆಲ್ಲದಲ್ಲಿ ಪರಿಹಾರ' ಎಂಬ ಘೋಷವನ್ನು ನಾನು ಮರೆಯುವಂತೆಯೇ ಇಲ್ಲ. ಮನುಷ್ಯರ ರುಚಿರುಚಿಯಾದ ತಿಂಡಿ ಪಾನೀಯಗಳಿಗೆ, ಭಕ್ಷ್ಯಭೋಜ್ಯಗಳಿಗೆ ಬೆಲ್ಲವಿಲ್ಲದೆ ನಿರ್ವಾಹವೇ ಇಲ್ಲ. ಬೆಲ್ಲ, ಸಕ್ಕರೆ ಮೊದಲಾದ ಸಿಹಿ ಪದಾರ್ಥಗಳು ಅವರ ಆರೋಗ್ಯಕ್ಕೆ ಅತೀ ಅಗತ್ಯ. ಅದು ಅವರಿಗೆ ದುಡಿಯಲು ಶಕ್ತಿ ಕೊಡುತ್ತದೆ. ಆದುದರಿಂದ ಅವರು ನಾನಾ ಸ್ಥಿತಿಗತಿಗಳಲ್ಲಿ ಸಿಕ್ಕುವ ಸಿಹಿಯನ್ನು ಸೂರೆ ಮಾಡಿ ಬೆಲ್ಲ, ಸಕ್ಕರೆಗಳನ್ನು ಒದಗಿಸಿಕೊಳ್ಳುತ್ತಾರೆ."

ನರಿ ಎಂದಿತು : "ಹಾಗಾದರೆ ಮನುಷ್ಯರೂ ಇದರ ಮಟ್ಟಿಗೆ ನಿನ್ನ ಹಾಗೆಯೇ ದರೋಡೆಕೋರರೆ ಎನ್ನಬಹುದಲ್ಲವೆ, ಅಜ್ಜಯ್ಯ !"

ಕರಡಿ ಹೇಳಿತು :- "ಭೇಷ್ ಹೇಳಿದೆ ನರಿಯಣ್ಣ ! ಸೃಷ್ಟಿಯಲ್ಲಿ ಈ ಬಗೆಯ ಅನಿವಾರ್ಯ ಸೂರೆಸುಲಿಗೆಗಳು ನಿರಂತರ ನಡೆಯುತ್ತಿವೆ. ಹೀಗಿರುತ್ತಿರುವುದರಿಂದ ಮೃಗ ಪಕ್ಷಿಗಳೂ ಮನುಷ್ಯರೂ ಬಾಳಿ ಬದುಕಿದ್ದಾರೆ. ಭೂಮಿಯಲ್ಲಿ ಸಿಗುವ ನೀರು, ಲವಣಗಳಿಂದ ತಮ್ಮ ಬೆಳವಣಿಗೆಗೆ ಅಗತ್ಯವಾದ ಆಹಾರವನ್ನು ನಿರ್ಮಿಸಿಕೊಳ್ಳುವ ಸತ್ವ ವನಸ್ಪತಿ ವರ್ಗಕ್ಕೆ ಮಾತ್ರವಿದೆ. ಇತರ ಜೀವಕೋಟಿಗಳು ತಮ್ಮ ಆಹಾರಕ್ಕೆ ಒಂದಲ್ಲ ಒಂದು ರೀತಿಯಲ್ಲಿ ವನಸ್ಪತಿ ವರ್ಗವನ್ನೇ ಅವಲಂಬಿಸಿರುತ್ತವೆ."

ನರಿ ಕೇಳಿತು:- "ಅಜ್ಜಯ್ಯಾ ! ಕಬ್ಬಿನಲ್ಲಿ ಸಿಹಿಯು ಹೇಗೆ ಉಂಟಾಗಿ ಶೇಖರವಾಗುತ್ತದೆ ? ತಿಳಿಸುವಿಯಾ ?" ಕರಡಿಗೆ ಈ ವಿಷಯ ಶಾಸ್ತ್ರೀಯವಾಗಿ ತಿಳಿಸಲು ಸರಿಯಾಗಿ ಬರಲಿಲ್ಲ. ಆದರೂ ತೋರಮಟ್ಟಿಗೆ "ಜಗತ್ತಿನಲ್ಲಿ ಎಲ್ಲಾ ಆಹಾರ ಪದಾರ್ಥಗಳು ತಯಾರಾಗಲು ಸೂರ್ಯನ ಬೆಳಕೂ, ನೆಲದಡಿಯ ಸಾರಯುಕ್ತವಾದ ನೀರೂ, ವಾಯುಮಂಡಲದಲ್ಲಿರುವ ಅಂಗಾರಾಮ್ಲ ವಾಯುವೂ ಅಗತ್ಯ. ಬಿಸಿಲಿನಲ್ಲಿ ಸಸ್ಯಗಳ ಎಲೆಗಳ ಹಸುರಿನಲ್ಲಿ ಸಾರಯುಕ್ತ ನೀರೂ, ಅಂಗಾರಾಮ್ಲ ವಾಯುವೂ ಸಂಯೋಗಗೊಂಡು ಒಂದು ಸರಳ ಹಿಟ್ಟಿನಂತಹ ವಸ್ತು ಹುಟ್ಟುತ್ತದಂತೆ. ಈ ಹಿಟ್ಟು ಆ ಬಳಿಕ ನೀರಿನಲ್ಲಿ ಕರಗುವ ಸಕ್ಕರೆಯಾಗಿ ಸಸ್ಯದ ಅಂಗಗಳೆಲ್ಲೆಲ್ಲಾ ರಸವಾಗಿ ಹರಿದು ಅದರ ಪೋಷಣೆ ನಡೆಸುತ್ತಿದೆ. ರಸದಲ್ಲಿ ಹೇರಳವಿರುವ ಈ ಸಕ್ಕರೆಯೇ ಅಲ್ಲಲ್ಲಿ ಅಂತೆಯೇ ಶೇಖರವಾಗುವುದು. ಕಬ್ಬಿನಲ್ಲಿ ಈ ಸಿಹಿರಸವೇ ಜಾಸ್ತಿ. ಬೇರೆ ಕೆಲವು ಸಸ್ಯಗಳಲ್ಲಿ ರಸದಲ್ಲಿರುವ ಈ ಸಕ್ಕರೆ ಮಾರ್ಪಾಡುಗೊಂಡು ಪಿಷ್ಟಪದಾರ್ಥವಾಗಿ ಗಡ್ಡೆಗೆಣಸುಗಳಾಗುತ್ತವೆ. ಇನ್ನಷ್ಟು ಮಾರ್ಪಾಡುಗೊಂಡು ತೈಲವಾಗಿ ಎಣ್ಣೆಬೀಜಗಳಲ್ಲಿ ಒದಗುತ್ತದೆ."

ನರಿಯಣ್ಣ ಕಿವಿಯುದ್ದ ಮಾಡಿ ಕೇಳುತ್ತಿತ್ತು. ಒಮ್ಮೆಯೇ ಅದು ಬಾಯಿ ಹಾಕಿ:- "ಸರಿ ಎಲ್ಲ ಆಹಾರಕ್ಕೆ ಉಗಮ ಭೂಮಿತಾಯಿ ಮತ್ತು ಸೂರ್ಯದೇವನೆಂದಾಯಿತಲ್ಲವೇ ಅಜ್ಜಯ್ಯ?"

"ಹೌದು ! ನಾವೆಲ್ಲ ಭೂಮಿತಾಯಿಗೆ ಎರಗುವ ! ಸೂರ್ಯದೇವನಿಗೆ ನಮಸ್ಕರಿಸುವ" ಎಂದು ಕರಡಿ ಬೆಲ್ಲದ ಈ ಕತೆಯನ್ನು ಮುಗಿಸಿತು.

**





# ಪುಟ್ಟ ತಮ್ಮ





ಈ ಪುಟ್ಟ ತಮ್ಮ ಎಲ್ಲಿಂದ ಬಂದ
ತಿಳಿಯದಾಯ್ತು ನನಗೆ
ಆಸ್ಪತ್ರೆಯಿಂದ ನಮ್ಮಮ್ಮ ಮೊನ್ನೆ
ತಂದಿಹಳು ನಮ್ಮ ಮನೆಗೆ

ಗೊಂಬೆಯಂಥ ಕಿವಿ ಮೂಗು ಕಣ್ಣು
ಕೈಕಾಲು ಬಾಯಿ ಹೊಟ್ಟೆ
ತಾಯ ಮಗ್ಗುಲಲಿ ಮಲಗಿ ಆಡುವನು
ಮೈಮೇಲೆ ಇಲ್ಲ ಬಟ್ಟೆ

ಕೈ ಮುಷ್ಟಿ ಮಾಡಿ ಗುದ್ದುವನು ಗಾಳಿ
ಯಾರೊಡನೆ ಇವನ ಕುಸ್ತಿ?
ಕಾಲ್ತುಳಿದು ಕೂಗಿ ಸವಿರಾಗ ಹಾಡಿ
ಇರುಳೆಲ್ಲ ಇವನ ಗಸ್ತಿ



[illegible] ಹೊಳೆಯುತಿರುವ ಕಣ್ಣು
ಪಿಳುಕಿಸದೆ ನೋಡುತಿಹನು
ಮುತ್ತಿಡಲು ಮುಂದೆ ಮುಖ ಮಾಡೆ ಅಣ್ಣ
ಒಂದಕ್ಕೆ ದೂಡುತಿಹನು

ಮುದ್ದು ತಮ್ಮನನು ಅಪ್ಪಿಯಾಡಿಸುವ
ತಾಯಿಗೆಷ್ಟು ಪ್ರೀತಿ
ಇವನಾಟ ಕಂಡು ಮುದ್ದಿಸುತ ತನ್ನ
ಮರೆವಳೆಂಬ ಭೀತಿ



ಇವನೇಕೆ ಬಂದ ಎಲ್ಲಿಂದ ಬಂದ
ತಾಯೊಲುಮೆ ಪಡೆದ ಕಂದ
ನಲಿದಾಡಲೆಂತು ಕುಣಿದಾಡಲೆಂತು
ನಾನಾರ ಪ್ರೀತಿಯಿಂದ

— ಶಂ. ಗು. ಬಿರಾದಾರ




ವಿದ್ಯಾ ಪಾಟೀಲ

ಮಗುವಿಗೆ ಮನೆಯೇ ಮೊದಲ ಪಾಠಶಾಲೆಯು. ಮಗು ಮನೆಯಲ್ಲಿದ್ದು ಮಾತುಕತೆ, ನಡಿಗೆ, ಆಟ-ಓಟ ಎಲ್ಲವನ್ನೂ ಕಲಿತಿದೆಯಲ್ಲವೇ? ಮಗುವಷ್ಟೆ ಏಕೆ? ನಾವು ಸಹ ಮನೆಯಲ್ಲಿಯೇ ಮೊದಲು ಶಿಕ್ಷಣ ಪಡೆದಿದ್ದೇವೆ. ನಮ್ಮ ಮೊದಲ ಪಾಠಶಾಲೆಯಾದ ಮನೆಯ ಬಗ್ಗೆ ನನ್ನಲ್ಲಿ ನೆಲೆಸಿರುವ ಆತ್ಮೀಯತೆ, ಗೌರವ, ಅಭಿಮಾನವನ್ನು ಎಷ್ಟೆಂದು ಬಣ್ಣಿಸಲಿ? 'ಇದು ನನ್ನ ಮನೆ' ಎಂದು ಹೇಳುವಾಗ ಹೆಮ್ಮೆಯಿಂದ ನನ್ನ ಎದೆ ಅರಳುತ್ತದೆ. ಶಾಲೆ ಬಿಟ್ಟೊಡನೆ ನಾವು ಮನೆಗೆ ಓಡಿ ಹೋಗುತ್ತೇವೆ. ಏಕೆ? ಹಸಿವೆಯಿಂದಲ್ಲ. ಮನೆಯಲ್ಲಿದ್ದ ನಮ್ಮ ತಂದೆ, ತಾಯಿ, ಅಕ್ಕ, ಅಣ್ಣ, ತಮ್ಮ, ತಂಗಿಯರಿಗೆ ನಮ್ಮ ಶಾಲೆಯ ಪ್ರತಾಪವನ್ನು ವರ್ಣಿಸಲಿಕ್ಕೆ. ದೇವರ ನಂತರ ದೇವರ ಪ್ರತಿನಿಧಿಯಾದ, ಪ್ರತಿಯೊಬ್ಬರಿಗೂ ಪೂಜ್ಯನೀಯಳಾದ, ಪರಮಪಾವನೆ, ತ್ಯಾಗಮಯಿಯಾದ ಜನನಿಯಿರುವ ಆ ನನ್ನ ಮನೆ ಯಾವ ತೀರ್ಥಸ್ಥಾನಗಳಿಗೆ ಕಡಿಮೆ? ನಾನು ಇಷ್ಟು ಪ್ರೀತಿಸುವ ಆ ನಾಲ್ಕು ಕೊಠಡಿಯ ಪುಟ್ಟ ಮನೆಯಲ್ಲಿ ಅಂಥ ವಿಶಿಷ್ಟ ವಸ್ತು ಯಾವದಿದೆ? ಎಂದು ನೀವು ಕೇಳಬಹುದು. ನನ್ನ ಯಾವ ವಿಶಿಷ್ಟ ವಸ್ತುವೂ ಮನೆಯಲ್ಲಿಲ್ಲ? ನಮ್ಮದೆಲ್ಲವೂ ಮನೆಯಲ್ಲಿದೆ. ನಮ್ಮ ಸಂಸ್ಕಾರ, ವಿದ್ಯೆ, ಬುದ್ಧಿ, ಸಂಸ್ಕೃತಿ ಎಲ್ಲವೂ ಮನೆಯ ಮೂಲೆ ಮೂಲೆ ಕಣ ಕಣಗಳಲ್ಲಿಯೂ ಇದೆ. ನಮ್ಮದೇನಿದೆಯೋ ಅದೆಲ್ಲ ನಮ್ಮ ಮನೆಯಲ್ಲಿದೆ. ಏಕೆಂದರೆ ನಾವು ಮನೆಯಿಂದ ತಾನೇ ಸಂಸ್ಕಾರ ಪಡೆಯುವದು? ಅದರಿಂದ ತಾನೇ ನಮ್ಮ ಜ್ಞಾನ ಬೆಳೆಯುವದು? ಮನೆ ದೈವದತ್ತವಾದ ನಮ್ಮ ಬುದ್ಧಿಯೆಂಬ ಕಮಲಕ್ಕೆ ಜ್ಞಾನವೆಂಬ ಹರಳನ್ನು ಜೋಡಿಸಿ ಅದು ಹೊಳೆಯುವಂತೆ ಮಾಡುತ್ತದೆ. ಅದರಿಂದ ಪಡೆದ ಸಂಸ್ಕಾರವೇ ನಮ್ಮನ್ನು ಒಳ್ಳೆಯ ಇಲ್ಲವೇ ಕೆಟ್ಟವರನ್ನಾಗಿ ಮಾಡುವದು. "ಮೂರು ವರ್ಷದ ಬುದ್ಧಿ ನೂರು ವರ್ಷ" ಎಂಬ ನಾಣ್ಣುಡಿಯಿದೆ. ಮೂರು ವರ್ಷಕ್ಕೆ ನಾವು ಮನೆಯಲ್ಲಿ ತಾನೇ ಇರುವದು? ನಾವು ಆ ಸಮಯದಲ್ಲಿ ಕಲಿಯುವ ಗುಣಾವಗುಣಗಳು ಮನೆಯ ಮೇಲೆಯೇ ಅವಲಂಬಿಸಿದೆ. ಆದ್ದರಿಂದ ಮನೆ ನಮ್ಮ ಮುಂದಿನ ಬದುಕಿಗೆ ಸಹ ಮಾರ್ಗ ಮಾಡಿಡುತ್ತದೆ.





ಮನೆಯ ಮುಂದಿನ ಅಚ್ಚುಕಟ್ಟಾದ ಪುಟ್ಟ ತೋಟದಲ್ಲಿ ಆಡುವಾಗ ನಮಗಿರುವ ಹುರುಪು, ಶಾಲೆಯ ವಿಶಾಲವಾದ ಬಯಲಿನಲ್ಲಿ ಆಡುವಾಗ ಇರುವದಿಲ್ಲ. ಏಕೆಂದರೆ ನಾವು ಶಾಲೆಯಲ್ಲಿ 'ಶಿಸ್ತು' ಎಂಬ ಕಡಿವಾಣಕ್ಕೆ ವಶರಾಗಿರುತ್ತೇವೆ. ಸ್ವಚ್ಛಂದವಾಗಿ ಆಟವಾಡುವದಕ್ಕೆ ಇಲ್ಲಿ ಅವಕಾಶವಿಲ್ಲ. ಮನೆಯಲ್ಲಿ ನಾವು ಸ್ವತಂತ್ರರು. ಆಗ ನಮ್ಮ ಕೈಗೆ ಶಿಸ್ತಿನ ಬೇಡಿ ಇರುವದಿಲ್ಲ. ಆದಕಾರಣ ನಮಗೆ ಸ್ವಾತಂತ್ರ್ಯವನ್ನು ಒದಗಿಸಿಕೊಡುವ ಮನೆಯನ್ನು ನಾನು ಅದೆಷ್ಟು ಬಯಸುತ್ತೇನೆಂದು ವರ್ಣಿಸಲೂ ಅಸಾಧ್ಯ.

ನಾವು ನಮ್ಮ ಮನೆಯಲ್ಲಿ ನಮ್ಮ ಅಣ್ಣ ತಮ್ಮಂದಿರೊಡನೆ, ಅಕ್ಕ ತಂಗಿಯರೊಡನೆ ಎಷ್ಟು ಆತ್ಮೀಯತೆಯಿಂದ ಆಡುತ್ತೇವೆಯೋ, ಅಷ್ಟೇ ಆತ್ಮೀಯತೆಯಿಂದ ಶಾಲೆಯಲ್ಲಿರುವ ಗೆಳತಿಯರೊಡನೆ ಆಡಲು ಸಾಧ್ಯವೇ? ಇಲ್ಲ. ಎಂದಿಗೂ ಸಾಧ್ಯವಿಲ್ಲ. ಏಕೆಂದರೆ ನಾವು ಮೊದಲಿನಿಂದಲೂ ಒಡನಾಡಿಯಾಗಿ ಬೆಳೆದಿರುವ ಅಕ್ಕತಂಗಿಯರೊಡನೆ ಗೆಳತಿಯರನ್ನು ಹೋಲಿಸಲು ಹೇಗೆ ಸಾಧ್ಯವಾದೀತು?

ನಾವು ಚಿಕ್ಕಂದಿನಿಂದಲೂ ಮನೆಯಲ್ಲಿರುತ್ತೇವೆ. ಅದರ ಕಣಕಣದಿಂದಲೂ ಪರಿಚಿತರಾಗಿರುತ್ತೇವೆ. ಅಷ್ಟೇ ಶಾಲೆಯಿಂದ ಪರಿಚಿತವಾಗಿರಲು ಸಾಧ್ಯವೇ? ಯಾಕೆ? ಶಾಲೆಯಲ್ಲಿ ನಾವು ಪರಿಚಿತರಾಗಿರುವದು ನಮ್ಮ ವರ್ಗದಿಂದಷ್ಟೆ. ಬೇರೆ ವರ್ಗಗಳ ಗಾಳಿಯನ್ನೂ ನಾವು ಸೇವಿಸಿಲ್ಲ. ನಮ್ಮ ಮನೆಯ ಗಾಳಿ ಎಷ್ಟೇ ದುರ್ಗಂಧಯುತವಾದರೂ, ಅದು ನಮಗೆ ಸುವಾಸನೆಗಿಂತಲೂ ಮಿಗಿಲಾಗಿರುತ್ತದೆ.

ನಮ್ಮನ್ನು ಒಂದು ಸುಂದರ ಮನೆಗೆ ಕರೆದುಕೊಂಡು ಹೋಗುತ್ತೇವೆ. ನಿಮ್ಮ ಸಣ್ಣ ಮನೆಯನ್ನು ಬಿಟ್ಟು ಬನ್ನಿ ಎಂದು ಕರೆದರೆ ನಾವು ಹೋಗುತ್ತೇವೆಯೇ? ನಮ್ಮ ಮನೆ ಚಿಕ್ಕದಾಗಿರಲಿ, ದೊಡ್ಡದಾಗಿರಲಿ, ಸ್ವಚ್ಛವಾಗಿರಲಿ, ಹೊಲಸಾಗಿರಲಿ, ಸುಂದರವಾಗಿರಲಿ, ಕುರೂಪವಾಗಿರಲಿ ಅದು ನಮಗೆ ದೊಡ್ಡದೇ, ಸ್ವಚ್ಛವಾದುದೇ, ಸುಂದರವಾದುದೇ ಆಗಿದೆ. ನಮ್ಮ ಮನೆಯಲ್ಲಿಯೇ ನಾವು ಸ್ವರ್ಗವನ್ನು ಕಾಣುತ್ತೇವೆ. ನಮ್ಮ ಮನೆಯಲ್ಲಿರುವಷ್ಟು ನೆಮ್ಮದಿಯಿಂದ ಬೇರೆಯವರ ಮನೆಯಲ್ಲಿರಲು ಸಾಧ್ಯವೇ? ನಮ್ಮ ಮನ ಮತ್ತು ಮನೆ ಕೊಂಡಿಗಳು ಬಿಗಿದುಕೊಂಡಂತೆ ಬೆಸುಗೆ ಹಾಕಲ್ಪಟ್ಟಿವೆ.

ಹೀಗೆ ನನ್ನೀ ಪುಟ್ಟ ಮನೆಯ ಸಂಸ್ಕಾರದಿಂದ ಬೆಳಗಿದ ರಕ್ತ ನನ್ನ ಧಮನಿ ಧಮನಿಗಳಲ್ಲಿಯೂ ಹರಿಯುತ್ತಿದೆ. ನನ್ನ ಜ್ಞಾನ ಸಂಪತ್ತನ್ನು ಹೆಚ್ಚಿಸಿ, ನನಗೆ ಒಳ್ಳೆಯ ಸಂಸ್ಕಾರವನ್ನಿತ್ತು, ನನ್ನ ಶ್ರೇಷ್ಠತೆಗೊಂದು ಕಳೆಕೊಟ್ಟು ನನ್ನ ವ್ಯಕ್ತಿತ್ವಕ್ಕೆ ಅಪ್ಪಟ



ಬಂಗಾರದ ಮೆರುಗು ಕೊಟ್ಟು, ನನ್ನನ್ನೊಬ್ಬ ವ್ಯಕ್ತಿಯನ್ನಾಗಿ ಮಾಡಿದ ಆ ನನ್ನ ಮುದ್ದು ಮನೆಯನ್ನು ಎಷ್ಟೆಂದು ಬಣ್ಣಿಸಲಿ? ★★

# ಧರ್ಮಪರೀಕ್ಷೆಯಲ್ಲಿಯ ಪುಟ್ಟ ಕಥೆಗಳು

ಕೆ. ರಾಘವೇಂದ್ರರಾವ್

## ಚಂಡವೇಗನ ಕಥೆ

ಉಜ್ಜಯಿನಿ ಎಂಬ ಪಟ್ಟಣ. ಅಲ್ಲಿ ಚಂಡವೇಗನೆಂಬ ವ್ಯಾಪಾರಿ ಇದ್ದನು. ವ್ಯವಹಾರದಿಂದ ದುಡ್ಡೆಲ್ಲವನ್ನೂ ಹಾಳುಮಾಡಿಕೊಂಡು ಕಡು ಬಡವನಾದನು. ಅವನಿಗೆ ಉಣಲು ಉಡಲು ದುಸ್ಸಾಧ್ಯವಾಯಿತು. ಕೊನೆಗೆ ಅವನು ಬಳಾರಿಯೆಂಬ ದೇವತೆಯನ್ನು ಕುರಿತು ತಪಸ್ಸು ಮಾಡಿದ. ಆ ದೇವತೆ ಇವನಿಗೆ ಒಲಿದು ಒಂದು ಜಯಘಂಟೆಯನ್ನು ಕೊಟ್ಟಳು. ಅದನ್ನು ಬಾರಿಸಿದಾಗ ನೀನು ಬಯಸಿದ ಇಷ್ಟಾರ್ಥವು ಪೂರ್ತಿಯಾಗುವುದೆಂದೂ, ಅದರ ಅರ್ಧ ನೆರಮನೆಗೂ ಪ್ರಾಪ್ತವಾಗುವುದೆಂದೂ ಆ ದೇವತೆ ಹೇಳಿದಳು.

ಚಂಡವೇಗನಿಗೆ ಪರಮಾನಂದವಾಯಿತು. ಮನೆಗೆ ಬಂದನು. ತನ್ನ ಮನೆಯಲ್ಲಿ ಧನಕನಕ ಸಮೃದ್ಧಿಯಾಗಲೆಂದು ಆ ಘಂಟೆಯನ್ನು ಬಾರಿಸಿದ. ಅವನ ಮನೆ ಧನಕನಕ ಸಮೃದ್ಧಿಯಾಯಿತು. ಅಲ್ಲದೆ ನೆರಮನೆಯಲ್ಲಿಯೂ ಅವನ ಮನೆಯ ಅರ್ಧದಷ್ಟು ಧನಕನಕ ಪ್ರಾಪ್ತವಾಯಿತು. ಆಗ ಇವನು ಮಾತ್ಸರ್ಯದಿಂದ ಸೈರಿಸದೆ ಹೋದ. ತಾನು ಮಾಡಿದ ತಪಸ್ಸಿನ ಫಲ ನೆರಮನೆಗೂ ಹೋಯಿತಲ್ಲ ಎಂದು ಹೊಟ್ಟೆಕಿಚ್ಚುಪಟ್ಟ. ತನಗೆ ದೊರೆತ ಧನಕನಕವೆಲ್ಲವೂ ಹೋಗಲಿ ಎಂದು ಎರಡನೆಯ ಸಲ ಗಂಟೆಯನ್ನು ಬಾರಿಸಿದ. ಗಂಟೆ ಬಾರಿಸಿದ್ದರಿಂದ ಇವನ ಧನಕನಕವೆಲ್ಲವೂ ಹಾಳಾಯಿತು. ಪಕ್ಕದ ಮನೆಯವರದು ಅರ್ಧದಷ್ಟು ಕಡಮೆಯಾಯಿತು. ಆಗ ಇವನಿಗೆ ತಾಳ್ಮೆ ಮೀರಿತು. ತನ್ನ ಎರಡು ಕಣ್ಣುಗಳು ಹೋಗಲಿ ಎಂದು ಮೂರನೆಯ ಸಲ ಗಂಟೆ ಬಾರಿಸಿದ. ಚಂಡವೇಗನ ಎರಡು ಕಣ್ಣುಗಳು ಹೋದವು. ನೆರಮನೆಯವನ ಒಂದು ಕಣ್ಣು ಹೋಯಿತು. ಮತ್ತೆ ತನ್ನ ಎರಡು ಕಾಲುಗಳು ಮುರಿದು ಹೋಗಲಿ ಎಂದು ಗಂಟೆ ಬಾರಿಸಿದ. ಇವನ ಎರಡೂ ಕಾಲುಗಳು



ಮುರಿದವಲ್ಲದೆ ಪಕ್ಕದ ಮನೆಯವನ ಒಂದು ಕಾಲೂ ಮುರಿಯಿತು. ಹೀಗೆ ನೆರೆಹೊರೆಯವರ ಉನ್ನತಿಯನ್ನು ಸೈರಿಸದ ಅಸಹ್ಯ ವ್ಯಕ್ತಿ ಇವನು. ★



## ಕ್ಷೀರಕತರುವ ಕಥೆ

ನಾಳಿಕೇರವೆಂಬ ದ್ವೀಪ. ಸಾಗರದತ್ತನೆಂಬ ಶೆಟ್ಟಿ ಕರೆಯುವ ಹಸುಗಳನ್ನು ತೆಗೆದುಕೊಂಡು ಆ ದ್ವೀಪಕ್ಕೆ ವ್ಯಾಪಾರ ಮಾಡಲು ಹೋದ. ಎಂದೂ ಹಸುಗಳನ್ನೇ ನೋಡದ ಅಲ್ಲಿಯ ಅರಸ, ಇವು ಏನೆಂದು ಕೇಳಿದ. ಇವು ಬೇಡಿದ ರಸಾಯನವನ್ನು ಕೊಡುವವು ಎಂದು ಶೆಟ್ಟಿಯು ಹೇಳಿ, ಒಳ್ಳೆಯ ಹಾಲು, ಮೊಸರು, ತುಪ್ಪ, ಮಜ್ಜಿಗೆ ಮೊದಲಾದವುಗಳನ್ನು ದೊರೆಗೆ ಉಣಲಿಕ್ಕಿದ. ದೊರೆ ಉಂಡು ತಣಿದು, ಆ ಧೇನುಗಳನ್ನು ಕೊಂಡುಕೊಂಡು ತನ್ನ ಮನೆಯಲ್ಲಿ ಇರಿಸಿಕೊಂಡನು. ದೊರೆಯು ಭೋಜನದ ಸಮಯದಲ್ಲಿ ಹಸುವಿನ ಹತ್ತಿರ ಭಾಂಡವನ್ನು ತರಿಸಿಟ್ಟು ರಸಾಯನವನ್ನು ಕೊಡೆಂದು ಅವನ್ನು ಬೇಡಿದನು. ಮೂಕ ಪ್ರಾಣಿಗಳು ಏನು ಕೊಡುವುವು; ಮೌನವಾಗಿಯೇ ಇದ್ದುವು. ಎರಡು ಮೂರು ದಿವಸ ಹಾಗೆಯೇ ಬೇಡಿ ಅವುಗಳ ಗುಣವನ್ನರಿಯದೇ ಅವನ್ನು ಶಿಕ್ಷಿಸಿದನು. ಹೀಗೆ ಗುಣಿಗಳ ಗುಣವನ್ನು ಅರಿಯದ ಅವಿವೇಕಿ ಅರಸನಿವ.

★ ★ ★ ★ ★ ★ ★ ★ ★ ★ ★ ★ ★ ★ ★ ★

## ತೇಲುವ ಕಲ್ಲು ನರ್ತನ ಮಾಡುವ ಕಪಿಗಳು



ಚಂಪಾಪುರವೆಂಬ ಪಟ್ಟಣ. ಅದಕೆ ಅರಸ ಗುಣವರ್ಮ. ಹರಿಯೆಂಬಾತನು ಆತನ ಮಂತ್ರಿ. ಒಮ್ಮೆ ಮಂತ್ರಿಯು ಒಂದು ಸರೋವರದಲ್ಲಿ ಕಲ್ಲು ತೇಲುವುದನ್ನು ಕಂಡ. ಅದನ್ನು ಅರಸನಿಗೆ ತಿಳಿಸಿದ. ರಾಜನು ಮಂತ್ರಿಯು ಮರುಳನೆಂದು ಬಂಧಿಸಿದನು. ಮಂತ್ರಿ ಬ್ರಹ್ಮರಾಕ್ಷಸನ ಸಹಾಯದಿಂದ ಬಿಡುಗಡೆಯನ್ನು ಪಡೆದನು. ಆದರೂ ರಾಜನ ಮೇಲೆ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದ.

ಒಂದು ಉದ್ಯಾನದಲ್ಲಿ ಮನುಷ್ಯರು ನೋಡಿದ ಕೂಡಲೇ ಕೋತಿಗಳು ಗೀತವನ್ನು ಹಾಡುವಂತೆ, ವಾದ್ಯವನ್ನು ಬಾರಿಸುವಂತೆ, ನೃತ್ಯವನ್ನು ಮಾಡುವಂತೆ ಮಂತ್ರಿ ಏರ್ಪಾಡು ಮಾಡಿಸಿದ. ಒಂದು ಸಲ ರಾಜನು ಆ ಉದ್ಯಾನಕ್ಕೆ ಹೋಗಿ ಅಲ್ಲಿಯ ಕೋತಿಗಳ ಚೇಷ್ಟೆಯನ್ನು ಮಂತ್ರಿಗೆ ತಿಳಿಸಿದ. ಮಂತ್ರಿ ಅದನ್ನು ನಂಬಲಿಲ್ಲ. ಕೋತಿಗಳು ವಾದ್ಯ ಬಾರಿಸುತ್ತ ನೃತ್ಯಮಾಡುವುದು ಸಾಧ್ಯವೆ? ರಾಜನಿಗೆ ಎಲ್ಲಿಯಾದರೂ ಪಿಶಾಚಿ ಬಡಿದುಕೊಂಡಿದೆಯೆಂದು ಅವನಿಗೆ ಧೂಪವನ್ನು ಹಾಕಿಸಿದನು. ಕೈಕಾಲುಗಳನ್ನು ಕಟ್ಟಿಸಿ ಅರಮನೆಗೆ ಕರೆದುಕೊಂಡು ಹೋದನು. ರಾಜನು ತನಗೆ ಪಿಶಾಚಿ ಬಡಿದಿಲ್ಲವೆಂದೂ ತಾನು ನೋಡಿದ್ದುದು ನಿಜವೆಂದೂ ಎಷ್ಟು ಹೇಳಿದರೂ ಅವನು ಕೇಳಲಿಲ್ಲ.

ಹೀಗೆ ಪ್ರತ್ಯಕ್ಷವಾಗಿ ಕಂಡಿದ್ದರೂ ನಂಬತಕ್ಕುದಲ್ಲದ ವಿಷಯವನ್ನು ಹೇಳಬಾರದು. ಕೋತಿಗಳು ಹೇಗೆ ಗೀತವನ್ನು ಹಾಡಿ ನೃತ್ಯವನ್ನು ಮಾಡಿದುವೋ ಹಾಗೆ ನಾನು ಕಲ್ಲು ತೇಲುವುದನ್ನು ಕಂಡೆನೆಂದು ಮಂತ್ರಿ ಹೇಳಿದ.

ವ್ಯವಹಾರ ಕಂಡು ಕೇಳು ತಿಳಿಯಲಾರದೆ ಹೋಯಿತು ಹೀಗೆ ಒಂದು ದಿನವಲ್ಲ ತಿಂಗಳಲ್ಲಿ ಎಂಟು ಹತ್ತು ದಿನಗಳಾದರೂ ಆಗುತ್ತಿತ್ತು. ಈ ಮಧ್ಯೆ ಒಂದು ದಿನ ಅಕ್ಕ ತನ್ನತ್ತೆಯ ಮನೆಗೆ ಹೊರಟು ಹೋದಳು. ಆಗ ಪಾಪ, ಎಲ್ಲ ಕೆಲಸವೂ ನಮ್ಮಪ್ಪನ ಹೆಗಲ ಮೇಲೆ ಬಿತ್ತು. ಅಜ್ಜನ ಶುಶ್ರೂಷೆ ಎಲ್ಲಾ ತಾವೇ ವಹಿಸಿಕೊಂಡು ಮಾಡುತ್ತಿದ್ದರು. ಆದರೆ ಅವರಿಗೆ ಪುರುಸೊತ್ತೆಲ್ಲಿ? ಬೆಳಗ್ಗೆ ಎದ್ದು ಸ್ನಾನ ಆಹ್ನಿಕ ಮಾಡಿ ಏನೋ ಒಂದಿಷ್ಟು ಫಲಾರ ಮಾಡಿ ಕಛೇರಿಗೆ ಹೊರಟು ಬಿಡುತ್ತಿದ್ದರು. ಮಧ್ಯಾಹ್ನ ಒಂದು ಘಂಟೆಗೆ ಬಂದು ಊಟ ಮಾಡಿಕೊಂಡು ಒಂದು ಹತ್ತು ನಿಮಿಷ ಸುಧಾರಿಸಿಕೊಂಡು ಮತ್ತೆ ಕೆಲಸಕ್ಕೆ ಹೊರಡಬೇಕು. ಮರಳಿ ಬರಬೇಕಾದರೆ ರಾತ್ರಿ ಎಂಟೋ, ಒಂಬತ್ತೋ ಹೊಡೆದಿರುತ್ತಿತ್ತು, ಬಂದೊಡನೆ ಅಜ್ಜನ ಕೋಣೆಗೆ ಹೋಗಿ ವಿಚಾರಿಸಿಕೊಳ್ಳುವರು.

"ಅಪ್ಪಾ... ಮೈ ಹುಷಾರಿದೆ ತಾನೆ?"

ಈ ಅಜ್ಜನೋ! ಇಡೀ ದಿನ ಅವರಿಗೆ ಆದ ಅಪಚಾರ, ಉದಾಸೀನಗಳನ್ನೆಲ್ಲ ಜ್ಞಾಪಕವಾಗಿ ಕೂಡಿಟ್ಟುಕೊಂಡು ಮಗನ ಮುಂದೆ ದೂರು ಹೇಳಿಕೊಳ್ಳಲು ತಯಾರಾಗಿರುವರು.

"ಚೆನ್ನಾಗೇ ಇದೇನೋ ಹರೀಶಾ. ಆದರೆ ನೋಡು ಮತ್ತೆ ಒಂದಿಷ್ಟು ತಂಬಾಕು ಯಾರೂ ಮಾಡಿಕೊಡುವುದಿಲ್ಲ ಕಣೋ ಸರಿಯಾಗಿ; ಬರೀ ಒದ್ದೇ... ನೋಡು. ಎಷ್ಟು ಊದಿದರೂ ಹತ್ತುವುದೇ ಇಲ್ಲ ಬೆಂಕಿ... ಆ ಮೇಲೆ ಮಧ್ಯಾಹ್ನವೆಲ್ಲ ಆ ಹಾಳು ಸೊಳ್ಳೆ, ಒಂದು ಕಡಿಯುತ್ತೇ ಹೋದಪ್ಪಾ... ಆ ಸೊಳ್ಳೆಪರದೆ ಸರಿಯಾಗಿ ಯಾರೂ ಕಟ್ಟಿ ಕೊಡೋದೇ ಇಲ್ಲವೋ ಹರೀಶಾ... ಇಲ್ಲಿ ನೋಡು. ಇಕೊ ಇಲ್ಲಿ... ಈ ಬೆನ್ನ ಮೇಲೆಲ್ಲಾ" ಆ ಮೇಲೆ ಅಳುದನಿಯಲ್ಲಿ, "ಸ್ವಲ್ಪ ನೀನೊಂದು ಸಲ ಬೆನ್ನ ನೀವಪ್ಪಾ, ಹರೀಶಾ" ಎನ್ನುವರು.

ಆಗ ಅಪ್ಪ. ಛೆ. ಛೆ ಅನ್ನುತ್ತ ಹತ್ತಿರ ಕೂತು ಅಜ್ಜನ ಬೆನ್ನನ್ನು ಮೆಲ್ಲಗೆ ನೇವರಿಸುವರು.

"ನೀನು ಮನೇಲಿಲ್ಲದೆ ಹೋದರೆ ನನ್ನನ್ನ ಯಾರೂ ಕೇಳೋದಿಲ್ಲವೋ ಹರೀಶಾ. ಒಂದು ಬಟ್ಟಲು ನೀರು ಕೇಳಿದರೂ ಬೇಗ ತಂದುಕೊಡೋದಿಲ್ಲವೋ ಯಾರೂ..."

"ಹೌದೇನು? ಛೇ... ನೀನು ಸುಮ್ಮನಿರಪ್ಪಾ. ನಾನು ಈಗಲೇ ಅವರಿಗೆಲ್ಲ ಹೇಳಿ ಇನ್ನು ಮೇಲೆ ಹಾಗಾಗದೇ ಇರೋ ಹಾಗೆ ವ್ಯವಸ್ಥೆ ಮಾಡ್ತೀನಿ. ಸುಮ್ಮನಿರು."

"ಮಾಡಪ್ಪಾ... ಚೆನ್ನಾಗಿ ತಿಳಿಯೋ ಹಾಗೆ ಹೇಳಪ್ಪಾ ಅವರಿಗೆಲ್ಲ..."

"ಹೂಂ, ಹೇಳ್ತೇನೆ."

"ನಿನ್ನ ಊಟ ಆಯಿತೇನೋ ಹರೀಶಾ?"



"ಇಲ್ಲಪ್ಪಾ, ಈಗ ತಾನೇ ಬಂದೆ."

"ನೀನು ಹೋಗಪ್ಪ. ಹೋಗಿ ಕೈಕಾಲು ತೊಳೆದುಕೊಂಡು ಊಟ ಮಾಡಿ ಬಾ. ನಿನಗೆ ಸರಿಯಾಗಿ ಹೊಟ್ಟೆತುಂಬ ಅನ್ನ ಹಾಕ್ತಾರೆ ತಾನೆ?"

"ಓಹೋ... ಹಾಕ್ತಾರೆ ಅಪ್ಪಾ."

"ಎಲ್ಲೀ ಈ ಕಡೆ ತಿರುಗು, ನೋಡೋಣ ಸ್ವಲ್ಪ ಮೈಕೈ ತುಂಬಿಕೊಂಡಿದ್ದೀಯೋ ಇಲ್ಲಾ, ಮೊದಲಿನ ಹಾಗೇ ಇದ್ದೀಯೋ? ಗೊತ್ತೇನು? ನೀನು ಮಗುವಾಗಿದ್ದಾಗ ಬರೇ ಕೋಲಿನ್ಹಾ, ಮೈ ಬಡಕಲು, ನಿಮ್ಮಮ್ಮ ಹೇಳೋವಳು... ಕೂಸಿಗೆ... ನಮ್ಮ ಕೂಸಿಗೇ ಆಡಿನ ಹಾಲು ತನ್ನೀ ಅಂದರೇ. ಆಡಿನ ಹಾಲು ತನ್ನಿ ಅಂತ. ಆಗೆಲ್ಲಿದ್ದ ನಾನ ...? ಮಹೇಶ್‌ಪುರದ ನೀಲಿಗಡಂಗಿನಲ್ಲಿ... ಎಲ್ಲೀ ಅದೇ ಮಹೇಶ್‌ಪುರದ ನೀಲಿಗಡಂಗಿನಲ್ಲಿ. ಅಲ್ಲೀ ನೀನು ಹುಟ್ಟಿದ್ದು... ಗೊತ್ತಾ ನಿನಗೆ? ಹೂಂ ಮಹೇಶಪುರದಲ್ಲಿ...ಅಲ್ಲೀ...ಅಲ್ಲೇನು ಅಂದರೆ... ಅಲ್ಲೀ... ಅಯ್ಯೋ ಹೋಗು... ಏನು ಹೇಳತಾಯಿದ್ದೆ ಅನ್ನೋದೇ ಮರೆತುಹೋಯಿತು... ಯಾವುದೂ ಜ್ಞಾಪಕವಿರೋದಿಲ್ಲ ಈ ನಡುವೆ."

"ಅದೇಪ್ಪಾ, ಆಡಿನ ಹಾಲು."

"ಹೂಂ... ಅಕೋ ನೋಡಿದೆಯಾ ಆಡಿನ ಹಾಲು... ಆಡಿನ ಹಾಲು... ಆಡಿನ ಹಾಲು ಯಾತಕ್ಕೆ ಅಂತ ಹೇಳಿದೆ?"

"ಅದೇ ಅಮ್ಮ ಆಡಿನ ಹಾಲು ತನ್ನಿ ಕೂಸಿಗೇ ಅಂದಳು ಅಂದೆ"

"ಕೂಸಿಗೆ ಅಂದರೆ ಯಾರಿಗೆ ನಿನಗೇ ಕಣೋ ನಿನಗೇ... ನೀನು ಬಡಕಲಾಗಿದ್ದೆ ನೋಡು. ಎಲ್ಲಿಂದ ತರೋದು ಆಡಿನ ಹಾಲೂ? ನಮ್ಮ ಸಾಹೇಬರ ಹತ್ತಿರ ದೊಡ್ಡದೊಂದು ಆಡಿತ್ತು. ಮಾಲಿ ಹತ್ತಿರ ಹೇಳಿದೆ. ಅವನ ತೋಟದ ಮಾಲಿ. ಅದೇ ಆ ಸಾಹೇಬರ ತೋಟ. ಎರಡು ರೂಪಾಯಿ ಕೊಡ್ತೇನಿ ದಿನಾ ಅರ್ಧ ಸೇರು ಹಾಲು ತಂದು ಕೊಡಬೇಕು ಅಂತ—"

ಅಪ್ಪ, ಅಜ್ಜ ಮಾತಾಡಿ ಸುಸ್ತಾಗುವವರೆಗೂ ಅಲ್ಲೇ ಕೂತಿರುತ್ತಿದ್ದರು, ಹೂಂ ಗುಟ್ಟಿಕೊಂಡು.

ಹೊಟ್ಟೆ ತುಂಬಾ ತೃಪ್ತಿಯಾಗುವವರೆಗೂ ಅನ್ನ ತಿಂದು ಅಜ್ಜ ಬಹಳ ಖುಷಿಯಾಗಿರುತ್ತಿದ್ದರು.

"ಹಾಗಾದರೆ ನೀನಿನ್ನು ಹೋಗಪ್ಪಾ, ಹರೀಶಾ. ಹೋಗಿ ಊಟಮಾಡು ಹಾಲು ಕುಡೀತಾಯಿದ್ದೀ ತಾನೇ?"

"ಹೂಂ ಅಪ್ಪಾ"

"ಚೆನ್ನಾಗಿ ಹಾಲು ಕುಡಿ ತಪ್ಪದೆ. ಹಾಲು ಒಳ್ಳೇದು ಮೈಗೆ. ಗೊತ್ತಾ?"

"ಹೂಂ ಗೊತ್ತು ಅಪ್ಪಾ."

ಅಪ್ಪ ಹೋಗಿ ತಮ್ಮ ಊಟದ ಕಡೆಗೆ ಗಮನ ಕೊಡುವರು. ಹೋಗುವುದಕ್ಕೆ ಮೊದಲು ಅಜ್ಜನನ್ನು ಹಾಸಿಗೆಯ ಮೇಲೆ ಮಲಗಿಸಿ ದಪ್ಪದಾದ ಕಂಬಳಿಯನ್ನು ಅವರ ಮೈ ತುಂಬಾ ಚೆನ್ನಾಗಿ ಹೊದಿಸಿ "ಇನ್ನು ನೀವು ಮಲಗಿ ನಿದ್ದೆ ಮಾಡೀಪ್ಪಾ ಹಾಯಾಗಿ" ಎಂದು ಹೇಳುವರು. "ಹೊದಿಕೆ ತೆಗೀಬೇಡಿ ಅಪ್ಪಾ, ಥಂಡಿಯಾಗತ್ತೆ" ಎಂದು ಎಚ್ಚರಿಕೆ ಕೊಡುವರು.

ಅಪ್ಪ ಇಷ್ಟೆಲ್ಲ ಮಾಡಿಬಂದರೆ ಅಮ್ಮ ಮೂಗು ಮುರಿಯುವಳು.

"ಆಯಿತೇ ಪಿತೃಸೇವೆ? ಸಾಂಗವಾಗಿ ಅಬ್ಬಬ್ಬಾ! ಇಂಥ ಸೇವೆ ನಾನೆಲ್ಲೂ ನೋಡಿಲ್ಲ, ಕಂಡಿಲ್ಲ."

ಅಪ್ಪ ಸ್ವಲ್ಪ ನಾಚಿ, ಸಂಕೋಚದ ದನಿಯಲ್ಲಿ— "ಆಹಾ...ಸುಮ್ಮನಿರೆ ಸಾಕು" ಎನ್ನುವರು.

"ಯಾಕೆ ಸುಮ್ಮನಿರಲಿ? ಇವತ್ತೋ ನಾಳೆಯೋ ಕಣ್ಣುಮುಚ್ಚೋ ಮುದಿ ತಂದೆಯನ್ನ ಎರಡು ವರ್ಷದ ಕೂಸಿನ ಹಾಗೆ ಮುದ್ದು ಮಾಡೀ...

ಇನ್ನೂ! ಲಕ್ಷಣವಾಗಿರುತ್ತೆ...ಇಂಥ ವಿಚಿತ್ರ ಸಾಸೆಲ್ಲೂ ಕಂಡಿಲ್ಲ."

"ಕಂಡಿಲ್ಲಾ ಕಂಡಿಲ್ಲಾ...!...ಹೌದು, ಸುಮ್ಮ ನಿರು ಇನ್ನು ಸಾಕು...ಇನ್ನೆಷ್ಟು ದಿನ ಇರುತ್ತಾರೆ... ಅಪ್ಪಾ? ಇರುವಷ್ಟು ದಿವಸ...ಆ ಮೇಲೆ...?"

"ಅದೆಲ್ಲರಿಗೂ ಗೊತ್ತು. ಆ ಮೇಲೆ ನಿಮಗೆ ಯಾರೂ ಇಲ್ಲ ಅಂದುಬಿಟ್ಟು ಆ ಚೂನಾಪಾಡಾದ ಹಾಳು ಬೇಗುಲದಲ್ಲಿ ಕೂತಿರುವ ದಿಗಂಬರ ಸನ್ಯಾಸಿ ಸೇಷೆ ಮಾಡ್ತೀರಿ ಹೋಗಿ. ಬನ್ನೀ ಬಡಿಸ್ತೀನಿ... ಊಟಮಾಡಿ ನನ್ನ ಉದ್ಧಾರ ಮಾಡಿ ಸದ್ಯಕ್ಕೆ."

ಅವತ್ತೇ ಮಧ್ಯರಾತ್ರಿ ನಾವೆಲ್ಲ ನಿದ್ದೆಯಲ್ಲಿ ಮುಳುಗಿದ್ದೇವೆ. ಆಗ ಅಜ್ಜ ತಾವು ಮಲಗಿದ ಕೋಣೆ ಯಿಂದ ಹೊರಗೆ ಬಂದು ಕತ್ತಲಲ್ಲಿ ಕೈಗಳಿಂದ ತಡವಿ ಕೊಂಡು ಜಗುಲಿಗೆ ಬಂದು ಕೂಗಿದರು.

"ಲೋ ಹರೀಶಾ...ಹರೀಶಾ..ಎಲ್ಲಿ ಹೋದೆಯೋ ಏ...ಬಹುಮಾ (ಸೊಸೆ) ... ಬಹುಮಾ ... ಹರೀಶಾ..."

"ಯಾಕಪ್ಪಾ...ಏನಾಯಿತು?"

"ಲೋ ನಿನ್ನ ಹೆಂಡತಿ ನನಗಿನ್ನೂ ಅನ್ನವೇ ಹಾಕಿಲ್ಲವೊ. ರಾತ್ರಿ ಎಷ್ಟು ಹೊತ್ತಾಗಿದೆ ನೋಡು... ನಾನು ಹಾಗೇ ನಿದ್ದೆ ಮಾಡಿಬಿಟ್ಟೆ...ಅನ್ನ ಆಗಿಲ್ಲ ವೇನು ಇನ್ನೂ?

ಅಪ್ಪ ಮೂಕ!

ಅಮ್ಮ ನಿದ್ದೆಗಣ್ಣಲ್ಲಿ ಎದ್ದು,

"ಏನು...ಏನಾಯಿತು?" ಅಂದಳು.

"ಅಪ್ಪನಿಗೆ ಅನ್ನ ಬೇಕಂತೆ".

"ಅಬ್ಬ!...ದೇವರೇ ಗತಿ ಇನ್ನು! ಸೊಂಡಿ ತಿಂದು ಹಾಕುವುದು ಬಾಕಿ ಇದೆ ಇನ್ನ...ಅಬ್ಬ! ಅಬ್ಬಬ್ಬ! ಎಷ್ಟೋ ಸಂಸಾರಗಳನ್ನು ನೋಡಿದ್ದೇನೆ. ಮಾವಂದಿರನ್ನು ನೋಡಿದ್ದೇನೆ. ಆದರೆ ಇಂಥ ವಿಚಿತ್ರ...ಎಲ್ಲೂ ಕಂಡಿಲ್ಲಮ್ಮ...ಎಲ್ಲೂ ಕಂಡಿಲ್ಲ."

"ಅಯ್ಯೊ ಕೂಗಬೇಡವೇ...ಕೂಗಿದರೆ ಆಗಿ ಹೋಯಿತೇ ಎಲ್ಲಾ ಸಮಯದಲ್ಲೂ..."

ಈ ಮಧ್ಯ ಅಜ್ಜ –ನಮ್ಮ ನಿರ್ವಿಕಾರನಾದ ಅಜ್ಜ, ಕಣ್ಣು ಸರಿಯಾಗಿ ಕಾಣಿಸದ, ಕಿವಿಯೂ ಸರಿಯಾಗಿ ಕೇಳಿಸದ, ನಮ್ಮ ಮುದಿ ಅಜ್ಜ ಮತ್ತೆ ಕೂಗಿದರು.

"ಹರೀಶಾ...ಲೋ ಹರೀಶಾ!"

"ಬಂದೇ ಅಪ್ಪಾ...ಇಗೋ ಬಂದೇ..."

"ನನಗೆ ಅನ್ನ ಕಲಸಿಕೊಂಡು ಬಾಂತ ಅನ್ನೋ... ಹೊಟ್ಟೆ ಹಸೀತಾಯಿದೇ...!"

ಅಪ್ಪ ಹೋಗಿ ಅಜ್ಜನನ್ನು ಸಮಾಧಾನ ಮಾಡಲು ಪ್ರಯತ್ನಿಸಿದರು, ಏನೂ ತಿಳಿಯದ ಎಳೇ ಮಕ್ಕಳನ್ನು ಸಮಾಧಾನ ಮಾಡುವ ಹಾಗೆ...ರಾತ್ರಿ ಎಂಟು ಗಂಟೆ ಹೊಡೆದಾಗಲೇ ಊಟಮಾಡಿಲ್ಲವೇ..ಸೊಸೆಯೇ ಅನ್ನ ಕಲಸಿ ಊಟ ಮಾಡಿಸಿಬಿಟ್ಟು ಬರಲಿಲ್ಲವೇ? ಮಾಗುರ್ ಮೀನಿನ ಹುಳಿ ಮಾಡಿದ್ದಳು. ಅದರಲ್ಲಿ ಅನ್ನ ಕಲಸಿ ತಿನ್ನಿಸಲಿಲ್ಲವೇ? ಅಜ್ಜನಿಗೆ ಅನ್ನ ಹಾಕದೆ ಉಳಿದವರೆಲ್ಲ ಅನ್ನ ತಿಂದು ಮಲಗುವುದಕ್ಕೆ ಸಾಧ್ಯವೇ? ಮನಸ್ಸು ಬರುತ್ತೆಯೆ? ಈಗ ಎಷ್ಟು ಘಂಟೆ? ರಾತ್ರಿ ಎರಡು ಘಂಟೆ ಈಗ ಯಾರಾದರೂ ಅನ್ನ ತಿಂತಾರೆಯೇ? ತಿಂದರೆ ಮೈಕೆಡೋದಿಲ್ಲವೆ?...ನಾಳೆ ಬೆಳಗಾಗುತ್ತಲೂ... ಅಜ್ಜನಿಗೆ ಅನ್ನ ಮಾಡಿ ತಿನ್ನಿಸಿದ ಮೇಲೆಯೇ ಬೇರೆ ಕೆಲಸ...ಖಂಡಿತ. ಇನ್ನೇನು ಕಣ್ಣು ಮುಚ್ಚಿ ತೆರೆಯುವುದರೊಳಗೆ ಬೆಳಕು ಹರಿದು ಬಿಡುತ್ತೆ...ಈಗ ಹೀಗೆಲ್ಲ ರಗಳೆ ಮಾಡಿದರೆ ಎಲ್ಲರಿಗೂ ಕಷ್ಟಕೊಟ್ಟ ಹಾಗೇ ಆಗೋದಿಲ್ಲವೆ? ಹಾಗೆ ಮಾಡುವುದೇನು ಸರಿಯಾದದ್ದೆ? ಛೀ...

ಇಷ್ಟೆಲ್ಲ ಹೇಳಿದ ಮೇಲೆ ಅಜ್ಜ ಚಿಕ್ಕಮಕ್ಕಳ ಹಾಗೆ ಉಂ...ಊಂ... ಎಂದು ಹೂಂಗುಟ್ಟಿ ಅನುಮಾನದ ದನಿಯಲ್ಲಿ,

"ಅನ್ನ ತಿಂದೆನೇ ನಾನು?" ತಿಂದು ಕೇಳಿದರ

"ಹೌದಪ್ಪಾ...ನನ್ನ ಮಾತು ನಂಬೋದಿಲ್ಲವೆ ಮಾಗುರ ಮೀನು ತಂದಿದ್ದೆ. ನಾನು ಸಂತೆಯಿಂದ ನಿಮಗೆ ಇಷ್ಟ ಅಂತ ಅದರ ಹುಳಿ ಮಾಡಿದ್ದಳ ನಿಮ್ಮ ಸೊಸೆ. ಅದರಲ್ಲಿ ಕಲಸಿಕೊಂಡು ಬಂದಿದ್ದಳ ನಿಮಗೆ ರುಚಿಯಾಗಿ ತಿಂದಿರಿ. ನಿಜ. ನಿಮ್ಮ ಹತ್ತಿ ಸುಳ್ಳು ಹೇಳುತ್ತೇನೆಯೆ? ಬನ್ನೀ, ಮಲಗಿ ನಿ ಮಾಡುವಿರಂತೆ. ಥಂಡಿ ಆಗುತ್ತೆ ಆ ಮೇಲೆ. ಒಳಗೆ ಹೋಗೋಣ ಬನ್ನಿ.

"ಸರಿ ಹಾಗಾದರೆ...ಸರಿ."

"ಬನ್ನಿ..."

ಅಪ್ಪ ಕೈ ಹಿಡಿದುಕೊಂಡು ಮೆಲ್ಲಗೆ ನಡೆ ಕೊಂಡು ಹೋಗಿ ಅಜ್ಜನನ್ನು ಹಾಸುಗೆ ಮೇ ಮಲಗಿಸಿ ಅಚ್ಚುಕಟ್ಟಾಗಿ ಮೈ ತುಂಬಾ ಹೊ ಹೊದಿಸಿ, ಸೊಳ್ಳೆಪರದೆ ಸರಿಮಾಡಿ ಮತ್ತೆ ಬಂ ಮಲಗಿದರು.

"ಸುಲಭವಾದೇ ಸಮಾಧಾನ ಆಯಿತ ಅಂತೂನೂ" ಅಂದಳು ಅಮ್ಮ.

"ಸಮಾಧಾನ ಮಾಡೋದು ಗೊತ್ತಿದ್ದ ಸುಲಭವಾಗೇ ಆಗತ್ತೆ...ಅದಿರಲಿ...ಇನ್ನು ನಾ ಯಿಂದ ರಾತ್ರಿ ಸ್ವಲ್ಪ ಅನ್ನ ತೆಗೆದಿಟ್ಟಿದ್ದರೆ ಹೇ ಅಪ್ಪನಿಗೆ?

"ಆಹಾಹಾ! ಏನು ಹೇಳ್ತೀರೋ ನಿಮ ಒಪ್ಪಬೇಕು! ಅಲ್ಲಾ ಹೊಟ್ಟೇ ಬಿರಿಯೋ ಹಾ ತಿಂದು ಮುದುಕನಿಗೆ ಭೇದಿ ಕಿತ್ತುಕೊಳ್ಳಲಿ. ಆಮೇಲೆ ಅದರ ಜವಾಬ್ದಾರಿ ಹೊರೋ ಯಾರು ಅಂತೀನಿ? ಹೇಳೋದಕ್ಕೇನು!"

ಅಪ್ಪ ಮುಗುಳುನಗೆಯಿಂದ, "ಇದು ವರೆಗ ಯಾರು ಹೊತ್ತರೋ ಅವರೇ ಹೊರತಾರೆ" ಅಂ ಕೊಂಡಿರಬಹುದು. ಆದರೂ ಹೊರಗೇನೂ ಅನ್ನ ಹೋಗಿ ತಮ್ಮ ಮಂಚದ ಮೇಲೆ ಮಲಗಿದರು.

* * * *

ಕಛೇರಿ ಕೆಲಸದ ಮೇಲೆ ಅಪ್ಪ ಕೆಲವು ದಿ ಹೋಬಳಿ ಟವುನ್‌ಗೆ ಹೋಗಿ ಅಲ್ಲೇ ಇರಬೇಕ ಯಿತು. ಹೋಗುವ ಮೊದಲು ಅಮ್ಮನಿಗೆ ಹ ಬಾರಿ ಹೇಳಿದರು. ಅಜ್ಜನಿಗೆ ಯಾವ ವಿಧವಾ ಅನಾನುಕೂಲವೂ ಆಗದ ಹಾಗೆ ನೋಡಿಕೊಳ್ಳಬೇಕ ಅಂತ. ಉದಾಸೀನ, ಅಪಚಾರ ಏನೂ ಮಾಡ ಬೇಡಿ ಅಂತ ಹೇಳಲಿಕ್ಕೆ ಸಾಹಸ ಬರಲಿಲ್ಲವೇನೋ. ಹೇಳಿದ್ದರೆ ದೊಡ್ಡ ಯುದ್ಧ ಆಗಿಬಿಡುತ್ತಿತ್ತು ಅಜ್ಜನ ಬಳಿ ಹೋಗಿ "ಅಪ್ಪಾ, ನಾನು ಗೋಯಾ ಡಿಗೆ ಹೋಗಿಬಿಟ್ಟು ಬರುತ್ತೇನೆ. ನಾಲ್ಕೈ ದಿನವಾಗುತ್ತೆ, ಬರೋದು. ಸ್ವಲ್ಪ ಸರಿಯಾ ನಡೆದುಕೊಂಡು ಇರ್ರಿ. ನಿನ್ನ ಸೊಸೆಗೆ ಹೊರಲಾ ದಷ್ಟು ಕೆಲಸ ಜವಾಬುದಾರಿ. ಎಷ್ಟು ನೋಡಿಕೋಬೇಕವಳು, ಮಕ್ಕಳು ಮರಿ...ಆ ಕಾಳು..."

"ಯಾವಾಗ ಬರ್ತೀ ಅಂದೆ?"

"ಬುಧವಾರ ಬಂದು ಬಿಡ್ತೇನೆ."

"ಇವತ್ತೇ ಹೋಗಬೇಕೇನೋ? ಶನಿವಾ ಪ್ರಯಾಣ ಮಾಡಬಾರದು ಎಲ್ಲಿಗೂ ಗೊತ್ತಾ ನಿಶೀಕಾಂತ ತಲಫ್‌ದಾರ್ ಹೇಳುತಾಯಿದ

ನಾವು ಸಂಧ್ಯೆಗೆ ಇನ್ನೂ ಟಿ.

ಮಂತ್ರ.

"ಓ ಹರೀಶಾ!"

"ಅಜ್ಜಾ ತಂಬಾಕು ತಯಾರು ಮಾಡಿಕೊಡ ಬೇಕಾ?"

ಇದೂ ಅಮ್ಮನ ಹೇಳಿಕೆಯಂತೆ. ಅಜ್ಜನನ್ನು



ತಾರೂ...ಅದೇ ಮೆಹೇರ್‌ಪುರದ ನೀಲಿಗಡಂಬಿನ ರಾಘರು...ಶನಿವಾರ ಕೃಯಾಣಕ್ಕೆ ಅನುಕೂಲ ಅಂತ."

"ಯಾರು ಹೇಳಿದರೂ ಇವತ್ತು ಶನಿವಾರ ಅಂತ?"

"ಹಾಗಾದರೆ ಯಾವ ವಾರ ?"

"ಶುಕ್ರವಾರ."

"ಅದು ಹೇಗೋ— ನೀನು ಹೇಳಿದ ಐದು ದಿನಗಳಾಗುತ್ತೆ, ಬರೋದು ಅಂತ. ಹಾಗಾದರೆ ಇವತ್ತು ಶನಿವಾರವೇ ಆಗಬೇಕು. ಶುಕ್ರವಾರ ಹೇಗೆ?"

"ಅಪ್ಪನಿಗೆ ಲೆಕ್ಕಾಚಾರ ಎಷ್ಟು ಚೆನ್ನಾಗಿ ಜ್ಞಾಪಕ ಇದೆ! ಐದಾರು ದಿನ ಅಂತ ಹೇಳಿದೆ, ಐದೇ ಅಂತಲ್ಲ. ನೀವೇನೂ ಯೋಚಿಸಬೇಡಪ್ಪಾ. ಯಾವ ಅಸ್ವಕರ್ಯವೂ ಆಗೋದಿಲ್ಲ ನಿಮಗೆ."

ಅಪ್ಪ ಏನೋ ಹೊರಟು ಹೋದರು. ಹೇಗೋ ಎರಡು ದಿನ ಕಳೆಯಿತು. ಆಮೇಲೆ ಅಜ್ಜ ತಮ್ಮ ಉಪದ್ರವ ಶುರು ಮಾಡಿದರು. ಸಂಜೆ ಆಗುತ್ತಲೂ ವಾಡಿಕೆಯಂತೆ ಕೂಗಿದರು.

"ಲೋ ಹರೀಶಾ!"

ಯಾರೂ ಉತ್ತರ ಕೊಡಲಿಲ್ಲ. ಅಮ್ಮ ನಮ್ಮೆಲ್ಲ ಕಣ್ಣು ಮಿಟುಕಿಸಿ ಅಪ್ಪ ಇನ್ನೂ ಊರಿಗೆ ಬಂದಿಲ್ಲವೆಂಬ ವಿಷಯ ತಿಳಿಸದೆ ಇರಿ ಅಂತ ಸೂಚನೆ ಕೊಟ್ಟಿದ್ದಳು. ಏಕೆಂದರೆ ಅಜ್ಜನಿಗೆ ತಿಳಿದರೆ ಹೆಚ್ಚು ಉದ್ವಿಗ್ನರಾಗುವರೆಂಬ ಭಯ.

"ಲೋ ಹರೀಶಾ! ಮನೆಗೆ ಬಂದಿಯೇನೋ? ...ಓ ಹರೀಶಾ?"

ನಾನು ಅಮ್ಮನ ಸೂಚನೆಯಂತೆ,

"ಇಲ್ಲಜ್ಜಾ, ಅಪ್ಪ ಇನ್ನೂ ಮನೆಗೆ ಬಂದಿಲ್ಲ." ಎಂದೆ-

"ಇವತ್ತು ಎಷ್ಟು ಹೊತ್ತಿಗೆ ಹೋದ ಕಛೇರಿಗೆ? ನನಗೆ ಹೇಳಲೇ ಇಲ್ಲ ಹೋಗುವಾಗ?"

ಬೆರೆಸುವುದಕ್ಕೆ ಇದೊಂದೇ ಒಳ್ಳೆಯ ಉಪಾಯ. ಆಗ ಅಜ್ಜ ನಮಗೆಲ್ಲ,

"ಕೂತುಕೊಳ್ಳಿ ನನ್ನ ಹತ್ತಿರ" ಎನ್ನುವರು.

ನಾನು, ನನ್ನ ತಮ್ಮ ನೀಲು, ಫಟೂ ಮತ್ತು ನನ್ನ ತಂಗಿಯರು ಸರಳಾ ಮತ್ತು ವಿನೂ ಅಜ್ಜನ ಸುತ್ತ ಕೂತೆವು.

"ಎಲ್ಲರೂ ಬಂದಿದಾರಾ?"

"ಹೂಂ...ಅಜ್ಜಾ."

"ಬಿನೂ ಬಂದಳಾ? ನನ್ನ ಹತ್ತಿರ ಸರಿದು ಬಂದು ಕೂತುಕೊಳ್ಳಿ, ಎಲ್ಲರೂ, ಕೇಳಿ ಕಥೆ..."

"ಊಂ...ಹೇಳಿ ಹೇಳಿ."

"ಕೇಳಿ...ಸುಂದರವನದಲ್ಲಿ ನೋಡು ಅರವತ್ತೈದನೆ ನಂಬರಿನ ಲಾಟಿನಲ್ಲಿ ನಮ್ಮ ಧಣಿಗಳ ಕಛೇರಿ. ಪಾಯಿಕ್‌ಪಾಡಾದ ಜಮೀನದಾರರು ರಾಜಾ ಈಶ್ವರಚಂದ್ರಸಿಂಹ...ಬಂಗಾಳ ದೊಡ್ಡ ಜಮೀನ್ದಾರರೂ...ಆ ಕಛೇರಿ ಯಾವುದು? ಗರನ್‌ಹಾಟಿ ಕಛೇರಿ ಅಂತ ಅದರ ಹೆಸರು...ಯಾವುದೂ? ಆ ಈಶ್ವರಚಂದ್ರಸಿಂಹ ರಾಜರ ಕಛೇರಿ. ಸುಂದರಿ, ಗರಾನ್ ಮರಗಳ ಕಾಡು ನೋಡು. ಅದಕ್ಕೇ ಗರಾನ್ ಹಾಟಿ ಅಂತ ಹೆಸರು. ಒಂದು ಸಲ ಏನಾಯಿತು ನೋನಾತಲಾ ಖಾರಿಯಲ್ಲಿ ನಮ್ಮ ದೋಣಿ ತಂಗಿತ್ತು. ಮಾಘಮಾಸ ನೀರಿನಲ್ಲಿ ಮಡು ಬಂದಿದೆ."

"ಏನು ಹಾಗಂದರೆ ಅಜ್ಜಾ?"

"ಹಾಗಂದರೆ ಪ್ರವಾಹ ಅಂತ...ಯಾಕೆ ಹೇಳು...ಮುಳುಗಿ ಹೋಗುತ್ತೆ...ಅದಕ್ಕೇ...ದೋಣಿ ಲಂಗರು ಕಟ್ಟಬೇಕಾಗತ್ತೆ. ದಡದಲ್ಲಿ...ಆಮೇಲೆ...ಏನು ಹೇಳುತಾಯಿದ್ದೆ ನಾನು?"

ಇದೇ ಬಂದದ್ದು ಕಷ್ಟ! ಅಜ್ಜನ ಹತ್ತಿರ ಕಥೆ ಕೇಳೋದರಲ್ಲಿ ಏನೂ ಮಜಾ ಇಲ್ಲ. ಸುಮ್ಮನೆ ಮರೆತು ಹೋಗತಾಯಿರುತಾರೆ.

"ನೀವು ಹೇಳತಾಯಿದ್ದಿರಿ...ನೀರಿನಲ್ಲಿ ಪ್ರವಾಹ ಬಂದಿದೆ ಅಂತ."

"ಹ್ಞಾಂ...ಆ ಮೇಲೆ ನೋಡ್ತೇವೆ. ಒಂದು ಭಾರಿ ದೊಡ್ಡ ಹುಲಿ ಬಂದು ದೋಣಿ ಪಕ್ಕದಲ್ಲೇ ನಿಂತು ನೀರು ಕುಡೀತಾಯಿದೆ. ನಮ್ಮ ಜೊತೆಯಲ್ಲಿ ಫಜೀರಾಲಿ ಬಿಶ್ವಾಸ್ ಇದ್ದನಲ್ಲ...ಭಲೆ ದೊಡ್ಡ ಶಿಕಾರಿ...ಅವನು ಏನು ಮಾಡಿದ, ಬಂದೂಕಿನಿಂದ ಠೋಂಗ್ ಅಂತ ಗುಂಡು ಹೊಡೆದೇ ಬಿಟ್ಟ...ಒಂದು ಗುಂಡು..ಎರಡು ಗುಂಡು...ಬಸ್! ಹುಲಿ ಕ್ರೈಂ ಅಂತ ಒಂದೇ ನೆಗೆತ ನೆಗೆದು ಠಸ್ ಅಂತ ಬೋರಲಾಗಿ ನೀರಿನ ಮೇಲೆ ಬಿದ್ದು ಬಿಡಬೇಕೆ?...ಲೋ ಮನೂ!"

"ಏನಜ್ಜಾ?"

"ನಿಮ್ಮಪ್ಪ ಬಂದನೇನೋ?"

"ಇಲ್ಲಜ್ಜ. ಇನ್ನೂ ಬಂದಿಲ್ಲ."

"ಹೋಗಿ ನೋಡಿಕೊಂಡು ಬಾ ಮತ್ತೆ. ಹೋಗು ನನ್ನ ರಾಜಾ...ಲೋ ಹರೀಶಾ!"

"ಇಲ್ಲ ಅಜ್ಜಾ...ಅಪ್ಪ ಬಂದಿಲ್ಲ. ಕಥೆ ಹೇಳಿ ಅಜ್ಜಾ"

"ಹೋಗು ನೋಡಿಕೊಂಡು ಬಾ ನನ್ನ ರಾಜಾ."

"ನೋಡಿಕೊಂಡು ಬರಬೇಕಾಗಿಲ್ಲ. ಬಂದಿಲ್ಲ ಖಂಡಿತ. ಬಂದಿದ್ದರೆ ನಿಮ್ಮ ಹತ್ತಿರ ಬಂದು ಮಾತಾಡತಾ ಇರಲಿಲ್ಲವಾ?"

ಅಜ್ಜ ಮತ್ತೆ ಕಥೆ ಶುರು ಮಾಡಿದರು. ಹುಲಿ ಕಥೆ ಮುಂದಕ್ಕೆ ಸಾಗದೆ ಹೋಯಿತು. ಸುಮ್ಮನೆ ಮರೆತೂ ಮರೆತೂ, "ಏನು ಹೇಳುತಾಯಿದ್ದೆ ನಾನೂ?" ಅಂತ ಮತ್ತೆ ಹಿಂದಕ್ಕೆ ಹೋಗುತ್ತಾ ಹೋಗುತ್ತಾ ಮತ್ತೆ ಮೊದಲಿನಿಂದ ಶುರು ಮಾಡಿದರು. ಆದರೆ ಎಲ್ಲಾ ಅದಲು ಬದಲು. ಹೆಸರುಗಳೆಲ್ಲ ಬದಲಾಯಿಸಿಬಿಟ್ಟರು. ಶಿಕಾರಿ ಫಜೀರಾಲಿ ಇದ್ದವನು ಈಗ ಅಜೀಮುದ್ದೀನ್ ಬಿಶ್ವಾಸ್ ಆಗಿ ಬಿಟ್ಟ. ಇಂಥಾ ವೇಳೆಯಲ್ಲಿ ಅಮ್ಮ ಅನ್ನ ಕಲಸಿಕೊಂಡು ಬಂದಳು. ಸಾಮೆಲ್ಲ.

"ಅಜ್ಜಾ. ಅಮ್ಮ ಅನ್ನ ಕಲಸಿಕೊಂಡು ಬಂದಳು ನಿಮಗೆ" ಅಂದೆವು."

"ಓ-ಬಾಮ್ಮ. ಬಾ. ಏನು ಅಡಿಗೆ ಮಾಡಿದೆ?"

"ಮೀನಿನ ಹುಳಿ... ಚಟ್ನಿ."

"ಹರೀಶ ಬಂದಿಲ್ಲವಾ ಇನ್ನೂ?"

"ಇಲ್ಲ."

"ಇನ್ನೂ ಬಂದಿಲ್ಲವಾ? ರಾತ್ರಿ ಎಷ್ಟು ಹೊತ್ತಾಗಿ ಹೋಗಿದೆ?"

"ರಾತ್ರಿಯೇನು ಹೆಚ್ಚು ಹೊತ್ತಾಗಿಲ್ಲ. ನೀವು ಊಟ ಮಾಡಿ ಮಲಗಿ. ನಾನು ಹಾಲು ತರುತೀನಿ."

"ಹರೀಶ ಬಂದರೆ ಹೇಳು. ನನ್ನ ಬಂದು ನೋಡು ಅಂತ."



"ನಾನು ದೀಪಾವಳಿಗೆ ಆರನೇ ನಂಬರಿನ ಸೀರೆ ತಗೊಂಡೆ. ನೀನು ಎಂಟನೇ ನಂಬರಿನ ಸೀರೆ ತಗೊಂಡಿಯೇನು?"

ಅಮ್ಮ ಹೊರಟುಹೋದಳು; ತನ್ನ ಕೆಲಸ ನೋಡಿಕೊಳ್ಳಲಿಕ್ಕೆ. ಇನ್ನೂ ನಿಂತಿದ್ದರೆ ಇನ್ನೂ ಎಷ್ಟೋ ಸುಳ್ಳು ಹೇಳಬೇಕಾಗತ್ತೆ ಅಂತ-

ಅಜ್ಜನ ಊಟ ಮುಗಿದ ಮೇಲೆ ಕೂಡಲೆ ವಾಡಿಕೆಯಂತೆ ಮಲಗಲು ಹೋಗಲಿಲ್ಲ. ಬಹಳ ಹೊತ್ತು ಜಗುಲಿಯ ಮೇಲೆ ಕೂತಿದ್ದರು. ಹಾಗೇ ಕೂತು ಯಾರ್‍ಯಾರ ಹೆಜ್ಜೆ ಸಪ್ಪಳ ಕೇಳಬಂದರೂ ತವಕದಿಂದ ಅಪ್ಪನ ಹೆಸರು ಹಿಡಿದು ಕೂಗಲು ಶುರು ಮಾಡಿದರು.

ರಾತ್ರಿ ಎಷ್ಟೋ ಹೊತ್ತಾದ ಮೇಲೆ ಅಮ್ಮನೇ ಬಂದು "ಅಪ್ಪಾ, ನೀವಿನ್ನು ಮಲಗಿ ಹೋಗಿ, ಘೂಚೂನ ಕಳಿಸಿಕೊಡ್ತೇನೆ. ಅವನು ನಿಮ್ಮನ್ನ ಹಾಸಿಗೆ ಮೇಲೆ ಮಲಗಿಸಿ ಬರ್‍ತಾನೆ." ಎಂದಳು.

"ಹರೀಶಾ ಬಂದನಾ?

"ಇಲ್ಲ."

"ಯಾಕೆ ಬರಲಿಲ್ಲ ಇನ್ನೂ?"

"ನಿಮಗೆ ಯಾವುದೂ ಜ್ಞಾಪಕದಲ್ಲಿರೋದಿಲ್ಲ. ಅವರು ಗೋಯಾಡಿಗೆ ಹೋಗಿರೋದು ಗೊತ್ತಿಲ್ಲವೇ? ಬುಧವಾರ ಬರ್‍ತೇನೆ ಅಂತ ನಿಮಗೆ ಹೇಳಿ ಹೋಗಿಲ್ಲವೆ? ಹೋಗಿ ಮಲಗಿ."

ಅಜ್ಜ ಕೂತು ಏನು ಯೋಚನೆ ಮಾಡುತ್ತಿದ್ದರೋ. ಆ ಮಾತಿಗೆ ಜವಾಬೇ ಕೊಡಲಿಲ್ಲ.

ಬಹುಶಃ ಅಪ್ಪ ಗೋಯಾಡಿಗೆ ಹೋದ ವಿಷಯ ನೆನಪಿಗೆ ಬಂದಿರಬೇಕು. ಘೂಚೂ ಬಂದು ಅವರನ್ನ ಎಬ್ಬಿಸಿ ಕೈಹಿಡಿದು ಕರೆದುಕೊಂಡು ಹೋಗಿ ಮಲಗಿಸಿದ.

ಮಧ್ಯರಾತ್ರಿಯಾಗಿತ್ತೇನೋ, ಇದ್ದಕ್ಕಿದ್ದ ಹಾಗೆ ಎಚ್ಚರವಾಯಿತು ನನಗೆ. ಅಜ್ಜನ ಕೋಣೆಯಿಂದ ಏನೋ ಸದ್ದು. ಅಳುವ ಶಬ್ದ. ಹೋಗು ಏನಾಗಿದೆಯೋ ನೋಡು ಅಂದಳು ಅಮ್ಮ. ಎಚ್ಚರವಾಗಿದ್ದು, ಹೋಗಿ ನೋಡುತ್ತೇನೆ- ಅಜ್ಜ ಹಾಸಿಗೆಯಿಂದ ಎದ್ದು ಮೂಲೆಯ ಕಡೆ ಹೋಗಿ ಕೈಚಾಚಿ ಕೈದೊಣ್ಣೆಯನು ಹಿಡಿದು ತಡವರಿಸುತ್ತಿದ್ದಾರೆ! ಆಗಲೇ ಅಪ್ಪನನ್ನ ಹುಡುಕಲು ಹೋಗುವ ಸನ್ನಾಹ.

ಮಗ ಇನ್ನೂ ಯಾಕೆ ಬರಲಿಲ್ಲ. ಯಾಕೆ ಬರಲಿಲ್ಲ? ನಿದ್ದೆ ಹೇಗೆ ಬರತ್ತೆ ಅಜ್ಜನಿಗೆ? ನಮಗೆ ಗೊತ್ತು, ಇದು ಸರಿಯಲ್ಲ.

ಅದಕ್ಕೆ ಬೆಳಗಿನ ಹೊತ್ತೂ ಅಜ್ಜ ಕೂತು ಕೂತೇ ತೂಕಡಿಸುತ್ತಾರೆ. ರಾತ್ರಿಯೆಲ್ಲಾ ನಿದ್ದೆಗೆಟ್ಟು... ಛೆ. ಏನು ಮಾಡುವುದು ಇಂಥವರಿಗೆ?

ಅಜ್ಜನಿಗೆ ತಿಳಿಯ ಹೇಳಲು ಎಲ್ಲರೂ ಏನೇನೋ ಸಮಾಧಾನ ಹೇಳಿದ್ದಾಯಿತು. ಕಡೆಗೆ ಅಮ್ಮನೂ ಬಂದು ದೊಡ್ಡ ದನಿಯಲ್ಲಿ ಮೂದಲಿಸಿದಳು- "ಏನಪ್ಪಾ ಇದು? ಏನಿದು ಅವಾಂತರ ಅಂತೀನಿ! ಅವರು ಮಕ್ಕಳು...ಅವರನ್ನೂ ನಿದ್ದೆ ಮಾಡಗೊಡಿಸೋದಿಲ್ಲ ನೀವು. ಹತ್ತು ಸಲವಲ್ಲ ನೂರು ಸಲ ನಿಮಗೆ ಹೇಳಿದ್ದಾಗಿದೆ, ಅವರು ಗೋಯಾಡಿಗೆ ಹೋಗಿದ್ದಾರೆ. ಬುಧವಾರ ಬರ್‍ತಾರೆ ಅಂತ. ಎಷ್ಟು ಹೇಳಿದರೂ ತಿಳೀದೆ ಹೋದರೆ ಹೇಗೆ? ರಾತ್ರಿ ಎರಡು ಘಂಟೆಯಾದರೂ ಮಲಗದೆ ಹೀಗೆ ಕಿರುಕುಳ ಕೊಡುತೀರಲ್ಲ! ಸರಿಯೋ ಹೇಳಿ, ಹೀಗೇ ಮಾಡುತಾಯಿದ್ದರೆ...ಇದಿ...ನಿಮ್ಮ ಸಂಸಾರದಲ್ಲಿ...ನೀವೇ. ನಾನು ಬೇರೆ ಯಾವ ದಾರಿಯಾದರೂ ನೋಡಬೇಕಾಗತ್ತೆ ಅಷ್ಟೆ......!"

ಅಮ್ಮನನ್ನ ಕಂಡರೆ ಅಜ್ಜನಿಗೆ ಭಯ. ಅಮ್ಮ ಒಳಗೆ ಹೊಕ್ಕೊಡನೆ ಮೆತ್ತಗಾಗಿಬಿಟ್ಟರು. ಬೇಗ ಹಾಸಿಗೆ ಮೇಲೆ ಹೋಗಿ ಮಲಗಿ ಮೈ ಕೈ ಮುದುರಿಕೊಂಡು ಮೈತುಂಬ ಹೊದ್ದುಕೊಂಡುಬಿಟ್ಟರು.

* * * *

ಬೆಳಗ್ಗೆ ಎದ್ದು ನನ್ನನ್ನು ಹತ್ತಿರ ಕರೆದರು,

"ಲೋ ಮನೂ. ಕೇಳೋ ಇಲ್ಲಿ."

"ಏನಜ್ಜಾ?"

"ನನ್ನ ರಾಜ ನೀನು. ನನ್ನ ಬಂಗಾರ. ನಿನಗೊಂದು ಕಾಸು ಕೊಡ್ತೀನಿ."

ಅಜ್ಜನ ಹತ್ತಿರ ಕಾಸೆಲ್ಲಿಯದು? ಆದರೂ ನಾನು ನಂಬಿದವನ ಹಾಗೆ ನಟಿಸಿ "ಏನು ಬೇಕು ಹೇಳಿ" ಅಂದೆ.

"ನಿಮ್ಮಪ್ಪನ ಕಾಗದಾ ಬಂತಾ?"
"ಇಲ್ಲ"
"ಇವತ್ತು ಯಾವ ವಾರ?"
"ಸೋಮವಾರ."
"ಹರೀಶ ಯಾವಾಗ ಬರ್ತಾನೆ?"
"ಬುಧವಾರ."
"ಒಳ್ಳೇದು ಹೋಗು."

ಬುಧವಾರ ಅಪ್ಪ ಯಾಕೆ ಬರಲಿಲ್ಲವೋ ಗೊತ್ತಿಲ್ಲ. ಅಜ್ಜ ಇಡೀ ದಿವಸ ಜಗುಲಿಯ ಮೇಲೇ ಕೂತಿದ್ದರು. ಗಂಭೀರವಾಗಿ ತಂಬಾಕು ಸೇವನೆ ಮಾಡುತ್ತ ಮಧ್ಯೆ ಮಧ್ಯೆ ಕಿವಿಯಾನಿಸಿ ಕೂಗಿದರು.

"ಯಾರು? ಯಾರು ಬಂದರು?"

"ಲೋ ಹರೀಶಾ? ಯಾರದೋ ಅದು ಹೆಜ್ಜೆ ಸಪ್ಪು? ಲೋ ಸೂಚೂ ಲೋ ನೀಲೂ"

ಘುಚೂ "ಆಕಳು ಕರು ಅಜ್ಜಾ ಆಕಳು ಕರು ಬಂದಿದ್ದು ಈಗ" ಎಂದ.

"ಓ."

ಹೀಗೆ ನಡೆಯಿತು ಇಡೀ ದಿನ. ರಾತ್ರಿ ಅಜ್ಜ ಊಟ ಮಾಡುತ್ತ ಕೂತು ಸುಮ್ಮನೆ ಆಗಾಗ ಕಿವಿ ನಿಮಿರಿಸಿ ದೂರದಲ್ಲಿ ಬರುವ ರೈಲ್‌ಗಾಡಿಯ ಶಬ್ದವನ್ನು ಕೇಳಿಸಿಕೊಳ್ಳಲು ಯತ್ನಿಸುವರು. ಬಾಯಲ್ಲಿ ಏನೂ ಹೇಳುವುದಿಲ್ಲ. ಆಕಸ್ಮಾತ್ತಾಗಿ ಬಹಳ ಗಂಭೀರವಾಗಿಬಿಟ್ಟಿದ್ದಾರೆ. ನಾನು ನೇರವಾಗಿ ಕೋಣೆಯೊಳಗೆ ಬರುತ್ತಲೂ ಬೆಚ್ಚಿ "ಯಾರದು?" ಎಂದರು-

"ಬಂಬತ್ತರ ಗಾಡಿ ಬಂದು ಹೋಯಿತೋ ಇಲ್ಲವೋ ಗೊತ್ತಾ?"

"ಇನ್ನೂ ಬಂದೇ ಇಲ್ಲಜ್ಜ. ನೀವಿನ್ನು ಮಲಗಿ."

"ಗಾಡಿ ಶಬ್ದ ಕೇಳಿಸುತ್ತ ಇಲ್ಲವಾ?"

"ಇಲ್ಲ."

ಅಪ್ಪನ ಹೆಸರೇ ಎತ್ತಲಿಲ್ಲ ಏಕೋ. ಆಮೇಲೆ "ಎಲೆ ತಂದಿದ್ದೀಯಾ? ತಾ ಇಲ್ಲಿ" ಅಂದರು.

ಅಪ್ಪ ಮರುದಿನವೂ ಬರಲಿಲ್ಲ. ಆಶ್ಚರ್ಯ. ಅಜ್ಜ ವಿಪರೀತ ಗಂಭೀರವಾಗಿ ಬಿಟ್ಟಿದ್ದಾರೆ. ಏನೂ ಪ್ರಶ್ನೆ ಮಾಡುತ್ತಿಲ್ಲ. ಯಾರನ್ನೂ. ಅಪ್ಪನ ಹೆಸರು ಹಿಡಿದು ಕೂಗುವುದೂ ಇಲ್ಲ.

ಸದ್ಯ ಶುಕ್ರವಾರ ಸಂಜೆಯ ಗಾಡಿಯಲ್ಲಿ ಬಂದರು ಅಪ್ಪ.

ಅಜ್ಜ ಅಭಿಮಾನದಿಂದ ಮುಖ ಭಾರಮಾಡಿಕೊಂಡೇ ಇದ್ದರು. ಮಾತೇ ಆಡಲಿಲ್ಲ. ಅಪ್ಪನಿಗೆ ತಿಳಿಯಿತು. ಅಮ್ಮನ ಹತ್ತಿರ ಹೇಳಿದರು.

"ಅಪ್ಪನಿಗೆ ನನ್ನ ಮೇಲೆ ಸಿಟ್ಟು ಬಂದಿದೆ ಅಂತ ಕಾಣತ್ತೆ. ಹೋಗಿ ನೋಡಿಕೊಂಡು ಬರ್ತೀನೆ, ಯಾಕೋ-"

ಅಜ್ಜ, ತಂಬಾಕು ಸೇದುತ್ತಯಿದ್ದಾಗ ಅಪ್ಪ ಹೋಗಿ "ಅಪ್ಪಾ" ಎಂದರು. ಅವರ ಕಾಲು ಮುಟ್ಟಿ ಪಾದಧೂಳಿ ತೆಗೆದುಕೊಂಡು ನೆತ್ತಿ ಮೇಲಿಟ್ಟುಕೊಂಡರು, ಅಜ್ಜ ಮಾತಾಡಲಿಲ್ಲ.

"ಹೇಗಿದ್ದೀರಿ ಅಪ್ಪಾ"?

ಅಜ್ಜ ಮೌನ

"ಅಪ್ಪಾ ಸಿಟ್ಟೇ ನನ್ನ ಮೇಲೆ? ಮತ್ತೆ? ತಿರುಗಿ ನಾನು ರಾಣಾಘಾಟಿಗೆ ಹೋಗಬೇಕಾಗತ್ತೆ ಬೆಳಿಗ್ಗೆ. ಸಿಟ್ಟು ಮಾಡಿಕೊಳ್ಳುತ್ತೀರಾ?"

"ಸಿಟ್ಟು ಬರದೆ?"

ಈ ಬಾರಿ ಅಜ್ಜ ಸುಮ್ಮನಿರಲಾಗಲಿಲ್ಲ. ಇಷ್ಟು ದಿನ ಆದ ಮೇಲೆ ಮನೆಗೆ ಬಂದು ಕೂಡ ಮತ್ತೆ ಮರುದಿನವೇ ರಾಣಾಘಾಟಿಗೆ ಹೋಗಬೇಕಂತೆ! ಸಾಕಪ್ಪೆ! ಅಜ್ಜನ ಸಿಟ್ಟು ನೀರಾಗಿ ಕಣ್ಣಲ್ಲಿ ಹರಿಯತೊಡಗಿತು.

ಆಶ್ಚರ್ಯವೇನು?

ಅಪ್ಪ ನಗುತ್ತ "ನೀವು, ಸಿಟ್ಟು ಮಾಡಿಕೊಳ್ಳುವುದಕ್ಕೇನು? ಆದರೆ ಏನು ಮಾಡಲಿ? ಹೊಟ್ಟೆ ಪಾಡಿಗಾಗಿ ಬೇಕೆಂಬುವರ ಚಾಕರಿ ಮಾಡ್ತಾಯಿದ್ದೀನಿ. ಕೆಲಸವಾಗದೆ ಹೋದರೆ ಇನ್ನೂ ಒಂದೆರಡು ದಿನ ಹೆಚ್ಚು ಕಳೆಯಬೇಕಾಗುತ್ತೆ ಅಲ್ಲೇ.

"ನನಗೇನು ತಂದಿ ಊರಿನಿಂದ?"

"ಒಳ್ಳೇದೇ ತಂದಿದ್ದೀನಿ. ನಿಮಗಿಷ್ಟವಾದದ್ದೇ ಕೃಷ್ಣನಗರದ ಕರಬೂಜು ಹಣ್ಣು."

"ಎಲ್ಲೀ ಕೊಡು ಅಂತ ಹೇಳು ನಿನ್ನ ಹೆಂಡತಿಗೆ."

ಅದೇ ವೇಳೆಯಲ್ಲಿ ಅಮ್ಮ ಕಾಳೀಗುಡಿಗೆ ದೀಪ ಹತ್ತಿಸಲು ಹೋಗಿದ್ದಳು. ಬರಲು ತಡವಾಯಿತು. ಅಜ್ಜ ಆತುರದಿಂದ ಕೂಗಲು ತೊಡಗಿದರು.

"ಲೋ ಮನು, ಎಲ್ಲಿ ಬಂದಳೇನೋ ನಿಮ್ಮಮ್ಮಾ?"

ಅಪ್ಪ ಸಟವಾರಿ ಪಟೇಲ್ಪಾಧ್ಯಾಯರಿಗೆ ಮನೆಗೆ ಜಗಳ ಆಡಲು ಹೋದರು. ಅಜ್ಜ ನಮ್ಮನ್ನ ಸುಮ್ಮನೆ ಪೀಡಿಸಲು ತೊಡಗಿದರು.

"ಹೋಗೋ ಅಮ್ಮನ್ನ ಕರೀ ಹೋಗು ಬೇಗ."

ಅಜ್ಜನ ಆತುರಕ್ಕೆ ಕಾರಣವಿಲ್ಲದೇ ಇಲ್ಲ. ಅಜ್ಜನನ್ನ ಕಂಡರೆ ನಮ್ಮಮ್ಮನಿಗೆ ಅಷ್ಟಷ್ಟೇ ಮೊದಲಿನಿಂದಲೂ, ಏನಾದರೂ ತಿಂಡಿ ಪದಾರ್ಥ ತಂದಾಗ ಅಪ್ಪ ಎದುರಿಗಿಲ್ಲದೆ ಹೋದರೆ ಅಜ್ಜನ ಭಾಗಕ್ಕೆ ಸೊನ್ನೆಯೇ. ಇದು ನಮಗೆಲ್ಲ ಗೊತ್ತು.

ಅಮ್ಮ ಏನೆನ್ನುತ್ತಿದ್ದಳೆಂದರೆ— "ಮಕ್ಕಳುಮರಿ ತಿನ್ನಬೇಡ. ಎಲ್ಲರಿಗೂ ಮೊದಲು ಈ ಮುದಿಕೂಸಿಗೆ ಮುದ್ದುಮಾಡಿ ತಿನ್ನಿಸಬೇಕು.- ಅಷ್ಟು ಭಕ್ತಿ ಇಲ್ಲಮ್ಮ ನನಗೆ ಮಾವನವರ ಮೇಲೆ.- ಅಷ್ಟಕ್ಕೂ ಏನು ಮಾಡಿದಾರೆ ಇವರು ನನಗೆ? ಯಾವ ಕಾಲಕ್ಕೂ ಒಂದು ಸೀರೆ, ಒಂದು ಕಣ... ನವರಾತ್ರಿ ಹಬ್ಬಕ್ಕೆ ಕೊಟ್ಟರೂ ಕೊಟ್ಟರು ಅಥವಾ ಅದೂ ಇಲ್ಲ. ಕೈಲಿ ಕಾಸಿದ್ದಾಗ ಒಂದು ಮರೆದರು ಮರೆದರೂ... ಅಬ್ಬಬ್ಬ! ನಾನು ಇವತ್ತು ಬರಲಿಲ್ಲ ಇವರ ಮನೆ ಸೊಸೆಯಾಗಿ, ಮೂವತ್ತು ವರುಷವಾಯಿತು., ಈಗೇನು ಇವರಿಗೆ ಅರುಳು ಮರಳು? ಯಾವಾಗ ತಾನೇ ಸರಿಯಾಗಿದ್ದದ್ದು? ಯಾವಾಗ ನೋಡು, ನನ್ನ ಮಗ...ಮಗ...! ಬೇರೆ ಯಾರೂ ಬೇಡ, ಪ್ರಪಂಚದಲ್ಲಿ; ನಾವೆಲ್ಲ ಹೊಳೆಯಲ್ಲಿ ಕೊಚ್ಚಿಕೊಂಡು ಬಂದ ಕಸ! ಇವರ ಪಾಲಿಗೆ. ಈಗ...ಅ ಹ್ಹ ಹ ಹ್ಹ ಹ್ಹಾ!"

ಆದರೂ ಒಂದು ಲಾಡು ಉಂಡೆಯ ಚೂರು ಅಥವಾ ಕಾಲದಲ್ಲಿ ಮಾವಿನಹಣ್ಣಿನ ಶೀಕರಣೆ ಒಂದೆರಡು ಸೌಟು ಬೀಳದೆ ಇರುತ್ತಿರಲಿಲ್ಲ ಅಜ್ಜನ ತಟ್ಟೆಯಲ್ಲಿ.

ಅಪ್ಪನೇನೋ ಅಮ್ಮನ ಸ್ವಭಾವ ತಿಳಿದಿದ್ದುದರಿಂದ ಏನಾದರೂ ಊರಿನಿಂದ ವಿಶೇಷ ತಿಂಡಿ ಪದಾರ್ಥ ತಂದಾಗೆಲ್ಲ ತಾನೇ ಸ್ವತಃ ಬಂದು ಅಜ್ಜನಿಗೆ ಕೊಟ್ಟು ತಿನ್ನಿಸಿ ಹೋಗುತ್ತಿದ್ದರು. ಆಷಾಢಮಾಸ ಬರುತ್ತಲೂ ಅಜ್ಜನ ಆರೋಗ್ಯ ಕೆಟ್ಟು ಹಾಸಿಗೆಹಿಡಿದರು. ಏಳಲಿಕ್ಕೇ ಆಗಲಿಲ್ಲ. ಅಪ್ಪನೇ ನಿತ್ಯ ಅವರನ್ನ ಎಬ್ಬಿಸಿ ಮುಖ ತೊಳೆದು ಬಟ್ಟೆ ಬದಲಾಯಿಸಿ ಔಷಧಿ ಪಥ್ಯ ಕೊಡುತ್ತಿದ್ದರು. ದಾಳಿಂಬೆ ರಸ, ಕಲ್ಲುಸಕ್ಕರೆ ಪುಡಿಯೊಂದಿಗೆ ಬೆರೆಸಿ ಕುಡಿಸುತ್ತಿದ್ದರು. ಮಧ್ಯಾಹ್ನ ಕಛೇರಿಯಿಂದ ಬಂದಾಗ ಮೊದಲು ಅಜ್ಜನ ಕೋಣೆಗೆ ಹೋಗಿ ಸ್ವಲ್ಪ ಹೊತ್ತು ಕೂತು ಮಾತಾಡಿಸಿ ಆ ಮೇಲೆ ಒಳಗೆ ಬಂದು ಸ್ನಾನ ಮಾಡುವುದು. ಅಜ್ಜನ ಕಾಯಿಲೆ ವಾಸಿಯಾಗುವವರೆಗೂ ಅಪ್ಪನ ಮನಸ್ಸು ಕಳವಳದಿಂದ ತುಂಬಿತ್ತು, ನಿತ್ಯವೂ ಅಮ್ಮನನ್ನು ಕೇಳುವರು.

"ಅಪ್ಪನಿಗೆ ಟೆಂಪರೇಚರ್ ನೋಡಿದೆಯಾ? ಔಷಧಿ ಕುಡಿಸಿದೆಯಾ? ಅವರಿಗೆ ಮರೆತರೂ ನೀನು ಹೋಗಿ ಕುಡಿಸಬೇಕು ಹೊತ್ತುಹೊತ್ತಿಗೆ."

ಅಜ್ಜನಿಗೆ ವಾಸಿಯಾಯಿತು. ಆದರೂ ಒಂದೆರಡು ತಿಂಗಳು ಹಾಸಿಗೆ ಬಿಟ್ಟು ಕದಲುವುದೇ ಕಷ್ಟವಾಯಿತು. ಅಪ್ಪ ಶುಶ್ರೂಷೆಯಲ್ಲೇನೂ ಕಡಿಮೆ ಮಾಡಲಿಲ್ಲ.

ಇವತ್ತೂ ಆಡಿನ ಹಾಲು, ನಾಳೆ ಬೂದಿಗುಂಬಳಕಾಯಿ ಮಿಠಾಯಿ, ನಾಳಿದ್ದು ನೆಲ್ಲೀಕಾಯಿ ಮುರಬ್ಬಾ... ಹೀಗೆ ಯಾರೇನು ಹೇಳಿದರೂ ಕೂಡಲೇ ತರಿಸುವ ವ್ಯವಸ್ಥೆ ಮಾಡಿ ಅಜ್ಜನಿಗೆ ಬೇಗ ಶಕ್ತಿ ಬರುವಂತೆ ಮಾಡಲು ಯತ್ನಿಸುವರು.

ಅಜ್ಜನೂ ಬರಬರುತ್ತಾ ಪೂರ್ತಿಯಾಗಿ ಮಗುವಿನಂತೆ ಆಡಲು ತೊಡಗಿದರು. ಅವರು ಕೊಡುವ ಕಿರುಕುಳದಿಂದ ಇಡೀ ಮನೆಯವರೆಲ್ಲ ಬೇಸತ್ತುಹೋದರು. ಹಗಲು ರಾತ್ರಿ ಅದು ತಿನ್ನಬೇಕು. ಇದು ತಿನ್ನಬೇಕು, ಇವರನ್ನು ಕರಿ...ಅವರನ್ನು ಕರಿ...ನಾವುಗಳೆಲ್ಲ ಅವರ ಕೈಯಲ್ಲಿ ಕುಣಿಯುವ ಗೊಂಬೆಗಳು. ಅಜ್ಜನ ಕಿರುಕುಳ ಕೊಂಚ ಹೆಚ್ಚಾಗಿದ್ದು, ಈಗಂತೂ ಪೂರ್ತಿಯಾಗಿ ಉದಾಸೀನ ಮಾಡಲು ತೊಡಗಿದೆವು. ಹತ್ತು ಸಲ ಕರೆದರೆ ಒಂದು ಸಲ ಉತ್ತರ ಕೊಡುವುದು, ಇಲ್ಲವಾದರೆ ಅದೂ ಇಲ್ಲ. ಅಮ್ಮ ಅನ್ನದ ತಟ್ಟೆ ಕೊಂಡು ಅವ್ರ ತಿನ್ನಿಸಿಬಿಟ್ಟು ಬರುವುದೊಂದು ಬಿಟ್ಟು ಬೇರೇನೂ ಇಲ್ಲ. ಏನಾದರೂ ಕೇಳಿದರೆ ಸ್ಪಷ್ಟವಾಗಿ ಜವಾಬೇ ಕೊಡುವುದಿಲ್ಲ. ಕೊಟ್ಟರೂ ಹುಬ್ಬುಗಂಟುಹಾಕಿಕೊಂಡು 'ಹು' 'ಇಲ್ಲ'—ಅಷ್ಟೇ. ಅಡಿಗೆ ಕೆಲಸಮುಗಿಸಿಕೊಂಡು ಹೊರಹೊತ್ತೂ ನದೀಘಾಟಿನ ಜ್ಞಾನರ್ಜಯವರ ಮನೆಯಾಕೆಯ ಜೊತೆಯಲ್ಲಿ ಕಾಡು ಹರಟೆ ಹೊಡೆಯುವಳು. ಅಜ್ಜ ಅಸಹಾಯ ಮಗುವಿನಂತೆ ಅಪ್ಪನು ಬರುವುದನ್ನೇ ಕಾದುಕೊಂಡು ಕೂತಿರುತ್ತಿದ್ದರು. ಅಪ್ಪನಹೆಜ್ಜೆ ಸಪ್ಪಳ ಕೇಳಿದೊಡನೆ ಕೂಗು ಹಾಕುವರು.

"ಹರೀಶಾ—ಲೋ ಹರೀಶಾ!"

ಹೇಗೋ ಅಜ್ಜ ಅಪ್ಪನ ಹೆಜ್ಜೆಶಬ್ದವನ್ನು ಸುಲಭವಾಗಿ ಗುರುತು ಹಿಡಿದು ಬಿಡುವರು.

ಅಪ್ಪ ಬಂದು ಸ್ವತಃ ಅಜ್ಜನ ಯೋಗಕ್ಷೇಮ ನೋಡಿಕೊಳ್ಳುವರು. ಸ್ನಾನ, ಊಟ ಎಲ್ಲಾ ಅವರೇ ಮಾಡಿಸುವರು.

ಅಪ್ಪ ಬಂದೊಡನೆ ಅಜ್ಜ ನಮ್ಮ ಮೇಲೆಲ್ಲ, ಹೆಚ್ಚಾಗಿ ನಮ್ಮಮ್ಮನ ಮೇಲೆ ಅದೆಷ್ಟು ದೂರುಗಳನ್ನು ಕೂಡಿಸಿಟ್ಟುಕೊಂಡು ಹೇಳುತ್ತಿದ್ದರೋ, ಎಳೇ ಹುಡುಗರ ಹಾಗೆ. ನಿನ್ನ ಹೆಂಡತಿ ಇದು ಮಾಡಲಿಲ್ಲ; ಅದು ಕೊಡಲಿಲ್ಲ. ಹೀಗೇ ಮಾಡಿ ನಮ್ಮಮ್ಮನ ಸಹಾನುಭೂತಿಯನ್ನು ಇನ್ನೂ ಕಳೆದುಕೊಳ್ಳಬೇಕಾಯಿತು ಅಜ್ಜ.

ಅಪ್ಪನಿಗೆ ಇದು ತಿಳಿಯದೆ ಇಲ್ಲ. ಅದಕ್ಕೇ ಎಲ್ಲ ಹೊಣೆಯನ್ನೂ ತಾನೇ ವಹಿಸಿಕೊಳ್ಳಬೇಕಾಯಿತು. ಇನ್ನು ಯಾರ ಮೇಲೆ ಬಿಡುವುದಕ್ಕೂ ಭರವಸೆಯಿಲ್ಲ, ನಮ್ಮಕ್ಕನೊಬ್ಬಳು ಹೊರತು. ಆದರೆ ಈಗ ಅಕ್ಕನೂ ಅತ್ತೆಯ ಮನೆಗೆ ಹೊರಟುಹೋದಳು!

ಪುಷ್ಯಮಾಸದಲ್ಲಿ ಮತ್ತೆ ಅಪ್ಪ ಕಂದಾಯದ ವಸೂಲಿಗೆ ಊರು ಬಿಟ್ಟು ಹೋಗಬೇಕಾಯಿತು. ಹೊರಡುವ ಮೊದಲು ಬಾರಿ ಬಾರಿಗೂ ಅಮ್ಮನಿಗೆ ಅಜ್ಜನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಹೇಳಿ ಹೋದರು. ಯಾವ ಅಪಚಾರವೂ ಆಗದ ಹಾಗೆ ನೋಡಿಕೋ ಅಂದರು.

ಅಮ್ಮ "ಯಾಕೋ? ನಾನೇನು ಮುದುಕನ ಕುತ್ತಿಗೆ ಹಿಚುಕಿಹಾಕ್ತೀನೆ ಅಂತ ಭಯವೋ?" ಅಂದಳು.

"ಛೇ! ಏನೇ ಹಾಗೆಲ್ಲಾ?"

"ಇಲ್ಲಾ, ನೀವು ಮಾತ್ರ ಹೀಗೆಲ್ಲ ಅನ್ನಬಹುದು?"

"ಅದಕ್ಕೇ ಹೇಳಿದೆ. ಆದರೆ ನೋಡಿ, ಮನೆಗೆಲಸ ಮಕ್ಕಳು ಮರಿ ಎಲ್ಲಾ ವಹಿವಾಟು ನೋಡಿಕೊಳ್ಳೋದಲ್ಲದೆ ಎಲ್ಲಾ ಕಡೆಯಲ್ಲೂ ನಿಗಾ ಇಟ್ಟುಕೊಳ್ಳೋದಕ್ಕೆ ನಂಗೇನು ಎಂಟು ಕೈಗಳೇ, ಎಂಟು ಕಣ್ಣುಗಳೇ? ಎಷ್ಟರಮಟ್ಟಿಗೆ ಸಾಧ್ಯವೋ, ಇದುವರೆಗೆ ಅದೆ ಹಾಗೆ, ಹೇಗೋ ನಡೆಯುತ್ತೆ ಅಷ್ಟೇ"

"ಅಲ್ಲವೇ, ಆಗಾಗ ಹೋಗಿ ಹತ್ತಿರಾ ಏನೂ ಅಂದರೆ...ಅಪ್ಪನ ವಯಸ್ಸೇನು ಕಡಿಮೆಯೆ?"

"ಗೊತ್ತು-ಗೊತ್ತು, ನನಗೆ. ಕೈಲಾದ್ದು ಮಾಡ್ತೀನೆ ಯೋಚನೆ ಮಾಡಬೇಡಿ..."

ಅಪ್ಪ ಅಜ್ಜನ ಬಳಿ ಹೋಗಿ ಬೀಳ್ಕೊಳ್ಳುವ ವೇಳೆ ಹುರಳಿ ಬರಲು ಎಷ್ಟು ದಿನವಾಗತ್ತೆ /ಎಂಬುದನ್ನು ಹೇಳಲಿಲ್ಲ. ಅಜ್ಜನನ್ನೇಕೆ ಸುಮ್ಮನೆ ವ್ಯಸ್ತನಾಗಿ ಮಾಡಬೇಕು?

ಆದರೆ ಅಜ್ಜನೇ ಕೇಳಿದರು.

"ಬರುವುದು ಯಾವಾಗಲೋ ಹರೀಶಾ?" (ಅವರ ಚಿರಂತನ ಪ್ರಶ್ನೆ.)

"ಬಂದುಬಿಡ್ತೇನೆ ಇಷ್ಟರಲ್ಲೇ ಎಷ್ಟು ಬೇಗ ಆದರೆ ಅಷ್ಟು ಬೇಗ. ನೀವು ಯೋಚನೆ ಮಾಡಬೇಡಿ ಅಪ್ಪಾ."

ಅಜ್ಜನನ್ನು ತೊರೆದು ಎಲ್ಲಿ ಹೋದರೂ ಅಪ್ಪನ ಮನಸ್ಸಿನಲ್ಲೇ ಶಾಂತಿಯಿದ್ದರೆ ತಾನೇ?

ಅದು ಎಲ್ಲರಿಗೂ ಗೊತ್ತು. ಅಜ್ಜ ಅಂದರೆ ಅಪ್ಪನಿಗೆ ಸಾಮಾನ್ಯ ಪ್ರೀತಿಯೇ? ಅಜ್ಜನೇ ಅಲ್ಲವೇ ಅಪ್ಪನ ಮೂರನೆ ವಯಸ್ಸಿನಿಂದ, ಅಜ್ಜಿ ತೀರಿ ಹೋದಾಗಿನಿಂದ. ತಾನೇ ತಂದೆಯೂ ತಾಯಿಯೂ ಆಗಿ ಅಪ್ಪನನ್ನ ಸಾಕಿ ದೊಡ್ಡವನಾಗಿ ಮಾಡಿದುದು? ಅಂಥ ಅಪ್ಪನ ಮೇಲಿರುವ ಮಾಯೆ, ಮಮತೆ ಸಾಮಾನ್ಯವೆ?

ಆದಕ್ಕೇ ಏನೋ, ಅಪ್ಪ ಅಜ್ಜನ ಯೋಗಕ್ಷೇಮದ ಬಗ್ಗೆ ಯಾರ ಮೇಲೂ ವಿಶ್ವಾಸವಿಡದೆ ಇದ್ದದ್ದು.

ಅಪ್ಪನ ನಾಲ್ಕು ಕಡೆಯೂ ಶತ್ರುಗಳು ಸುತ್ತುವರೆದಿದ್ದ ಹಾಗೆ, ತಾವೊಬ್ಬರೇ ಅಜ್ಜನಿಗೆ ಆಪ್ತರು.

ಅಜ್ಜನೂ ಹಾಗೇ ಅಂದುಕೊಂಡಿದ್ದರೆ ಆಶ್ಚರ್ಯವಿಲ್ಲ.

ಅಪ್ಪ ಈಸಲ ಹಿಂದಿರುಗಿ ಬರುವುದು ಬಹಳ ನಿಧಾನವಾಯಿತು. ಕಡೆಗೆ ಒಂದು ದಿನ ಎತ್ತಿನ ಗಾಡಿಯಲ್ಲಿ ಜ್ವರದಿಂದ ನರಳುತ್ತ ಬಂದರು. ಮೈಸುಡುತ್ತಿತ್ತು.

ನರಳುತ್ತಲೇ "ಅಪ್ಪನಿಗೆ ನಾನು ಹೀಗೆ ಜ್ವರದಲ್ಲಿ ಬಂದಿರೋದನ್ನ ಯಾರೂ ಹೇಳ ಕೂಡದು." ಎಂದು ಎಲ್ಲರಿಗೂ ಹೇಳಿದರು.

ಅಜ್ಜ ಹೇಗೋ ಊಹೆ ಮಾಡಿಕೊಂಡು ಅಪ್ಪನ ಹೆಸರು ಹಿಡಿದು ಕೂಗಿದರು.

"ಹರೀಶಾ...ಲೋ ಹರೀಶಾ? ನನಗೇನು ತಂದಿದ್ದೀಯೋ?"

ಬಂದ ವಿಷಯ ಹೇಗೆ ತಿಳಿದುಕೊಂಡುಬಿಟ್ಟರೋ! ಅಪ್ಪನಿಗೆ ಅಜ್ಜ ಕೂಗುವುದು ಕೇಳಿಸಿತು.

"ಅಪ್ಪ ಬದುಕಿರುವ ವರೆಗೂ ನನಗೇನೂ ಆಗದೆ ಇರಲಿ ದೇವರೇ? ಅದೊಂದೇ ನನ್ನ ಬೇಡಿಕೆ" ಎಂದು ದೇವರನ್ನು ಪ್ರಾರ್ಥಿಸುವರು.

ಜ್ವರ ಏರುತ್ತ ಬಂತು. ಪಟ್ಟಣದಿಂದ ದೊಡ್ಡ ಡಾಕ್ಟರು ಬಂದು ಎರಡು ದಿನ ಪರೀಕ್ಷೆ ಮಾಡಿದರು. ಸಂಸಾರದಲ್ಲಿ ಕೂಡಿಟ್ಟಿದ್ದ ಹಣವನ್ನೆಲ್ಲ ಮುರಿದು ಖರ್ಚು ಮಾಡಿ ಚಿಕಿತ್ಸೆ ಮಾಡಿಸಲು ಪ್ರಯತ್ನಿಸಿದ್ದಾಯಿತು.



ಒಲಂಪಿಕ್ ೧೯೭೦

ಒಂದು ದಿನ ವಿಶೇಷ ಗಲಭೆಯಾಯಿತು. ಅಜ್ಜನನ್ನು ನೋಡಿಕೊಳ್ಳುವುದಕ್ಕೆ ಯಾರೂ ಇರಲಿಲ್ಲ. ಎಲ್ಲರೂ ಅಪ್ಪನ ಸುತ್ತ ನೆರೆದಿದ್ದರು.

ಗ್ರಾಮದ ತ್ರಿಲೋಚನ ಚಕ್ರವರ್ತಿ ಬಂದು ಅಜ್ಜನ ಬಳಿ ಅದು, ಇದು ಏನೇನೋ ಹರಟೆ ಹೊಡೆಯುತ್ತ ಅವರ ಮನಸ್ಸು ಮರೆಸಿದರು.

ಎಲ್ಲರೂ "ಇನ್ನು ಹರೀಶನ ಆಸೆ ಬಿಟ್ಟ ಹಾಗೆ ಅಯ್ಯೋ, ಮುದುಕನಿಗೇನು ಗತಿ?" ಎಂದು ಸಂಕಟಪಟ್ಟರು.

ಅವತ್ತು ರಾತ್ರಿ ಕಡೆಯ ಝಾಮದಲ್ಲಿ ನಮ್ಮಪ್ಪ ನಮ್ಮನ್ನೆಲ್ಲ ನಡುನೀರಲ್ಲಿ ಬಿಟ್ಟು ಹೊರಟುಹೋದರು. ಅಜ್ಜನಿಗೆ ನೂ ಗೊತ್ತಾಗಲೇ ಇಲ್ಲ. ಗಾಢ ನಿದ್ದೆಯಲ್ಲಿ ಮೈಮರೆತಿದ್ದರು.

ಬೆಳಕು ಹರಿಯುತ್ತಲೂ ಇನ್ನೂ ಮಂಜು ಮಂಜಾಗಿದ್ದಾಗಲೇ ತ್ರಿಲೋಚನ ಚಕ್ರವರ್ತಿ ಬಂದು ಅಜ್ಜನನ್ನು ಬಲವಂತವಾಗಿ ಎಬ್ಬಿಸಿ ಕೈ ಹಿಡಿದುಕೊಂಡು ಏನೇನೋ ನೆಪ ಹೇಳಿ ಹೊರಗೆ ಕರೆದುಕೊಂಡು ಹೋದರು.

"ಬನ್ನೀ ದೊಡ್ಡಪ್ಪಾ. ನಮ್ಮಣ್ಣನ ಮನೆಗೆ ಅವರೆಲ್ಲ ನಿಮ್ಮನ್ನು ನೋಡಬೇಕಂತೆ. ಸ್ವಲ್ಪ ಪಾದಧೂಳಿ ಕೊಡಿ."

"ನಾನು ಬರಬೇಕೇ...ಹ್ಞಾ?"

ಎನ್ನುತ್ತ ಒಳಗಡೆಯಿಂದ ಬರುವ ರೋದನದ ಶಬ್ದವನ್ನು ಸ್ವಲ್ಪ ಕೇಳಿಕೊಂಡು "ಲೋ, ಹರೀಶ? ಏನೋ ಅದು? ಯಾತರದೋ ಗದ್ದಲಾ? ಹರೀಶಾ...!" ಎಂದರು.

★ ★ ★ ★

ಸಂಜೆಯಾಗುತ್ತಲೂ ನಾವೆಲ್ಲ ಬಂದು ಅಜ್ಜನ ಸುತ್ತ ಕೂಡುತ್ತೇವೆ. ಹಠಾತ್ತಾಗಿ ಅಜ್ಜನ ಅಸಹಾಯ ಮುಖವನ್ನು ಕಂಡು ನಮಗೆಲ್ಲ ಎಲ್ಲಿಲ್ಲದ ಮರುಕ ಬಂದುಬಿಟ್ಟಿದೆ. ಹಿಡಿದಿಟ್ಟುಕೊಳ್ಳಲಾಗದ ಮಮತೆ! ಎಲ್ಲಿನದೋ ಈ ಮಮತೆ? ಹೊಸದಾಗಿ ಹುಟ್ಟಿಕೊಂಡಿದೆ. ಇಷ್ಟು ದಿನ ಎಲ್ಲಿತ್ತೋ? ಮನದಲ್ಲಿ ಎಷ್ಟು ಹುಡುಕಿದರೂ ಕಾಣುತ್ತಿರಲಿಲ್ಲ!

ಉರ್ದು ಕಥೆ

# ಶಿಕ್ಷ ಮತ್ತೆ ಬಂದಾಗ

ಲೇಖಕ :
ಕೃಷ್ಣಚಂದ್ರ

ಕನ್ನಡ ರೂಪಾಂತರ :
ಸಂಚಾಕ್ಷರಿ ಹಿರೇಮಠ

ಸಂಜೆ ಸುಮಾರು ಐದು ಐದೂವರೆ ಗಂಟೆಯಾಗಿರಬೇಕು. ಸಾಯಂಕಾಲದ ಪತ್ರಿಕೆಯೊಂದನ್ನು ಓದಿ ಮುಗಿಸಿ ಹಾಯಾಗಿ ಕುಳಿತುಕೊಂಡಿದ್ದೆ. ಯಾರೋ ಬಾಗಿಲು ತಟ್ಟಿದ ಸದ್ದು. ಎದ್ದು ಬಾಗಿಲ ತೆಗೆದು ಬಂದಾತ ಯಾರೆಂದು ನೋಡುವ ಮುನ್ನವೇ ಬಾಗಿಲು ತೆಗೆದುಕೊಂಡು ಆತನೇ ಒಳಗೆ ಬಂದ. ಬಂದಾತ ತೆಳ್ಳಗಿನ, ಅಷ್ಟು ಎತ್ತರವಲ್ಲದ ಮನುಷ್ಯ. ಬರೀ ಒಂದು ಲಂಡ ಪಂಚೆ ಉಟ್ಟಿದ್ದ. ತೆರೆದ ಎದೆಯ ಮೇಲೆ ಮೂರು ಗುಂಡಿನ ಗುರುತುಗಳು. ಚಾಪುಗಾಲು ಹಾಕುತ್ತ ನನ್ನ ಹತ್ತಿರ ಬಂದು ಕುಳಿತ. ಕುಳಿತಲ್ಲಿಂದಲೇ ನನ್ನೆಡೆಗೆ ಬಾಗಿ ಕೇಳಿದ :

"ಏನು ಮಾಡುತ್ತಿರುವೆ ?"

"ಲೆಕ್ಕ ಮಾಡುತ್ತಿದ್ದೆ."

"ಎಂಥ ಲೆಕ್ಕ ?"

"ಇದೇ, ಕಳೆದ ಮೂರು ವರುಷಗಳಲ್ಲಿ ಕೂಲಿಕಾರರ ಮೇಲೆ ನಮ್ಮ ಘನ ಸರಕಾರ ಎಷ್ಟು ಬಾರಿ ಗುಂಡು ಹಾರಿಸಿದೆ—ಎಂಬುದರ ಲೆಕ್ಕ."

ಆತ ನಗುತ್ತ ಹೇಳಿದ-

"ನಿನ್ನ ಲೆಕ್ಕಕ್ಕೆ ನನಗೆ ಬಿದ್ದಿರುವ ಮೂರು ಗುಂಡುಗಳನ್ನೂ ಸೇರಿಸಿಕೊ. ಸರಿ. ಅದೇನೇ ಇರಲಿ. ಈಗ ನೀನು ಬೇಗ ಏಳು. ನಾನು ನನ್ನ ದೇಶವನ್ನು ನೋಡಬಯಸುತ್ತೇನೆ."

"ನಿಮಗಂತೂ ದುಃಖ ಶಾಶ್ವತವಾಗಿ ಮುಗಿದು ಹೋಗಿದೆ. ನಮ್ಮ ದುಃಖವನ್ನು ಕಟ್ಟಿಕೊಂಡು ನಿಮಗೇನು ಆಗಬೇಕಾಗಿದೆ.?"

"ನಾನು ಬಹಳ ಸುಖವಾಗಿ ವಿಶ್ರಾಂತಿ ಪಡೆಯುತ್ತಿದ್ದೆ ಅಲ್ಲಿ. ಆದರೆ ಭೂಲೋಕದಿಂದ ಆರ್ತನಾದ ಕೇಳಿ ಬಂತು. ಅದನ್ನು ಕೇಳಿದ ತರುವಾಯ ಅಲ್ಲಿ ಇರಲಾಗಲಿಲ್ಲ... ಏನು ನಡೆದಿದೆ ಎಂಬುದನ್ನಾದರೂ ನೋಡೋಣ- ಎಂದು ಬಂದೆ. ಜನ ನನ್ನನ್ನು ಏಕೆ ಇಷ್ಟೊಂದು ನೆನಸುತ್ತಿದ್ದಾರೆ- ಎಂಬುದನ್ನೂ ತಿಳಿಯುವ ಬಯಕೆಯಾಯಿತು. ಅದಕ್ಕಾಗಿ ಬಂದು ಬಿಟ್ಟೆ."

"ನಿಮಗೆ ತಪ್ಪು ಸಮಾಚಾರವನ್ನು ತಿಳಿಸಲಾಗಿದೆ. ಸ್ವರ್ಗಲೋಕದ ಸಮಾಚಾರ ಹಾಗೂ ಪ್ರಸಾರ ಖಾತೆ ಸರಿಯಾಗಿ ಕೆಲಸ ಮಾಡುವುದಿಲ್ಲವೆಂದು ತೋರುತ್ತದೆ. ಇಲ್ಲಿ ಯಾರಿಗೂ ನಿಮ್ಮ ನೆನಪು ಕನಸಿನಲ್ಲೂ ಕೂಡ ಬರುವುದಿಲ್ಲ. ಮೊದಲು ಸಿನಿಮಾ ಮಂದಿರಗಳಲ್ಲಿ ನಿಮ್ಮ ಫೋಟೋ ನೋಡಿ ಚಪ್ಪಾಳೆ ತಟ್ಟಿ ಗೌರವಿಸುತ್ತಿದ್ದರು. ಈಗ ಮಂತ್ರಿಗಳ ಫೋಟೋ ನೋಡಿ ನೋಡಿ ಜನ ಬೇಸತ್ತು ಅಂಥ ಹವ್ಯಾಸವನ್ನೂ ಬಿಟ್ಟುಬಿಟ್ಟಿದೆ."

"ಆದರೆ ನಾನು ಹಾಹಾಕಾರದ ಹೊಗೆ ಏಳುವುದನ್ನು ಕಂಡೆ- ದೊಡ್ಡ ದೊಡ್ಡ ಕಾರ್ಖಾನೆಗಳ ಚಿಮಣಿಗಳಿಂದ...."

"ಆ ಹೊಗೆ ನಿಜವಾಗಿ ಹೇಳಬೇಕೆಂದರೆ ಅದು 'ಸ್ಮೋಕ್ ಸ್ಕ್ರೀನ್.' ಹೊಗೆಯ ಕಪ್ಪುಪರದೆ. ಅದರ ಮರೆಯಲ್ಲಿ ಮಿಲ್ಲಿನ ಮಾಲಿಕರು ತಮ್ಮ ತಮ್ಮ ತಿಜೂರಿಗಳ ರಕ್ಷಣೆಯ ವ್ಯವಸ್ಥೆ ಮಾಡುತ್ತಿದ್ದರು. ಅವರು ನಿಮ್ಮ ಪುಣ್ಯನಾಮದೊಂದಿಗೆ ಕೂಲಿಕಾರರ ಕುತ್ತಿಗೆ ಕೊಯ್ಯುತ್ತಾರೆ- ದೇವರ ಹೆಸರಿನಲ್ಲಿ ಕುರಿ-ಕೋಣ ಬಲಿ ಕೊಟ್ಟ ಹಾಗೆ."

ನನ್ನ ಈ ಮಾತು ಕೇಳಿ ಆತ ನಕ್ಕ. ನಕ್ಕು ಹೀಗೆ ಹೇಳಿದ-

"ನಿನ್ನ ಮಾತಿನ ರೀತಿ- ಇದು ಇಂದಿನದಲ್ಲ. ಬಹಳ ಹಳೆಯದು. ನಾನು ಈ ಹಿಂದೆ ಈ ಲೋಕದಲ್ಲಿ ವರ್ಧಾದಲ್ಲಿ ಇರುವಾಗ ನಿನ್ನ ಲೇಖನ 'ಸ್ವಾತಂತ್ರ್ಯದ ಐವತ್ತು ವರುಷಗಳ ನಂತರ' ಓದಿದ್ದೆ. ಆಗ ನಿನ್ನ ಮೇಲೆ ತುಂಬ ರೇಗಿಕೊಂಡಿದ್ದೆ."

"ಆ ಲೇಖನವನ್ನು ನಾನು ೧೯೪೦ರಲ್ಲಿ ಬರೆದಿದ್ದೆ. ಆಗ ಸ್ವರಾಜ್ಯದ ನೆರಳು ಕೂಡ ನಮ್ಮ ಭಾಗ್ಯಕ್ಕೆ ಇರಲಿಲ್ಲ. ಆದರೆ ಈಗ ಸ್ವರಾಜ್ಯ ಬಂದು ಮೂರು ವರುಷಗಳು ಮಾತ್ರ ಕಳೆದಿವೆ. ಅಷ್ಟು ಹಿಂದೆ ಬರೆದ ನನ್ನ ಲೇಖನ ಸತ್ಯವಾಗುತ್ತಿದೆ..., ಓ !... ಆ ಲೇಖನದ ಪ್ರಶಂಸೆಯನ್ನು ಎಷ್ಟು ಮಾಡಿದರೂ... ಹೋಗಲಿ ಬಿಡಿ..."

ಈ ಮಾತಿನೊಂದಿಗೆ ಇಬ್ಬರೂ ನಕ್ಕೆವು. ನಗೆಯೊಂದಿಗೇನೇ ಆತ-

"ಅದೆಲ್ಲ ಇರಲಿ, ನೀನು ಸ್ವಲ್ಪ ಬಲ್ಲಿ ತಯಾರಾಗು. ಹೊರಗೆ ಹೋಗೋಣ. ನಾನು ಕೊಂಚ ನನ್ನ ದೇಶವನ್ನು ನೋಡಲೆಂದು ಬಂದಿದ್ದೇನೆ." ಅಂದ

"ಹೇಗೆ ಹೋಗುವುದು ? ಬಸ್ಸಿಗಾಗಿ ಮೈಲುದ್ದದ ಕ್ಯೂನಲ್ಲಿ ನಿಲ್ಲಬೇಕಾಗುತ್ತದೆ."

"ನಾನು ಜೀವಂತನಾಗಿದ್ದಾಗ ನನ್ನನ್ನು ನೋಡಲೆಂದು ಜನ ಕ್ಯೂನಲ್ಲಿ ನಿಲ್ಲುತ್ತಿದ್ದರು. ಈಗ ನಾನು ಬಸ್ಸಿಗಾಗಿ ನಿಲ್ಲಬೇಕು. ಅದೂ ಆಗಲಿ." ಎಂದ ಬಂದಾತ.

ನಾವಿಬ್ಬರೂ ಕೋಣೆಯಿಂದ ಹೊರಹೊರಟು ನಾಕಾದ ಹತ್ತಿರವಿದ್ದ ಬಸ್ ಸ್ಟ್ಯಾಪಿನಲ್ಲಿ ಬಸ್ಸಿಗಾಗಿ ಕಾಯತೊಡಗಿದೆವು. ನಮ್ಮ ಕ್ಯೂನಲ್ಲಿ, ನಮ್ಮ ಮುಂದುಗಡೆಗೇನೇ ಓರ್ವ ಸಿಂಧಿ ಹೆಣ್ಣುಮಗಳು ನಿಂತಿದ್ದಳು. ಆಕೆಯ ಕೈಯಲ್ಲಿ ಚಿಮಣಿ ಎಣ್ಣೆಯ

ಸಣ್ಣ ಡಬ್ಬಿ ಇತ್ತು. ಆಕೆ ಸಿಟ್ಟಿನಿಂದ ಎಲ್ಲರಿಗೂ ಕೇಳಿಸುವ ಹಾಗೆ ಬಸ್ಸಿನವರನ್ನು ದೂರುತ್ತಿದ್ದಳು–

"ಬಸ್ಸಿನಲ್ಲಿ ಇದನ್ನು ಒಯ್ಯಲು ಕೊಡದೆ ಹೋದರೆ ನಾನು ರೇಷನ್ ಅಂಗಡಿಯವರೆಗೂ ಒಯ್ಯುವುದು ಹೇಗೆ ? ಎರಡು ಮೈಲು ದೂರದಲ್ಲಿರುವ ರೇಷನ್ ಅಂಗಡಿಗೆ ನಡೆದು ಹೋಗಲು ಹೇಗೆ ಸಾಧ್ಯ ? ನಮ್ಮ ಕ್ಯಾಂಪಿನಲ್ಲಿ ಲೈಟು ಕೂಡ ಇಲ್ಲ. ಚಿಮಣಿ ಎಣ್ಣೆ ಇಲ್ಲದಿದ್ದರೆ ಕತ್ತಲದಲ್ಲಿಯೇ ಇರಬೇಕಾಗುತ್ತದೆ. ಒಳ್ಳೆ ರಾಮರಾಜ್ಯ ಸಿಕ್ಕಿದೆ. ನಾವು ಕರಾಚಿಯಲ್ಲಿ ಹಾಯಾಗಿದ್ದೆವು. ಅಲ್ಲಿಯ ಮನೆ ಮಾರು, ಆಸ್ತಿಪಾಸ್ತಿ ಇದ್ದಕ್ಕಿದ್ದಂತೆ ಬಿಟ್ಟು ಇಲ್ಲಿಗೆ ಬಂದರೆ ಇಲ್ಲಿ ನಮ್ಮ ಸ್ಥಿತಿ ಹೀಗೆ! ಕ್ಯಾಂಪಿನ ಈ ಜೀವನ... ಒಳ್ಳೆ ರಾಮರಾಜ್ಯ ಸಿಕ್ಕಿದೆ. ಇದು ಸ್ವರಾಜ್ಯವಂತೆ. ಶರಣಾರ್ಥಿಗಳಿಗೆ ಕೊಡುತ್ತಿದ್ದ ರೇಷನ್ ಕೂಡ ಬಂದು ಮಾಡುತ್ತಾರೆಂದು ಸುದ್ದಿ ಹಬ್ಬಿದೆ. ಇಲ್ಲಿ ವನಮಹೋತ್ಸವವೆಂದು ಗಿಡ ಹಚ್ಚುತ್ತಾರೆ ಹಾಗೂ ನಮ್ಮ ರೇಷನ್ ಬಂದು ಮಾಡುತ್ತಾರೆ."

ನಮ್ಮ ಕ್ಯೂನಲ್ಲಿದ್ದ ಓರ್ವ ಮರಾಠಾ ಕಾರಕೂನ ಈ ಮಾತು ಕೇಳಿ–

"ಹೌದು ತಾಯಿ. ಎಲ್ಲ ಕಡೆಗೂ ಗಿಡ ಹಚ್ಚುವ ಕೆಲಸ ನಡೆದಿದೆ. ಸ್ವತಂತ್ರ ಭಾರತವೆಲ್ಲ ಅರಣ್ಯವಾಗ ಬೇಡವೇ ? ಆಗ ಪ್ರತಿಯೊಂದು ಗಿಡದ ಟೊಂಗೆಯಲ್ಲಿ ಮಂಗಗಳು ಹಾರಾಡುತ್ತವೆ. ಆಗ ನಿಜವಾದ ಅರ್ಥದಲ್ಲಿ ರಾಮರಾಜ್ಯ ಭದ್ರವಾಗುತ್ತದೆ," ಎಂದ.

"ಥ.ಶ್...ಹಾಳಾದ್ದು ಈ ಐದನೆಯ ಬಸ್ಸು ಹೊರಟು ಹೋಯಿತು. ನಿಲ್ಲಲೂ ಸ್ಥಳವಿಲ್ಲದಂತೆ ಗಚದ್ದು ತುಂಬಿ ಬಿಟ್ಟಿದೆ. ಸಾಕಪ್ಪಾ ಸಾಕು" ಎಂದೆ.

ಆಗ ಆತ–"ಹೀಗೇಕೆ ಆಗುತ್ತದೆ?" ಎಂದು ನನ್ನನ್ನು ಕೇಳಿದ.

"ಇಲ್ಲಿ ಶರಣಾರ್ಥಿಗಳ ಕ್ಯಾಂಪಿದೆ. ಜನಸಂಖ್ಯೆ ವಿಪರೀತ ಬೆಳೆದಿದೆ. ಆದರೆ ಬಸ್ ಮಾತ್ರ ಇದ್ದಷ್ಟೇ ಇವೆ" ಎಂದೆ.

ಆಗ ನನ್ನೊಂದಿಗಿದ್ದಾತ–"ಹಾಗಾದರೆ ನಡೆದು ಕೊಂಡೇ ಹೋಗೋಣ. ಪಾದಯಾತ್ರೆ ಮಾಡಿಯೇ ನನ್ನ ದೇಶ ನನ್ನ ಜನರನ್ನು ನೋಡುತ್ತೇನೆ," ಎಂದ.

ಇಪ್ಪತ್ತು ನಿಮಿಷ ನಡೆದನಂತರ ನಾವು ರೇಲ್ವೆ ನಿಲ್ದಾಣ ತಲುಪಿದೆವು. ಬುಕಿಂಗ್ ಆಫೀಸ್ ತಲುಪಿದಾಗ ನಾನು–

"ಸ್ವರ್ಗದಿಂದ ಇಲ್ಲಿಗೆ ಬರುವಾಗ ಥರ್ಡ್‌ಕ್ಲಾಸಿನಲ್ಲಿಯೇ ಬಂದಿರೊ ಅಥವಾ ಫಸ್ಟ್‌ಕ್ಲಾಸಿನಲ್ಲಿ ಬಂದಿರೊ" ಎಂದು ಜೊತೆಗಿದ್ದಾತನನ್ನು ಕೇಳಿದ.

ಆದಕ್ಕೆ ಆತ–"ಇಲ್ಲ. ಸ್ವಂತದ ಸ್ಪೇಷನ್ ವ್ಯಾಗನ್‌ನಲ್ಲಿ ಬಂದೆ. ಅದನ್ನು ಮತ್ತೆ ಮರಳಿ ಕಳಿಸಿದೆ. ಈಗ ಥರ್ಡ್‌ಕ್ಲಾಸಿನಲ್ಲಿಯೇ ಪ್ರಯಾಣಮಾಡೋಣ ಅಂದರೆ ಶ್ರೀಸಾಮಾನ್ಯನ ದರ್ಶನವಾಗುತ್ತದ" ಎಂದು ಹೇಳಿದ.

"ಆದರೆ ಇಲ್ಲಿರುವುದು ನಿಜವಾದ ಥರ್ಡ್‌ಕ್ಲಾಸ್. ನೀವು ಜೀವಂತವಾಗಿದ್ದಾಗ ಪ್ರವಾಸ ಮಾಡುತ್ತಿದ್ದ ಥರ್ಡ್‌ಕ್ಲಾಸ್ ಅಲ್ಲ. ನೀವು ಕೂಡುತ್ತಿದ್ದ ಥರ್ಡ್‌ಕ್ಲಾಸಿನಲ್ಲಿ ಫ್ಯಾನ್ ತಿರುಗುತ್ತಿತ್ತು, ಕಟ್ಟಿಗೆಯ ಸೀಟಿನ ಮೇಲೆ ಗಾದೆ ಹಾಸಿರುತ್ತಿದ್ದರು. ಅಕ್ಕಪಕ್ಕದ ಸೀಟೆಲ್ಲ ನಿಮಗಾಗಿ ಖಾಲಿ ಇರುತ್ತಿದ್ದವು. ಈಗಂತೂ ನಿಮಗೆ ಜನತೆಯ ನಿಜವಾದ ಥರ್ಡ್‌ಕ್ಲಾಸಿನಲ್ಲಿ ಪ್ರವಾಸ ಮಾಡಬೇಕಾಗುತ್ತದೆ. ಈ ಬೋಗಿಯಲ್ಲಿ ನಿಮಗೆ ಫ್ಯಾನ್ ಇಲ್ಲ. ಗಾದೆಯಿಲ್ಲ. ಒಂದೊಂದು ಸೀಟಿನ ಮೇಲೆ ಹತ್ತಿಪ್ಪತ್ತು ಜನ–ಒಬ್ಬರಮೇಲೊಬ್ಬರು ಕೂತಿರುವ ಅನುಭವ."

"ಆಗಲಿ. ಥರ್ಡ್‌ಕ್ಲಾಸಿನ ಟಿಕೆಟನ್ನೇ ಖರೀದಿ ಮಾಡು. ನಿನಗಿಂತಲೂ ಹೆಚ್ಚು ನಾನು ನನ್ನ ದೇಶದ ಜನರ ಮಧ್ಯದಲ್ಲಿ ತಿರುಗಿದ್ದೇನೆ. ಅವರ ಪರಿಚಯ ನಿನಗಿಂತಲೂ ನನಗೆ ಹೆಚ್ಚಿದೆ."

"ಸರಿ. ವಿಚಾರ ಮಾಡಿ. ಕಾಂಗ್ರೆಸ್ಸಿನ ಯಾವ ನಾಯಕರೂ ಈಗೀಗ ಜನತಾ ಕ್ಲಾಸಿನಲ್ಲಿ ಪ್ರವಾಸ ಮಾಡುವುದಿಲ್ಲ. ಅವರೆಲ್ಲ ಫಸ್ಟ್‌ಕ್ಲಾಸ್: ಏರ್ ಕಂಡಿ




ಷನ್ಡ್ ಬೋಗಿಗಳಲ್ಲಿ ಇಲ್ಲವೇ ವಿಮಾನದಲ್ಲಿ ಪ್ರವಾಸ ಮಾಡುತ್ತಾರೆ"

ಈ ಮಾತು ಕೇಳಿದ ಆತ ಕೊಂಚ ರೇಗಿದಂತೆ ತೋರಿತು. ಸಿಟ್ಟಿನಿಂದಲೇ ಹೇಳಿದ–

"ನೀನು ಹೀಗೆಯೇ ಮಾತು ಹೇಳುತ್ತ ಹೋದರೆ ನಾನು ಇನ್ನಾವದರನ್ನೂ ನೋಡಿಕೊಂಡು ಹೋಗುತ್ತೇನೆ. ಸುಮ್ಮನೆ ಮಾತು ಬೇಡ. ನನಗೆ ಹೆಚ್ಚು ಸಮಯವಿಲ್ಲ"

"ಸರಿ. ಹೋಗಲಿ ಬಿಡಿ ಈಗ ಹೇಳಿ. ಟಿಕೆಟ್ ಎಲ್ಲಿಗೆ ತೆಗೆದುಕೊಳ್ಳಲಿ?"

"ನೇರವಾಗಿ ಮೊದಲು ದಿಲ್ಲಿಗೆ ಹೋಗೋಣ. ದಿಲ್ಲಿಯ ಟಿಕೆಟ್ ತೆಗೆದುಕೋ"

"ಸರಿ. ಹಾಗೆಯೇ ಆಗಲಿ"

ದಿಲ್ಲಿ ತಲುಪಿದ ನಾವು ಸೀದಾ ರಾಷ್ಟ್ರಪತಿ ಭವನಕ್ಕೆ ಹೋದೆವು. ರಾಷ್ಟ್ರಪತಿಯ ಏ-ಡಿ-ಸಿಯನ್ನು ಕಂಡು–"ಇವರು ನನ್ನ ಹಳೆಯ ಮಿತ್ರರು. ರಾಷ್ಟ್ರಪತಿಯವರನ್ನು ಭೆಟ್ಟಿಯಾಗಲೆಂದು ಬಂದಿದ್ದಾರೆ" ಎಂದು ಹೇಳಿದೆ.

ಏ. ಡಿ. ಸಿ. ಭಾರತೀಯನೇ. ಹಿಂದಿಯಲ್ಲಿಯೇ ಮಾತನಾಡಿದ. ಆದರೆ ಆತನ ಡ್ರೆಸ್, ರೀತಿ ನೀತಿ ಎಲ್ಲ ಅಪ್ಪಟ ಇಂಗ್ಲೀಷ್ ಜನರ ಹಾಗೆ-

ಆತ–ಏ. ಡಿ. ಸಿ ಹೇಳಿದ–

"ರಾಷ್ಟ್ರಪತಿಗಳನ್ನು ಈಗ ನೋಡಲು ಸಾಧ್ಯವಿಲ್ಲ ಹಾಯರ್. ಅವರು ಮೀಟಿಂಗಿನಲ್ಲಿದ್ದಾರೆ ಹಾಯರ್, ವಿಷಾದವೆನಿಸುತ್ತದೆ ಹಾಯರ್."

"ಹಾಯರ್. ಹಾಯರ್."

ನಾನೂ ವಿಷಾದದಿಂದ ಹೇಳಿದೆ-"ಹಾಯರ್, ಹಾಯರ್..."

ನಾನು ಹಾಯರ್... ಹಾಯರ್... ಎಂದುದರಿಂದಾಗಿ ಏ. ಡಿ. ಸಿಯ ಮುಖ ಕೆಂಜಗಾಯಿತು.

ಕೊಂಚ ಸಿಟ್ಟಿನಿಂದಲೇ ಹೇಳಿದ– "ನಾನು ಸತ್ಯ ಹೇಳುತ್ತಿಲ್ಲವೇ ಹಾಯರ್. ಮೀಟಿಂಗಿದೆ ಹಾಯರ್. ರಾಷ್ಟ್ರಪತಿ ತುಂಬ ಬಿಜಿಯಾಗಿದ್ದಾರೆ ಹಾಯರ್. ಮೀಟಿಂಗಿನಲ್ಲಿದ್ದಾಗ ಯಾರೂ ಬೇರೆಯವರು ಹೋಗಿ ಕಾಣುವಹಾಗಿಲ್ಲ ಹಾಯರ್; ಇಲ್ಲದಿದ್ದರೆ ನಾನು ನಿಮಗೆ ಭೆಟ್ಟಿ ಮಾಡಿಸುತ್ತಿದ್ದಿಲ್ಲವೆ? ಹಾಯರ್."

"ಹಾಯರ್... ದರಬಾರದಲ್ಲಿ ಹೋಗಲು ಯಾವಾದರೂ ಕಟ್ಟಳೆಗಳೇನಾದರೂ ಉಂಟೋ?" ಎಂದು ಕೇಳಿದೆ.

ಆದಕ್ಕೆ ಏ. ಡಿ. ಸಿ.– "ರಾಜನಾಗಿರಬೇಕು, ಪಾರ್ಲಿಮೆಂಟ್ ಮೆಂಬರನಾಗಿರಬೇಕು ಅಥವಾ ಕಾಂಗ್ರೆಸ್ಸಿನ ದೊಡ್ಡ ದೊಡ್ಡ ನಾಯಕರಾಗಿರಬೇಕು ಹಾಯರ್..." ಎಂದ.

ನನ್ನ ಜೊತೆಗಿದ್ದಾತ ಏ. ಡಿ. ಸಿ. ಗೆ ಹೇಳಿದ–

"ನನ್ನ ಹೆಸರಿನ ಈ ಕಾರ್ಡು ರಾಷ್ಟ್ರಪತಿಗೆ ಹೋಗಿ ಕೊಡು. ಅವರೇ ಬಂದು ನನ್ನನ್ನು ಕರೆದುಕೊಂಡು ಹೋಗುತ್ತಾರೆ."

ಏ. ಡಿ. ಸಿ- ಕಾರ್ಡು ತೆಗೆದುಕೊಂಡು ಒಳಗೆ ಹೋಗಿ ಮತ್ತೆ ಕಾರ್ಡಿನೊಂದಿಗೆ ಹೊರಗೆ ಬಂದ. ಬಂದವನೇ ನನ್ನ ಜೊತೆಗಿದ್ದವರಿಗೆ ಹೇಳಿದ-

"ನಿನಗೆ ಯಾರೋ ಚೇಷ್ಟೆ ಮಾಡಿರಬೇಕು. ಈ ಹೆಸರಿನವರು ಒಳಗೆ ಬರಲು ಸಾಧ್ಯವೇ ಇಲ್ಲ. ರಾಜಘಾಟದಲ್ಲಿ ವಾಸವಾಗಿರುವ ಇವರು ಇಲ್ಲಿಗೆ ಬರಲು ಹೇಗೆ ಸಾಧ್ಯ? ಎಂದು ರಾಷ್ಟ್ರಪತಿಗಳು ಕೇಳಿದರು ಹಾಯರ್"

"ಹಾಯರ್... ಹಾಯರ್..." ಎಂದೆ.

ಸಿಟ್ಟಿಗೆದ್ದ ಏ. ಡಿ. ಸಿ. ಹೇಳಿದ-

"ಹಾಯರ್ ನಾವು ನಿಮಗೆ ಸುಳ್ಳು ಹೇಳುತ್ತೇವೇನು ಹಾಯರ್. ಈ ಹೆಸರಿನವರ ಸಮಾಧಿ ರಾಜಘಾಟದಲ್ಲಿದೆ ಹಾಯರ್. ನಾವು ಸ್ವತಃ ನೋಡಿದ್ದೇವೆ ಹಾಯರ್..."

ನನ್ನ ಜೊತೆಗಿದ್ದಾತನನ್ನು ಕೇಳಿದೆ– "ಏನು ವಿಚಾರ. ರಾಜಘಾಟಕ್ಕೆ ಹೋಗೋಣವೆ ಅಥವಾ ಇಲ್ಲಿ ಸತ್ಯಾಗ್ರಹ ಮಾಡುವ ವಿಚಾರ ಇದೆಯೋ?"

ಆದಕ್ಕೆ ಆತ ನಗುತ್ತ "ಸ್ವರಾಜ್ಯ ಬಂದ ಮೇಲೂ ಬ್ರಿಟಿಷ್ ಕಾಲದಲ್ಲಿ ವಾಯಿಸ್‌ರಾಯನನ್ನ ಕಾಣಲು ಇದ್ದ ತೊಂದರೆ. ಸಂಪ್ರದಾಯ ಈಗ ರಾಷ್ಟ್ರಪತಿಯನ್ನು ಕಾಣಲೂ ಇವೆಯಲ್ಲ! ಆಶ್ಚರ್ಯ." ಎಂದು ಹೇಳುತ್ತ ಮತ್ತೆ ಏ. ಡಿ. ಸಿ. ಯನ್ನು ಕೇಳಿದ

"ನಾನು ಕೇವಲ ಒಂದು ನಿಮಿಷಮಾತ್ರ ಒಳಗೆ ಹೋಗಲು ಇಚ್ಛಿಸುತ್ತೇನೆ. ಇಲ್ಲಿ ನನ್ನ ಬಹಳಷ್ಟು

ಕನಸುಗಳು ಜೀವಂತವಾಗಿವೆ. ಅವನ್ನೆಲ್ಲ ಕಾಣಬೇಕು. ಹೋಗಬಹುದೇ?"

"ಸಾರಿ. ನಿಮಗೆ ಆಮಂತ್ರಣ ಇಲ್ಲ. ಅದೂ ಅಲ್ಲದೆ ಈ ಡ್ರೆಸ್ಸಿನಲ್ಲಿ. ಸಾಧ್ಯವಿಲ್ಲ."

"ಯಾವ ಡ್ರೆಸ್ಸು ಬೇಕು ಹಾಗಾದರೆ?"

"ಇಂಗ್ಲೀಷ್‌ಡ್ರೆಸ್. ಇಲ್ಲದೆ ಹೋದರೆ ಜೋಧ ಪುರಿ ಕೋಟು ಪ್ಯಾಂಟ್."

"ನಾನು ಈ ಡ್ರೆಸ್ಸಿನಲ್ಲಿಯೇ ಬಕಿಂಗ್‌ಹ್ಯಾಮ್ ಅರಮನೆಯಲ್ಲಿ ಹೋಗಿದ್ದೇನೆ, ಗೊತ್ತೋ ನಿನಗೆ?"

ಅದಕ್ಕೆ ನಾನು ಹೇಳಿದೆ-

"ಅದು ಸ್ವರಾಜ್ಯ ಬರುವ ಮುನ್ನ. ಈಗ ಬಕಿಂಗ್ ಹ್ಯಾಮ್ ಏಕೆ, ನಮ್ಮದೇ ದೇಶದ ಕೋರ್ಟು ಕಚೇರಿ ಯಲ್ಲಿಯೂ ಈ ಡ್ರೆಸ್ಸಿನಲ್ಲಿ ಹೋಗಲು ಸಾಧ್ಯವಿಲ್ಲ."

"ನಡೆ ಹಾಗಾದರೆ. ಇಲ್ಲಿಂದ ಹೋಗೋಣ."

"ಎಲ್ಲಿಗೆ ಹೋಗೋಣ?"

"ಜವಾಹರಲಾಲ ನೆಹರೂ ನನ್ನಾದರೂ ನೋಡೋಣ ನಡೆ."

* * * *

ತೀನ ಮೂರ್ತಿಗೆ ಬಂದರೆ ಜವಾಹರಲಾಲರು ಹುಚ್ಚರಾಷ್ಟ್ರೀಯ ಉದ್ಘಾಟನೆಗಾಗಿ ಮುಂಬಯಿಗೆ ಹೋಗಿದ್ದಾರೆಂದು ತಿಳಿಯಿತು. ಅಲ್ಲಿಂದ ಸರದಾರ ಪಟೇಲರ ಮನೆಗೆ ಹೋದೆವು. ಅವರು ಅಖಿಲ ಭಾರತೀಯ ಮಾರವಾಡಿ ಚೇಂಬರ್ಸ ಆಫ್ ಕಾಮರ್ಸ್‌ದ ಉದ್ಘಾಟನೆಗಾಗಿ ಬಿಕಾನೇರಕ್ಕೆ ಹೋಗಿದ್ದಾರೆಂದು ತಿಳಿದು ಬಂತು. ಅಲ್ಲಿಂದ ಕನ್ಹಯ್ಯಾಲಾಲ ಮುನ್ಷಿ ಅವರಲ್ಲಿಗೆ ಹೋದರೆ ಅವರು ಮನ್ಮಾಡದ ಸಮೀಪ ಕಜ್ಜೂರಿ ಗಿಡದ ಸಸಿ ನಡುವುದಕ್ಕಾಗಿ ಹೋಗಿದ್ದರು.



ಜಗಜೀವನರಾಮರಿಗೆ ನಾಸಿಕದಲ್ಲಿ 'ಕೋಕೋಕೋಲಾ ಕಂಪನಿಯ ಪರವಾಗಿ ಸನ್ಮಾನಪತ್ರ ಸಲ್ಲಿಸುವ ಸಮಾರಂಭ ಅಂದೇ ಇತ್ತು. ಸನ್ಮಾನ ಸ್ವೀಕರಿಸಲು ಅವರು ನಾಸಿಕಕ್ಕೆ ಹೊರಟುಹೋಗಿದ್ದರು. ಕಿದ್ವಾಯಿಯವರು ಮಚಲಿಪಟ್ಟಣದಲ್ಲಿ ಒಂದು ಹೊಸಟೆಲಿಫೋನ್ ಎಕ್ಸಚೇಂಜ್ ಉದ್ಘಾಟನೆಗಾಗಿ ಹೊರಟು ಹೋಗಿದ್ದರು. ಹರಿಕೃಷ್ಣ ಮೆಹತಾಬರು ಹರಿಕಥೆ ಕೇಳುವುದರಲ್ಲಿ ತನ್ಮಯರಾಗಿದ್ದರು. ಸರದಾರ ಬಲದೇವಸಿಂಗರು ಕಾಶ್ಮೀರದಲ್ಲಿದ್ದರು, ಮೌಲಾನಾ ಅಬುಲ್ ಕಲಮ್ ಆಜಾದ ಕಲಕತ್ತಾದಲ್ಲಿ ಆನಾರೋಗದಿಂದ ಬಳಲುತ್ತಿದ್ದರು. ರಾಜಗೋಪಾಲಾಚಾರಿಯವರಿಗೆ ಅಮೇರಿಕಾದ ದೂತಾವಾಸದಲ್ಲಿ ರಾಯಭಾರಿಯೊಂದಿಗೆ ಊಟದ ಆಮಂತ್ರಣ. ಅಂತೂ ಸಮಗ್ರ ಮಂತ್ರಿವರ್ಯರು ಕುಟಾಪಾರಿಯವಾಗಿದ್ದರು. ಆಗ ನಾನು ಕೇಳಿದೆ- "ಈಗ ಹೇಳಿ. ಏನು ಮಾಡೋಣ. ಡೆಪ್ಯೂಟಿ ಗಿಪ್ಯೂಟಿ ಮಿನಿಸ್ಟರನ್ನು ಭೆಟ್ಟಿಯಾಗುತ್ತೀರಾ ?" ಎಂದು.

"ಡೆಪ್ಯೂಟಿ ಮಿನಿಸ್ಟರ್? ಹಾಗೆಂದರೇನು?"

"ಇದು ಮೋಜಿನ ವಿಷಯ. ಮಂತ್ರಿಗಳ ಕೆಳಗೆ ಡೆಪ್ಯೂಟಿ ಸೆಕ್ರೆಟರಿಯ ಮೇಲೆ ಈ ಡೆಪ್ಯೂಟಿ ಮಿನಿಸ್ಟರ 'ನಿಚ್ಚಣಿಕೆಯ ಎರಡು ಹಲ್ಲಿನ ನಡುವಿನ ಕಟ್ಟಿಗೆಯ ತುಂಡು ಇದ್ದ ಹಾಗೆ."

ಆತ ಚಾಳೀಸ ಸರಿಮಾಡಿಕೊಳ್ಳುತ್ತ ಹೇಳಿದ-

"ನಾನು ಮಧ್ಯದ ಕಟ್ಟಿಗೆಯನ್ನು ಎಂದೂ ಒಳ್ಳೆಯದೆಂದೂ ಭಾವಿಸಿಲ್ಲ."

"ಹೀಗೆ ಹೇಳಲು ನಿಮಗೆ ಸಾಧ್ಯವಿಲ್ಲ. ನೀವು ಜೀವನದುದ್ದಕ್ಕೂ ಮಧ್ಯದ ಕಟ್ಟಿಗೆಯನ್ನೇ ಮೆಚ್ಚಿಕೊಂಡವರು. ಹಿಂದಿ ಅಥವಾ ಹಿಂದುಸ್ತಾನಿ ಮಧ್ಯದ ಕಟ್ಟಿಗೆಯಾಗಿರಲಿಲ್ಲವೇನು? ಕ್ರಾಂತಿ ಹಾಗು ಗೋಸೇವಾ. ಇರ್ವಿನ್‌ಪ್ಯಾಕ್ಟ್. ಮಸೀದೆ ಮಂದಿರದ ವಿಚಾರಧಾರಣೆ. ಮೌಂಟಬೆಟನ್ ನಿರ್ಣಯ— ಸ್ವತಂತ್ರ ಭಾರತದ ಪಡಿಯಚ್ಚಿಲ್ಲ ಮಧ್ಯದ ಕಟ್ಟಿಗೆಯಿಂದಲೇ ಸಿದ್ಧಗೊಂಡಿದೆಯೆಂದು ತೋರುತ್ತದೆ ಇಂಗ್ಲೀಷ್ ಡೆಪ್ಯೂಟಿ ಹಾಗೂ ಈ ಡೆಪ್ಯುಟಿಗಳಿಂದ ದೇಶಿ ಜನ ಹೊಡಸಿಕೊಂಡಿದ್ದಾರೆ. ರಿವಾಲ್ವಾರಿನ ಗುಂಡಿಗೆ ತುತ್ತಾಗಿದ್ದಾರೆ. ಒಂದು ಎರಡು ...ಮೂರು ನಿಮ್ಮ ಎದೆಯ ಗಾಯ-ಒಂದು... ಎರಡು...ಮೂರು...ಕ್ಷಮಿಸಿ."

"ಮೊದಲಿಗಿಂತಲೂ ಹೆಚ್ಚು ನಿನ್ನ ತಲೆ ಕೆಟ್ಟಿದೆ ಎಂದು ತೋರುತ್ತದೆ. ಇರಲಿ. ಇಲ್ಲಿಂದ ನಡೆ ಬೇರೆ ಎಲ್ಲಿಯಾದರೂ ಹೋಗೋಣ."

"ಶರಣಾರ್ಥಿಗಳ ಕ್ಯಾಂಪ್ ನೋಡುವಿರೇನು? ಬನ್ನಿ. ಮುಂಬಯಿಯ ಕೋಳಿವಾಡಾ ಕ್ಯಾಂಪಿಗೆ ಕರೆದೊಯ್ಯುತ್ತೇನೆ. ಐದನೂರು ಜನರಿಗೆ ಒಂದು ಕಕ್ಕಸ ಇದೆ. ಹಿಟ್ಲರನ ಜೇಲಿನಲ್ಲಿಯೂ ಇಲ್ಲಿರುವಷ್ಟು ಹೊಲಸು ಇದ್ದಿರಲಿಕ್ಕಿಲ್ಲ. ಶರಣಾರ್ಥಿಗಳು ತಮ್ಮ ತೊಂದರೆಗಳನ್ನು ತೋಡಿಕೊಳ್ಳಲು ಶಾಂತಿಯುತ ಮೆರವಣಿಗೆ ತೆಗೆದರೆ ಅವರ ಮೇಲೆ ಗುಂಡಿನ ಮಳೆಗರೆಯಲಾಯಿತು. ಸ್ವತಂತ್ರ ಭಾರತವಲ್ಲಿ ಗುಂಡುಗಳನ್ನು ಅರಳು ಹುರಿದಷ್ಟು ಸುಲಭವಾಗಿ ಹಾರಿಸಲಾಗುತ್ತಿದೆ.

ಇದನ್ನೆಲ್ಲ ಕೇಳಿದ ಆತ ಕೆಲಹೊತ್ತು ವಿಚಾರ ಮಗ್ನನಾದ. ಅನಂತರ-

"ಚಂಪಾರಣ್ಯಕ್ಕೆ ಹೋಗೋಣ. ಪ್ರಪ್ರಥಮವಾಗಿ ನಾನಲ್ಲಿ ರೈತರ ಸಂಘಟನೆ ಮಾಡಿದ್ದೆ" ಎಂದನಾತ.

"ಹಾಗಾದರೆ ಮತ್ತೆ ಥರ್ಡ್‌ಕ್ಲಾಸ್ ಟಿಕೆಟ್ ತೆಗೆಯಿಸಲೇ ? ನನಗಂತೂ ಈ ಪ್ರವಾಸದಲ್ಲಿ ಮೂಳೆಗಳೇ ಮುರಿದು ಹೋಗಿವೆ ಎನ್ನುವ ಅನುಭವ. ಈಗ ಮತ್ತೆ ಥರ್ಡಕ್ಲಾಸ್ ಪ್ರವಾಸವೆಂದರೆ..."

"ತಡೆ. ಈ ಸಲ ಸ್ವರ್ಗದಿಂದ ಸ್ಟೇಷನ್ ವ್ಯಾಗನ್ ತರಿಸುತ್ತೇನೆ. ನನಗೆ ಹಸಿವೆ ಕೂಡ ಬಹಳ ಬಾಧಿಸುತ್ತಲಿದೆ."



"ಹಾಗಾದರೆ ನಿಮ್ಮ ಆಡನ್ನೂ ತರಿಸಿಕೊಳ್ಳಿ. ಈಗ ದಿಲ್ಲಿಯಲ್ಲಿ ಆಡಿನ ಹಾಲು ಎಲ್ಲೂ ಸಿಗುವುದಿಲ್ಲ. ನಿಮ್ಮ ಭಕ್ತರೇನೋ ಬೇಕಾದಷ್ಟು ಜನ ಸಿಕ್ಕುತ್ತಾರೆ. ಆದರೆ ಆಡು ಸಾಕುವವರು ಯಾರೂ ಸಿಕ್ಕುವುದಿಲ್ಲ."

"ಮತ್ತೆ ಇವರೆಲ್ಲ ಏನು ಸಾಕುತ್ತಾರೆ ?"

"ಶ್ರೀಮಂತರು ಪರ್ಮಿಟ್ ಮತ್ತು ಅಲಾಟ್‌ಮೆಂಟ್ ಸಾಕುತ್ತಾರೆ. ಕಳ್ಳವ್ಯಾಪಾರ ಮಾಡುವ ವ್ಯಾಪಾರಿಗಳು ಅಮೇರಿಕದ ಸ್ನೇಹ ಬೆಳೆಸಿ ಡಾಲರು ಸಾಕುತ್ತಾರೆ. ಲಂಚಕೋರ ಭಾರೀ ಅಧಿಕಾರಿಗಳು ಬಿಳಿದೊಗಲಿನ ಪ್ರೇಯಸಿಯರನ್ನು ಕಪ್ಪು ಬಣ್ಣದ 'ಪೆಕಾಡಿ' ಬಾಟ್ಲಿಗಳನ್ನು ಸಾಕುತ್ತಾರೆ. ನನ್ನಂಥ ಮೂರ್ಖರು ನಿಮ್ಮ ತಲೆ ತಿನ್ನುತ್ತಾರೆ ಹಾಗೂ ತಮ್ಮ ತಲೆಯನ್ನು ಹಾಳು ಮಾಡಿಕೊಳ್ಳುತ್ತಾರೆ."

"ಸರಿ ಸರಿ. ಇಂದು ನಿನ್ನ ತಲೆ ಸರಿ ಮಾಡುತ್ತೇನೆ. ಒಳ್ಳೆ ಆಡಿನ ಹಾಲು ನಿನಗಿಂದು ಕುಡಿಸುತ್ತೇನೆ- ಜೀವನದುದ್ದಕ್ಕೂ ನೀನು ನನ್ನನ್ನು ಸ್ಮರಿಸುತ್ತಿರಬೇಕು."

"ನೀವು ಈ ಲೋಕದಲ್ಲಿರುವಾಗ ನಿಮ್ಮ ಆಡಿಗೆ ಬಾದಾಮಿ ತಿನ್ನಿಸುತ್ತಿದ್ದರು ಹಾಗೂ ವಿಟ್ಯಾಮಿನ್ ಇಂಜಕ್ಷನ್ಸ್ ಕೊಡುತ್ತಿದ್ದರು. ಈಗ ಅದು ಸ್ವರ್ಗದಲ್ಲಿ ಏನು ತಿನ್ನುತ್ತದೆ ?"

"ಈಗ ಅದು ಏನನ್ನೂ ತಿನ್ನುವುದಿಲ್ಲ. ಕೇವಲ ಅಮೃತ ಸ್ವರ್ಗದಿಂದ ಕುಡಿಯುತ್ತದೆ."

ಈ ಮಾತಿಗೆ ನಾವಿಬ್ಬರೂ ನಕ್ಕೆವು. ಅಷ್ಟರಲ್ಲಿ ಸ್ಟೇಷನ್ ವ್ಯಾಗನ್ ಬಂತು. ನಾವಿಬ್ಬರೂ ಅದರಲ್ಲಿ ಕುಳಿತುಕೊಂಡು ಚಂಪಾರಣ್ಯಕ್ಕೆ ಹೊರಟೆವು.

* * * *

ಚಂಪಾರಣ್ಯ ತಲುಪಿದ ಬಳಿಕ ಅಲ್ಲಿಯ ಓರ್ವ ರೈತ ಮುದುಕ ನಮಗೆ ಸಿಕ್ಕ. ಆತ ನನ್ನ ಜೊತೆಗಾರನನ್ನು ನೋಡಿ ಹಳೆಯ ನೆನಪನ್ನು ನೆನಿಸಿಕೊಂಡು ಹೇಳಿದ-

"ಇಂಥದೇ ಮನುಷ್ಯನೊಬ್ಬ ನಮ್ಮ ಜಿಲ್ಲೆಗೆ ಬಂದಿದ್ದ. ಹೀಗೆಯೇ ಆತನೂ ನಗುತ್ತಿದ್ದ. ಆಗ ನನಗೆ ಎರಡು ವರುಷದ ಶಿಕ್ಷೆಯಾಗಿತ್ತು. ನಾನಿನ್ನೂ ತರುಣನಾಗಿದ್ದೆ. ಆಗ ಜೇಲಿಗೆ ಹೋಗುವುದು ನನಗೆ ತುಂಬ ಹಿಡಿಸುತ್ತಿತ್ತು."

"ಯಾಕೆ ?" ಎಂದು ಕೇಳಿದೆ.



"ತೆರಿಗೆ ವಿಪರೀತವಾಗಿತ್ತು. ಜಮೀನ್ದಾರ ನಮ್ಮನ್ನು ನಿರ್ನಾಮ ಮಾಡಲು ಹೊರಟಿದ್ದ. ಇಂಗ್ಲೀಷ್ ಅಧಿಕಾರಿಗಳು ಅನ್ಯಾಯವೆಸಗುತ್ತಿದ್ದರು. ನಿನ್ನ ಜೊತೆಗಾರನ ಹಾಗೆಯೇ ಇರುವ ವ್ಯಕ್ತಿಯ ಮೇಲೆ ನಾನು ನನ್ನ ಊರಿನವರು ಭಕ್ತಿ ವಿಶ್ವಾಸ-ವಿರಿಸಿಕೊಂಡಿದ್ದೆವು. ಆತನ ಹೇಳಿಕೆಯ ಮೇರೆಗೆ ನಾವೆಲ್ಲ ಜೇಲಿಗೆ ಹೋದೆವು. ಯಾತನೆಯನ್ನು ಸಹಿಸಿದೆವು ಮನೆಮಾರು ಕಳೆದ ಕೊಂಡೆವು."

"ಈಗ ಹೇಗಿದ್ದೀರಿ? ನಿಮ್ಮ ಪರಿಸ್ಥಿತಿ ಸುಧಾರಿಸಿದೆಯೇ?" ಎಂದು ನನ್ನ ಜೊತೆಗಿದ್ದಾತ ಕೇಳುತ್ತ- "ಈಗಂತೂ ನಿಮ್ಮದೇ ರಾಜ್ಯ. ಬಹಳ ಸುಖವಾಗಿರಬೇಕು" ಎಂದ.

"ನಮ್ಮದೇ ರಾಜ್ಯ ನಿಜ. ಆದರೆ ಈಗಲೂ ನಮಗೆ ಹೊಲ ಇಲ್ಲ. ಇಂದಿಗೂ ಜಮೀನ್ದಾರನ ಕಪಿಮುಷ್ಟಿಯಿಂದ ನಾವು ಪಾರಾಗಿಲ್ಲ- ಸರಕಾರ, ಅದೂ ಅಷ್ಟೆ. ಸ್ವಾತಂತ್ರ್ಯಪೂರ್ವದ ಸರಕಾರವೇ ಈಗಲೂ ಇದೆ. ಕೇವಲ ಟೊಪ್ಪಿಗೆ ಮಾತ್ರ ಬದಲಾಗಿದೆ. ಮೊದಲು ಅಂಗ್ರೇಜಿ ಟೊಪ್ಪಿಗೆ ಇತ್ತು. ಈಗ ಗಾಂಧೀ ಟೊಪ್ಪಿಗೆ ಇದೆ- ಆಗಿರುವ ವ್ಯತ್ಯಾಸ ಇಷ್ಟೆ. ಕಳೆದ ತಿಂಗಳಿನಿಂದ ಕ್ಷಾಮ ಬಿದ್ದಿದೆ. ಆದರೆ ದಿಲ್ಲಿಯಲ್ಲಿ ಕುಳಿತಿರುವ ಮಂತ್ರಿಗಳು ನಂಬುತ್ತಿಲ್ಲ. ವಸಂತದಲ್ಲಿ ಕ್ಷಾಮ ಹೇಗೆ? ಎಂದು ಮಂತ್ರಿಗಳ ವಾದ. ನಿನ್ನೆ ಹೊಟ್ಟೆಗಿಲ್ಲದೆ ನಮ್ಮೂರಿನ ಕಮ್ಮಾರ ಸತ್ತುಹೋದ. ಎಲ್ಲರೂ ಸತ್ತುಹೋದರೂ ಕ್ಷಾಮ ಇಲ್ಲವೆಂದೇ ನಮ್ಮ ಮಂತ್ರಿಗಳು ಸಾಧಿಸುತ್ತಾರೆ. ಇಷ್ಟಲ್ಲದೆ ತಹಶೀಲದಾರರ ಅಪ್ಪಣೆ ಬೇರೆ ಮರಗಳನ್ನು ಹಚ್ಚಿರಿ. ಬಾಯಿ ಬಿಟ್ಟು ಮಳೆ ಹನಿಗಾಗಿ ಪರಿತಪಿಸುತ್ತಿರುವ ಭೂಮಿಯಲ್ಲಿ ಭತ್ತದ ಸಸಿ ಹುಟ್ಟಲು ಸಾಧ್ಯವಿಲ್ಲದಾಗ ಮರ ಬೆಳೆಸಬೇಕಂತೆ? ಇಂಗ್ಲಿಷರ ಹಾದಿಯನ್ನೇ ತುಳಿಯುತ್ತಿರುವ ನಮ್ಮ ಸರಕಾರ..."

"ನೀವೆಲ್ಲ ಸತ್ಯಾಗ್ರಹ ಏಕೆ ಮಾಡುವುದಿಲ್ಲ?" ಎಂದು ಕೇಳಿದ ನನ್ನ ಜೊತೆಗಾರ.

ಅದಕ್ಕೆ ಝುಬ್ಬು ಸುತ್ತಲೂ ಒಮ್ಮೊಮ್ಮೆ ನೋಡಿದ. ಅವನಲ್ಲಿ ಅದೇಕೋ ಹೆದರಿಕೆ ಆವರಿಸಿತು. ಮೆಲ್ಲನೆ ಹೇಳಿದ-

"ಸಾವಕಾಶ ಮಾತನಾಡಿ. ಯಾರಾದರೂ ಕೇಳಿಸಿಕೊಂಡಾರು. ಹಾಗೇನಾದರೂ ಕೇಳಿಸಿದರೆ ಗುಂಡಿನ ಮಳೆ ಆರಂಭವಾದೀತು. ಈ ಬರಗಾಲ ಕೊನೆಗಾಲದವರೆಗೂ ಇರಲಿಕ್ಕಿಲ್ಲವಲ್ಲ. ಹೇಗಾದರೂ ಮಾಡಿ ಕಾಲ ಹಾಕುತ್ತೇವೆ. ಅಂದು ನಿಮ್ಮ ಹಾಗೆಯೇ ಲಂಡ ಪಂಚೆ ಉಟ್ಟಿದ್ದ. ನಿಮ್ಮ ಹಾಗೆಯೇ ನಗುತ್ತಿದ್ದಾತನ ಮಾತು ಕೇಳಿ...ಓ...ಹೋಗಲಿ ಬಿಡಿ. ಆದರೆ ಇಂದು ಆತನ ಶಿಷ್ಯರು ಸುಖವಾಗಿದ್ದಾರೆ. ಅವರಿಗೆ ಬಡಬಗ್ಗರ ಯೋಚನೆಯೇ ಇಲ್ಲ. ಇಲ್ಲಿ ಝುಬ್ಬು ಅಂದು ಜೀವಿಸಲು ಹೇಗೆ ಹೋರಾಟ ಮಾಡುತ್ತಿದ್ದನೋ ಇಂದು ಕೂಡ ಹಾಗೆಯೇ ಹೋರಾಟ ಸಾಗಿಸಿದ್ದಾನೆ. ಒಳ್ಳೆ ರಾಮರಾಜ್ಯ ಬಂತು! ಇದು ಕೆಲವರಿಗೆ ಮಾತ್ರ ರಾಮರಾಜ್ಯ..." ಎಂದಾಗ ಅವನ ಕಣ್ಣಲ್ಲಿ ಕಣ್ಣೀರಕೋಡಿ...

"ಝುಬ್ಬು ನನ್ನು ಏನಾದರೂ ಕೇಳುವುದಿದ್ದರೆ ಇನ್ನು ಕೆಲ ಹೊತ್ತು ನಿಲ್ಲಿ, ಇಲ್ಲವಾದರೆ ಮತ್ತೆ ಎಲ್ಲಿಗಾದರೂ ಹೊರಡೋಣ," ಎಂದೆ.

ಆತನ ಕಂಠ ತುಂಬಿ ಬಂದಿತ್ತು. ತುಂಬಿದ ಕಂಠದಲ್ಲಿಯೇ ಹೇಳಿದ- "ಬೇಡ, ಇಲ್ಲಿಂದ ಬೇರೆ ಎಲ್ಲಿಯಾದರೂ ಹೋಗೋಣ."

"ಎಲ್ಲಿಗೆ ಹೋಗೋಣ ಹೇಳಿ. ತ್ರಿವೇಂದ್ರಂಗೆ ಹೋಗೋಣವೆ? ಕುರಿ, ಆಡು ಕೊಯ್ಯುವ ಗುತ್ತೆ ಹಿಡಿದಿರುವ ಕಾಂಗ್ರೆಸ್ ನಾಯಕನನ್ನು ಅಲ್ಲಿ ನೋಡಬಹುದು. ಅದು ಬೇಡವೆಂದರೆ ಆಚಾರ್ಯ ಕೃಪಲಾನಿಯವರನ್ನು ಕಾಣೋಣ. ಸಚಿವ ಸಂಪುಟ ಹೇಗೆ ಅಸ್ತಿತ್ವದಲ್ಲಿ ಬರುತ್ತದೆ. ಹೇಗೆ ಹಾಳಾಗುತ್ತದೆ, ಹೇಗೆ ಸುಧಾರಿಸುತ್ತದೆ ಎಲ್ಲ ತಿಳಿಯುತ್ತವೆ. ಇಲ್ಲವೆ ಕಾಶ್ಮೀರಕ್ಕೆ ಹೋಗೋಣ. ಅಲ್ಲಿ ಹಿಂದುಸ್ತಾನಿ ಹಾಗೂ ಪಾಕಿಸ್ತಾನಿ ಮಿಲಿಟರಿ ಸತ್ಯಾಗ್ರಹ ನೋಡಬಹುದು."

"ಇದು ಯಾವುದೂ ಬೇಡ. ನಾನು ನನ್ನ ದೇಶದ ನಿಜವಾದ ಸ್ಥಿತಿಯನ್ನು ನೋಡಬೇಕೆನ್ನುತ್ತೇನೆ."

"ಹಾಗಾದರೆ ನೀವು ಸರಕಾರದ ಕಾಗದ ಪತ್ರ ನೋಡಿದರೆ ಸಾಕು. ನೀವು ಸಾಯುವ ಕಾಲದಲ್ಲಿದ್ದ ವಸ್ತುಗಳ ಬೆಲೆಯಲ್ಲಿ ಇಂದು ಮೂರುನೂರು ಪಟ್ಟಿನಷ್ಟು ಹೆಚ್ಚಿದೆ. ಮೊದಲು ಸಕ್ಕರಿ ಸಿಗುತ್ತಿರಲಿಲ್ಲ. ಈಗ ಬೆಲ್ಲ ಕೂಡ ಕಳ್ಳಪೇಟೆಯ ಸೊತ್ತಾಗಿದೆ. ಖಾದಿ ಕೂಡ ಅಷ್ಟೆ. ಜನತೆಯ ಕೈಯಲ್ಲಿ ಇಂದು ಕೇವಲ ಬರಿದಾದ ಚರಖಾ ಮಾತ್ರ ಇದೆ."

"ನಿನ್ನ ಮಾತಿನಲ್ಲಿ ನನಗೆ ಈ ಮೊದಲೂ ವಿಶ್ವಾಸವಿರಲಿಲ್ಲ. ಈಗಲೂ ಇಲ್ಲ." ಎಂದ ಆತ ಮತ್ತೆ ಮುಗುಳ್ನಗುತ್ತ ನುಡಿದ-

"ನಾನು ಬೇರೆ ಯಾರನ್ನಾದರೂ ಕೇಳಿ ತಿಳಿಯುತ್ತೇನೆ, ನಡೆ. ಮುಂಬಯಿಗೆ ಹೋಗೋಣ. ಅಲ್ಲಿ ಬಹಳಷ್ಟು ಮಾತಿನ ಯಥಾರ್ಥತೆ ತಿಳಿಯುತ್ತದೆ. ಅರಳೆಯ ಬೆಲೆ ಚಂಪಾರಣ್ಯದಲ್ಲಿ ತಿಳಿದೆ ಈಗ ಬಟ್ಟೆಯ ಬೆಲೆಯನ್ನು ತಿಳಿಯಬಯಸುತ್ತೇನೆ."

"ಬಟ್ಟೆಯಲ್ಲೂ ಎರಡು ಬಗೆಯಿದೆ. ಒಂದು ಶ್ರೀಮಂತರ ಬಟ್ಟೆ. ಇನ್ನೊಂದು ಬಡಬಗ್ಗರ ಬಟ್ಟೆ. ಎರಡೂ ಬಟ್ಟೆಯ ಬೆಲೆಯೂ ಬೇರೆ ಬೇರೆಯಾಗಿದೆ."

"ಅಂದರೆ ?"

"ಅದೇ ಲಂಗೋಟಿ. ರಾಮರಾಜ್ಯವಿದ್ದರೂ ಅಷ್ಟೆ, ರಾವಣರಾಜ್ಯ ಇದ್ದರೂ ಅಷ್ಟೆ. ಬಡವನಿಗೆ ಮಾತ್ರ ಲಂಗೋಟಿಯ ಭಾಗ್ಯ ತಪ್ಪಿದ್ದಲ್ಲ ಎನ್ನುವ ಹಾಗಾಗಿದೆ."

"ಹೋಗಲಿ ಬಿಡು. ಆಡಿನ ಹಾಲು ಕುಡಿಯುತ್ತೀಯಾ ?"

"ನಿಮ್ಮ ಸ್ವರ್ಗದ ಆಡಿನ ಹಾಲು ಕುಡಿಯಲಾರೆ. ಅಮೃತ ಕುಡಿಯುವ ಆಡಿನ ಹಾಲು ಕುಡಿದು ನಾನು ಸದಾಕಾಲ ಜೀವಂತವಿರಲು ಇಚ್ಛಿಸುವುದಿಲ್ಲ."

"ಯಾಕೆ ?"

"ನಾವು ಅಮರರಾಗಿರುವುದು ಬರುವ ಜನಾಂಗಕ್ಕೆ

[illegible] ನಾವು [illegible] ಬಂದಿತು [illegible] ಅನಂತರ [illegible]. [illegible] ನಿಮ್ಮನ್ನು ಈ ಜಗತ್ತು ಎಲ್ಲ ಕಾಲಕ್ಕೂ [illegible]ತ್ತದೆ."

"ಹೇಗೆ ?"

"ಹೂ ಅರಳಿ. ಸುಗಂಧ ಬೀರಿ ಪಕಳೆಯುದುರಿ ಬಾಡಿ ಹೋಗಿ ಅದರ ಸ್ಥಳದಲ್ಲಿ ಹೊಸದೊಂದು ಹೂ ಹುಟ್ಟಿ ಬರುವ ಹಾಗೆ."

ಈ ಮಾತುಕತೆ ನಡೆಯುತ್ತಿರುವಂತೆಯೇ ಸ್ಟೇಷನ್ ವ್ಯಾಗನ್ ಬಂತು. ನಾವು ಮುಂಬೈಗೆ ಬಂದು ತಲುಪಿದೆವು.

★ ★ ★ ★

ಮುಂಬಯಿಯ ಭೇಂಡಿಬಜಾರ. ಅಲ್ಲಿ ನಮಗೆ ಸಿಕ್ಕ ಕಮಾಲ ನನ್ನ ಜೊತೆಗಾರನನ್ನು ಕುರಿತು ಹೇಳಿದ—

"ನಾನು ನಿಮ್ಮನ್ನು ಗುರುತಿಸಿದ್ದೇನೆ."

"ಅದು ಹೇಗೆ ?"

"ನೀವು ಅಹಮದಾಬಾದಿಗೆ ಬಂದಾಗಲೆಲ್ಲ ಸಾರಾಭಾಯಿ ಅವರ ಮನೆಯಲ್ಲಿರುತ್ತಿದ್ದಿರಿ. ಆಗ ನಾನು ಸಾರಾಭಾಯಿ ಅವರ ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದೆ."

"ಈಗ ಎಲ್ಲಿರುವೆ ?"

"ಸೆಸೂನ್ ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದೇನೆ."

"ಇಂಗ್ಲೀಷರ ಮಿಲ್ಲುಗಳು ಇನ್ನೂ ಇವೆಯೇನು?"

"ಇಂಗ್ಲೀಷರ ಯಾವ ವಸ್ತು ಇಲ್ಲಿಂದ ಹೋಗಿದೆ? ಇಂಗ್ಲೀಷ್ ಭಾಷೆ ಕೂಡ ಮೊದಲಿನ ತನ್ನ ಸ್ಥಾನದಲ್ಲಿಯೇ ಇದೆ."

"ಬಟ್ಟೆಯ ಧಾರಣೆ ಈಗ ಹೇಗಿದೆ ?"

"ಎರಡು ವರುಷದಿಂದ ನಾನು ಅರಿವೆ ಕೊಂಡಿಲ್ಲ. ಹೀಗಾಗಿ ನನಗೆ ಈಗಿನ ಬಟ್ಟೆ ಧಾರಣೆ ಗೊತ್ತಿಲ್ಲ."

"ಯಾಕೆ ?"

"ಕೋಣೆಯ ಬಾಡಿಗೆ, ಊಟಕ್ಕೆ, ಔಷಧ ಖರ್ಚು, ಬೀಡಿ ಇವೆಲ್ಲಕ್ಕೂ ರೊಕ್ಕ ಸಾಲದೇ ಇರುವಾಗ ಅರಿವೆ ಎಲ್ಲಿ ಕೊಳ್ಳಲಿ ?"

"ನಿನ್ನ ಹೆಂಡತಿ ಎಲ್ಲಿದ್ದಾಳೆ?"

"ಪಾಕಿಸ್ತಾನದಲ್ಲಿ."

"ಅದು ಏನು?"

"ಜಾತೀಯ ದಂಗೆ ನಡೆದಾಗ ನನ್ನ ತಾಯಿ-ಯೊಂದಿಗೆ ನನ್ನ ಹೆಂಡತಿಯೂ ಪಾಕಿಸ್ತಾನಕ್ಕೆ ಹೊರಟು ಹೋದಳು. ನಾನೂ ಹೋಗುತ್ತಿದ್ದೆ. ಆದರೆ ನೀವು ನನ್ನ ಜೀವ ಉಳಿಸಿದಿರಿ."

"ಈಗಲಾದರೂ ನಿನ್ನ ಹೆಂಡತಿಯನ್ನು ಏಕೆ ಕರೆಯಿಸಿಕೊಳ್ಳುವುದಿಲ್ಲ?"

"ಹೇಗೆ ಕರೆಯಿಸಿಕೊಳ್ಳಲಿ? ಅಲ್ಲಿಂದ ಬರುವ ಖರ್ಚಿಗಾಗಿ ಹಣ ಎಲ್ಲಿಂದ ತರಲಿ? ಕೂಲಿಕಾರರೆಲ್ಲ ಈಗ ಹರತಾಳ ಹೂಡಿ ನಡೆಸಿದ್ದಾರೆ. ಪಗಾರ ಕೂಡ ಇಲ್ಲ ಈಗ."

"ಹರತಾಳ ಏಕೆ ಮಾಡುತ್ತಿರುವಿರಿ?"

"ಬೋನಸ್ ಸಿಕ್ಕಿಲ್ಲ."

"ಬೋನಸ್? ಯಾವುದು ಬೋನಸ್ ?"

"ಮಿಲ್ ಮಾಲೀಕರು ಕೋಟಿಗಟ್ಟಲೆ ಹಣ ಗಳಿಸಿದ್ದಾರೆ ನಿಮಗೆ ನೆನಪಿರಬೇಕು. ನೀವು ಒಮ್ಮೆ ಬಟ್ಟೆಯ ಮೇಲಿನ ಕಂಟ್ರೋಲ್ ತಗೆಯಿಸಿದ್ದಿರಿ. ಆಗ ಕೆಲವೇ ದಿನಗಳಲ್ಲಿ ಮಿಲ್ ಮಾಲಿಕರು ಕೋಟಿ ಕೋಟಿ ರೂಪಾಯಿಗಳ ಲೆಕ್ಕದಲ್ಲಿ ಹೇರ್‌ಫೇರ್ ಮಾಡಿದ್ದರು."

"ನಿಜ. ಅದು ನನ್ನ ತಪ್ಪಾಗಿತ್ತು."

"ತಪ್ಪು ನಿಮ್ಮದು. ಅನುಭವಿಸಿದವರು ನಾವು. ವಸ್ತುಗಳ ಬೆಲೆ ಏರುತ್ತಲೇ ಇದೆ, ಸ್ವರಾಜ್ಯದ ವಯಸ್ಸು ಹೆಚ್ಚಾದಂತೆಲ್ಲ."

"ನಿನಗೆ ಬೇಕಾದದ್ದೂ ಏನು—ಬೋನಸ್ಸೇ?"

"ಇಲ್ಲ. ನನಗೆ ನನ್ನ ರಾಜ್ಯ ಬೇಕು. ನನ್ನ ಸರಕಾರ ಬೇಕು. ಎಲ್ಲ ಕಾರಖಾನೆಗಳನ್ನು ನಾನೇ ನಡೆಸುತ್ತೇನೆ. ಎಲ್ಲ ಭೂಮಿಯನ್ನು ನಾನೇ ಹದಗೊಳಿಸುತ್ತೇನೆ. ಪರಿಶ್ರಮ ನಾನು ನನ್ನಂಥವರು ಮಾಡುತ್ತೇವೆ. ಪರಿಶ್ರಮದ ಫಲವನ್ನೂ ನಾವೇ ಉಣ್ಣುತ್ತೇವೆ."



"ಹಾಗಾದರೆ ಗುಂಡಿನ ಮಳೆಗರಿಯುತ್ತದೆ ಆಗ..." ಆತ ನಗುತ್ತ ಹೇಳಿದ.

"ನನಗೆ ಗೊತ್ತಿದೆ. ಈ ಲಂಗೋಟಿಯಲ್ಲಿ ಜೀವಿಸುವ ನಮ್ಮನ್ನು ನೋಡಿ ನಿಮಗೆ ಸಂತೋಷವಾಗಿದೆಯೇ? ಒಂದು ವೇಳೆ ಸಂತೋಷವಾಗಿದ್ದರೆ ನಮ್ಮ ಪ್ರಾಣ ಏಕೆ ಉಳಿಸಿದಿರಿ ಅಂದು? ಪ್ರತಿ ದಿನ ಬಿಕ್ಕಿ ಬಿಕ್ಕಿ ಸಾಯಲೆಂದೇ...?"

ಕಮಾಲನ ಈ ಮಾತು ಕೇಳಿದ ನನ್ನ ಜೊತೆಗಾರ ಹೇಳಿದ —

"ನಾನು ಜೀವನದುದ್ದಕ್ಕೂ ಲಂಗೋಟಿಯನ್ನೇ ಉಟ್ಟಿದ್ದೇವೆ."

"ಅದು ಹೇಮದಂತಹ ಜೀವನ. ನಾವೆಲ್ಲ ಸಾಧಾರಣರು. ಹೋಗಲಿ ಬಿಡಿ. ಈಗ ಬೋನಸ್ ಆದರೂ ಕೊಡಿಸಿ."

ಈ ಮಾತು ಕೇಳಿ ಆತ ನಗತೊಡಗಿದ. ನಗುತ್ತಲೇ ಕೇಳಿದ—

"ನಿಮ್ಮ ಹರತಾಳದ ಪರಿಣಾಮ ಏನೂ ಆಗಿಲ್ಲವೇನು?"

"ಎರಡು ಸಲ ಗೋಳಿಬಾರ ಆಗಿದೆ, ಇನ್ನು ಮುಂದೆಯೂ ಮತ್ತೆ ಗೋಳಿ ಬಾರ್ ಆಗಬಹುದು. ಹರತಾಳವಿದ್ದುದರಿಂದ ಮಿಲ್ಲಿನ [illegible] ಕೂಡ ಮಾರಾಟವಾಗಿ ಹೋಗಿವೆ. ಮುಂಬಯಿ ಮಿಲ್ಲುಗಳು ಬಂದಾಗಿರುವುದರಿಂದ ಅಹಮದಾಬಾದ ಮಿಲ್ ಮಾಲಿಕರು ಬಹಳ ಸಂತೋಷದಲ್ಲಿದ್ದಾರೆ. ಅಹಮದಾಬಾದದ ಎಲ್ಲ ಮಿಲ್ಲುಗಳು ಚಾಲು ಇವೆ. ಯಾವುದರಿಂದ ನಮಗೆ ಕೇಡಾಗಿದೆಯೋ ಅದರಿಂದ ಕೆಲ ಶ್ರೀಮಂತರಿಗೆ ಒಳಿತಾಗಿದೆ."

"ನನ್ನ ಸ್ವರಾಜ್ಯದಲ್ಲಿ ಹುಲಿ ಹಾಗು ಆಡು ಒಂದೇ ದಡದಲ್ಲಿ ನೀರು ಕುಡಿಯುತ್ತವೆ."

"ಹಾಗಾದರೆ ಅದು ಮೃಗಾಲಯವಿರಬೇಕು, ಇಲ್ಲವೇ ಸರಕಸ್ಸಿರಬೇಕು. ಅಡವಿಯಲ್ಲಿರುವ ಸರೋವರ ಮಾತ್ರವಲ್ಲ."

"ನನ್ನ ಸ್ವರಾಜ್ಯದಲ್ಲಿ ಬಡವ ಬಲ್ಲಿದ ಎಲ್ಲರೂ ಸರಿಸಮಾನರು."

"ಅದು ಶ್ರೀಮಂತವರ್ಗದವರ ಸ್ವರಾಜ್ಯವಿರಬೇಕು, ಬಡವರ ಸ್ವರಾಜ್ಯ ಆಗಲು ಸಾಧ್ಯವೇ ಇಲ್ಲ."

"ನೀನು ಅನ್ಯರ ಹಕ್ಕನ್ನು ಕಸಿದುಕೊಳ್ಳಬೇಕೆನ್ನುವೆ."

"ಒಬ್ಬರ ಹಕ್ಕಿನಲ್ಲಿ ಇಡೀ ಮಿಲ್ಲಿದೆಯಾದರೂ ನನ್ನ ಹಕ್ಕಿನಲ್ಲಿ ಕೇವಲ ಒಂದು ಕೋಣೆ ಇದೆ. ಇನ್ನೊಬ್ಬರ ಹಕ್ಕಿನಲ್ಲಿ ಲಂಡನ್ ಪ್ರವಾಸ ಸಾಧ್ಯವಿದೆಯಾದರೆ. ನನ್ನ ಕಿಸೆಯಲ್ಲಿ ಚಹಾ ಕುಡಿಯಲೂ ರೊಕ್ಕ ಇಲ್ಲ. ಬೇರೆಯವರಿಗೆ ಕಾಲೇಜ್ ವಿದ್ಯಾಭ್ಯಾಸ ಸಾಧ್ಯವಿರುವಾಗ ನನಗೆ ಅ ಆ ಇ ಈ ಕಲಿಯಲೂ ಸಾಧ್ಯವಿಲ್ಲ. ಹೀಗಿರುವಾಗ ಬೇರೆಯವರ ಹಕ್ಕನ್ನು ನಾನು ಅವಶ್ಯ ಕಸಿದುಕೊಳ್ಳುತ್ತೇನೆ."

"ನೀನು ಬಹಳ ಹಸಿದಿರುವೆಯೆಂದು ತೋರುತ್ತದೆ. ಕಮಾಲ!"

"ಹೌದು. ನಾನು ಎರಡು ದಿನದಿಂದಲೂ ಏನನ್ನೂ ತಿಂದಿಲ್ಲ. ಒಂದೂವರೆ ತಿಂಗಳ ಈ ಹರತಾಳ ನಮ್ಮಲ್ಲಿ ಏನನ್ನೂ ಉಳಿಸಿಲ್ಲ."

"ಹಾಗಾದರೆ ಬಾ. ನಿನಗೆ ಆಡಿನ ಹಾಲು ಕುಡಿಸುತ್ತೇನೆ."

ಕಮಾಲ ನಗುತ್ತ ಹೇಳಿದ—

"ಇದು ಒಪ್ಪತ್ತಿನ ಹಸಿವೆಯಲ್ಲ. ದಿನಗಳ ಹಸಿವೆ, ಬಹಳ ಹಸಿದಿದ್ದೇವೆ. ಈ ಹಸಿವೆಗೆ ಆಡಿನ ಹಾಲು ಯಾತಕ್ಕೂ ಸಾಲದು. ಎದುರಿಗೆ ಇರುವ ಅಂಗಡಿಯಲ್ಲಿ ಏನಾದರೂ ಕೊಡಿಸಿ."

★ ★ ★ ★

ನಾವು ಮುಂಬಯಿಯಿಂದ ಕಡಪಾಕ್ಕೆ ಬಂದೆವು. ಕಡಪಾದಲ್ಲಿ ಶಾಂತಿಗಾಗಿ ಭಾರೀ ಮೆರವಣಿಗೆ ಹೊರಟಿತ್ತು. ಹಳ್ಳಿಯ ಜನ, ಕಾರಕೂನರ ಮಕ್ಕಳು, ಶಾಲೆಯ ಅಧ್ಯಾಪಕರು, ಬಡ ಕಾರಕೂನರು, ನಿರುದ್ಯೋಗಿ ತರುಣರು ಹಾಗೂ ಒಬ್ಬರಿಬ್ಬರು ಬಡ ಪತ್ರಿಕೋದ್ಯಮಿಗಳು ಎಲ್ಲರೂ ಕೈಯಲ್ಲಿ ಧ್ವಜ ಹಿಡಿದುಕೊಂಡು ಘೋಷಣೆ ಮಾಡುತ್ತ ಹೊರಟಿದ್ದರು...

"ನಾವು ಶಾಂತಿ ಬಯಸುತ್ತೇವೆ. ವಿಶ್ವದಲ್ಲೆಲ್ಲ ವಿಶ್ವದಲ್ಲೆಲ್ಲ ಶಾಂತಿಯು ರಾರಾಜಿಸಲಿ.

ಮೇಲೂರಕನೆಯ ಮಹಾಯುದ್ಧ ಆಗದಿರಲಿ.

ಯಾರು ಮೊದಲು ಆಟಂಬಾಂಬ್ ಎಸೆಯು-ವರೋ ಅವರು ಮೊದಲು ಮನುಕುಲದ ವೈರಿಗಳು."

ಈ ಎಲ್ಲ ಘೋಷಣೆಗಳು ಕಿವಿ ಗಡಚಿಕ್ಕುವ ಹಾಗಿದ್ದವು. ಎಲ್ಲರ ಮನವನ್ನೂ ತಮ್ಮೆಡೆಗೆ ಸೆಳೆದುಕೊಳ್ಳುವ ಈ ಘೋಷಣೆಗಳು,

ನಾವೂ ಈ ಮೆರವಣಿಗೆಯಲ್ಲಿ ಕೂಡಿಕೊಂಡೆವು. ಆತ ಮುಗುಳ್ನಗುತ್ತ ಮೆರವಣಿಗೆಯಲ್ಲಿ ನಮ್ಮ ಮುಂದಿದ್ದ ಓರ್ವನನ್ನು ಕೇಳಿದ—

"ನಿಮಗೆ ಶಾಂತಿ ಏಕೆ ಬೇಕು?"

"ನಾನು ಮಕ್ಕಳನ್ನು ಓದಿಸುತ್ತಿದ್ದೇನೆ."

"ನಿನ್ನ ಹೆಸರೇನು?"

"ಸುಬ್ಬರಾವ್"

"ವೇತನ ಎಷ್ಟು ನಿನಗೆ?"

"ಇಪ್ಪತ್ತೆರಡು ರೂಪಾಯಿ."

"ಇಷ್ಟರಲ್ಲಿ ನಿನ್ನ ಸಂಸಾರ ಹೇಗೆ ಸಾಗುತ್ತದೆ?"

"ಎಷ್ಟೋ ಸಲ ಉಪವಾಸವಿರಬೇಕಾಗುತ್ತದೆ."

"ಆದರೂ ಶಾಂತಿ ಬಯಸುತ್ತಿರುವೆಯಾ?"

ಸುಬ್ಬರಾಯ ಕೆಲಹೊತ್ತು ಮೌನಿಯಾಗಿದ್ದು ಮತ್ತೆ ಹೇಳಿದ-

"ಶಾಂ... ನಿಮ್ಮ ಪ್ರಶ್ನೆಯ ಅರ್ಥವಾಗಿದೆ. ಶಾಂತಿ, ಈ ಎಲ್ಲ ದುಃಖವಿದ್ದರೂ ನನಗೆ ಶಾಂತಿ ಬೇಕು. ನನ್ನ ಸ್ಕೂಲಿನಲ್ಲಿ ನಾನು ಮಕ್ಕಳನ್ನು ಓದಿಸುತ್ತೇನೆ. ಅವರಿಗೆ ವಿದ್ಯೆ ಹೇಳಿಕೊಡುವಾಗ ನನಗೆ ಬಹಳ ಆನಂದವಾಗುತ್ತದೆ. ನನ್ನ ವಯಸ್ಸಾದ ತಾಯಿ ಇದ್ದಾಳೆ. ದೇಶದಲ್ಲಿ ಶಾಂತಿ ನೆಲಸಿದರೆ ಆಕೆ ಇನ್ನೂ ಹತ್ತೆಂಟು ವರುಷ ಬದುಕಬಹುದು. ಆಕೆ ಅದೆಷ್ಟು ಪರಿಶ್ರಮದಿಂದ ನನಗೆ ವಿದ್ಯೆ ಕಲಿಸಿದ್ದಾಳೋ ಅಷ್ಟೇ ಪರಿಶ್ರಮದಿಂದ ನಾನು ದುಡಿದು ಆಕೆಗೆ ಸೌಖ್ಯವನ್ನು, ಆರಾಮನ್ನು ನೀಡಬೇಕೆಂದಿದ್ದೇನೆ. ಇವೆಲ್ಲಕ್ಕೂ ಶಾಂತಿ ಬೇಕು. ನನ್ನ ಸ್ಥಿತಿ ಕೊಂಚ ಸುಧಾರಿಸಿದರೆ ಒಂದು ಒಳ್ಳೆಯ ಹುಡುಗಿಯನ್ನು ಮದುವೆಯಾಗುತ್ತೇನೆ... ಇದನ್ನೆಲ್ಲ ನೋಡಿ ತಾಯಿಗೆ ಆನಂದವಾಗುತ್ತದೆ... ನನಗೆ ಶಾಂತಿ ಏಕೆ ಬೇಕು ಎಂಬುದು ನಿಮಗೀಗ ಅರ್ಥವಾಗಿರಬೇಕು ಅಲ್ಲವೆ?"

ಸುಬ್ಬರಾಯ ಮುಂದೆ ಹೊರಟು ಹೋದ. ನಾವೂ ಮುಂದೆ ಮುಂದೆ ಮೆರವಣಿಗೆಯ ಜೊತೆಯಲ್ಲಿ ಹೊರಟೆವು. ಓರ್ವ ರೈತ "ನಮಗೆ ಶಾಂತಿ ಬೇಕು" ಎಂದು ಕೂಗುತ್ತಿದ್ದ. ನನ್ನ ಜೊತೆಗಾರ ಕೇಳಿದ-

"ತೆರಿಗೆ, ಸಾಲ, ಸಾಲದ ಬಡ್ಡಿ, ಜಮೀನ್ದಾರರಿಗೆ ಕೊಡಬೇಕಾದ ಪಾಲು ಇದನ್ನೆಲ್ಲ ಕೊಟ್ಟು ನಿನಗೇನು ಉಳಿಯುತ್ತದೆ!"

"ಒಪ್ಪತ್ತಿನ ಊಟ. ಬೆಳೆ ಚೆನ್ನಾಗಿ ಬರದಿದ್ದರೆ ಅದೂ ಇಲ್ಲ."

"ಹೀಗಿದ್ದರೂ ನಿನಗೆ ಶಾಂತಿ ಬೇಕೇನು?"

"ಹೌದು, ನನಗೆ ಶಾಂತಿ ಬೇಕು- ಎಂದಾದರೂ ಭೂಮಿಯಲ್ಲಿ ವಸಂತ ಬಂದೀತು ಎಂದು ಆಶೆ ತಾಳಿದ್ದೇನೆ. ಬರುವ ಆ ವಸಂತದ ದಿನಗಳನ್ನು ನೋಡಲು ನಾನು ಬದುಕಬೇಕೆನ್ನುತ್ತೇನೆ."

"ಈ ಜನ ಅದೆಷ್ಟು ಒಳ್ಳೆಯವರಾಗಿದ್ದಾರೆ" ನನ್ನ ಜೊತೆಗಿದ್ದ ಆತ ಹೇಳಿದ. ಆತನ ಮುಖ ಕಮಲದ ಹಾಗೆ ಅರಳಿತು.

ಆತ ಮತ್ತೆ ಹೇಳಿದ,

"ಇವರ ಈ ಮೆರವಣಿಗೆಯಲ್ಲಿ ನಾನು ಕೊನೆಯವರೆಗೂ ಹೋಗುತ್ತೇನೆ. ಇವರು ಬಯಸಿದರೆ, ಅವಕಾಶ ನೀಡಿದರೆ ನಾನು ಇವರ ಸಭೆಯಲ್ಲಿ ಮಾತೂ ಆಡುವೆ."

"ಅವಶ್ಯ, ಅವಶ್ಯ" ಎಂದು ನಾನು ಆತನಿಗೆ ಭರವಸೆ ನೀಡಿದೆ. ಭರವಸೆಯೊಂದಿಗೆ ಮತ್ತೆ ನಾನು-

"ಇವರು ಹಿಂದುಸ್ತಾನದ ಹೊಸ ಜನ" ಎಂದು ಹೇಳಿದೆ. ಸಭೆಯಲ್ಲಿ ಆತನ ಬಗೆಗೆ ಪ್ರಶಂಸಾಪರ ಮಾತುಗಳನ್ನೂ ಆಡಿದೆ ಹಾಗೂ ಕಾಂಗ್ರೆಸ್ಸಿನ ಹಳೆಯ ನಾಯಕನೆಂದು ಆತನ ಪರಿಚಯ ಮಾಡಿಕೊಟ್ಟೆ. ಆದರೆ ಆತನ ಹೆಸರು ಹೇಳಲಿಲ್ಲ. ಅದು ಅವಶ್ಯಕವೂ ಎನಿಸಲಿಲ್ಲ.

"ಹಿಂದುಸ್ತಾನದಲ್ಲಿ ಶಾಂತಿಯ ಇತಿಹಾಸ ಬಹು ಪುರಾತನದ್ದು. ಯುದ್ಧಪ್ರಿಯರು ಈ ದೇಶಕ್ಕೆ ಬಂದಾಗಲೆಲ್ಲ ಶಾಂತಿ ಬಯಸುವ ಜನ ಶಾಂತಿಪ್ರಿಯರ ಸಹಾಯದೊಂದಿಗೆ ಶಾಂತಿ ನೆಲಸಲು ಹೋರಾಡುತ್ತಲೇ ಬಂದಿದ್ದಾರೆ. ಶಾಂತಿಪದ ನಮ್ಮ ಇತಿಹಾಸದ ಪುಟಪುಟಗಳಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಲಾಗಿದೆ. ಗೌತಮ ಬುದ್ಧ, ಅಶೋಕ, ಅಕ್ಬರ, ಕಬೀರ, ನಾನಕ, ಚಿಸ್ತಿ... ಶಾಂತಿಯ ಪ್ರಾಣವೇ ಹಿಂದುಸ್ತಾನದಲ್ಲಿದೆ. ಹಿಂದುಸ್ತಾನದ ಧರ್ಮ, ಸಂಸ್ಕೃತಿಯ ಆಧಾರವೇ ಶಾಂತಿಯಾಗಿದೆ. ಅದಕ್ಕಾಗಿ ಮಹಾ ಮಹಾ ಪುರುಷರು ಬೇಕಾದಷ್ಟು ತ್ಯಾಗ ಮಾಡಿದ್ದಾರೆ, ತಮ್ಮನ್ನೇ ತಾವು ಅರ್ಪಿಸಿಕೊಂಡಿದ್ದಾರೆ ವಿಶ್ವಕ್ಕೇನೇ ಶಾಂತಿಯ ಅವಶ್ಯಕತೆ ಇರುವ ಈ ಕಾಲದಲ್ಲೂ ಕೂಡ ಭಾರತೀಯ ಜನ ಒಂದು ಮನಸ್ಕರಾಗಿ ಶಾಂತಿಯ ಸ್ಥಾಪನೆಗಾಗಿ ವಿಶ್ವದ ಜನತೆಯೊಂದಿಗೆ ಸಹಕರಿಸಲು, ದುಡಿಯಲು ಮುಂದಾಗಿದ್ದಾರೆ. ನಾನು ಕೂಡ ಈ ಉದ್ದೇಶದ ಸಾಧನೆಗಾಗಿ ನನ್ನನ್ನೇ ಅರ್ಪಿಸುತ್ತೇನೆ. ಏಕೆಂದರೆ..." ಎಂದು ಆತ ಹೇಳುತ್ತಿರುವಂತೆಯೇ ಸಭೆಯಲ್ಲಿ ಕೋಲಾಹಲವೆದ್ದಿತು. ಈ ಸಭೆ ಕಾಯ್ದೆ ವಿರುದ್ಧ-ವೆಂದು ಸರಕಾರ ಪರಿಗಣಿಸಿ ಜನಸಮೂಹದ ಮೇಲೆ ಲಾಠಿಚಾರ್ಜ್ ಮಾಡಿತು. ಮೊದ ಮೊದಲು ಲಾಠಿ ಹೊಡತ ಆರಂಭಿಸಿದ ಪೋಲೀಸರು ಮುಂದೆ ಗುಂಡು ಹಾರಿಸಲು ಆರಂಭಿಸಿದರು. ಕೆಲವರು ಲಾಠಿ ಹೊಡತದಿಂದ ಸತ್ತರೆ ಇನ್ನೂ ಕೆಲವರು ಗುಂಡಿನೇಟಿನಿಂದ ಸತ್ತರು. ನನ್ನ ಜೊತೆಗಾರನಿಗೂ ಗುಂಡು... ಒಂದು...ಎರಡು... ಮೂರು... ಒಂದರ ನಂತರ ಮತ್ತೊಂದರಂತೆ ಹೀಗೆ ಮೂರು ಗುಂಡುಗಳು ಎದೆಯ ಗುಂಡಿಗೆ ಹೊಕ್ಕವು. ಆತ ವೇದಿಕೆಯ ಮೇಲಿಂದ ಕೆಳಗುರುಳಿದ. ಉರುಳಿದ ಆತ ಕೊನೆಯುಸಿರನ್ನೂ ಎಳೆದ...

ಪೋಲಿಸ್ ಠಾಣೆಯಲ್ಲಿ ವಿಚಾರಣೆಯ ಕಾಲಕ್ಕೆ ನನ್ನನ್ನು ಕರೆಯಿಸಿದರು. ಪೋಲಿಸ್ ಇನ್ಸ್‌ಪೆಕ್ಟರ್,

"ನೀನು ಈ ಮನುಷ್ಯನನ್ನು ಬಲ್ಲೆಯೇನು!" ಎಂದು ಕೇಳಿದ.

ಅದಕ್ಕೆ ನಾನು ಹೇಳಿದೆ- "ಚೆನ್ನಾಗಿ ಬಲ್ಲೆ. ಈತನ ಹೆಸರು ಮೋಹನದಾಸ ಕರಮಚಂದ ಗಾಂಧಿ! ಈತ ನಮ್ಮ ರಾಷ್ಟ್ರದ ನಾಯಕನಾಗಿದ್ದ. ಇಂದು ಈತನನ್ನು ಎರಡನೆಯ ಬಾರಿ ಕೊಲೆ ಮಾಡಲಾಗಿದೆ."



ಅಸ್ಸಾಮಿ ಕಥೆ





ನಿರೋಧ ಚೌಧರಿ

# ಚಮೇಲಿ ಮೇಮ್‌ಸಾಬ್





ಅನುವಾದ :
ಎಚ್. ಎಸ್. ರಂಗರಾವ್

ಟೀ ತೋಟದ ಪೂರ್ವದಿಕ್ಕಿನಲ್ಲಿ ಬಣ್ಣ ಬಣ್ಣದ ತಗಡಿನ ಬಂಗಲೆಯೊಂದರಲ್ಲಿ ಚಮೇಲಿ ಮೆಮ್‌ಸಾಬಳ ವಾಸ. ಆ ಬಂಗಲೆಯ ಹತ್ತಿರದಲ್ಲೆಲ್ಲೂ ಮನೆಗಳಿಲ್ಲ. ಸ್ವಲ್ಪ ದೂರದಲ್ಲಿ ಒಂದೇ ಒಂದು ಶಾಲೆಯ ಹಳೆಯ ಕಟ್ಟಡ. ಅದರ ಹಿಂದೆ ಟೀ ಎಲೆಯ ಉಗ್ರಾಣ. ಉಗ್ರಾಣದ ಹಿಂದೆಯೇ ವಿಶಾಲವಾಗಿ ಮೈಚಾಚಿ ಮಲಗಿದ ಟೀ ತೋಟ. ಚಮೇಲಿ ಮೆಮ್‌ಸಾಬಳ ಬಂಗಲೆಯ ಸುತ್ತ ಹಸಿರು ಛಾಯೆಯ ಚಿಕ್ಕ ಪುಟ್ಟ ಮರಗಳು. ಅದಕ್ಕೆ ಸುಮಾರು ಗ್ತ್ರಿ ಮೈಲು ದೂರದಲ್ಲಿ ಕೆಲಸಗಾರರ ವಸತಿಗಳು. ಸಾಕಷ್ಟು ದೂರದಲ್ಲಿ ಕಾರ್ಖಾನೆ.

ಈ ತೋಟದಲ್ಲಿ ಕೆಲಸ ಮಾಡಿದ ಮೊದಲ ದಿನವೇ ನನ್ನ ಫೂಫಾಜೀ (ಸೋದರ ಮಾವ) ಮಗ ನಿಲಯನ ಜೊತೆಯಲ್ಲಿ ಟಾರ್ ರಸ್ತೆಯಲ್ಲಿ ಬರುತ್ತಿದ್ದಾಗ ಹುಡುಗ ನನ್ನ ಕಡೆ ತಿರುಗಿ 'ಅದೊಂದು ಸ್ಕೂಲಾಗಿತ್ತು, ಸೋನ್‌ದಾ. ನೀನು ಅಲ್ಲಿಯೇ ಪಾಠ ಹೇಳಬೇಕಾಗುತ್ತೆ' ಎಂದ.

ಅವನ ಮಾತು ನನಗರ್ಥವಾಗಲಿಲ್ಲ. ನಂತರ ಏನದರರ್ಥವೆಂದು ಕೇಳಿದಾಗ, ಅಂದರೆ ಈಗ ಆ ಮನೆಯಲ್ಲಿ ಯಾರೂ ಇಲ್ಲ. ಹಿಂದಿನ ವರುಷದಿಂದ ಶಾಲೆ ನಿಂತುಹೋಗಿದೆ. ಈ ಸಂಬಂಧವಿಲ್ಲದ ಮಾತಿನ ಅರ್ಥವೇನೆಂದು ಮತ್ತೊಮ್ಮೆ ಪ್ರಶ್ನಿಸುವ ಮುಂಚೆಯೇ,

'ಈಗ, ವಾಪಸ್ಸು ಹೋಗೋಣ. ಕತ್ತಲಾಗುತ್ತಿದೆ.' ಎಂದು ತನ್ನ ಮಾತನ್ನು ಬದಲಿಸಿದ. ಹಿಂತಿರುಗುವ ವೇಳೆಗೆ ತೋಟದಲ್ಲೆಲ್ಲಾ ಕತ್ತಲೆ ಆವರಿಸಿತ್ತು- ಎಲ್ಲೆಲ್ಲೂ ನೀರವ.

ತೋಟದಲ್ಲಿ ಕೆಲಸ ಮಾಡಲು ನನಗಷ್ಟು ಇಷ್ಟವಿರಲಿಲ್ಲ. ಯಾವಾಗ ಎಲ್ಲೂ ಏನೂ ಕೆಲಸ ಸಿಗದಿದ್ದಾಗ, ಕಷ್ಟದಿಂದ ಸಿಕ್ಕ ಒಂದು ಉಪಾಧ್ಯಾಯ ವೃತ್ತಿ ಬಿಡಲು ಧೈರ್ಯವಿಲ್ಲ. ನನ್ನ ಫೂಫಾಜೀ ಮನೆ ಇಲ್ಲಿಯೇ ಇದ್ದುದರಿಂದ ಅವರು ಕಷ್ಟಪಟ್ಟು ಶಾಲಾ ಮುಖ್ಯಸ್ಥರನ್ನು ಬೇಡಿಕೊಂಡು ಬಹು ಕಷ್ಟದಿಂದ ಈ ಕೆಲಸ ನನಗೆ ಕೊಡಿಸಿದ್ದರು. ನನಗೊಂದು ಬೇರೆ ಮನೆ ಕೊಡುತ್ತಾರೆ. ಸುಣ್ಣಬಣ್ಣಗಳ ಕೆಲಸ ವಿದ್ದುದರಿಂದ ಸ್ವಲ್ಪ ತಡವಷ್ಟೆ ಅಲ್ಲಿಯವರೆಗೂ ಇಲ್ಲೇ ಬಿಡಾರ ನನ್ನದು.

ಇಲ್ಲೇ ಇದ್ದುಬಿಡು ಎಂದು ಫೂಫಾಜೀಯೂ (ಸೋದರಮಾವ- -ತಾಯಿ ಅಣ್ಣ) ಅಂದಿದ್ದರು. ಮೊದಲು ನನ್ನ ಸಮ್ಮತಿ ಕೊಡದೆ ಸುಮ್ಮನಿದ್ದೆ. ಕಾರಣ, ನಿರ್ಜನ ಪ್ರದೇಶದಲ್ಲಿ ಏಕಾಂಗಿಯಾಗಿರುವುದು ಸ್ವಲ್ಪ ಕಷ್ಟವಾಗಿತ್ತು.

ಕಳೆದ ಇಪ್ಪತ್ತೆರಡು ವರ್ಷಗಳಿಂದಲೂ ಫೂಫಾಜೀ ಈ ತೋಟದಲ್ಲಿ ಕೆಲಸಮಾಡಿದ್ದಾರೆ. ಮನೆಯಲ್ಲಿನ ತೊಂದರೆಯಿಂದ ಹೆಚ್ಚು ಓದುಬರಹ ಕಲಿತವರಲ್ಲ. ಟೀ ಬೇಲಿಗಳಿಗೆ ನಂಬರ್ ಕಾಣಿಸುವುದರಿಂದ ಅವರ ಕೆಲಸ ಪ್ರಾರಂಭವಾಯಿತು. ಅವರ ಕರ್ತವ್ಯ ಪರಾಯಣತೆಯಿಂದಾಗಿ ಗುಮಾಸ್ತಗಿರಿಗೆ ಬಡ್ತಿ ಸಿಕ್ಕಿತು. ಪ್ರತಿದಿನ ಬೆಳಗ್ಗೆ ಏಳುಗಂಟೆಗೆ ಮನೆ ಬಿಟ್ಟು ಕಾರ್ಖಾನೆ ಸೈರನ್ ಕೂಗುವ ಮೊದಲು ಅಲ್ಲಿರುತ್ತಿದ್ದರು. ಕೆಲಸದಲ್ಲಿ ಕರಾರುವಾಕ್ಕು. ಕ್ಲಬ್ಬು, ಚೆಸ್ ಆಡುವ ಹವ್ಯಾಸವಿತ್ತು ಅವರಿಗೆ ರಾತ್ರಿ ೧೦-೧೧ ಗಂಟೆಗೆ ಬರುವ ಅವರಿಗೆ ಬುವಾಜೀ- (ಸೋದರತ್ತೆ)ಯವರು ಸ್ವಲ್ಪವೂ ಬೇಸರ ಮಾಡಿಕೊಳ್ಳದೆ ಅಡಿಗೆ ಬಿಸಿಮಾಡಿ ಬಡಿಸುತ್ತಿದ್ದರು. 'ಇಂದು ಬಹಳ ಹೊತ್ತಾಯಿತಲ್ಲವೆ' ಎಂದು ನಮ್ರವಾಗಿ ಕೇಳಿದರೆ 'ಈಗಿನ್ನೂ ಹತ್ತಷ್ಟೆ ಹೊಡೆದಿದೆ' ಎಂದು ಮುಗುಳ್ನಕ್ಕು ಹೇಳುವರು.

ನನ್ನ ಫೂಫಾಜೀಯವರಿಗೆ ನಾಲ್ಕು ಮಕ್ಕಳು. ದೊಡ್ಡವಳು ಡಿಬ್ರೂಗಡ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದಾಳೆ ಅವಳ ಚಿಕ್ಕ ತಮ್ಮ ಹತ್ತನೆ ತರಗತಿಯಲ್ಲಿ ಕಲಿಯುತ್ತಾನೆ. ತಂಗಿ ಸಹ ಸ್ಕೂಲಿಗೆ ಹೋಗುತ್ತಾಳೆ. ನಾಲ್ಕನೆಯವಳು ಇನ್ನೂ ಬಹು ಚಿಕ್ಕವಳು ನಿಲಯ ಹೋಗುವುದು ಡುಮಡುಮಾ ಹೈಸ್ಕೂಲಿಗೆ. ದಿನಾ ನಾಲ್ಕು ಮೈಲಿಗಳ ನಡೆತ ಅವನಿಗೆ. ಅವನ ಕೋಣೆಯಲ್ಲಿಯೇ ನನ್ನ ವಸತಿ ಸಹ. ಅವನಿಗೂ ನನ್ನ ಜೊತೆ ಸೊಗಸಿತ್ತು. ಹುಡುಗ ಬಹಳ ಒಳ್ಳೆಯವನು ಓದಿನಲ್ಲೂ ಮುಂದು. ಕೇಳಿದ ಪ್ರಶ್ನೆಗಳಿಗೆ ಹಿಂದುಮುಂದು ನೋಡದೆ ಥಟ್ಟನೆ ಸರಿಯಾಗಿ ಉತ್ತರಿಸುತ್ತಾನೆ.

ಒಮ್ಮೆ ಆತ ನನ್ನನ್ನು ಒಂದು ಪ್ರಶ್ನೆ ಕೇಳಿದ್ದ-

"ಸೋನದಾ, ಮನುಷ್ಯ ಸತ್ತಮೇಲೆ ದೆವ್ವವಾಗಿಬಿಡುತ್ತಾನಾ?" ಪ್ರಶ್ನೆಗೆ ನಾನು ಆಶ್ಚರ್ಯಪಟ್ಟೆ. ಅವನೇನೋ ಅದನ್ನು ಸ್ವಾಭಾವಿಕವಾಗಿ ಕೇಳಿದ್ದ. ಮತ್ತೆ ನನ್ನ ಮೌನ ಮುರಿದು ಅವನಷ್ಟೇ ಸ್ವಾಭಾವಿಕವಾಗಿ ನಾನು-

"ಎಲ್ರೂ ಹಾಗಂತ ಹೇಳ್ತಾರೆ ಮರಿ. ಆದರೆ ನನಗಂತೂ ಅದರಲ್ಲಿ ನಂಬಿಕೆಯಿಲ್ಲ"

ಅವನು ಇದರಿಂದ ತೃಪ್ತನಾಗಲಿಲ್ಲ. ಪೆನ್ಸಿಲ್ ಮದ್ದನ್ನು ತನ್ನ ಹಲ್ಲಿನಲ್ಲಿ ಕಡಿಯುತ್ತ ಏನನ್ನೊ ಯೋಚಿಸಿ ನಂತರ ನನ್ನ ಕಡೆ ತಿರುಗಿ "ಹಾಗಾದ್ರೆ ನಿಮಗೆ ಭೂತ ಪ್ರೇತಗಳಲ್ಲಿ ನಂಬಿಕೆಯಿಲ್ವಾ"

ಆಗ ನಾನು ಸ್ವಲ್ಪ ಗಂಭೀರನಾಗಿ-

"ಇಲ್ಲ. ಆದರೆ ನೀನು ಇದನ್ನು ಯಾತಕ್ಕೆ ಕೇಳ್ತಾಯಿದೀಯಾ? ಇಂಥಾ ರಾತ್ರಿ ಸಮಯದಲ್ಲಿ ದೆವ್ವ ಭೂತ ಪ್ರೇತಗಳ ವಿಷಯದಲ್ಲಿ ಮಾತನಾಡಬಾರದು" ಎಂದು ಅವನನ್ನು ಸುಮ್ಮನಾಗಿಸಿದೆ. ಅವನೂ ನಿರುತ್ತರನಾದ" ವಿಜ್ಞಾನ ಪ್ರವೇಶಿಕಾ"ಪುಸ್ತಕದ ಪುಟಗಳಲ್ಲಿ ಅಡಗಿಸಿದ ಅವನ ಕಣ್ಣುಗಳು ಅವನಿಗೆ ಓದಲು ಇಷ್ಟವಿಲ್ಲವೆಂಬುದನ್ನು ತಿಳಿಸುತ್ತಿದ್ದವು. ಆಗ ಬುಅಜೀ

ಒಂದು ಲೋಟದಲ್ಲಿ ನೀರು ತಂದು ಟೇಬಲ್ ಮೇಲಿಡುತ್ತಾ 'ನಿಲಯ್ ನಿದ್ದೆಯಲ್ಲಿ ಮಹಾ ಕುಂಭಕರ್ಣ. ನಿದ್ದೆಯಲ್ಲೇ ಕಿರುಚುತ್ತಾನೆ. ಇದರಿಂದ ನಿನಗೆ ತೊಂದರೆಯಾಗಿರಬಹುದು' ಎಂದಳು. ಅದನ್ನು ಕೇಳಿ ಸುಮ್ಮನೆ ನಕ್ಕು ಮಲಗಿದೆ. ನಿದ್ರೆ ಹತ್ತಿಬಿಟ್ಟಿತು. ಅಚಾನಕವಾಗಿ ಸೀಳಾಗಿ ಬಂದ ಸೀನೊಂದು ನನ್ನ ನಿದ್ರೆ ಕೆಡಿಸಿಬಿಟ್ಟಿತು. ಯಾರೋ ಅಸ್ಪಷ್ಟವಾಗಿ ಅಳುವುದನ್ನು ಕೇಳಿ ಸ್ವಲ್ಪ ಎಚ್ಚರ ತಂದುಕೊಂಡೆ. ಸರಿಯಾಗಿ ಆಲಿಸಿದೆ. ಶಬ್ದ ಬಂದದ್ದು ನಿಲಯ್‌ನ ಹಾಸಿಗೆಯಿಂದ ಎಂದುಕೊಂಡು ಸುಮ್ಮನಾದೆ. ಏಕೆಂದರೆ ಅದೇ ತಾನೆ ಬುಆಜೀ ನಿಲಯ್ ವಿಷಯ ತಿಳಿಸಿದ್ದರು. ಅವ್ಯಕ್ತವಾದ ಮಾನಸಿಕ ಭಯವೊಂದು ಅವನ ಮನಸ್ಸಿನಲ್ಲಿ ಹೊಕ್ಕಿಬಿಟ್ಟಿತ್ತೆಂದು ಕಾಣುತ್ತದೆ. ತಿರುಗಿ ನಿದ್ರೆ ಹತ್ತಲಿಲ್ಲ ನನಗೆ. ಆ ನೀರವ ರಾತ್ರಿಯಲ್ಲಿ ದೂರದಲ್ಲಿ ನರಿಗಳು ತಾರಕ ಸ್ವರದಲ್ಲಿ ಕೂಗುತ್ತಿದ್ದುದನ್ನು ಕೇಳಿದೆ. ಹುಳು ಹುಪ್ಪಟೆಗಳ ನಾನಾ ಬಗೆಯ ಸಪ್ಪಳ ಬೇರೆ. ಸಾಲದ್ದಕ್ಕೆ ನಿಲಯ್‌ನ ಮೂಗಿನಿಂದ ಹೊರಡುತ್ತಿದ್ದ ಅಹಿತವಾದ ಸ್ವರ. ಅವನು ಎದೆಮೇಲೆ ಕೈಯಿಟ್ಟುಕೊಂಡು ಮಲಗಿದ್ದನೆಂದು ಕಾಣುತ್ತದೆ. ಅವನನ್ನು ಎಬ್ಬಿಸಲೆಂದು ಕೂಗಿದೆ ಅವನಿಂದ ಉತ್ತರವೇ ಇಲ್ಲ. ಲೈಟ್ ಹಾಕಿ ಅವನ

ಗಾಳಿ ಒಳನುಗ್ಗಿ ಮೈಗೆ, ಮನಸ್ಸಿಗೆ ತುಸು ಹಾಯೆನಿಸಿತು. ಒಂದು ಸಿಗರೇಟ್ ಹೊತ್ತಿಸಿಕೊಂಡು ಹೊರ ನೋಡುತ್ತಿದ್ದಾಗ ಹೊಳೆವ ಮುತ್ತಿನಂಥ ಮಿಣುಕು ಹುಳುಗಳು ಹಾರಾಡುತ್ತಿದ್ದವು. ಸಿಗರೇಟ್ ಉರಿದುಹೋಗಿತ್ತು. ಮಲಗಲು ಕಿಟಕಿ ಬಾಗಿಲು ಮುಚ್ಚಬೇಕೆನ್ನುವಷ್ಟರಲ್ಲಿ ಕಿಟಕಿಯ ಜಾಲರಿಯ ಮೂಲಕ ಎದುರಿನ ಒಂದು ಮನೆಯಲ್ಲಿ ದೀಪ ಉರಿಯುತ್ತಿತ್ತು. ಬೆಳಗ್ಗೆ ಆ ಮನೆಯನ್ನು ನಿಲಯ್ ನನಗೆ ತೋರಿಸಿದ್ದ.

ಮೇಲ್ಛಾವಣಿಗೆ 'ಜಿಂಕ್ ಶೀಟ್' ಹೊದಿಸಿದ ಎರಡಂತಸ್ತಿನ ಬಂಗಲೆ ಅದು. ಚಮೇಲಿ ಮೆಮ್ ಸಾಹೇಬಳ ನಿವಾಸವೆಂದು ಕೇಳಿದ್ದೆ.

ಚಮೇಲಿ ಮೆಮ್ ಸಾಹಬ್ ಆ ಹೆಸರನ್ನು ಎರಡಾವರ್ತಿ ಮನದಲ್ಲಿ ಮೆಲುಕು ಹಾಕಿದೆ. ದೂರದ ಉಜ್ವಲ ಬೆಳಕನ್ನು ನೋಡುತ್ತಲೇ ಇದ್ದೆ. ಈ ತೋಟಕ್ಕೆ ಬರುವ ಮುನ್ನ ಕೆಲಸ ಹುಡುಕಿ ಹುಡುಕಿ ಬೇಸತ್ತ ಮೇಲೆ ನನ್ನ ಫೂಫಾಜೀ ಮನೆಯಲ್ಲೊಂದು ದಿನ ಇದ್ದು ಹೋಗೋಣವೆಂದುಕೊಂಡು ಇಲ್ಲಿಗೆ ಬಂದೆ. ಬಂಗಲೆ ಬಗ್ಗೆ, ಬಂಗಲೆಯಲ್ಲಿದ್ದವರ ಹೆಸರನ್ನು ಅಂದೇ ಕೇಳಿದ್ದೆ. ಆದರೆ ಇಲ್ಲಿಯೇ ತಳ ಊರಬೇಕಾಯಿತು. ಒಂದು ದಿನ ನನ್ನ ಬುಆಜೀ-

ಸುಖೀ ಸಂಸಾರ ಇವರದ್ದು. ಆದರೂ ಇವರಿಗೆ ಯಾತರ ಚಿಂತೆ ?

ಬುಆಜೀ ಒಂದು ಸಂದರ್ಭದಲ್ಲಿ—

"ಸೋನ್‌ದಾ, ಈ ತೋಟದಲ್ಲಿ ನಾನು ಹದಿನೆಂಟು ವರ್ಷ ಕಳೆದೆ. ಆದರೆ ಕಳೆದ ವರ್ಷದಿಂದ ಇಲ್ಲಿಯ ವಾತಾವರಣ ಸ್ವಲ್ಪ ಕೆಟ್ಟುಹೋಗಿ ನನಗೆ ಅಹಿತವೆನಿಸಿದೆ. 'ಮುಂಚೆ ಹೀಗಿರಲಿಲ್ಲ. ಡುವಾಡು ಮಾದಲ್ಲಿರೋ ಜಾಗದಲ್ಲಿ ನನಗಾಗಿ ಒಂದು ಚಿಕ್ಕ ಮನೆ ಕಟ್ಟಿಸಿಕೊಡು ಅಂತ ನಿಮ್ಮ ಫೂಫಾಜೀಗೆ ಹೇಳಿದೆ..." ಹೀಗೇ ಮುದುಕಿ ಏನೇನೋ ಬಡಬಡಿಸುತ್ತಿದ್ದಳು; ನಾನೂ ಕೇಳುತ್ತಿದ್ದೆ. ಇಷ್ಟಲ್ಲದೆ ಏನೂ ಮಾಡುವಂತಿರಲಿಲ್ಲ.




ಬಳಿ ಬಂದಾಗ ಅಮೆಯಂತೆ ಮೈ ಕೈ ಮುದುರಿ ಮಲಗುತ್ತಿದ್ದ. ಬಿಗಿದ ಎರಡು ಮುಷ್ಟಿ ಎದೆಯ ಮೇಲೆ ಅವಚಿಕೊಂಡಿತ್ತು. ಬಾಯಿಂದ ಜೊಲ್ಲು ಸುರಿಯುತ್ತಿತ್ತು. ಅವನನ್ನು ಎಬ್ಬಿಸಿ ಕ್ರಮವಾಗಿ ಮಲಗಿಸಿ. ದೀಪವಾರಿಸಿ ನಾನೂ ಮಲಗಿಕೊಂಡೆ.

ತೋಟದ ಈ ಹಳೆಯ ಕಾಲದ ಮನೆಯಲ್ಲಿ ಒಂದು ವೆಂಟಿಲೇಟರ್ ಸಹ ಇರಲಿಲ್ಲ. ಇದ್ದ ತಲೆಬಾಗಿಲು, ಕಿಟಕಿ ಬಾಗಿಲೆಲ್ಲ ಮುಚ್ಚಿದ್ದರಿಂದ ಕೆಟ್ಟ ಶಖೆ ಆವರಿಸಿಕೊಂಡಿತ್ತು. ಮುಗಿ ಶಖೆ ಹೋಗಿ ಗಾಳಿಯಾಡಲೆಂದು ಕಿಟಕಿ ಬಾಗಿಲು ತರೆದೆ. ಸಣ್ಣನೆಯ

"ಸೋನ್, ನೀನು ಇಲ್ಲಿರುವುದರಿಂದ ಒಳ್ಳೆಯದಾಗುತ್ತದೆ. ಒಬ್ಬೊಂಟಿಗಳಾಗಿ ಇರಲು ನನ್ನಿಂದ ಕಷ್ಟ. ನಿನ್ನ ಫೂಫಾಜಿಗೆ ತುಸು ಜವಾಬ್ದಾರಿ ಕಡಿಮೆ. ಈ ಮಕ್ಕಳದೇ ಬಹಳ ಚಿಂತೆಯಾಗಿದೆ"— ಅಂದಳು. ಅವಳ ಚಿಂತೆಯಾದರೂ ಏನು ಅನ್ನುವುದು ನನಗರ್ಥವಾಗಲಿಲ್ಲ. ಪುಣ್ಯವಂತೆ ಆಕೆ. ಓದದವಳು ಒಂದು ಹಳ್ಳಿಯಿಂದ ನಮ್ಮ ಫೂಫಾಜೀ ಅವಳನ್ನು ಕರೆತಂದು ವಂಚನೆಯಿಲ್ಲದೆ ಸಾಕಿಕೊಂಡಿದ್ದರು. ಫೂಫಾಜೀ ಮಗಳು ಮೆಡಿಕಲ್ ಓದುತ್ತಿದ್ದಾಳೆ. ಪಟ್ಟಣದಲ್ಲಿ. ಸ್ವಲ್ಪ ಭೂಮಿ ಕಾಣಿಯಿದೆ. ಸೀಮಿತ,

ಅದೇ ದಿನ ಸಾಯಂಕಾಲ. ನಾನು, ಬುಅಜಿ ಮತ್ತು ನಿಲಯ್ ಮನೆಯ ಮುಂದಿನ ಹುಲ್ಲು ಹಾಸಿಗೆ ಮೇಲೆ ಕುಳಿತಿದ್ದೆವು. "ಆಸ್ಸಾಮ್ ಟ್ರಿಬ್ಯೂನ್"ನಲ್ಲಿ ಧಾರಾವಾಹಿಯಾಗಿ ಪ್ರಕಟವಾಗುವ ಫಾಂಟಮನ ಸಾಹಸಗಾಥೆಯ ಪುಟಗಳನ್ನು ನನಗೆ ತೋರಿಸಿ ನಿಲಯ್ ಅರ್ಥ ಮಾಡಿ ಹೇಳಲು ಕೇಳುತ್ತಿದ್ದ. ಕೇಳಿದ್ದಕ್ಕೆಲ್ಲಾ ಹೇಳುತ್ತಿದ್ದೆ. ಬುಅಜಿ ಸ್ವೆಟರ್ ಹೆಣೆಯುತ್ತಿದ್ದವಳು ಇದ್ದಕ್ಕಿದ್ದಂತೆ ಮನೆ ಒಳಗೆ ನಸುಳಿಕೊಂಡಳು. ಇದು ನನಗೆ ಸೋಜಿಗವೆನಿಸಿ ಅವಳು ಹೋದತ್ತಲೇ ನಿಟ್ಟಿಸಿದೆ.

ಯಾರು ಆ ಚಮೇಲಿ? ಅವಳು ಅಲ್ಲಿ ಯಾಕೆ ಇದ್ದಾಳೆ? ಏನು ಮಾಡುತ್ತಾಳೆ? ಬರ್ಕ್ಲೆ ಅಲ್ಲಿಗೇಕೆ ಹೋಗುತ್ತಾನೆ? ಎಲ್ಲವನ್ನೂ ತಿಳಿಯುವ ಆಸೆ. ದುಃಹತ್ತರವಾಗಿದೆ. ಆದರೆ ಹೋಗುವ ಪರಿಯೆಂತು? ಒಂದು ಸದವಕಾಶವನ್ನು ಎದುರು ನೋಡುತ್ತಿದ್ದೆ.

ಪತ್ತೆ ಹಚ್ಚುವ ಕೆಲಸ ಹೇಗೆಂದು ನನ್ನ ಮನಸ್ಸು ಕಾರ್ಯರಂಗಕ್ಕೆ ಪ್ರವೇಶಿಸಿತು. ಬರ್ಕ್ಲೆ ಸಂತೆಯಿಂದ ಹಿಂದಿರುಗಿದ ತಕ್ಷಣ ಅವನು ಎಲ್ಲಿಗೆ ಹೋಗುತ್ತಾನೆ, ಒಂದು ಕೈ ನೋಡೇಬಿಡುತ್ತೇನೆಯೆಂಬ ನಿಶ್ಚಯ ಮಾಡಿಕೊಂಡೆ. ಆಗ ನನ್ನ ಜೊತೆಯಲ್ಲಿದ್ದ ಮಿತ್ರರಿಂದ ಬೀಳ್ಕೊಂಡು ಸರಸರ ನಡೆದು ಕಾರ್ಖಾನೆಯನ್ನು ದಾಟಿ ಅನತಿ ದೂರದಲ್ಲಿ ನಿಂತು ನಾಲ್ಕು ಕಡೆಗೂ ನಿಟ್ಟಿಸಿದೆ. ತಮ್ಮ ಕೆಲಸ ಮುಗಿಸಿ ಮನೆ ಕಡೆ ಹೊರಟಿದ್ದ ಕೆಲವು ಕೆಲಸಗಾರರ ವಿನಾ ಎಲ್ಲೂ ಅವನು ನನ್ನ ಕಣ್ಣಿಗೆ ಬೀಳಲಿಲ್ಲ. ಅಷ್ಟರಲ್ಲಿ ಟೀ ಎಲೆಗಳನ್ನು ತೂಗುವ ಅಂಗಡಿ ಬಳಿ ಎಂಟನೇ ನಂಬರ್ ಸಾಲಿನ ಕಾಲುದಾರಿಯಲ್ಲಿ ಬರ್ಕ್ಲೆ ನಡೆದು ಬರುತ್ತಿದ್ದ. ಇವನು ಇಲ್ಯಾಕೆ ಬಂದಿದ್ದಾನೆಂದು ತುಸು ಯೋಚಿಸಿದೆ. ಹೇಗಾದರೂ ಇರಲಿ ಅಂತ ಬರ್ಕ್ಲೆಯನ್ನು ಹಿಂಬಾಲಿಸುತ್ತಾ ಹೊರಟೆ. ತರಗು ಎಲೆಗಳ ಮೇಲೆ ನಾನಿಟ್ಟ ಕಾಲುಗಳ ಶಬ್ದದಿಂದ ಎರಡು ಮೂರು ಸಲ ಬರ್ಕ್ಲೆ ನನ್ನತ್ತ ತಿರುಗಿ ನೋಡುತ್ತಿದ್ದ. ಅನುಮಾನಕ್ಕೆ ಆಸ್ಪದ ಕೊಟ್ಟೆ. ಮತ್ತೆ ಹಿಂಬಾಲಿಸುತ್ತಲೇ ಇದ್ದೆ. ಅವನಿಗೆ ಅನುಮಾನ ಬಂತೋ ಏನೋ ಕಕ್ಷಣ ನಿಂತು, ನನ್ನನ್ನು ನಿಟ್ಟಿಸಿ ಸರಳ ಇಂಗ್ಲೀಷ್‌ನಲ್ಲಿ- ನಾನಾರು? ಇಲ್ಲಿಗೇಕೆ ಬಂದಿದ್ದೇನೆ ಇಲ್ಲಿ ಏನು ಕೆಲಸ? ಎಂಬುದಾಗಿ ಎಲ್ಲವನ್ನೂ ವಿಚಾರಿಸಿ...

ನನಗೇಕೋ ಸ್ವಲ್ಪ ಕಳವಳವಾಯಿತು. ಅವನ ಮಾತನ್ನು ಎದುರಿಸಲು ನಾನು ಸಿದ್ಧನಿರಲಿಲ್ಲ. ನನ್ನ ಸರಳ ಪರಿಚಯ ಮಾಡಿಕೊಟ್ಟೆ. ಇದರಿಂದ ಹಸನ್ಮುಖನಾದ ಬರ್ಕ್ಲೆ ನನ್ನ ಬೆನ್ನು ತಟ್ಟುತ್ತಾ— "ಅಧ್ಯಾಪಕ ವೃತ್ತಿ ಬಹು ಶ್ರೇಷ್ಠ ಮತ್ತು ಮಹತ್ತರ. ತಮ್ಮಂಥ ಯುವಕರು ಈ ಕೆಲಸವನ್ನು ಆತ್ಮೋತ್ಸರ್ಗ ಭಾವನೆಯಿಂದ ಮಾಡಬೇಕು. ಹೀಗೇ ಮಾತನಾಡುತ್ತ ಸ್ವಲ್ಪ ದೂರ ಹೋದಾಗ 'ಒಳ್ಳೇದು ಮತ್ತೊಮ್ಮೆ ಭೆಟ್ಟಿಯಾಗೋಣವೆಂದು ನನ್ನಿಂದ ಉತ್ತರವನ್ನು ನಿರೀಕ್ಷಿಸದೆ ಹೊರಟು ಹೋದ.

ನಾನಾದರೂ ಏನು ಮಾಡಲಿ. ಮನೆಕಡೆ ಹಿಂತಿರುಗಿ ಬಂದು ಬುಆಜೀಗೆ ಬರ್ಕ್ಲೆಯನ್ನು ಸಂಧಿಸಿ ಮಾತನಾಡಿದ ಬಗ್ಗೆ ಹೇಳಿದೆ. ನನ್ನ ಮಾತನ್ನು ಕೇಳಿದ ಅವಳು ದಿಗ್ಭ್ರಮೆಗೊಂಡು "ಅವನ ಜೋತೇಲಿ ನೀನು ಯಾಕೆ ಹೋದೆ. ಅಂಥ ಅಗತ್ಯವೇನಿತ್ತು? ಯಾಕೆ ಮಾತನಾಡಿದೆ" ಎಂದು ನನ್ನ ಮೇಲೆ ಎಗರಾಡಿದಳು. ನಾನು ಅಂದುಕೊಂಡಿದ್ದೇ ಬೇರೆ. ಬುಆಜೀಗೆ ನಡೆದ ಮಾತನ್ನೆಲ್ಲ ಹೇಳಿಬಿಡಬೇಕೆಂದು ಬಲು ಉತ್ಸಾಹದಿಂದ ಬಂದೆ. ನನ್ನ ಉತ್ಸಾಹಕ್ಕೆ ಕೊರೆಯುವ ನೀರನ್ನು ಎರಚಿದಳು. ಅವಳಿಗೆ ಎದುರುತ್ತರ ಕೊಡದವನಾದೆ. ಹಾಗೇ ಎದ್ದು ಹಾಸಿಗೆ ಮೇಲೆ ಉರುಳಿಕೊಂಡೆ. ಸ್ವಲ್ಪ ಹೊತ್ತು ಕಳೆದಿರಬಹುದು. ಬುಆಜೀ ನನ್ನ ಬಳಿ ಬಂದು, ನನ್ನ ಆರೋಗ್ಯವನ್ನು ವಿಚಾರಿಸಿದಂತೆ ಮಾಡಿ ನನ್ನ ಮಾತನ್ನು ತಿಪ್ಪ ತಿಳಿಯದ ಹೊಸ ಒಂದು ವಿಷಯ ಹೇಳ್ತಿನಿ ಜ್ಞಾಪಕ ಇಟ್ಕೊ. ಆ ಬರ್ಕ್ಲೆ ಮಹಾ ದುಷ್ಟ ಮನುಷ್ಯ. ಅವನಿಗೆ ಅನೇಕ ದುರಾಭ್ಯಾಸಗಳಿವೆ. ಬಹಳ ಕೆಟ್ಟ ಹೆಸರಿದೆ. ಅವನಿಗೆ ಒಂದೇ ಎರಡೇ, ಸಾವಿರ ಇದೆ. ಎಲ್ಲಾ ಹೇಳಿ ನನ್ನ ನಾಲಿಗೇನೇಕೆ ಹೊಲಸು ಮಾಡಿಕೊಳ್ಳಲಿ." ಇಷ್ಟನ್ನು ಹೇಳಿ ಹೊರಟು ಹೋದಳು. ನನ್ನ ಮನಸ್ಸು ಅಶಾಂತತೆಯಿಂದ ತೊಳಲಾಡುತ್ತಿತ್ತು.

ಬೇರೆಯವರ ಸಂಗತಿ ಬಗ್ಗೆ ನಾನೇಕೆ ತಲೆ ಕೆಡಿಸಿಕೊಳ್ಳಬೇಕು. ಅದರ ಅಗತ್ಯವಾದರೂ ಏನು? ಅಗತ್ಯದ ಮಾತೆತ್ತಿದ್ದರೆ ಉತ್ತರ ಶೂನ್ಯ. ಇದು ಸತ್ಯ. ಕೆಲವೊಮ್ಮೆ ಅನೇಕ ವಿಷಯಗಳಲ್ಲಿ ಯಾವ ಅಗತ್ಯ ಕಂಡು ಬಾರದಿದ್ದರೂ ಆಸ್ಥೆ ವಹಿಸ-ಬೇಕಾಗುತ್ತದೆ.

ತೋಟದ ವಾತಾವರಣ ನನಗೇನೋ ಬಹುವಾಗಿ ಹಿಡಿಸಿತ್ತು. ಉಪಾಧ್ಯಾಯ ವೃತ್ತಿಯಲ್ಲಿ ಎಂಟು ತಿಂಗಳು ಕಳೆದು ಹೋಗಿದ್ದವು. ಒಂದು ದಿನ ಬುಆಜೀಯವರಲ್ಲಿ–

"ಪೂಜಾ ಹಬ್ಬ ಮುಗಿದ ನಂತರ ನಾನು ಬೇರೆ ಕಡೆ ಹೋಗಲು ಮನಸ್ಸು ಮಾಡಿದ್ದೇನೆ" ಅಂದೆ.

ನಾನು ಮಾತು ಮುಗಿಸುವುದೇ ತಡ ಅಕೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ನನ್ನ ಮನಸ್ಸೇಕೋ

ಕವಾಯುವಾಯಿತು. ನಾನು ಸಿಟ್ಟಿಗೆದ್ದು ಈ ಮಾತನ್ನು ಆಡಿದ್ದೇನೆಂದು ಆಕೆ ಭಾವಿಸಿದ್ದಳು. ಇದಕ್ಕೆ ಬೇರೆ ಕಾರಣವೇನೂ ಇರಲಿಲ್ಲ. ಆಕೆಯನ್ನು ಸಂತೈಯಿಸಲು–

"ಹೋಗೋಲ್ಲಾ, ಖಂಡಿತ ಹೋಗೋಲ್ಲಾ"

–ಎಂದು ಹೇಳಿದೆ.

ನನ್ನ ಮನಸ್ಸಿಗೂ ಶಾಂತಿ ಬೇಕಾಗಿತ್ತು. ಡುಮ ಡುಮಾ ಬಳಿ ತಿರುಗಾಡಲು ಹೊರಟೆ. ನನ್ನ ಒಂದಿಬ್ಬರ ಸ್ನೇಹಿತರ ಜೊತೆಗೆ ತಿರುಗಾಡಿ ಹಾಗೇ ಸಿನೆಮಾ ನೋಡಿಕೊಂಡು ಸೈಕಲ್ ಮೇಲೆ, ಮನೆಕಡೆ ಹೊರಟೆ. ರಸ್ತೆಯಲ್ಲಿ 'ಕಟಲ್ ಬ್ರಿಡ್ಜ'ನ್ನು ದಾಟಬೇಕಿತ್ತು. ಸೇತುವೆ ದಾಟುತ್ತಿದ್ದ ನನಗೆ ಒಬ್ಬ ವ್ಯಕ್ತಿ ಬೇಗ ಬೇಗ ಹೋಗುತ್ತಿದ್ದುದು ಕಣ್ಣಿಗೆ ಬಿತ್ತು. ಸನಿಹಕ್ಕೆ ಬಂದಾಗ ಆತ ಬರ್ಕ್ಲೆಯಾಗಿದ್ದ.

ಇಂಥಾ ಸರಿ ರಾತ್ರಿಯಲ್ಲಿ ಎಲ್ಲಿಗೆ ಹೋಗುತ್ತಿದ್ದಾನೆ, ಈ ಮನುಷ್ಯ? ತೋಟದ ಪೂರ್ವ ದಿಕ್ಕಿನ ಕಡೆ ನೋಡಿದಾಗ ಚಮೇಲಿ ಮನೆಯಲ್ಲಿ ಅಂಧಃಕಾರ ತುಂಬಿತ್ತು.

ಅವನು ನನ್ನ ಗುರುತು ಹಚ್ಚಿ, ಶುದ್ಧ ಅಸ್ಸಾಮಿಯಲ್ಲಿ 'ಮಾಸ್ತರ ಬಾಬೂ' ಎಂದು ನನ್ನನ್ನು ಕರೆದ. ಸೈಕಲಿನಿಂದ ಇಳಿದು ನಾನು "ಪೇಟೆಯಿಂದ ಬರುತ್ತಿದ್ದೇನೆ" ಅಂದೆ. ಅವನು ನಗುನಗುತ್ತಾ—'ಏನು, ನೀನು 'ಡ್ರಿಂಕ್ಸ್ ತಗೋತಿಯಾ' ಕೇಳಿದ. ತಲೆ ಅಲುಗಾಡಿಸಿ ಇಲ್ಲವೆಂದೆ. ಮಾತನಾಡದೆ ಹಾಗೆ ಮುಂದೆ ಬಂದೆವು. ಅವನಿಂದ ಬೀಳ್ಕೊಂಡು ಹೋಗಬೇಕೆಂದುಕೊಂಡಾಗ ಅವನು–ತನ್ನ ಜೊತೆಗೇ ಬರಬೇಕೆಂದು ಆಗ್ರಹಪಡಿಸಿದ. ಮನಸ್ಸಿಗೇಕೋ ಒಂದು ತರದ ಭಯವಾಯಿತು. ಈ ಬರ್ಕ್ಲೆ ಸಾಹೇಬನನ್ನು ಕಂಡ ಜನ ಕಾಣುತ್ತಲೇ ಮುಖ ಮರೆಸಿಕೊಳ್ಳುತ್ತಾರೆ. ಛೀಮಾರಿ ಹಾಕಿ ದೂರ ಸರಿಯುತ್ತಾರೆ. ಇಂಥ ಸರಿ ರಾತ್ರಿಯಲ್ಲಿ ನಾನು ಇವನೊಟ್ಟಿಗಿದ್ದುದನ್ನು ಜನ ಕಂಡರೆ ಏನೆಂದುಕೊಂಡಾರು? ಏನೋ ಎಂತೋ ಬರ್ಕ್ಲೆಗೆ 'ನಾನು ಬರಲಾರೆ' ಎಂದು ಹೇಳುವ ಧೈರ್ಯ ಏರಲಿಲ್ಲ ನನಗೆ. ಮಾತನಾಡದೆ ಮುಂದುವರೆದೆವು.

ಸ್ವಲ್ಪ ಸಮಯದ ನಂತರ ಚಮೇಲಿ ಮೆಮ್ ಸಾಹೇಬಳ ಮನೆ ಎದುರು ಬಂದು ನಿಂತೆವು. ಅಂಥ ಬಂಗಲೆಯನ್ನು ಅಷ್ಟು ಸಮೀಪವಾಗಿ ನಾನೆಂದೂ ನೋಡಿರಲಿಲ್ಲ. ಬಂಗಲೆಯ ಪರಿಸರವನ್ನು ವೀಕ್ಷಿಸಿದ ನನಗೆ ಹಾಳುಸುರಿಸುವ ಸ್ಮಶಾನವನ್ನು ನೋಡಿದಂತಿತ್ತು. ಗೇಟಿನ ಬಳಿ ಬಂದಾಗ ನಾಯಿಯೊಂದು ಗಂಟಲು ಕಿತ್ತು ಬರುವಂತೆ ಬೊಗಳುತಿತ್ತು. ಬಂಗಲೆಯ ಎಲ್ಲಾ ದೀಪಗಳೂ ಝಗಝಗಿಸಿದವು. ಆಳೊಬ್ಬ ಬಂದು ನಮ್ಮಿಬ್ಬರನೂ ವಂದಿಸಿದ. ಬರ್ಕ್ಲೆ ಅವನಿಗೆ ಏನನ್ನೋ ಸಂಜ್ಞೆಮಾಡಿ ಹೇಳಿ ನನ್ನನ್ನು ಬಂಗಲೆಯೊಳಕ್ಕೆ ಕರೆದೊಯ್ದ. ನನ್ನ ಸೈಕಲ್ ಆಳು ಒಳಗೆ ಇರಿಸಿದ. ಆಶ್ಚರ್ಯಗೊಂಡ ನಾನು ಮಂತ್ರಮುಗ್ಧನಂತೆ ಸುಮ್ಮನೆ ಅವನನ್ನು ಹಿಂಬಾಲಿಸಿ ಕೊನೆಗೊಂದು ಕೋಣೆಗೆ ಬಂದೆವು. ಕೋಣೆ ಸಾಕಷ್ಟು ದೊಡ್ಡದಿತ್ತು. ಆಧುನಿಕ ಮಾದರಿಯ ಕುರ್ಚಿಮೇಜುಗಳು ಸಜ್ಜಾಗಿದ್ದವು. ಮೂಲೆಯೊಂದರಲ್ಲಿ ಎತ್ತರದ ನಿಲುವುಗನ್ನಡಿ. ಗೋಡೆಯಲ್ಲಿ ಒಂದೆರಡು ತೈಲಚಿತ್ರಗಳು. ಬರ್ಕ್ಲೆ ತನ್ನ ಪೈಪ್‌ಗೆ ತಾಜಾ ಮಿಕ್ಸಚರ್ ತುಂಬುತ್ತಾ–ಈ ಮನೆ ಯಾರದ್ದು? 'ಈ ಬಗ್ಗೆ ನಿಮಗೆ ಗೊತ್ತಿದೆಯೋ, ಇಲ್ಲವೋ?' ಎಂದು ಕೇಳಿದ ಪ್ರಶ್ನೆಗಳಿಗೆ "ಹೂ" ಅನ್ನಬೇಕು ಅಂತ ಅಂದುಕೊಂಡ ನಾಲಿಗೆ ಕೊನೆಗೆ ಅಂದದ್ದು 'ಇಲ್ಲಾ' ಅಂತ; ಮುಂದೆ ಏನು ಹೇಳುತ್ತಾನೋ ನೋಡೋಣ ಅಂತ.

ಯಾರದ್ದೋ ಕೈ ಬಳೆಗಳ ಶಬ್ದ. ಹಿಂತಿರುಗಿ ನೋಡಿದೆ. ಯಾರೂ ಕಾಣಿಸಲಿಲ್ಲ. ಕೊಂಚ ಸಮಯದಲ್ಲೆ ಒಬ್ಬ ಬೇರರ್ ಬಂದು 'ಡ್ರಿಂಕ್ಸ್' ಅಣಿ ಮಾಡಿದ. ನನ್ನ ಮುಂದೆ ಒಂದು ಕಪ್ ಕಾಫಿ ಬಂತು. ಬರ್ಕ್ಲೆ ಪಾನಪೂಜೆಗೆ ಪ್ರಾರಂಭಿಸಿದ. ನಾನು ನನ್ನ ಕಾಫಿ ಕಪ್ಪನ್ನು ತುಟಿಗೆ ತಗುಲಿಸಿದೆ. ಚಮೇಲಿ ಮೆಮ್ ಸಾಹೇಬ್ ಯಾರೆಂದು ತಿಳಿಯಲು ಕುತೂಹಲನಾಗಿದ್ದೆ.

ಬಾಟಲು ಬಾಟಲುಗಳನ್ನೇ ಹೀರುತ್ತಿದ್ದ ಆ ಮಹಾತ್ಮ ಆತ ಅಷ್ಟೊಂದು ಕುಡಿಯುತ್ತಾನೆಂಬ ಕಲ್ಪನೆಯೂ ಇರಲಿಲ್ಲ ನನಗೆ. ನನ್ನ ಕಂಪನಿ ಅವನಿಗೆ ಸಂತೋಷ ತಂದಿತ್ತು. ಚೆನ್ನಾಗಿಯೇ ಮಾತನಾಡುತ್ತಿದ್ದ.

ಕೇವಲ ಕುತೂಹಲವಶನಾಗಿ–

"ತಾವು ಇಂಗ್ಲೆಂಡಿಗೆ ಹಿಂತಿರುಗುವುದಿಲ್ಲವೆ?"

–ಎಂದು ಕೇಳಿದೇ ಅಬ್ಬಾ ಆತ ಇನ್ನಿಲ್ಲದ ಸಿಟ್ಟಿನಿಂದ ಹೆಡೆತುಳಿಸಿಕೊಂಡ ಹಾವಿನಂತೆ ಭೂತ್ಕರಿಸುತ್ತಾ,

"Shutup, who are you to ask this question?"

(ನಿಲ್ಲಿಸು ನಿನ್ನ ತಲೆಹರಟೇನ. ಇದನ್ನೆಲ್ಲಾ ಕೇಳೋಕೆ ನೀನಾರು?) ಎಂದು ಗದರಿಕೊಂಡ. ತಲೆ ತಗ್ಗಿಸಿ ಕುಳಿತೆ ನಾನು. ತುಸು ಹೊತ್ತಿನಲ್ಲೇ ಆ ಬೆಂಕಿ ಮನುಷ್ಯ ಕೊರೆವ ಮಂಜಿನಂತಾಗಿ ನನ್ನ ಬೆನ್ನನ್ನು ನೇವರಿಸುತ್ತಾ "ತಪ್ಪು ತಿಳಿದುಕೋ ಬೇಡ, ನನ್ನ ಮಾತಿಗೆ ತಪ್ಪರ್ಥ ಕಲ್ಪಿಸಬೇಡ" ಅಂತಂದ.

ಬಸವನಂತೆ ಅವನ ಮಾತಿಗೆ ತಲೆಹಾಕುತ್ತಿದ್ದೆ ನಾನು. ರಾತ್ರಿ ಬಹಳವಾಗಿತ್ತು. ನಂತರ ಅವನ ಅಪ್ಪಣೆ ಪಡೆದು ಮನೆಗೆ ಹೊರಟಿದ್ದೆ. ಆಗ ನನ್ನ ಮನಸ್ಸಿನಲ್ಲಿ-ಮನುಷ್ಯನ ಜೀವನವೆಷ್ಟು ವಿಲಕ್ಷಣಪೂರ್ಣವಾದದ್ದು. ಕೆಲವರಿಗೆ ಎಲ್ಲಾ ಆಗಿಬಂದರೆ, ಕೆಲವರಿಗೆ ಕಂಗಾಲು ಜೀವನ ಕಾಡುತ್ತದೆ.

ಬರ್ಕ್ಲೆ ನನಗೆ ಹೇಳಿದ ಕಥೆಯನ್ನು ಮೆಲಕು ಹಾಕುತ್ತಿದ್ದೆ-ಅವನು ಕೂಲಿ ಕೆಲಸದ ಚಮೇಲಿಯನ್ನು ಹೇಗೆ ಪ್ರೀತಿಸಿದ ಎಂಬುದೂ ಅವರಿಬ್ಬರಲ್ಲಿ ಪರಸ್ಪರ ಪ್ರೀತಿ ಹೇಗೆ ಅಂಕುರಿಸಿತು: ಅವಳನ್ನು ತನ್ನ ಬಂಗಲೆಗೆ ಯಾತಕ್ಕೆ ಕರೆದು ತಂದಿದ್ದ. ಬರ್ಕ್ಲೆ ರಾಜಾರೋಪವಾದ ಕೆಲಸ ಮಾಡಿದ್ದ. ಅವಳನ್ನು ಹಾರಿಸಿಕೊಂಡೇನೂ ಬಂದಿರಲಿಲ್ಲ. ಅವಳ ತಂದೆ ಬೀರಬಲ್ ಸರ್ದಾರನ ಒಪ್ಪಿಗೆ ಪಡೆದು ಕರೆತಂದಿದ್ದ. ಚಮೇಲಿ ಈಗ ಚಮೇಲಿ ಮೆಮ್‌ಸಾಹೇಬಳಾಗಿದ್ದಳು.

ಅನೇಕ ಹರ್ಷದಾಯಕ ದಿನಗಳು ಕಳೆದಂತೆ ಅದರ ಬೆನ್ನಿಗೆ ಕರಾಳದಿನವೂ ಪ್ರಾಪ್ತವಾಯಿತು. ಪಾಪ ಚಮೇಲಿಗೆ ಆಗಾಗ್ಗೆ ಅನಾರೋಗ್ಯ ಕಾಡುತ್ತಿತ್ತು. ಬರ್ಕ್ಲೆ ಅವಳದು ಚಿಕ್ಕಮುಟ್ಟ ಕಾಯಿಲೆ ಎಂದು ತಾತ್ಸಾರ ಮಾಡಿದ್ದ. ಕಾಯಿಲೆ ಉಲ್ಬಣಿಸಿದಾಗ ಬರ್ಕ್ಲೆಗೇಕೋ ಸಂದೇಹವಾಗಿ ತನ್ನ ಒಬ್ಬ ಡಾಕ್ಟರ್ ಮಿತ್ರರಿಗೆ ಚಮೇಲಿಯನ್ನು ತೋರಿಸಿದ. ವೈದ್ಯ ಪರೀಕ್ಷೆ ನಡೆಸಿದ ಡಾಕ್ಟರ್ ಬಹು ಗಂಭೀರ ಮುಖಮುದ್ರೆಯವನಾಗಿ ಹೇಳಿದ್ದ,

"It is direct sign of leprosy."

ಕುಷ್ಠ? ಚಮೇಲಿ ಹೃಷ್ಟಪುಷ್ಟ ಶರೀರದಲ್ಲಿ ಕುಷ್ಠರೋಗ ಕಾಣಿಸಿಕೊಂಡಿತು. ಅವಳು ಸಾಕಷ್ಟು ಅತ್ತಳು. ಬರ್ಕ್ಲೆ ಹೃದಯ ಛಿದ್ರವಾಗಿತ್ತು.

ರೋಗದ ಕಾರಣದಿಂದಾಗಿ ಅವಳು ಬೇರೆ ಮನೆಯೊಂದರಲ್ಲಿ ಇರಬೇಕಾಯಿತು. ಅದೇ ಈ ಬಸ್ಸಿನ ಮನೆ. ತೋಟದಲ್ಲಿದ್ದ ಎಲ್ಲರಿಗೂ ಈ ವಿಷಯ ತಿಳಿದುಹೋಯಿತು. ಈ ರೋಗಚಿಕಿತ್ಸೆಗಾಗಿ ಸಾಕಷ್ಟು ಹಣ ಖರ್ಚು ಮಾಡಿದ್ದ ಬರ್ಕ್ಲೆ. ಆದರೆ ಏನೂ ಪ್ರಯೋಜನವಾಗಿರಲಿಲ್ಲ. ಕೆಲ ತಿಂಗಳುಗಳ



ನಂತರ ಚಮೇಲಿ ಹೆಣ್ಣು ಶಿಶುವೊಂದಕ್ಕೆ ಜನ್ಮವಿತ್ತಳು. ಚಮೇಲಿ, ಬರ್ಕ್ಲೆ ಇಬ್ಬರಿಗೂ ಇದರಿಂದ ಸಂತೋಷವಾಗಿತ್ತು.

ಆದರೆ...

ಮಗುವಿನ ಕೈಕಾಲುಗಳು ಅದರ ವಯಸ್ಸಿಗೆ ತಕ್ಕಂತೆ ಇರಲಿಲ್ಲ. ಎಲ್ಲಾ ಮೋಟಕು. ಮೂರು ವರ್ಷಗಳಾಗಿದ್ದರೂ ಮಾತು ಬಂದಿರಲಿಲ್ಲ. ಪ್ರತಿದಿನ ಬರ್ಕ್ಲೆ ಚಮೇಲಿಯಿದ್ದಲ್ಲಿಗೆ ಹೋಗುತ್ತಿದ್ದ. ರಾತ್ರಿ ಮಾತ್ರ ಅಲ್ಲಿ ತಂಗುತ್ತಿರಲಿಲ್ಲ. ಎಂದಿನಂತೆ ಅವತ್ತೂ ಅಲ್ಲಿಗೆ ಹೋಗಿದ್ದ. ಚಮೇಲಿ—ಈ ಹಾಳು ರೋಗ ಗುಣವಾಗುವಂತಿಲ್ಲ. ಮೈಯೆಲ್ಲಾ ಸೋತು ಹೋಗಿದೆ. ಬರ್ಕ್ಲೆ ಅಂದು ಅಲ್ಲೇ ಉಳಿಯಲು ಮನಸ್ಸು ಮಾಡಿದ್ದ. ಆದರೆ ಚಮೇಲಿ ಅವನನ್ನು ಇರಗೊಡಲಿಲ್ಲ. ಅವಳನ್ನು ಸಾಂತ್ವನಗೊಳಿಸಿ ಅಲ್ಲಿಂದ ಹೊರಟ.

ಚಮೇಲಿ ಮೆಮ ಸಾಹೇಬಳು ಅಂದೇ ಅಲ್ಲಿಂದ ಹೊರಟುಹೋಗಿಬಿಟ್ಟಳು-ಕಾಣದ ಬೇರೆ ಪ್ರಪಂಚಕ್ಕೆ.

ಬೆಳಿಗ್ಗೆ ತೋಟದ ಜನಗಳಲ್ಲಿ ಗುಜುಗುಜು ಶುರುವಾಯಿತು. ಬರ್ಕ್ಲೆ ಅಲ್ಲಿಗೆ ಧಾವಿಸಿಬಂದು ನೋಡಿದಾಗ ಚಮೇಲಿಯ ಮೃತಶರೀರ, ಕುತ್ತಿಗೆಗೆ ಬಿಗಿದ ಹಸಿರು ಸೀರೆಯಿಂದ ಮರವೊಂದರಲ್ಲಿ ನೇತಾಡುತ್ತಿತ್ತು.

ಈ ಎಲ್ಲಾ ಕಥೆಯನ್ನು ನನಗೆ ವಿವರವಾಗಿ ಹೇಳಿದ್ದ ಬರ್ಕ್ಲೆ. ಉಳಿದಿದ್ದ ಡ್ರಿಂಕ್ಸನ್ನು ಗಟಗಟಿಸಿ ಒಳಭಾಗಕ್ಕೆ ನನ್ನನ್ನು ಕರೆದೊಯ್ದ.

ಅಚ್ಚುಕಟ್ಟಾಗಿ ಅಲಂಕೃತವಾದ ಕೋಣೆ ಅದು. ಮೂಲೆಯಲ್ಲೊಂದು ಸುಂದರ ಮಂಚ ಸೊಳ್ಳೆ ಪರದೆಯಿಂದ ಸಜ್ಜಾಗಿದೆ. ಆದರ ಬಳಿ ಹೋಗಲು ನಾನು ಹಿಂಜರಿದೆ ಬರ್ಕ್ಲೆ ಖುದ್ದು ತಾನೇ ನನ್ನನ್ನು ಮಂಚದ ಸನಿಹಕ್ಕೆ ಕರೆದೊಯ್ದ.

' Look, she is sleeping '

ಮಲಗಿ ಬಿಟ್ಟಿದ್ದಾಳೆ; ಹೂವಿನಂತೆ ಮಲಗಿದ್ದಾಳೆ. ಅವಳು ಪೃಥ್ವಿಯ ಮಾನವ ಜನಾಂಗಕ್ಕೆ ಸೇರಿದಂತಿಲ್ಲ. ಎಲ್ಲಾ ಮನುಷ್ಯರಂತೆ ಇಲ್ಲವೇ ಇಲ್ಲ. ಹುಟ್ಟಿದ ಜೀವದ ಹಿಂದೆಯೇ ಮೃತ್ಯು ಜೀವನದ ನೆರಳಾಗಿ ಕಾಡಿಸುತ್ತದೆ. ಮತ್ತೊಮ್ಮೆ ಬಳೆಗಳ ಶಬ್ದವಾದುದನ್ನು ಕೇಳಿ ಹಿಂತಿರುಗಿ ನೋಡಿದೆ. ಬಿಳಿ ಆಕೃತಿಯೊಂದು ನನ್ನ ಎದುರಿನಲ್ಲಿ ಬರುತ್ತಿದ್ದುದನ್ನು ಕಂಡೆ. ನಿದ್ರೆಯಿಂದ ಎಚ್ಚೆತ್ತು ಬಂದಿರಬಹುದು. ಎಲ್ಲರಿಗೂ "ಸಲಾಮ್" ಮಾಡುತ್ತಿದೆ. ನನಗೆ ಒಂದು ಥರ ಸೋಜಿಗವಾಯಿತು. ನಂತರ ಸೊಳ್ಳೆ ಪರದೆಯ ರಂಧ್ರಗಳ ಮೂಲಕ ಮಲಗಿದ ಮಗುವನ್ನು ನೋಡಿದೆ. ಆ ಹುಡುಗಿಯನ್ನು ಚಮೇಲಿಗೆ ಹೋಲಿಸಿ ನೋಡಿದೆ. ಏಕೆಂದರೆ ಚಮೇಲಿಯನ್ನು ನಾನು ನೋಡಿರಲಿಲ್ಲ. ಅವಳು ಹೇಗಿದ್ದಳೆಂದು ನೋಡುವ ಆಸೆಯಿತ್ತು. ನಿರಾಶೆಯಾಯಿತು, ಮಗುವಿನ ಚಹರೆಯನ್ನು ಮತ್ತಷ್ಟು ಗಮನಿಸಿದೆ.

ಬರ್ಕ್ಲೆ ನನ್ನ ಮುಖ ನೋಡಿ 'ಇದರ ಮೃತ್ಯುವಿನ ದಾರಿ ಕಾಯುತ್ತಿದ್ದೇನೆ. ಇದು ಕಣ್ಣು ಮುಚ್ಚಿಕೊಂಡ ಮೇಲೆ ಇಂಗ್ಲೆಂಡಿಗೆ ಹಿಂತಿರುಗುತ್ತೇನೆ. " —ಎಂದು ಹೇಳಿದ.

ಏನೇನೂ ತಿಳಿಯದವನಂತೆ ಬರ್ಕ್ಲೆಯ ಮುಖವನ್ನೇ ನೋಡಿದೆ. ಮತ್ತೆ ಹೇಳಿದ—

"She must die, must die"

ಕೊನೆಯಲ್ಲಿ ಬರ್ಕ್ಲೆಯ ಧ್ವನಿ ತೀವ್ರವಾಗಿ ಕಂಪಿತಗೊಂಡಿತ್ತು. ಯಾವ ಪ್ರಶ್ನೆಯನ್ನೂ ನಾನು ಹಾಕದಾದೆ. ಅಲ್ಲಿಂದ ಹೊರಟು ದೂರದಲ್ಲಿ ನಿಂತು ಮತ್ತೊಮ್ಮೆ ಆ ಬಂಗಲೆಯತ್ತ ನೋಡಲು ಯತ್ನಿಸಿದೆ. ಆದರೆ ನನ್ನಿಂದ ಸಾಧ್ಯವಾಗಲಿಲ್ಲ. ಮನೆಗೆ ಬಂದಾಗ ಅರ್ಧರಾತ್ರಿಗೂ ಮೀರಿತ್ತು. ಬುಆಜೀ ಮಲಗಿ ನಿದ್ರಿಸುತ್ತಿದ್ದಳು. ಒಳಗೆ ಹೋಗಿ ನೋಡಿದಾಗ ನನಗಾಗಿ ಊಟ ಮುಚ್ಚಿಡಲಾಗಿತ್ತು. ಊಟ ಮಾಡಲು ಮನಸ್ಸಾಗಲಿಲ್ಲ. ಒಂದು ಲೋಟ ನೀರು ಕುಡಿದು ಸಿಗರೇಟು ಹತ್ತಿಸಿದೆ. ನಿಲಯ್‌ನ ಮೂಗಿನಿಂದ ಹೊರಟ ಶಬ್ದ ಘೋರವಾಗಿತ್ತು. ಕಿಟಕಿ ಬಾಗಿಲು ತೆರೆದೆ. ತಂಪು ಗಾಳಿ ಒಳ ನುಸುಳುತ್ತಿತ್ತು- ಕಿಟಕಿಯಿಂದಲೇ ಆ ಬಂಗಲೆಯತ್ತ ಮತ್ತೊಮ್ಮೆ ನೋಡಿದೆ. ಅಲ್ಲಿಯ ದೀಪಗಳು ಇನ್ನೂ ಉರಿಯುತ್ತಲೇ ಇದ್ದವು. ಬರ್ಕ್ಲೆ ಕುಳಿತೇಯಿದ್ದ ಅಂತ ಕಾಣುತ್ತದೆ. ಎಷ್ಟು ದಿನ ಹೀಗೇ ಇದ್ದೀತು ಅಂತ ಯಾರಿಗೆ ಗೊತ್ತು ? ಕಿಟಕಿ ತೆರದೇ ಮಲಗಿದೆ. ನಿದ್ರೆಯಂತೂ ಬರುವಹಾಗಿರಲಿಲ್ಲ. ಏನು ಮಾಡಲಿ ಮಲಗೇ ಇದ್ದೆ. ನಿದ್ರೆಯ ತೆರೆ ಏರಿ ಎಲ್ಲವನ್ನೂ ಮರೆಯಲೆಂದು. ಒಮ್ಮೆ ನಿಲಯ್ ಕೇಳಿದ್ದ-

'ಮನುಷ್ಯ ಸತ್ತ ಮೇಲೆ ದೆವ್ವವಾಗುತ್ತಾನಾ ? ಸೋನ್‌ದಾ'-

ಬುಆಜೀಯೂ ಒಮ್ಮೆ ಹೇಳಿದ್ದಳು-

'ಬರ್ಕ್ಲೆ ಮಹಾ ಕೆಟ್ಟ ಮನುಷ್ಯ, ಹವ್ಯಾಸ ಒಳ್ಳೆಯದಲ್ಲ. ಅವನಿಗೆ ಕೆಟ್ಟ ಹೆಸರಿದೆ.'

'ಆಹಾ- ಟೀ ಎಲೆಯ ತೋಟದಿಂದ ಎಂಥ ಪರಿಮಳ...'

ಮೆಮ್‌ಸಾಹಬ್... ಚಮೇಲಿ... ಚಮೇಲಿ... ಚಮೇಲಿ...



ಹಿಂದಿ ಕಥೆ

# ನಾ ಹೇಳಲಾರೆ

ಕನ್ನಡದಲ್ಲಿ:
ಡಾ. ವಾಸು ಬಿ. ಪುತ್ರನ್

ಹಿಂದಿ ಮೂಲ:
ಕಮಲೇಶ್ವರ

ತನ್ನ ಜೀವನದ ಸ್ಮೃತಿಗಳ ಯೋಚನೆಯಲ್ಲಿ ಪ್ರತಿಯೊಬ್ಬನೂ ಅದೆಷ್ಟು ಏಕಾಂಗಿ... ಪದೇ ಪದೇ ಅದೇ ವಿಚಾರ ಸುರುಳಿ ಸುರುಳಿಯಾಗಿ ಸುತ್ತಿ ಬರುತ್ತದೆ; ಅದರೊಂದಿಗೆ ಸುದರ್ಶನಾಳ ನೆನಪು ಕೂಡ. ಅಂದು ಅವಳೇ ಕೇಳಿದ್ದಳಲ್ಲ. 'ಚಂದರ್', ಈ ನೆನಪುಗಳು ನಮ್ಮನ್ನು ಎಲ್ಲಿಗೂ ಕೊಂಡೊಯ್ಯಲಾರವು...ಯಾರಿಗೂ ಹೇಳಲಾಗದ ಕೆಲವು ಭಾವನೆಗಳು ನನ್ನಲ್ಲಿವೆ. ಇದಕ್ಕಾಗಿಯೇ ನಾನು ಇಷ್ಟು ಏಕಾಂಗಿಯಾಗಿದ್ದೇನೆ.'

"ನನ್ನೊಡನೆಯೂ ಹೇಳಲಾರೆಯಾ?" ನಾನು ಕೇಳಿದ್ದೆ.

'ಬರೇ ಸುಳ್ಳು ಮಾತಿನಿಂದ ಸಂತುಷ್ಟನಾಗುವಿಯಾದರೆ, ನೀನು ಕೇಳಿದಷ್ಟು ನಾನು ಹೇಳುತ್ತಾ ಹೋಗಬಲ್ಲೆ. ಆದರೆ ಯಾರೂ ಯಾರಿಗೂ ಎಲ್ಲವನ್ನೂ ಹೇಳಲಾರ ಎಂಬುದು ಮಾತ್ರ ಸತ್ಯ. ಪ್ರತಿಯೊಬ್ಬರಲ್ಲಿಯೂ ಎಂದೂ ಯಾರಿಗೂ ಹೇಳಲಾಗದಂಥ ಮಾತು ಗುಪ್ತವಾಗಿ ಇದ್ದೇ ಇರುತ್ತದೆ.' ಹಾಗೆ ಹೇಳುತ್ತಿದ್ದಂತೆ ಆಕೆಯ ಕಣ್ಣುಗಳಲ್ಲಿ ಮಬ್ಬು ಹಬ್ಬಿತ್ತು. ಹೊರಗಡೆ ಏಳುತ್ತಿದ್ದ ಧೂಳಿನ ಸುಳಿಗಾಳಿಯನ್ನೇ ಕಿಡಕಿಯಿಂದ ನೋಡುತ್ತ ನಿಂತು ಬಿಟ್ಟಿದ್ದಳು, ಅವಳು.

ಸುಮ್ಮನೆ ಕುಳಿತಿದ್ದೆ ನಾನು. ಮನೋಸ್ಥಿತಿಯೂ ಬಹಳ ವಿಚಿತ್ರವಾಗಿತ್ತು. ಸಂಪೂರ್ಣ ಮನೆ ಬೇಸರದಿಂದ ಆವರಿಸಲ್ಪಟ್ಟಿತ್ತು. ನಾವು ಕುಳಿತಿದ್ದ ಕೋಣೆಯ ಪಕ್ಕದ ಇನ್ನೊಂದು ಕೋಣೆಯಲ್ಲಿ ಸುದರ್ಶನಾಳ ಪತಿ ಮಹೇಂದ್ರ ಉಳಕೊಂಡಿದ್ದ.

ಬೆಳಗ್ಗೆ ನಾವೆಲ್ಲ ಚಹಾ ಕುಡಿಯಲು ನೆರೆದಾಗ ಮಹೇಂದ್ರ ಸುಮ್ಮನಿದ್ದ. ಅವನೇ ಎಂದೇಕೆ, ಎಲ್ಲರೂ ಸುಮ್ಮನಿದ್ದೆವು. ಮೌನವಾಗಿದ್ದು ತಮ್ಮ ತಮ್ಮ ಭಾವನೆಗಳನ್ನು ಅದುಮಿಡುವ ಸಂದರ್ಭ ವಾಗಿತ್ತದು. ಸುದರ್ಶನಾಳ ತಂದೆ ನಿಧನರಾಗದಿರುತ್ತಿದ್ದರೆ ನಾನಾಗಲೀ ಮಹೇಂದ್ರನಾಗಲೀ ಬಹುಶಃ ಇಲ್ಲಿ ಒಂದಾಗುತ್ತಿರಲಿಲ್ಲ. ನಾವು ವಿಚಿತ್ರ ವಿವಶತೆಯ ಮುಸುಕಿನಲ್ಲಿ ಕುಳಿತಿದ್ದೆವು. ಪರಸ್ಪರ ಒಬ್ಬರನ್ನೊಬ್ಬರು ತಿರಸ್ಕರಿಸುತ್ತಿದ್ದೆವು. ಪರಸ್ಪರ ಒಬ್ಬರನ್ನೊಬ್ಬರು ಬಲ್ಲ ನಾವು ಮೂವರೂ ಒಳಗೊಳಗೆ ಕೆಲವೊಮ್ಮೆ ಸ್ಪಷ್ಟ ಮಾತನಾಡಲಾರದಷ್ಟು ವಿವಶತೆ.

ಕಳೆದ ಐದು ವರ್ಷಗಳಲ್ಲಿ, ಸುದರ್ಶನಾ ತನ್ನ ಪತಿ ಮಹೇಂದ್ರನನ್ನು ಬಿಟ್ಟು ಬಂದಂದಿನಿಂದ ನಾನು ಅವನನ್ನು ನೋಡಿರಲಿಲ್ಲ. ನೋಡುವ ಸಂದರ್ಭವಾದರೂ ಎಲ್ಲಿತ್ತು? ಆದರೆ ನನ್ನಿಂದಾಗಿಯೇ ಆಕೆ ತನ್ನನ್ನು ಬಿಟ್ಟು ಬಂದಿರುವಳೆಂಬ ಸಂದೇಹ ಸದಾ ಆತನ ಮನಸ್ಸಿನಲ್ಲಿದ್ದಂತಿತ್ತು...

ನನ್ನ ಬಗ್ಗೆ ನಾನು ಆಲೋಚಿಸಿಗಾಗಲೆಲ್ಲ ಮನಸ್ಸು ಹೇಳುವುದು ಹಾಗೆಯೇ ಆಗಿರುತ್ತಿದ್ದರೆ! ಕೆಲವು ದಿನ ಅಪವಾದಕ್ಕೊಳಗಾಗಬೇಕಾಗುವುದೇನೊ? ನಿಜ. ಆದರೆ ಸುದರ್ಶನಾಳ ಕಣ್ಣುಗಳಲ್ಲಿ ಹಬ್ಬಿರುವ ಅಳವಾದ ವೇದನೆ ದೂರವಾಗುತ್ತಿತ್ತಲ್ಲ!!

ಅವಳ ತಂದೆ ತೀರಿಕೊಂಡಾಗ ನಾನೂ ಮಹೇಂದ್ರನೂ ಅಲ್ಲಿಗೆ ಬಂದಿರುವುದನ್ನು ನೋಡಿ ಇಬ್ಬರೂ ಸುದರ್ಶನಾಳಿಂದ ಏನನ್ನಾದರೂ ಕೇಳಲು ಬಂದಂತೆ ಕಂಡುಬಂತೇನೊ. ಅಂತೂ ಮರಣದ ದುಃಖ ವ್ಯಕ್ತಪಡಿಸಲು ಬರುವುದೂ ಒಂದು ನೆಪವೇದಾಯಿತು. ನನ್ನ ದುಃಖಸೂಚನೆ ಕೃತಕವಾಗಿ ಕಾಣದಿರಲಿ ಎಂಬ ಪ್ರಯತ್ನದಲ್ಲಿದ್ದ ನಾನು ಎಂದೇ ಅವಳ ತಂದೆಯ ಚಿತೆಗೆ ಬೆಂಕಿ ಹಚ್ಚಿದಾಗ ನನ್ನ ಕಣ್ಣೀರನ್ನು ಬಲವಂತವಾಗಿಯೇ ತಡೆಹಿಡಿದಿದ್ದೆ.

ಬಿಳಿ [illegible] ಅಶ್ವತ್ಥ ಮರದ ಕಟ್ಟೆಯ ಮೇಲೆ ಕುಳಿತ ಸುದರ್ಶನಾ ಚಾದರೊಳಗೆ [illegible] ಮುರುಟಿಕೊಂಡು ಕಣ್ಣೀರಿಟ್ಟು ನೋಡುತ್ತಿದ್ದಳು. ಅವಳ ಕಣ್ಣೀರು ಬತ್ತಿಯೇ ಹೋಗಿತ್ತೇನೊ. ಕಣ್ಣೊಳಗಿನ [illegible] ಕೂಡಾ ಅಳಿಸಿ ಹೋಗಿತ್ತು. ಕೂದಲು ಕೆದರಿಕೊಂಡಿತ್ತು. ಮುಂದೆ ಹಬ್ಬಿರುವ ವಿಶಾಲ ಸ್ಮಶಾನವನ್ನು [illegible] ಶೂನ್ಯದೃಷ್ಟಿ ನೋಡುತ್ತಿದ್ದಳು ಅಶ್ವತ್ಥ [illegible]ದಲ್ಲಿ ಹೊಸ ಹೊಸ ಚಿಗುರುಗಳು [illegible] ರೇಶ್ಮೆ ಹಸಿರು ಎಲೆಗಳ ನೆರಳು ಅವಳ ಮೇಲೆ ಬೀಳುತ್ತಿತ್ತು. ಆ ಅಶ್ವತ್ಥಮರ ತನ್ನ ಅಪೂರ್ವ ಹಸಿರು [illegible]ಯನ್ನು ಚೆಲ್ಲುತ್ತಿತ್ತು. ಸುದರ್ಶನಾ ಒಬ್ಬಳೇ ಅದರ ಕೆಳಗೆ ಕೂತಿದ್ದಳು. ನಾನೂ ಮಹೇಂದ್ರನೂ ಅಲ್ಲಿದ್ದೆವು ನಿಜ. ಆದರೆ ಬಹುಶಃ ಒಬ್ಬನು ಇನ್ನೊಬ್ಬನಿದ್ದುದರಿಂದ ಮನಸ್ಸಿನ [illegible] ಆಕೆಯನ್ನು ಸಮಾಧಾನಗೊಳಿಸಲು ಹೋಗಲಿಲ್ಲ.

ಉರಿಯುತ್ತಿರುವ ಚಿತೆಯಿಂದ ಸ್ವಲ್ಪ ದೂರದಲ್ಲಿಯೇ [illegible] ಶಿವ [illegible] ಮೇಲೆ ಮಹೇಂದ್ರ ಕುಳಿತಿದ್ದ. [illegible] ನಾನು ಕುಳಿತಿದ್ದೆ. ಮಹೇಂದ್ರನ ಮುಖದಲ್ಲಿ ಬೆಂಕಿಯ ಜ್ವಾಲೆಗಳ ಹೊಳೆಯ ಎತ್ತಿದ್ದುವು.

ಇದು ಜನಗಿಗೆ [illegible] ಒಂದು ವಿಚಿತ್ರವಾಗಿ ಕಂಡಿತ್ತು... ಮರಣದ ಈ ಸಂದರ್ಭದಲ್ಲಿ ಮಹೇಂದ್ರನ [illegible] ನಿಜ ಹೇಗಿದ್ದರೂ ಅವನ [illegible] ಹೆಂಡತಿ ಐದು ವರ್ಷಗಳಿಂದ ಬೇರೆ ಇದ್ದರೆ ಅದರಿಂದ ನಾಯಿತು? ಅಂಥ ಸಂದರ್ಭದಲ್ಲಂತೂ [illegible].

ಎಷ್ಟೋ ಮನಸ್ಸಿದ್ದರೂ ಆಕೆಯ ಭುಜಗಳನ್ನು ಹಿಡಿದು "ಸುದರ್ಶನಾ ತಂದೆಯು [illegible] ಹೋದರೆ ಏನಾಯಿತು? ನಾನಿರುವೆನಲ್ಲ! ಹೆದರಬೇಡ" ಎಂದು ಧೈರ್ಯದ ನಾಲ್ಕು ಮಾತುಗಳನ್ನೂ ನಾನು ಹೇಳುವಂತಿರಲಿಲ್ಲ.

ಆದರೆ ಹಾಗೇನೂ ಆಗಲಿಲ್ಲ. ಚಟಪಟನೆ ಚಿತೆ ಉರಿಯುತ್ತಿತ್ತು. ಐವರು ಬ್ರಾಹ್ಮಣರು ಕಪಾಲ ಕ್ರಿಯೆ ಮಾಡಿದರು! ಕೆಂಡವನ್ನು ಒಟ್ಟುಗೂಡಿಸಿ ನಾವು ಮೌನವಾಗಿ ಹೊರಟೆವು. ದಾರಿಯುದ್ದಕ್ಕೂ ಯಾರೂ ತುಟಿ ಪಿಟಕ್ಕೆನ್ನದೆ ಹಾರುತ್ತಿರುವ ಧೂಳಿನ ಸುಳಿಗಾಳಿಯನ್ನೇ ನೋಡುತ್ತಾ ಎಲ್ಲರೂ ಹಿಂತಿರುಗಿದೆವು.

**ಮರುದಿವಸ ಅಸ್ಥಿ ತರಲು ಹೋಗುವ ಹೊತ್ತು** ಬಂದಾಗ, 'ಅಳಿಯನು ಮಗನಿಗೆ ಸಮಾನ. ಅವನೇ ಹೋಗಲಿ' ಎಂದು ನೆರೆದವರು ಅಭಿಪ್ರಾಯವಿತ್ತರು. ಸುದರ್ಶನಾ ಮಾತ್ರ 'ಬೇಕು' ಅಥವಾ 'ಬೇಡ' ಎಂದು ಹೇಳದೆ ನೌಕರನೊಡನೆ ತಾನೇ, ಅಸ್ಥಿ ತರಲು ಹೊರಟು ಹೋಗಿದ್ದಳು.

ಮೂರು ದಿನಗಳ ಬಳಿಕ ಅಲ್ಲಿರುವುದು ನನಗೆ ಸರಿ ಕಾಣಲಿಲ್ಲ...ಬಳಿಕ ಮಹೇಂದ್ರನಿಗೂ ಅದೇ ರೀತಿ ಸಂಕೋಚವಾಗಿರಬೇಕು. ಸುದರ್ಶನಾ ಜಗಲಿಯಲ್ಲಿ ಕುರ್ಚಿಯಿಟ್ಟು ಮಂಕು ಕವಿದಂತೆ ಕೂತಿದ್ದಳು. 'ಸರಿ ಸುದರ್ಶನಾ, ರಾತ್ರಿಯ ಗಾಡಿಯಲ್ಲಿ ನಾನು ಹೊರಡುತ್ತೇನೆ' ಎಂದು ಹೇಳಲು ಅವಳ ಬಳಿ ಹೋಗಿದ್ದೆ. ಅಷ್ಟರಲ್ಲಿ ಮಹೇಂದ್ರನೂ ಅಲ್ಲಿಗೆ ಬಂದಿದ್ದ. ಅವನನ್ನು ಕಂಡು ನಾನು ಮಾತಿಲ್ಲದೆ ಹಿಂತಿರುಗಿದ್ದೆ.

ಮಹೇಂದ್ರ ಬಂದಾಗ ಸುದರ್ಶನಾ ಎದ್ದು ನಿಂತಿದ್ದಳು. "ನಾಳೆ ಬೆಳಗ್ಗೆ ಹೊರಡುವ ಆಲೋಚನೆಯಲ್ಲಿರುವೆನು" ಎಂದವನು ಹೇಳಿದ್ದ.

''ಏಕೆ? ಅದೇನು ಅವಸರ ಒಂದೆರಡು ದಿನವಿದ್ದು ಹೋದರಾಯಿತು'' ಎಂದಿದ್ದಳಾಕೆ. ಆ ಮಾತನ್ನು ಕೇಳಿ ನನಗೆ ಒಮ್ಮೆಲೇ ಆಘಾತವಾಗಿತ್ತು. ಹಾಗಾದರೆ ಸುದರ್ಶನಾ ಮಹೇಂದ್ರನನ್ನು ತಡೆಯಬಯಸುತ್ತಾಳೆ...ಅವರಿಬ್ಬರೂ ಯಾವುದೂ ಒಂದು ಒಪ್ಪಂದಕ್ಕೆ ಬಂದರೂ ಬರಬಹುದು. ಬಹುಶಃ ಹಾಗೆಯೇ ಆದೀತು; ಅದೇ ಆಗಬೇಕಾಗಿತ್ತು. ಮನೆಯನ್ನು ಯಾರಿಗಾದರೂ ಬಾಡಿಗೆಗೆ ಕೊಟ್ಟೋ ಮಾರಿಯೋ ಮಹೇಂದ್ರನೊಡನೆ ಆಕೆ ಹೋಗಬಹುದೊ ಏನೊ... ಬಳಿಕ ಇಬ್ಬರೂ ಒಟ್ಟಿಗೆ ಸಂಸಾರವನ್ನು ಹೂಡಬಹುದು. ಆಗುವುದೆಲ್ಲ ಒಳ್ಳೆಯದಕ್ಕೇ ಎಂದು ಕ್ಷಣ ಕಾಲ ನನಗೆ ಅನಿಸಿತ್ತು. ಮತ್ತೆ ಈಗ ಅವಳಿಗೆ ಉಳಿದುದಾದರೂ ಏನು? ತಂದೆಯೊಬ್ಬರಿದ್ದರು. ಅವರ ಆಧಾರದಿಂದಲೇ ಅಷ್ಟು ದೊಡ್ಡ ನಿರ್ಣಯಕ್ಕೆ ಆಕೆ ಬಂದಿದ್ದಳು...ಈಗ ಅವಳೊಬ್ಬಳೇ ಉಳಿದವಳು. ಒಂಟಿಯಾಗಿ ಅವಳು ಮಾಡುವುದಾದರೂ ಏನು?

ಅಲ್ಲಿರುವುದರಲ್ಲಿ ಯಾವ ಔಚಿತ್ಯವನ್ನೂ ಕಾಣದೆ ಸಾವರಿಸಿಕೊಂಡು ನಾನು ಹೇಳಿದ್ದೆ ''ಸುದರ್ಶನಾ, ರಾತ್ರಿಯ ಗಾಡಿಯಲ್ಲಿ ಹೋಗುತ್ತೇನೆ.''

''ಏಕೆ, ಒಂದೆರಡು ದಿನ ನಿಲ್ಲಬಹುದಲ್ಲ?''

ಅವಳ ಆ ಮಾತು ನನ್ನನ್ನು ಇನ್ನೂ ಸಂಕಟಕ್ಕೊಳಪಡಿಸಿತ್ತು. ದುಃಖದ ನೆರಳಡಿಯಲ್ಲಿ ಯಾವ ಸುಳಿಯ ಒಲೆಗೆ ಸಿಲುಕಿಕೊಂಡಿರುವಳು ಈಕೆ? ಎಂದು ಚಿಂತಿಸುತ್ತಿದ್ದೆ. ಈಗ ಈಕೆ ಒಳಗಿಂದೊಳಗೆ ಸಂಪೂರ್ಣವಾಗಿ ಸೋತಿರುವಳೇ ಅಥವಾ ನಮ್ಮಿಬ್ಬರಲ್ಲಿ ಯಾರನ್ನಾದರೊಬ್ಬನನ್ನು ತನ್ನವನನ್ನಾಗಿ ಮಾಡಿಕೊಳ್ಳಲು ಬಯಸುವಳೇ?

ನಾವು ಇಬ್ಬರೂ ಉಳಿದುಬಿಟ್ಟೆವು; ಆದರೆ ಒಬ್ಬನು ಇನ್ನೊಬ್ಬನಿಂದ ದೂರ...

... ಆ ಮನೆಯಲ್ಲಿ ನಾವು ಮೂವರೂ ಹಳೆಯ ಸ್ಮೃತಿಗೆ ಸಂಬಂಧಪಟ್ಟವರಾಗಿದ್ದೆವು. ಅದರಿಂದಾಗಿ ಅಲ್ಲಿ ನಿಲ್ಲುವುದು ಇನ್ನೂ ಕಷ್ಟವಾಗುತ್ತಿತ್ತು. ಅದೇ ಮನೆಯಲ್ಲಿ ಸುದರ್ಶನಾಳೊಂದಿಗೆ ನಾನು ಪ್ರತಿ ದಿನ ಗಂಟೆಗಟ್ಟಲೆ ಇರುತ್ತಿದ್ದೆ... ಅದರ ಪ್ರತಿಯೊಂದು ಗೋಡೆಯೂ ನಮ್ಮ ಪ್ರಥಮ ಪ್ರೀತಿಯ ಸಾಕ್ಷಿಯಾಗಿ ನಿಂತಿದೆ... ಆ ಗೋಡೆಯ ಆ ಭಾಗಕ್ಕೆ **ಸುದರ್ಶನಾ ಒರಗಿ ನಿಂತಿದ್ದಾಗ ಮೊದಲ ಸಾರಿ ಅವ**ಳನ್ನು ನಾನು ಎರಡೂ ಬಾಹುಗಳಲ್ಲಿ ಬಂಧಿಸಿದ್ದ ನೆನಪು ಈಗಲೂ ಇದೆ. ಅಂದು ನಾನು ಗೋಡೆಗೆ ಕೈಕೊಟ್ಟು ನಿಂತಾಗ ಆಕೆ ನಾಚುತ್ತಾ ಹೇಳಿದ್ದಳು, "ಈ ಬಾಹುಗಳು ಎಂದೆಂದಿಗೂ ಹೀಗೆಯೇ ಇದ್ದು — ಯಾವಾಗಲೂ ನನಗೆ ರಕ್ಷಾಕವಚವಾಗಿ ಉಳಿಯಬಲ್ಲವೇ?" ಅದನ್ನು ಕೇಳಿ ನಾನು ಮುಗುಳು ನಗುತ್ತಾ ನಿಂತಿದ್ದೆ.

ಕ್ರಮೇಣ ಈ ಮನೆಯಲ್ಲಿ ಎಲ್ಲವೂ ಬದಲಾಗಿತ್ತು. ಅದೊಂದು ದಿನ ಮಹೇಂದ್ರ ಕಾಣಿಸಿಕೊಂಡಿದ್ದ. ಅಂದಿನಿಂದ ಎಲ್ಲ ಪರಿವರ್ತನೆಯಾಗತೊಡಗಿತ್ತು. ಮನೆಯವರು ನನ್ನೊಡನೆ ಬೇರೆ ರೀತಿಯಲ್ಲಿ ವ್ಯವಹರಿಸಲು ಪ್ರಾರಂಭಿಸಿದ್ದರು. ಅಲ್ಲಿಗೆ ಹೋಗುವುದೆಂದರೆ ನನಗೆ ಅವಮಾನವಾದಂತಾಗುತ್ತಿತ್ತು. **ಈಗ ಅವನ್ನೆಲ್ಲ ಆಲೋಚಿಸಿದಾಗಲೆಲ್ಲ ನಗು ಬರು**ತ್ತದೆ. ಇಷ್ಟಾದರೂ ಆ ಚುಚ್ಚನ್ನು ಇಂದಿಗೂ ಮರೆಯಲಾಗುವುದಿಲ್ಲ.

ದಾರಿ ಬದಲಾಗಿತ್ತು. ನಾನು ಮತ್ತು ಸುದರ್ಶನಾ ಇಬ್ಬರೂ ಪರಸ್ಪರ ಮರೆತೇ ಬಿಟ್ಟಂತಿತ್ತು. ಅಂದಿನ ನಮ್ಮಿಬ್ಬರ ಪ್ರೇಮ – ಸಂಬಂಧ ಬಹುಶಃ ಮಕ್ಕಳಾಟಿಕೆಯಾಗಿತ್ತೆಂದು ಆಲೋಚಿಸಿ ಇಬ್ಬರೂ ಸಮ್ಮಿಶ್ರಕ್ಕೇ ಸುಮ್ಮನಿದ್ದೆವು.

ಸುದರ್ಶನಾ ತನ್ನ ಪತಿಯೊಡನೆ ಬಹಳ ಆನಂದದಿಂದಿದ್ದಳು. ಮದುವೆಯಾದ ಬಳಿಕ ಮೊದಲ ಬಾರಿ ಅವರಿಬ್ಬರೂ ನನಗೆ ಸಿಕ್ಕಿದಾಗ, ಅವಳ ಕಣ್ಣುಗಳಲ್ಲಿ ಮೊದಲು ಪರಿಚಯದ ಅಸ್ಪಷ್ಟ ಚಿತ್ರ ಕಾಣಿಸಿಕೊಂಡಿತ್ತು. ಆದರೆ ಮಹೇಂದ್ರನ ಮುಖದಲ್ಲಿ ವಿಜಯೋತ್ಸಾಹವೇ ಕಾಣಿಯುತ್ತಿತ್ತು. ಒಬ್ಬ ಸಂತುಷ್ಟ... ಪೆಟ್ಟು ತಿಂದವನ ಅನುಭವ ಪಡೆದಿದ್ದ ನಾನು

"ನಿಮ್ಮ ವಿಚಾರ ಕೆಲವೊಮ್ಮೆ ನಮ್ಮ ಮನೆಯಲ್ಲಿ ಬಂದುಬಿಡುತ್ತದೆ" ಕೈ ಕುಲುಕಿಸಿದ ಬಳಿಕ ಹೇಳಿದ್ದ ಮಹೇಂದ್ರ, "ನಿಜವಾಗಿ ಹೇಳುವುದಾದರೆ ಬೇರೆಯವರ ವಿಚಾರ ಮಾತಾಡುವುದಂತೂ ಇಲ್ಲ. ನಮಗೆ ನಮ್ಮ ಮಾತಿಗೇ ಸಮಯ ಸಾಕಾಗುವುದಿಲ್ಲ... ನಾವಿಬ್ಬರೂ ಬಹಳ ವಾಚಾಳಿಗಳು ..."



ಒಂದು ನಕ್ಕುಬಿಟ್ಟಿದ್ದೆ. ತಡೆದುಕೊಂಡು ನಾನು ಆ ಮಾತನ್ನು ನುಂಗಿಬಿಟ್ಟಿದ್ದೆ. ಆಗ ಕಣ್ಸಿಂದಲೇ ಸುದರ್ಶನಾಳನ್ನು ಕೇಳಿಯೂಬಿಟ್ಟಿದ್ದೆ – 'ಈ ರೀತಿ ನನ್ನನ್ನು ಏಕೆ ಅಪಮಾನಕ್ಕೊಳಪಡಿಸಲಾಗುತ್ತಿದೆ...? ನಿನ್ನ ಪತಿಯ ಮಾತಿನಲ್ಲಡಗಿರುವ ವ್ಯಂಗ್ಯ ನಿನಗೆ ಅರ್ಥವಾಗದೆ ?' ಆಕೆ ಮಹೇಂದ್ರನ ಮಾತಿನ ಮರ್ಮವನ್ನು ಅರಿತಿದ್ದಳು. ಆದರೆ ಅರಿವಿಲ್ಲದೆಯೇ ಅಷ್ಟೇ ವ್ಯಂಗ್ಯದಿಂದ, ಆ ಗಾಯಕ್ಕೆ ಉಪ್ಪೆರಚುವಂತೆ ಹೇಳಿದ್ದಳು : 'ನಿಮ್ಮ ಒಳ್ಳೆತನದ ಬಗ್ಗೆಯೇ ಮಾತಾಡುತ್ತಿದ್ದೇವೆ'

ಒಳ್ಳೆತನದ ಮಾತೇನೆಂಬುದು ನನಗೆ ಗೊತ್ತಾಗಲಿಲ್ಲ ಅತ್ಯಂತ ಕಷ್ಟದಿಂದ ಮುಗುಳು ನಕ್ಕು ನಾನು ಹೇಳಿದ್ದೆ. ಆದರೆ ಅದಕ್ಕೆ ಉತ್ತರ ದೊರೆಯಲಿಲ್ಲ. ಅವರಿಬ್ಬರೂ ಬೇರೆಲ್ಲಿಗೋ ಹೋಗುವ ಅವಸರದಲ್ಲಿ ಹೋಗಿಬಿಟ್ಟಿದ್ದರು.

ನನಗೆ ವ್ಯಸನವೇನೋ ಆಗಿತ್ತು. ಆದರೆ ಅವರಿಬ್ಬರೂ ಸಂತೋಷದಲ್ಲಿರುವರೆಂಬ ಒಂದು ರೀತಿಯ ಸಮಾಧಾನವಾಗಿತ್ತು.

ಆ ಬಳಿಕ ಅವರ ಬಗ್ಗೆ ಹಲವಾರು ಮಾತುಗಳು ಕೇಳಿಬರುತ್ತಿದ್ದುವು... ಅವರಿಬ್ಬರ ಸಫಲತೆಯ ಬಗ್ಗೆ — ಅವರು ಬಹಳ ಸುಂದರವಾದ ಮನೆ ಕಟ್ಟಿಸಿರುವರು, ಕಾರು ತೆಗೆದುಕೊಂಡಿರುವರು, ಮೂರು ಮೂರು ಕೆಲಸದವರನ್ನಿಟ್ಟುಕೊಂಡಿರುವರು. ಎಲ್ಲಾ ವಿಧದ ಸುಖ-ಸೌಕರ್ಯಗಳನ್ನು ಒದಗಿಸಿಕೊಂಡಿರುವರು. ಅವರ ಪ್ರವಾಸಗಳ ಸುದ್ದಿ ಮನೆಗೆ ತಲ್ಪುತಿತ್ತು ಅವರ ದೀರ್ಘ ಪತ್ರಗಳಲ್ಲಿ ಆ ಸ್ಥಳಗಳ ಸೌಂದರ್ಯ ವರ್ಣಿಸಲ್ಪಡುತ್ತಿತ್ತು, ಸಚಿತ್ರ ಪೋಸ್ಟ್ ಕಾರ್ಡುಗಳಲ್ಲಿ ಅವರು ಬರೆದ ಸಂಕ್ಷಿಪ್ತ ಸಂದೇಶಗಳು ಬರುತ್ತಿದ್ದುವು. ಪೋಸ್ಟು ಪಾರ್ಸಲ್‌ಗಳಲ್ಲಿ ಉಡುಗೊರೆಗಳು ಬರುತ್ತಿದ್ದುವು.

ಆ ದಿನಗಳನ್ನು ಕಳೆದ ಬಳಿಕ ಮುನ್ಸೂಚನೆ ಕೊಡದೆಯೇ ಸುದರ್ಶನಾ ಒಮ್ಮೆ ಮನೆಗೆ ಬಂದಿದ್ದಳು ಅದೇಕೋ ಗೊತ್ತಿಲ್ಲ. ಸ್ವಲ್ಪ ಸಮಯ ನಮ್ಮಿಬ್ಬರ ಭೇಟಿಯಾಗಿತ್ತು - ಆಗ ಉಕ್ಕಿ ಬರುವ ದುಃಖವನ್ನು ಹತ್ತಿಕ್ಕಲು ಅವಳು ಅಸಮರ್ಥಳಾಗಿ ಮೆಲ್ಲನೆ ಕೇಳಿದ್ದಳು : "ಗಂಡಸರು ಬಹಳ ಸಂಶಯಿಗಳಾಗಿರುತ್ತಾರಲ್ಲ ?

ಏಕೆ ?"

ಆಗ ಯಾವುದೋ ವಿಶ್ವಾಸದ ನೆಳಲಿನಲ್ಲಿಯೇ ತನ್ನ ವಿಷಯವನ್ನು ಆಕೆ ವಿವರಿಸಿದ್ದಳು : "ನೋಡು ಚಂದರ್ ಮನೆಯವರಲ್ಲಿಯೂ ಇದನ್ನು ನಾನು ಯಾರಿಗೂ ಹೇಳಲಾರೆ ಆದರೆ ನಿನ್ನೊಡನೆ ಹೇಳಲು ಸಂಕೋಚವಾಗುವುದಿಲ್ಲ ಆ ಬಗ್ಗೆ ವಿಷಾದಪಡುವುದಿಲ್ಲ. ಆದರೆ ಇನ್ನು ಮುಂದೆ ಮಾತ್ರ ಅದು ಸಾಗಲಿಕ್ಕಿಲ್ಲವೆಂದು ಕಾಣುತ್ತದೆ."

"ಅದೇನು ವಿಚಾರ, ಸುದರ್ಶನಾ ? ಹೇಳಿದರೆ ಬಹುಶಃ ನಿನ ಮನಸ್ಸಿನ ಭಾರ ಸ್ವಲ್ಪ ಕಡಿಮೆಯಾಗಬಹುದು..." ನಾನು ಹೇಳಿದ್ದೆ

"ಏನಿಲ್ಲ ಕ್ಷುಲ್ಲಕ ಮಾತು, ಒಂದು ದಿನ ನಾವಿಬ್ಬರೇ ಹೋಟೇಲಿನ ಕೋಣೆಯಲ್ಲಿ ಕಳೆದ ದಿನಗಳನ್ನು ಸ್ಮರಿಸುತ್ತಾ ಕುಳಿತಿದ್ದೆವು. ನಾನು ಅವರ ಎದೆಯ ಮೇಲೆ ತಲೆ ಇಟ್ಟಿದ್ದೆ; ಅವರ ಕೈ ನನ್ನ ಹೆಗಲ ಮೇಲಿತ್ತು. ಆಗ ಅವರು ತನ್ನ ಮರೆತು ಹೋದ ಒಂದು ಪ್ರೇಮದ ಕಥೆಯನ್ನು ನನಗೆ ಹೇಳಿದರು. ಅದನ್ನು ನಾನು ಬಹಳ ಉಲ್ಲಾಸದಿಂದ ಕಿವಿಗೊಟ್ಟು ಕೇಳಿ ಅವರನ್ನು ನಾನು ಗೆದ್ದಿರುವೆನೆಂದು ಒಳಗಿಂದೊಳಗೇ ಅತ್ಯಂತ ಅಭಿಮಾನ ಪಡುತ್ತಿದ್ದೆ. ಬಳಿಕ ಬಹಳ ಪ್ರೇಮದಿಂದ ಅವರು ಕೇಳಿದ್ದರು : ದರ್ಶಿ, ನೀನೂ ಯಾರನ್ನಾದರೂ ಪ್ರೀತಿಸಿರಬಹುದಲ್ಲ ?

ಆಗ ನಾನು ಸುಳ್ಳು ಹೇಳಬಹುದಿತ್ತು ಆದರೆ ನಾವು ಸತ್ಯಕ್ಕೆ ಬಹಳ ಸಮೀಪವಿದ್ದೆವು; ಅನಿರ್ಬಂಧವಾಗಿ ಮಾತಾಡುತ್ತಿದ್ದೆವು... ಎಲ್ಲವನ್ನೂ ಸ್ವೀಕರಿಸುವ 'ಮೂಡ್' ನಲ್ಲಿದ್ದೆವು ಆಗ ನಿನ ಬಗ್ಗೆ ಅವರಿಗೆ ಹೇಳಿದ್ದೆ. ಇಷ್ಟೆ - ನೀನು ನನ್ನನ್ನು ಬಹಳ ಪ್ರೀತಿಸಿದ್ದಿ, ಅದಕ್ಕಾಗಿಯೇ ಇಂದಿಗೂ ಮದುವೆ ಮಾಡಿಕೊಂಡಿಲ್ಲ... ನಿಜವಾಗಿ ಹೇಳುವೆ. ನೀನು ಇಂದಿಗೂ ನನ್ನನ್ನು ನೆನೆಯುತ್ತಿರುವಿ ಎಂದು ಆಗ ನಾನು ಒಂದು ತರದ ವಿಚಿತ್ರ ತೃಪ್ತಿ ಪಡೆದಿದ್ದೆ...

## ಸಿಂಹದ ಮರಿ



ಸಿಂಹವೊಂದು ಮರಿಯನಿಡಲು ನರಿ
ಅಂದಿತಿಂತು :
'ಒಂದೇ ಮರಿ, ಒಂದೇ ಮರಿ ನಿನಗೆ!'
ಆದರೆ ಸಿಂಹವು ನರಿಗೆ ಇಂತು ಗರ್ಜಿಸಿತು.
'ಸಿಂಹದ ಮರಿ, ಸಿಂಹದ ಮರಿ ನನಗೆ!'

— ಗುಂಡ್ಮಿ ಚಂದ್ರಶೇಖರ ಐತಾಳ

ಅವರು ಆ ಬಗ್ಗೆ ಬಿಡಿಸಿ ಬಿಡಿಸಿ ಹಲವಾರು ಪ್ರಶ್ನೆ ಕೇಳಿದ್ದರು - ನಾನೂ ಆ 'ಮೂಡ್' ನಲ್ಲಿ ಎಲ್ಲವನ್ನೂ ಹೇಳುತ್ತಾ ಹೋಗಿದ್ದೆ. ಇದ್ದಕ್ಕಿದ್ದಂತೆಯೆ ನಮ್ಮಿಬ್ಬರ ನಡುವೆ ಅರಿವಿಲ್ಲದೇ ಮೂರನೆಯ ವ್ಯಕ್ತಿಯೊಬ್ಬನು ನಿಂತಿರುವನೆಂಬಂತೆ ಭಾಸವಾಯಿತು...

ಅವರ ಕೈ ನನ್ನ ಬೆನ್ನ ಮೇಲಿಂದ ಯಾವಾಗ ಸರಿದುಕೊಂಡಿತು, ನನ್ನ ತಲೆ ಅವರ ಎದೆಯಿಂದ ಜಾರಿ ಯಾವಾಗ ತಲೆದಿಂಬಿಗಿಳಿಯಿತು ಎಂದು ನನಗೆ ಗೊತ್ತಾಗಲೇ ಇಲ್ಲ. ನಾವಿಬ್ಬರೂ ಗೊತ್ತಿಲ್ಲದೆಯೇ ಒಬ್ಬರಿನ್ನೊಬ್ಬರ ಸ್ಪರ್ಶದ ಪರಿಧಿಯಿಂದ ಹೊರ ಬಂದಿದ್ದೆವು...

ಅಂದಿನಿಂದ ಆ 'ಮೂರನೆಯ ವ್ಯಕ್ತಿ' ಸದಾ ನಮ್ಮಿಬ್ಬರ ನಡುವಿದ್ದಾನೆ... ನಿಜವಾಗಿ ಹೇಳುವುದಾದರೆ ಆ 'ಮೂರನೆ ವ್ಯಕ್ತಿ' ನೀನೂ ಅಲ್ಲ. ನನ್ನ ದೃಷ್ಟಿಯಲ್ಲಿ ಆ ವ್ಯಕ್ತಿಯು ನಿನ್ನ ಸ್ವರೂಪವನ್ನೇ ಬದಲಾಯಿಸಿಕೊಳ್ಳುತ್ತಾನೆ ಆದರೆ ಅವರಿಗೆ ಆ ವ್ಯಕ್ತಿಯು ಹೊಸಹೊಸ ಹೆಸರಾಗಿಬಿಡುತ್ತದೆ.

ಆ ನೆರಳು ಎಂದೆಂದಿಗೂ ನಮ್ಮಿಬ್ಬರ ನಡುವೆ ಇರುತ್ತದೆ..." ಹೇಳುತ್ತಿದ್ದಂತೆ ಸುದರ್ಶನಾಳ ಕಣ್ಣುಗಳು ಸಜಲವಾಗಿದ್ದುವು.

"ಆ ನೆರಳು ನಿಮ್ಮನ್ನು ತುಂಬಾ ಪೀಡಿಸುತ್ತಿದೆಯೇ ?"

ಕಷ್ಟದ ವಿಷಯವೆಂದರೆ ಬಹುಶಃ ನಾವಿಬ್ಬರೂ ತುಂಬಾ ಒಳ್ಳೆಯವರು...: ನಮಗೆ ಪರಸ್ಪರ ಯಾವ ಮನಃಕ್ಲೇಶವೂ ಇಲ್ಲ ಆದರೆ ಈಗ ನಾವು ಮನಬಿಚ್ಚಿ ಮಾತನಾಡಲಾರೆವು... ನಾನು ಭಾವನಾವಶಳಾಗಿ ಅವರೊಡನೆ ಕೆಲವೊಮ್ಮೆ ಮಾತನಾಡಿದರೂ ಅವರ ದೃಷ್ಟಿಯಲ್ಲಿ ಸಂದೇಹದ ಒಂದು ತೆರೆ ಏಳುತ್ತಿರುವುದನ್ನು ಕಾಣಬಲ್ಲೆ... ನನ್ನ ಪ್ರತಿಯೊಂದು ಮಾತಿನ, ಭಾವನೆಯ ಅರ್ಥ ಅವರಿಗೆ ಬೇರೆಯೇ ಆಗಿ ಕಾಣುತ್ತದೆ... ಈ ರೀತಿಯಾದರೆ ಜೀವನ ಹೇಗೆ ಸಾಗುತ್ತದೆಯೋ ಗೊತ್ತಾಗುವುದಿಲ್ಲ...

ಆಗ ಸುದರ್ಶನಾಳೊಡನೆ ಅಷ್ಟೇ ಮಾತು ನಡೆದಿತ್ತು. ನನ್ನ ಮನಸ್ಸಿನ ತುಂಬೆಲ್ಲ ಸಂದೇಹ. ಶೀಘ್ರದಲ್ಲಿಯೇ ಅವರಿಬ್ಬರ ಸಂಬಂಧ ಮುರಿದುಹೋಗುವ ಸ್ಥಿತಿಯಲ್ಲಿದೆಯೆಂದು ಭಾವಿಸಿದ್ದೆ. ಅದರಿಂದಾಗಿ ಮನಸ್ಸು ನಿರಾಶೆಗೊಂಡಿತ್ತಾದರೂ ಬಹಳ ಸಾವರಿಸಿಕೊಂಡು ಕೇಳಿದ್ದೆ "ನೀವಿಬ್ಬರೂ ಆನಂದದಿಂದಿರುವಿರೆಂದು ನಾನು ಗ್ರಹಿಸಿದ್ದೆ... ಆದರೆ ನಿಜವಾದ ವಿಷಯ ತಿಳಿದು ನನಗೆ ವೇದನೆಯಾಯಿತು. ಸುದರ್ಶನಾ, ನಿನಗೆ ಏನೆಂದು ಸಲಹೆ ಕೊಡಲಿ? ನಾನು ಆ ಸ್ಥಿತಿಯಲ್ಲಿಯೂ ಇಲ್ಲ. ಪ್ರತಿಯೊಬ್ಬನೂ ತನ್ನ ಜೀವನದ ಸಮತೋಲವನ್ನು ಬೇರೆ ಬೇರೆ ರೀತಿಯಲ್ಲಿಯೇ ಹುಡುಕುತ್ತಿರುವನು... ಏಕೆಂದರೆ ತನ್ನ ವಿಷಯವಾಗಿ ತನಗಿಂತ ಹೆಚ್ಚು ಯಾರಿಗೂ ತಿಳಿದಿರುದಿಲ್ಲ..."

"ಏನು ಹೇಳಲಿ ಚಂದರ್,...ಒಮ್ಮೊಮ್ಮೆ ನನಗನಿಸುತ್ತದೆ... ಭರತಿ ಇಳಿದು ಬಿಟ್ಟಿದೆ, ಒದ್ದೆಯಾದ ದಡದಲ್ಲಿ ಸಿಂಪು ಮತ್ತು ನೊರೆ ಮಾತ್ರ ಉಳಿದಿವೆ. ಇಂದು ಒದ್ದೆಯಾಗಿರುವ ಈ ದಡಗಳೂ ಕ್ರಮೇಣ ಒಣಗಿ ಒಣಗಿ ಬಿರಿದು ಹೋಗುವವು."

"ನಾನು ಏನು ಮಾಡಲೂ ಅಸಮರ್ಥ ಸುದರ್ಶನಾ. ಆದರೆ ನಿನಗಾಗಿ ಒಳಗಿಂದೊಳಗೆ ಬೇಯುತ್ತಿರುವೆನು. ನಿನಗೆ ಮಾತ್ರ ನನ್ನ ಬಗ್ಗೆ ಒಂದಿಷ್ಟೂ ಕನಿಕರವಿಲ್ಲ."

"ಇದೆಂಥ ಮಾತು ? ಅದು ಪ್ರಾರಬ್ಧದ ವಿಷಯ ಅದರ ಪ್ರವಾಹವು ಎಲ್ಲರನ್ನೂ ಕೊಚ್ಚಿಕೊಂಡು ಹೋಗಿತ್ತು. ನಾನು ಅದಕ್ಕೊಂದು ಅರ್ಥವನ್ನಿತ್ತು ಬಹುಶಃ ನನ್ನನ್ನೇ ವಂಚಿಸಬಯಸಿದ್ದೆ... ಈಗ ಅದೇ ಪ್ರಾರಬ್ಧ ನನ್ನನ್ನು ವಂಚಿಸುತ್ತಿದೆ..." ಅವಳ ಕಣ್ಣುಗಳಲ್ಲಿ ಕಣ್ಣೀರು ತುಂಬಿಬಂದಿತ್ತು. ತನ್ನ ಎರಡೂ ಅಂಗೈಗಳನ್ನು ಮುಂದೆ ಚಾಚಿ ಆಕೆ ಕೇಳಿದಳು : "ಇವುಗಳಲ್ಲಿ ಏನೆಲ್ಲಾ ಬರೆದಿದೆ" ಎಂದು.

"ಇವುಗಳಲ್ಲಿ ಏನೂ ಬರೆದಿಲ್ಲ ಸುದರ್ಶನಾ."

"ಹಾಗಾದರೆ ನಾನು ಹಿಂತಿರುಗಿ ಹೋಗುವೆ, ಇನ್ನೇನು ಮಾಡಲಿ?"

ಹುಡುಕಲೇ ಬೇಕಲ್ಲ? ಮಹೇಂದ್ರನು ಬಹುಶಃ ಅದಕ್ಕಾಗಿಯೇ ಬಂದಿರುವನು."

"ನೀವು ಏಕೆ ಬಂದಿರುವೆ?" ತಟಕ್ಕನೆ ಅವಳು ಕೇಳಿದ್ದಳು

ಸ್ವಲ್ಪ ಸಮಯದ ವರೆಗೆ ಮೌನ ಹಬ್ಬಿತ್ತು ಅವಳು ಪುನಃ ಕಿಟಕಿಯ ಹೊರಗೆ ಏಳುತ್ತಿರುವ ಧೂಳಿನ ಸುಳಿಗಾಳಿಯನ್ನು ನೋಡತೊಡಗಿದ್ದಳು ಅವಳ ಹಣೆ ತುಂಬಾ ಬೆವರು ಹನಿಗೂಡಿತ್ತು. ಕುರುಳುಗಳು ಅದಕ್ಕೆ ಅಂಟಿಕೊಂಡಿದ್ದುವು, ಅವಳ ಶ್ವಾಸ ಭಾರವಾಗಿತ್ತು

ಕೆಲವು ನಿಮಿಷಗಳ ನೀರವತೆಯ ಬಳಿಕ ಅವಳು ಹೇಳಿದ್ದಳು: "ನೋಡು. ಎಲ್ಲವನ್ನೂ ಎಲ್ಲರಿಗೂ ಹೇಳಲಿಕ್ಕಾಗುವುದಿಲ್ಲ. ಅಷ್ಟು ಸ್ವತಂತ್ರವಾಗಿ ಜೀವಿಸಲು ಸಾಧ್ಯವಾಗುವಂತಿಲ್ಲ. ಹಾಂ ಕೆಲವೊಮ್ಮೆ ಅಂದವಾಗಿ ಅಸತ್ಯ ಹೇಳುವ ಅವಶ್ಯಕತೆ ಬೀಳುವುದೂ ಇದೆ..."

ನಾನು ಅವಳಿಗೆ ಎಷ್ಟೆಷ್ಟು ಸಮಜಾಯಿಸಿ ಹೇಳುತ್ತಿದ್ದನೋ ಅವಳು ಅಷ್ಟಷ್ಟೆ ಹೆಚ್ಚು ಸಮಸ್ಯೆಗೊಳಗಾಗುತ್ತಿದ್ದಳು. ಅಂದಿನ ಭಾರವಾದ ದಿನವೂ ಹಾಗೂ ಹೀಗೂ ಕಳೆದು ಹೋಗಿತ್ತು. ಮಹೇಂದ್ರನು ಸಂಜೆಯ ತನಕ ತನ್ನ ಕೋಣೆಯಲ್ಲಿಯೇ ಇದ್ದ.

ಮರುದಿನ ಬೆಳಗ್ಗೆ ಅವನು ಹೋಗುವವನಿದ್ದ ರಾತ್ರಿ ಊಟವಾದ ಬಳಿಕ ನಾನು ನನ್ನ ಕೋಣೆಗೆ ಹೋಗಿದ್ದೆ. ಮಹೇಂದ್ರನ ಕೋಣೆಯಲ್ಲಿ ಕೆಲವೊಮ್ಮೆ ಅದೇನೋ ಸಪ್ಪಳ ಕೇಳಿ ಬರುತ್ತಿತ್ತು—ಮಾತನಾಡುವ, ಬಿಕ್ಕಳಿಸುವ ಶಬ್ದ. ಆ ಬಳಿಕ ಮತ್ತೆ ನಿಸ್ತಬ್ಧತೆ. ಆ ರಾತ್ರಿ ಅಸಮಾಧಾನದ ರಾತ್ರಿಯಾಗಿತ್ತು.

ಬೆಳಗ್ಗೆ ಎಲ್ಲವೂ ಶಾಂತವಾಗಿತ್ತು. ನಾನು ಬಚ್ಚಲ ಮನೆಯಿಂದ ಹೊರಗೆ ಬರುತ್ತಿದ್ದಾಗ. ಸುದರ್ಶನಾ ಮಹೇಂದ್ರನ ಕೋಣೆಯಿಂದ ತನ್ನ ಕೋಣೆಗೆ ಹೋಗುತ್ತಿದ್ದಳು. ಬಹಳ ದಣಿದವಳಂತೆ ಅಸ್ತವ್ಯಸ್ತವಾಗಿದ್ದಂತೆ ಕಂಡಳು ಅವಳು. ಹತ್ತು ಗಂಟೆಯ ಗಾಡಿಯಲ್ಲಿ ಮಹೇಂದ್ರನು ಹೋದ ಬಳಿಕ ನಾನು ನನ್ನನ್ನೇ ಬಹಳ ಅವ್ಯವಸ್ಥಿತ ಸ್ಥಿತಿಯಲ್ಲಿ ಕಂಡಿದ್ದೆ ಮನಸ್ಸು ಸುದರ್ಶನಾಳಿಗೆ ಹೇಳಬಯಸಿತ್ತು: 'ನಿನ್ನ ದುಃಖಕ್ಕೆ ಈ ದಾರ್ಶನಿಕ ಕವಚವನ್ನೇಕೆ ತೊಡಿಸಿರುವಿ? ನಿನಗೆ ಇದರಲ್ಲಿ ಏನು ರಸ ದೊರೆಯುತ್ತದೆ...? ಸುದರ್ಶನಾ ಅದೇ ರೀತಿ ಅಸ್ತವ್ಯಸ್ತ ಹಾಗೂ ದುಃಖದ ಮೂರ್ತಿಯಾಗಿ ನನ್ನ ಮುಂದೆ ನಿಲ್ಲಬಹುದೆಂದೇ ನನ್ನ ಗನಿಸುತ್ತಿತ್ತು

ಒಂದು ಗಂಟೆಗೆ ನನ್ನ ಕೋಣೆಯ ಬಾಗಿಲು ಬಡಿದ ಶಬ್ದವಾಯಿತು. ಹೊರಗೆ ಬಂದು ನೋಡುವುದೇನು! ಸುದರ್ಶನಾ ಶೃಂಗಾರ ಮಾಡಿಕೊಂಡು ಹೊರಟು ನಿಂತಿದ್ದಾಳೆ! ಹತ್ತು ವರ್ಷ ಮೊದಲು ಹೇಗಿದ್ದಳೋ ಹಾಗೆಯೆ!! ಕಾಲ ಹಿಂದಿರುಗಿ ಬಂದಿದೆಯೋ ಎಂಬಂತಾಯಿತು. ಯಾವ ಬಿಂದುವಿನಿಂದ ಘಟನೆಗಳು ಹೊಸ ಮಾರ್ಗವನ್ನು ಹಿಡಿದಿದ್ದವೋ ಮತ್ತೆ ಅದೇ ಬಿಂದುವಿನಿಂದ ಇತಿಹಾಸವು ಪ್ರಾರಂಭವಾಗಲಿರುವುದೋ ಎಂದೆನಿಸಿತು ನನಗೆ

"ನಡೆ ಎಲ್ಲಿಯಾದರೂ ಊಟ ಮಾಡೋಣ ಬೇಗನೆ ಹೊರಡು" ಎಂದಿದ್ದಳು ಸುದರ್ಶನಾ.

ಊಟ ಮಾಡುತ್ತಾ ನಮ್ಮಿಬ್ಬರಿಗೂ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ನೆನಸಿಕೊಂಡಿದ್ದೆವು. ಒಂದು ವೇಳೆ ನಾವು ಒಟ್ಟಿಗಾಗುತ್ತಿದ್ದರೆ ಏನಾಗುತ್ತಿತ್ತು. ಜೀವನದ ಅದಾವ ಮೌಲ್ಯಗಳಿಂದ ಒಂದಾಗುತ್ತಿದ್ದೆವು? ಪುನಃ ಅದೇ ಪ್ರೇಮದ ಶಾಂತಿ ಕಣ್ಣುಗಳಲ್ಲಿ ಕಂಡು ಬಂದು ಮುಂದೆ ಏನೂ ಆಗಬಹುದೆಂದು ಅನಿಸುತ್ತಿತ್ತು

ಮಧ್ಯಾಹ್ನ ಮನೆಗೆ ಹಿಂದಿರುಗಿ ಬಂದ ಬಳಿಕ ಕೆಲವೇ ದಿನಗಳ ಮೊದಲು ಅಲ್ಲಿ ಮರಣದ ಛಾಯೆ ಸುಳಿದಾಡುತ್ತಿತ್ತು, ಹಾಡುವುದನ್ನೂ ಮರೆತುಬಿಟ್ಟಿದ್ದೆವು ನಾವು. ಎಲ್ಲವೂ ಒಂದು ಆಳವಾದ ಕರುಣೆಯ ಆವರಣದಲ್ಲಿ ಅಬದ್ಧವಾಗಿತ್ತು

ಸಂಜೆ ನಾನು ಹೊರಡಲು ಸಿದ್ಧನಾಗುತ್ತಿರುವಾಗ ಸುದರ್ಶನಾ ಬಂದು ನನ್ನನ್ನು ತಡೆಯಬಹುದು; ಕಾಡಬಹುದು ಎಂದು ಗ್ರಹಿಸಿದ್ದೆ. ಆದರೆ ಹಾಗಾಗಲಿಲ್ಲ. ಗಾಡಿಯ ಸಮಯವಾಗುವ ಮೊದಲು ಅವಳು ನನ್ನ ಕೋಣೆಗೆ ಬಂದು ಹೇಳಿದ್ದಳು: "ಸ್ಟೇಶನಿಗೆ ನಾನೂ ಬರುತ್ತೇನೆ."

ಮಾರ್ಗದಲ್ಲಿ ಅಂಜುತ್ತಾ ನಾನು ಇಷ್ಟೇ ಹೇಳಿದ್ದೆ: "ಸುದರ್ಶನಾ ಈಗ ಏನಾದರೂ ವಿಚಾರ ಮಾಡುತ್ತಿಯಲ್ಲ — ನೀನು ಮಹೇಂದ್ರನ ವಿಷಯವಾಗಿ ಹೇಳುವುದಿಲ್ಲ... ಆದರೆ...

'ಕೇಳು ಚಂದರ್. ಇನ್ನು ಏನಾದರೂ ನಡೆಯುವ ಹಾಗೆ ಕಾಣುವುದಿಲ್ಲ ನನಗೆ. ಮನಸ್ಸಿನಲ್ಲಿಯೂ ಬಹಳ ಗೊಂದಲ. ಯಾವುದನ್ನೂ ಸ್ವೀಕರಿಸುವ ಸಾಮರ್ಥ್ಯ ಉಳಿದಿಲ್ಲ ನನ್ನಲ್ಲಿ.

"ಒಮ್ಮೆ ಎಲ್ಲವನ್ನೂ ಹೇಳಿಬಿಡು ಸುದರ್ಶನಾ..."

"ಅದು ಅಸಾಧ್ಯ. ತನ್ನ ಅಂತರಂಗವನ್ನೆಲ್ಲ ಹೇಳಿರುವವನು ಯಾರಿರುವನು? ಕೇವಲ ನನ್ನದಾದ ಹತ್ತು ಮಾತುಗಳಿವೆ. ಅವುಗಳಲ್ಲಿ ಬಹುಶಃ ಮೂರನ್ನೇ ತಿಳಿಸಬಲ್ಲೆ; ಇನ್ನುಳಿದವುಗಳನ್ನಲ್ಲ. ಇನ್ನಾರಾದರೂ ಸಿಗಬಹುದು ಅವನಿಗೆ ಬಹುಶಃ ನಾಲ್ಕನ್ನು ತಿಳಿಸುವೆನು. ಮತ್ತೊಬ್ಬನಿಗೆ ಇನ್ನೊಂದನ್ನು ತಿಳಿಸುವೆನು. ಆದರೆ ಎಲ್ಲವನ್ನೂ ತಿಳಿಸುವಂತಹ ವ್ಯಕ್ತಿ ಯಾರೂ ಇಲ್ಲ. ತಿಳಿಸದೆ ಉಳಿಯುವ ಆ ಮಾತುಗಳು ಏಕಾಂಗಿಯಾಗಿಬಿಡುತ್ತವೆ...ನಾಲ್ಕು ಕಡೆಯಲ್ಲೂ ಸಂಪೂರ್ಣ ಏಕಾಂತವೇ ತುಂಬಿಹೋಗುತ್ತದೆ. ಎಲ್ಲರದೂ ಇದೇ ಸಂದಿಗ್ಧ ಸ್ಥಿತಿ ಚಂದರ್!" ಎಂದು ಹೇಳುತ್ತಾ ಅವಳು ನನ್ನ ಕೈಹಿಡಿದು ಬಿಟ್ಟಿದ್ದಳು. ಬೆವರಿಕೊಂಡಿದ್ದ ಅವಳ ಬೆರಳುಗಳು ಗಡಗಡನೆ ನಡುಗುತ್ತಿದ್ದುವು. ಆ ಬಳಿಕ ಇಷ್ಟೇ ಹೇಳಿದ್ದಳು: "ನಿನಗೆ ಪತ್ರ ಬರೆಯುತ್ತೇನೆ. ಆದರೆ ಇನ್ನೇನೂ ತಪ್ಪು ತಿಳಿಯಬೇಡ.

ನಾನು ಬಂದುಬಿಟ್ಟಿದ್ದೆ. ಅವಳು ಪ್ಲಾಟ್‌ಫಾರ್ಮಿನಲ್ಲಿ ಹಬ್ಬಿರುವ ಕತ್ತಲೆಯಲ್ಲಿ ಮೆಲ್ಲ ಮೆಲ್ಲನೆ ಕರಗಿದ್ದಳು

ಕೆಲವು ದಿನಗಳ ಮೊದಲು ಅವಳಿಂದ ಒಂದು ಕವರು ಬಂದಿತ್ತು. ಅದರ ಮೇಲೆ ಬರೆದ ವಿಳಾಸದ ಹಸ್ತಾಕ್ಷರ ಅವಳದ್ದೆ. ಅದರ ಸ್ಟ್ಯಾಂಪಿನ ಮೇಲಿದ್ದ ಅಂಚೆ ಮೊಹರು ಕೂಡಾ ಅವಳಿರುವ ನಗರದ್ದೆ! ಕವರಿನ ಒಳಗೆ ಏನೂ ಬರೆಯದ ಒಂದು ಖಾಲಿ ಕಾಗದವಿತ್ತು...ಅದರಲ್ಲಿ ಮಡಚಿದಾಗ ಬಿದ್ದಿರುವ ಗುರುತುಗಳ ಹೊರತು ಬೇರೇನೂ ಇರಲಿಲ್ಲ.





*WISH YOU ALL*
*A HAPPY DEEPAWALI*

MADE
OUT OF
THE
FINEST
MATERIALS

# *MANGALORE GANESH BEEDIES*

SMOKERS
CANNOT
AFFORD
TO MISS
THEM

**Daily Production Exceeds 4 Crores Beedies**

HEAD OFFICE:

## MANGALORE GANESH BEEDI WORKS

VINOBA ROAD :: MYSORE-5

Telephone: 20241

Telegrams: AROMA

ಮೂಲ ಲೇಖಕರು :
ಶ್ರೀ ಕಿಶೋರ ಜಾಧವ

# ಪ್ರಾಗೈತಿಹಾಸಿಕ ಮತ್ತು ಮೊಹೆಂಜೊ

ಕನ್ನಡಿಸಿದವರು :
ಎಸ್. ಎಸ್. ಭ್ಯಾತನಾಳ

ಒಂದೇ ಸಾಲಿನಲ್ಲಿ. ಒಂದೇ ಸಮನಾಗಿ. ಮೂಕ ಗತಿಯಿಂದ ಮೂಡಿದ ಹೆಜ್ಜೆ ಚಿಹ್ನೆಗಳನ್ನು ನೋಡಿದರೆ ಸಾವಿರಾರು ಮೈಲು ಮೂಡಿದಂತೆ ಭಾಸವಾಗುತ್ತಿದೆ. ಆದರೆ ಮರುಕ್ಷಣದಲ್ಲಿಯೇ ಬಹಳ ದೂರ ಹೋಗಿಯೇ ಇಲ್ಲ ಎಂದೆನಿಸುವುದು- ವಿನಾಯಕನಿಗೆ ಬಲು ಬೇಸರಿಕೆ ಬರುತ್ತಿದೆ ಅವನ ಬೇಸರಿಕೆಯ ವಿಶೇಷ ಕಾರಣವೆಂದರೆ ಮೋಡದ ಮರೆಯಲ್ಲಿ ಅಡಗಿದ ಸೂರ್ಯ ಕಣ್ಣಿಗೆ ಕಾಣುವುದೇ ಅಪರೂಪ. ಇದರಿಂದ ಅವನಿಗೆ ದಿಕ್ಕೇ ತೋಚದು; ದಿಕ್ಕುಗಳನ್ನೆಲ್ಲ ಶೂಲಕ್ಕೇರಿಸಿರಬಹುದೇ ಎಂದೇ ಯೋಚಿಸುವನು. ವಿನಾಯಕನ ಮನಸ್ಥಿತಿ ತೀರ ವಿಚಿತ್ರವಾಗಿದೆ. ಬೆಟ್ಟವನ್ನು ಏರುವಾಗ. ದೇಹದ ದಣುವಿಕೆ. ಮನದ ವಿಕಲತೆಗಳನ್ನು ನಿವಾರಿಸಲೆಂದು ಹಾಡುವ ಗೀತೆ. ಹೇಗೆ ಒಂದೊಂದು ಸಲ ಕೇವಲ ತನ್ನ ಮಟ್ಟಿಗೆ ಮಾತ್ರ ಕೇಳುವುದೋ. ಹಾಗೆಯೇ, ವಿನಾಯಕನಿಗೆ ತನ್ನದೆನ್ನುವದೆಲ್ಲವೂ ನೆನಪಾಗುತ್ತದೆ. ಯಾವಾಗ ಅವನಿಗೆ ಭೂತಕಾಲ ಸ್ಮರಣೆ ಕೆರಳುವುದೋ, ಆವಾಗಲೆಲ್ಲ ಅದನ್ನು ವಿಸ್ಮೃತಿಯ ಗರ್ಭದಲ್ಲಿ ಮರೆಯಬೇಕೆಂದು, ಅವನ ದೊಡ್ಡಣ್ಣ ಹೇಳುತ್ತಿರುತ್ತಾರೆ. ವಿನಾಯಕನ ದೊಡ್ಡಣ್ಣ ಅವನಿಗೆ ಹೆಚ್ಚಿಗೆ ಏನನ್ನೂ ಹೇಳುವುದಿಲ್ಲ; ಅವನೊಡನೆ ಯಾವುದೇ ಜಿಜ್ಞಾಸೆಯನ್ನೂ ಪ್ರಕಟಿಸುವುದಿಲ್ಲ. ವಿನಾಯಕನು ಯಾವ ರೀತಿ ಗಂಡಾಂತರದಲ್ಲಿ; ಮೋಸದ ಬಲೆಯಲ್ಲಿ ಸಿಲುಕಿದ್ದನೆಂಬುದರ ಬಗ್ಗೆಯೂ ಹೆಚ್ಚಿನ ವಿವರಗಳನ್ನು ದೊರಕಿಸುವ ಪ್ರಯತ್ನವನ್ನೂ ಮಾಡುತ್ತಿಲ್ಲ. "ನಿನ್ನನ್ನು ಇಲ್ಲಿಗೆ ಏಕೆ ಕರೆದು ತಂದಿದೆ ಎಂಬುದರ ಪೂರ್ಣ ಪರಿಜ್ಞಾನ ನಿನಗಿದೆ." ಸಿಟ್ಟಿನಿಂದ ಆಗಾಗ ಹೇಳುವ ಮಾತೆಂದರೆ ಇಷ್ಟೇ.

ದೊಡ್ಡಣ್ಣನು ಸಮಯ ಸಿಕ್ಕಾಗಲೆಲ್ಲ, "ಇವನು ಬಹಳ ಲಜ್ಜಾಸ್ಪದ ಕೆಟ್ಟ ಕೆಲಸ ಮಾಡಿದ್ದಾನೆಂದು," ತಮ್ಮನನ್ನು ವ್ಯಂಗ್ಯವಾಗಿ ತಿವಿಯುತ್ತಿರುತ್ತಾನೆ; ಮೂದಲಿಸುತ್ತಾನೆ. ವಿಶೇಷತಃ ಸಂಜೆಯ ಹೊತ್ತಿಗೆ ಆ ಎದುರಿಗಿನ ಫ್ಯಾಕ್ಟರಿಯಿಂದ, ಸುತ್ತುಮುತ್ತಲಿನ ವಾತಾವರಣದಲ್ಲಿ ಹರಡುತ್ತಿರುವ ಆ ಕರಿಯ ಹೊಗೆಯಲ್ಲಿಯೂ ಕೂಡ, ಅವನಿಗೆ, ಸಿಗರೇಟಿನ ಸಂಕಟಪ್ರಾಯವಾದ ವಾಸನೆ ನೆನಪಿಗೆ ಬರುತ್ತದೆ

"ಒಳ್ಳೆಯ ಕೆಲಸ ಸಿಕ್ಕಮೇಲೆ ಇನ್ನಾದರೂ ಹೊತ್ತಿಗೆ ಸರಿಯಾಗಿ ಫ್ಯಾಕ್ಟರಿಗೆ ಹೋಗಿ, ಕೆಲಸ ಮುಗಿದಾಕ್ಷಣ ಮನೆಗೆ ತಿರುಗಿ ಬರಲು ಪ್ರಾರಂಭಿಸು. ಇದಕ್ಕೂ ಹೆಚ್ಚಿಗೆ ನೀನು ಏನೂ ಮಾಡಬೇಡ." ಎಂದು ಹೇಳುವುದಷ್ಟೇ ಅಲ್ಲದೆ, ವಿನಾಯಕನಿಗೆ ನಿತ್ಯದ ದಿನಚರಿಯನ್ನೂ ಸಿದ್ಧಮಾಡಿಕೊಟ್ಟಿದ್ದಾನೆ ದೊಡ್ಡಣ್ಣ. ಎಲ್ಲವೂ ಹೊಸ ಹೊಸತಾಗಿರಲಿ ! ಎಂಬುದೇ ಅವನ ಉದ್ದೇಶ

ಎಲ್ಲಕ್ಕೂ ಮೊದಲು. ವಿನಾಯಕನು. ಧೂಳಿ ಮುಸುಕಿದ ಫರ್ನಿಚರಗಳನ್ನು ಝಾಡಿಸಿ ಸ್ವಚ್ಛ ಮಾಡುತ್ತಾನೆ. ಹೀಗೆ ಕೆಲಸ ಮಾಡುತ್ತಿರುವಾಗ ರೇಡಿಯೋದಲ್ಲಿಯ ಒಂದು "ವಾಲ್ವ" ಹೇಗೋ ಬಿಚ್ಚಿಹೋಗುತ್ತದೆ. ಹೀಗೆ ಆದಾಗ ಅವನಿಗೆ ತುಂಬಾ ಗಾಬರಿ. ಗೊಂದಲಮಯ ಸನ್ನಿವೇಶ ಬಾರದಿರಲೆಂದು ಬಾಗಿಲದವರೆಗೆ ಹೋಗಿ ನೋಡುತ್ತಾನೆ. ಕೆಲ ಸಮಯದ ನಂತರ ತನ್ನ ಜೊತೆಗೆ ತಂದಿದ್ದ ಫ್ರೇಮಿನಲ್ಲಿ ಸಿಕ್ಕುಬಿದ್ದ ತನ್ನ ಫೋಟೋದನ್ನು ಎಲ್ಲಿ ಹಾಕಬೇಕು ಎನ್ನುತ್ತ ಆ ಗೋಡೆಯ ಕಡೆಗೇ ನೋಡುತ್ತ ನಿಲ್ಲುವನು. ಆದರೆ ಅಲ್ಲಿ ಅಡಿಗೆ ಮನೆಯಿಂದ ತೂರಿ ಬರುತ್ತಿದ್ದ ಹೊಗೆಯ ಮೂಲಕ ಯಾವುದೂ ಸ್ಪಷ್ಟವಾಗಿ ಕಾಣುವುದಿಲ್ಲ. "ಎಲ್ಲವೂ ಒಂದೇ ರೀತಿಯಾಗಿವೆ" ಎಂದು ತನ್ನಷ್ಟಕ್ಕೆ ತಾನು ಗೊಣಗುಟ್ಟುತ್ತಾನೆ. ಇದೇ ಹೊತ್ತಿಗೆ ಸರಿಯಾಗಿ, ದೊಡ್ಡಣ್ಣನ ಮಕ್ಕಳು ಬರುತ್ತಾರೆ. ಕುತೂಹಲಭರಿತ ಮೌನವನ್ನು ಮುರಿಯಲು. ಯಾವುದೇ ಪ್ರೇರಣೆಯಿಲ್ಲದೆ, ಇವನೆದುರು ವಿನಾದರೂ ಗದ್ದಲ ಹಾಕಬೇಕೆಂದು ಯೋಚಿಸಿ, ಸ್ವಪ್ನ ಸೃಷ್ಟಿಯ ಪ್ರತಿಮೆಗಳಂತೆ ವಿನಾಯಕನ ಸುತ್ತಲೂ ತಿರುಗಲಾರಂಭಿಸುವರು. ಅತ್ತಿಗೆಯೂ ಸಹ ಇವನೆಡೆಗೆ, ಸಂದೇಹಾಸ್ಪದ ಮತ್ತು ಭಯಗ್ರಸ್ತ ನೋಟದಿಂದ ನೋಡುವಳು "ಇವನ ಹಸ್ತ ಸ್ಪರ್ಶದಿಂದಲೇ ಇಲ್ಲಿಯ ಎಲ್ಲ ವಸ್ತುಗಳ ಸ್ವರೂಪವೇ ಪರಿವರ್ತನೆ ಹೊಂದುತ್ತದೆ," ಎಂದು ಸೂಚಿಸುವಂತಿರುತ್ತಿವೆ ಆ ಕಣ್ಣುಗಳು ! ಅವಳು ಅದೇ ದೃಷ್ಟಿಯಿಂದ ನೋಡುತ್ತಾಳೆಂಬ ಭಯದಿಂದಲೇ ಆ "ವಾಲ್ವ" ಬಿಚ್ಚಿಬಿದ್ದಿತೆಂದು ವಿನಾಯಕನಿಗೆ ಅನಿಸುತ್ತಿದೆ.

ದೊಡ್ಡಣ್ಣನ ಹೆಂಡತಿಯ ಮುಖ 'ಹಳದಿ ಮಣ್ಣಿ'ನಂತಿದೆ. ಯಾವಾಗಲೂ ಗುಂಡಿಗಳು ಬಿಚ್ಚಿಯೇ ಇರುವುದರಿಂದ ಬ್ಲೌಜು ಜೋತಾಡುತ್ತಿರುತ್ತದೆ. ಹೊರಗೆ ಹಣಕಿ ಹಾಕುವ ಮೊಲೆಗಳಿಗೆ ಏನನ್ನೋ ಹಚ್ಚಿದ್ದಾಳೆ- ಬರಲಿರುವ ಹೊಸ ಜೀವಕ್ಕಾಗಿ–ಆ ಕಾರಣದಿಂದಲೇ ಬಗಲಲ್ಲಿ ಕುಳಿತ ಪುಟ್ಟ 'ಒಲ್ಲಿ' (ಮಗುವಿನ ಹೆಸರು) ಹಸಿವೆಯಿಂದ ಯಾವಾಗಲೂ ಚೀರುತ್ತಲೇ ಇರುವುದು. ಅದನ್ನು ರಮಿಸಲೆಂದು ಅತ್ತಿಗೆಯು 'ವಾಡೆ'ಯ (ದೊಡ್ಡ ಆವಾರವುಳ್ಳ ಭವ್ಯಮನೆ) ಕಡೆಗೆ ಬೆರಳು ಮಾಡಿ ತೋರಿಸಿ. "ನೋಡು. ನೋಡು, ಕೋಳಿ...ಕೋಳಿಮರಿ..." ಎನ್ನುತ್ತಾಳೆ. ದೊಡ್ಡಣ್ಣ ಕೋಳಿಗಳನ್ನು ಸಾಕಿದ್ದಾನೆ

ಅಣ್ಣನು ಹೇಳಿದಂತೆ ವಿನಾಯಕನು ಹೊತ್ತಿಗೆ ಸರಿಯಾಗಿ ವಾಡೆಯ ಹಿಂಬದಿಯ ಬಯಲಿನಲ್ಲಿ ಹೂಗಿಡಗಳ ಬೀಜ ಬಿತ್ತಲು ಪ್ರಾರಂಭಿಸುವನು. ಅಕಸ್ಮಾತ್ತಾಗಿ ಒಂದೆರಡು ಬೀಜಗಳು ಕೈಯಿಂದ ಕೆಳಗೆ ಬಿದ್ದರೆ. 'ನಿನ್ನ ಕಡಿಂದ ಏನೂ ಕೆಲಸ ಆಗೋದೇ ಇಲ್ಲ' ಎಂದು ಅಣ್ಣ ಕೂಗಿಕೊಳ್ಳುವನು. ಆ ಧ್ವನಿಯಲ್ಲಿ ಹುದುಗಿರುವ ತಾತ್ಸಾರ, ಕ್ರೋಧಗಳು ವಿನಾಯಕನಿಗೆ ತಿಳಿಯದೆ ಇಲ್ಲ. ಮೇಲಿಂದ ಮೇಲೆ ಇಂತಹ ಮಾತುಗಳನ್ನು ಕೇಳಿ ಕೇಳಿ, ವಿನಾಯಕನಿಗೆ

ಹೇಳುತ್ತ. ಸಾಹೇಬರ ಕೈಗಳಿಂದ ಕೊಡೆಗಳನ್ನು ತಿಕ್ಕತೊಡಗಿದರು.- 'ನಿಜ ಅಲ್ಲವೆ?'

'ಹೌದು' ಸಾಹೇಬರ ಮಾತು ಕೇಳಿದ್ದೇ ನೆನಪಿಲ್ಲ ಯೋ ಅಣ್ಣ ಹೂಗುಟ್ಟುತ್ತಾನೆ.

"ಮೊದಲು ದಾರಿಯಲ್ಲಿ ಭೆಟ್ಟಿಯಾಗುವವರು ಕೆಲವು...ನಂತರ ಅಕ್ಕಪಕ್ಕದಲ್ಲಿಯ ಗಿಡಗಳು... ನಂತರ ಕಟ್ಟಡಗಳು...ಫ್ಯಾಕ್ಟರಿ, ಈರೀತಿ ದಿನಾಲೂ ನೂರಾರು ಎಣಿಸುತ್ತ ಹೋಗುವುದು. ಆ ಮೇಲೆ ಮುಂಜಾನೆಯಿಂದ ಸಂಜೆಯವರೆಗೆ ದಣಿದು, ಕೊನೆಗೆ ಅಸಂಖ್ಯ ಶೂನ್ಯ ಕ್ಷಣಗಳಿಂದ ಹಿಸುಕಿ ಹೋಗುತ್ತೇನೆ. ಇಂತಹ ಎಷ್ಟೋ ಶೂನ್ಯ ಅಸಂಖ್ಯಾತ ಕ್ಷಣಗಳಿಂದ ಜರ್ಜಿತರಾಗಿದ್ದೇವೆ. ಆದರೆ, ನಾವು ಒಬ್ಬರನ್ನೊಬ್ಬರು ಅರಿತುಕೊಳ್ಳುವುದೇ ಇಲ್ಲ."

ಅದೇ ಹೊತ್ತಿಗೆ, ಕಿಟಕಿಯಿಂದ ಸೂರ್ಯನ ಪ್ರಕಾಶ ಸಾಹೇಬರ ಅಂಗಿಯ ಮೇಲೆ ಬೀಳುತ್ತದೆ; ನಂತರ ಎದುರಿನ ಕನ್ನಡಿಯ ಮೇಲೆ ಬೀಳುತ್ತದೆ. ಆಗ ಕೋಣೆಯ ಸ್ವರೂಪವೇ ಬದಲಾಗುತ್ತದೆ.

ದೊಡ್ಡಣ್ಣನಿಗೆ ಮಾತ್ರ ಸಾಹೇಬರ ಈ ಎಲ್ಲ ಮಾತುಗಳು ಅರ್ಥಹೀನ ಮತ್ತು ಅನಪೇಕ್ಷಿತ ಅನ್ನಿಸಿ, ಆಶ್ಚರ್ಯದಿಂದ ಯೋಚಿಸತೊಡಗುತ್ತಾನೆ

"ಬಹಳ ದೊಡ್ಡ ಸಾಹಸ ಮಾಡುವ ವಿಚಾರ ಅತಿಯಾಗಿ ಬರುತ್ತಿವೆ. ಇನ್ನೂ ಕೆಲವು ಕಾರ್ಯಕ್ಷೇತ್ರ ಅನ್ನು ವಿಸ್ತಾರ ಮಾಡುವ ಆಲೋಚನೆಯೂ ..." ಎನ್ನುತ್ತ ತಾವು ದೊಡ್ಡ ದಿಗ್ವಿಜಯ ಮಾಡಲು ಹೊರಟಿರುವೆ ಎಂಬ ಭಾವದಿಂದ ಸಾಹೇಬರು ಹೇಳಿಕೊಂಡರು.

"ವಿನಾಯಕ...ಸಾಹೇಬರೇ...ಅವನ ಬಗ್ಗೆ ನಾನು..." ಎನ್ನುವಾಗಲೇ ದೊಡ್ಡಣ್ಣ ತೊದಲುತ್ತಾನೆ

'ಓಹೋ! ವಿನಾಯಕ...ಮಿಸ್ಟರ್ ವಿನಾಯಕ ... ಎಷ್ಟೋ ವರುಷಗಳ ಹಿಂದೆ ಆವನ ಸ್ಮೃತಿಯಲ್ಲಿ ವಿನಾಯಕನ ಮೂರ್ತಿ. ಮುಸಮುಸಕಾಗಿ ಕಣ್ಣು ಮುಂದೆ ಬಂದಾಗ ಸಾಹೇಬರ ತುಟಿಗಳು ತಂತಾನೇ ಅಲುಗಾಡುತ್ತದೆ.

ದೊಡ್ಡಣ್ಣನಿಗೆ ಹೆಂಡತಿಯ ನೆನಪಾಗಿ ಒಳಗೆ ಹೋಗುತ್ತಾನೆ; ಆಗ ಮನೆಯಿಂದ ಚಹಾ ತರುತ್ತಾನೆ.

"ಇವ ಏನಾದರೂ ಮಾಡ್ತಾನೇ ಇರ್ತಾನೆ" ಎಂದು ತನ್ನಿಂದಾದ ತಪ್ಪನ್ನು ಸುಧಾರಿಸಿಕೊಳ್ಳುವ ಪ್ರಯತ್ನದಿಂದ "ಯಾವಾಗ ನೋಡಿದರೂ ಮನೆಗೆಲಸದಲ್ಲಿಯೇ ತೊಡಗಿರತಾನೆ" ಎಂದು ಸಾಹೇಬರಿಗೆ ಹೇಳುವನು.

"ಮಾಡಲೇಬೇಕು; ಮಾಡಲೇಬೇಕು" ಎನ್ನುತ್ತ ಸಾಹೇಬರು ಪ್ರಶ್ನಾರ್ಥಕ ದೃಷ್ಟಿಯಿಂದ ವಿನಾಯಕನನ್ನು ನೋಡುವರು.

'ಏನು?' ಎಂದು ವಿನಾಯಕ ಮುಖ ತಗ್ಗಿಸಿ ನಗೆಯನ್ನು ತಡೆದುಕೊಳ್ಳುತ್ತಾನೆ. ಎರಡೂ ಕೈಗಳಲ್ಲಿ ಚಹಾದ ಕಪ್ಪುಗಳನ್ನು ಹಿಡಿದ ದೊಡ್ಡಣ್ಣ ಗೊಂದಲಮಯ ಮನಸ್ಥಿತಿಯಲ್ಲಿಯೇ ಕಪ್ಪುಗಳನ್ನು ಟೇಬಲ್ ಮೇಲೆ ಸರಿಸುವನು. ಸಾಹೇಬರು ಮತ್ತೆ ಪ್ರಶ್ನೆ ಕೇಳುವರು

ಆಗ ವಿನಾಯಕನಿಗೆ ಮತ್ತೆ ತಡೆಯಲಾರದಷ್ಟು ನಗೆ ಬರುತ್ತದೆ. ಆದರೆ ಗಹಗಹಿಸಿ ನಕ್ಕರೆ ಅವರೆಲ್ಲ ಏನು ತಿಳಿದು ಕೊಂಡಾರು ಎಂದು ಸುಮ್ಮನಾಗುತ್ತಾನೆ.

ಖಾಲಿಯಾದ ಕಪ್ಪುಗಳ ಕಡೆಗೆ ನೋಡುವನು. ಅವರಿಬ್ಬರಲ್ಲಿ ಯಾರೂ ಅಲ್ಲಿ ಇಲ್ಲ. ಆಗ ವಿನಾಯಕನೂ ಹೊರಗೆ ಹೋಗಲು ಯೋಚಿಸುತ್ತಾನೆ.

"ಎಷ್ಟೋ ವರ್ಷಗಳಿಂದ ನಮ್ಮ ಫ್ಯಾಕ್ಟರಿಯಲ್ಲಿ ಯಾವುದಾದರೂ ಪರಿವರ್ತನೆ ಆಗಿದೆಯೋ ಹೇಗೆ ಎಂಬುದು ನಿಮಗೆ ತಿಳಿದಿದೆ. ಆದರೂ ನೋಡುವಾ" ಎನ್ನುತ್ತ ಸಾಹೇಬರು ಹೊರಟು ಹೋದ ಮೇಲೆ ದೊಡ್ಡಣ್ಣನು ಸಿಟ್ಟಿನಿಂದ. "ಇವ ನಮ್ಮ ಸಾಹೇಬ ಅಲ್ಲ; ಅಲ್ಲೇ ಅಲ್ಲ" ಎಂದು ಗುಣಗುಟ್ಟುವನು.

ಆಕಸ್ಮಿಕವಾಗಿ ಹಾಕಿದ ಪೆಟ್ಟಿನಿಂದ ನರಳುವವನಂತೆ, "ಇವ ನಮ್ಮ ಸಾಹೇಬ ಅಲ್ಲ" ಎಂದು ಪುನರುಚ್ಚರಿಸುತ್ತಾನೆ.

## ಶೋಕಸಭೆ

ಏನಾದರೊಂದು ಗೊಂದಲ ಆಗಿರಬೇಕು ಎಂದುಕೊಳ್ಳುತ್ತ, ದೊಡ್ಡಣ್ಣನ ಹೆಂಡತಿ, ಸಿಟ್ಟಿನಿಂದ ಅಲ್ಲಿ ಬಂದು ನಿಲ್ಲುತ್ತಾಳೆ; ಒಟ್ಟೆಂದು ತುಟಿ ಬಿಚ್ಚುವುದಿಲ್ಲ. ಇಂಥ ಸಮಯಗಳಲ್ಲಿ ಮತ್ತು ಉಳಿದ ವೇಳೆಗಳಲ್ಲಿಯೂ, 'ನಂದಿ' ('ವಾಡೆ'ಯಲ್ಲಿರುವ ತರುಣಿ )ಯು ನಮ್ಮ ಮನೆಗೆ ಬಂದು-ಹೋಗಿ ಮಾಡುವುದುಂಟು. ಅತ್ತಿಗೆ ಅವಳೊಡನೆಯೂ ಮಾತಾಡುವುದಿಲ್ಲ.

"ಸಾಹೇಬರ ಸಂಗತಿ ಇವರ ಸಲಿಗೆ ಬಹಳ ಅದ, ಇವರಿಬ್ಬರೂ ಒಂದೇ ರೀತಿಯ ವಿಚಾರದವರು; ಇಬ್ಬರ ಜೀವನದಲ್ಲಿಯ ನಂಬಿಕೆ; ವಿಶ್ವಾಸಗಳೂ ಒಂದೇ ಆಗಿವೆ" ಎನ್ನುತ್ತ ಖಿನ್ನವದನಳಾಗಿ ಅತ್ತಿಗೆ ತಿರುಗಿ ಹೋಗುತ್ತಾಳೆ.

ಆ ದಿನ, ಯಾವುದೋ ಒಂದು ತಿಳಿಯದ ಬೇನೆಯಿಂದ, ಕೋಳಿಗಳು ಮತ್ತು ಕೋಳಿ ಮರಿಗಳು ಒಂದೊಂದಾಗಿ ಸತ್ತುಹೋಗುತ್ತವೆ. ವಿನಾಯಕ ಎರಡೂ ಕೈಗಳಿಂದ ಅವುಗಳ ಶವಗಳನ್ನು ಎತ್ತಿಕೊಂಡು ಹೋಗುತ್ತಾನೆ; ಮತ್ತೆ ಒಂದು ಕ್ಷಣ ಸ್ತಬ್ಧನಾಗಿ, ಮೂಕನಾಗಿ ನಿಲ್ಲುತ್ತಾನೆ. ಸಾಹೇಬ ಬಂದಾಗ ಎರಡೂ ಕೈಗಳಲ್ಲಿ ಎತ್ತಿಕೊಂಡ ಕಪ್ಪುಗಳ ನೆನಪಾಗುತ್ತದೆ. 'ನಂದಿ'ಯು ಎಲ್ಲಿಯಾದರೂ ನೋಡಿಬಿಟ್ಟಾಳು ಎಂಬ ಭೀತಿಯಿಂದ ಮೈಮುದುಡಿಕೊಂಡು ನಡೆಯುತ್ತ ಮುಂದೆ ಹೋಗಿ, ಹುಲ್ಲಿನಲ್ಲಿ ಹೆಣಗಳನ್ನು ಇಡುತ್ತಾನೆ.

'ನಂದಿ'ಯು ಆಗ 'ವಾಡೆ'ಯ ಹಿಂಬದಿಯಲ್ಲಿರುವಳು. ದೊಡ್ಡಣ್ಣನ ಮನೆಯ ಆಸುಪಾಸು ಯಾವುದೇ ಒಂದು ಅಶುಭ ಗ್ರಹ ಅಲೆದಾಡುತ್ತಿದೆ ಎನ್ನುವವಳಂತೆ ಕ್ವಚಿತ್ತಾಗಿ ನಮ್ಮ ಮನೆಗೆ ನುಗ್ಗುತ್ತಾಳೆ. ಬಾಗಿಲ ಮಧ್ಯಕ್ಕೆ ಹಳೆಯ ಕಾಲದ ಶಿಲಾಪ್ರತಿಮೆಯ ಭಂಗಿಯಲ್ಲಿ ನಿಂತುಕೊಂಡು 'ವಿನಾ ವಿನಾ' (ವಿನಾಯಕನನ್ನು ಕರೆಯುವುದೇ ಹೀಗೆ ಅವಳು) ಎಂದು ಕರೆಯುವಳು. ಅವಳ ಧ್ವನಿ ಸುತ್ತಲೂ ಪ್ರತಿಧ್ವನಿತವಾಗುತ್ತದೆ. ಯಾವ ದಿಕ್ಕಿನಿಂದಲೂ ತನ್ನ ಕರೆಗೆ ಉತ್ತರ ಬಾರದಾಗಲು. ವಿವಶಳಾಗಿ ಮನೆಬಿಟ್ಟು ಹೊರಡುತ್ತಾಳೆ. ವಿನಾಯಕ ಅವಳನ್ನು ನೋಡಿದಾಗ, ಅವಳು ದಾರಿಯಲ್ಲಿ ಸ್ಫೂರ್ತಿಯಿಂದ ನಗುತ್ತ, ನಲಿಯುತ್ತ ಕಣ್ಮರೆಯಾಗುವಳು. ಅವಳ ಹಿಂದಿನಿಂದ ಅವಳ ನಿದರ್ಶಿತ ನಗೆಯ ಅಲೆಗಳು ಗಾಳಿಯಲ್ಲಿ ತೇಲುವಂತೆ ಅನ್ನಿಸುತ್ತದೆ. ಮಡಿಗಳಲ್ಲಿ ಬಿತ್ತಿದ ಬೀಜ ಅಂಕುರಿಸಿವೆಯೋ ಹೇಗೆ ಎಂದು ನೋಡಲು ವಿನಾಯಕ ಅಲ್ಲಲ್ಲಿ ತಿರುಗಾಡುತ್ತಿರುತ್ತಾನೆ. ಇನ್ನೇನು ಅವನು ಏನಾದರೂ ಕೆಲಸ ಮಾಡಬೇಕು ಅನ್ನುವಷ್ಟರಲ್ಲಿಯೇ, ಅವನ ಬೆನ್ನು ಚಪ್ಪರಿಸಿ, ನಂದಿಯು ಕೈ ಹಿಡಿದು ಎಳೆದುಕೊಂಡು ಹೋಗಿ ತನ್ನ ಮನೆಯ ಪಡಸಾಲೆಯಲ್ಲಿ ಕೂಡಿಸುವಳು. ನಿಟ್ಟುಸಿರೊಂದನ್ನು ಬಿಟ್ಟು, ಭಾಷಣ ಮಾಡುವವರಂತೆ ಒಂದೇಸವನೆ ಮಾತನಾಡತೊಡಗುವಳು. ಆಗ ಅವಳ ತುಟಿಗಳಿಂದ ಪಟಪಟನೆ ಉದುರುವ ಶಬ್ದಗಳು, ವಿನಾಯಕನಿಗೆ ನೀರಿನ ಅಲೆಗಳ ಮೇಲೆ ಉರುಳುವ ಗುಳ್ಳೆಗಳಂತೆನಿಸುತ್ತಿವೆ. ಏನೂ ಮಾಡಲು ತೋಚದೆ ಬೆಪ್ಪನಂತೆ ನಿಲ್ಲುತ್ತಾನೆ. ಇಂತಹದೇ ಒಂದು ಪ್ರಸಂಗದಲ್ಲಿ ನಂದಿಯು ತನ್ನ ಮನದಾಳದಲ್ಲಿ ಆ ವರೆಗೆ ಹುದುಗಿಸಿದ್ದ ಭಾವನೆಗಳನ್ನು ಪ್ರಕಟಗೊಳಿಸುತ್ತ "ನಡೆ ...ನಾವು ಇಲ್ಲಿಂದ ಓಡಿಹೋಗೋಣ. ನೀನು ಎಲ್ಲಿಂದ ಬಂದಿರುವಿಯೋ ಆಕಡೆಗೆ..." ಎಂದು ಹೇಳಿದ್ದಳು. ಅವಳ ಮಾತಿನಿಂದಾದ ಆಶ್ಚರ್ಯವನ್ನು ಹೊರಗೆ ತೋರಗೊಡದೆ, ಅವಳನ್ನೇ ನೋಡುತ್ತ ಉತ್ತರಿಸಿದ್ದ: "ಇಲ್ಲ ನಂದೀ... ಎಲ್ಲವೂ ಒಂದೇ ರೀತಿ ಇದೆ." "ಏನು ? ಯಾಕೆ ?" ಎನ್ನುತ್ತ ನಂದಿಯು ತೀರ ಹತಾಶಳಾಗಿ, ಶೂನ್ಯದೃಷ್ಟಿಯಿಂದ ಬೇರೆಡೆ ನೋಡತೊಡಗಿದ್ದಳು. ವಿನಾಯಕನಿಗೆ ಏನು ಮಾಡಬೇಕೆಂಬುದೇ ತಿಳಿಯದೆ, ಕಾಲಿಗೆ ಹತ್ತಿದ ಮಣ್ಣನ್ನು ಕೆದರಲಾರಂಭಿಸಿದ್ದನು. ಕೊನೆಗೆ, "ಒಂದು ದಿನ ಎಂದಾದರೂ, ಹೊತ್ತು ಬಂದಾಗ ನಾನು ನಿನಗೆ ಎಲ್ಲ ಹೇಳುತ್ತೇನೆ" ಎಂದಿಷ್ಟೇ ಅಂದಿದ್ದನು.

ನಂದಿ ತನ್ನ ಎರಡೂ ಕೈಗಳಿಂದ ಅವನ ಮುಖದ ಮೇಲೆ ಕೈಯಾಡಿಸಿ, ಅವನ ಕೊಡೆಗಳ ಮೇಲೆ ಕೈಯಿಟ್ಟಳು. ವಿನಾಯಕನ ನಿರುತ್ಸಾಹದ ನೀರಸ ಉತ್ತರದ ರಹಸ್ಯವನ್ನು ಹುಡುಕುವ ಪ್ರಯತ್ನ ಮಾಡತೊಡಗಿದಳು. ಅದೇ ವೇಳೆಗೆ ಸರಿಯಾಗಿ, ಅತ್ತಿಗೆಯು ಚೀರಿದಳು. ಗಾಬರಿಗೊಂಡು ವಿನಾಯಕ ನಂದಿಯನ್ನು ಬಿಟ್ಟು ಓಡಿಬರುತ್ತಾನೆ. ಅವಳ ನರಳುವಿಕೆಯಿಂದ, ಚಿಲ್ಲಿ ಅವಳ ಮೊಲೆಗಳನ್ನು ಜೋರಾಗಿ ಕಚ್ಚಿದ್ದನೆಂದು ಅವನಿಗೆ ತಿಳಿಯಿತು. ಕಚ್ಚಿದ ವೇದನೆಯನ್ನು ತಾಳಲಾರದೆ ಅತ್ತಿಗೆ ಹಾಸಿಗೆಯಲ್ಲಿಯೇ ಹೊರಳಾಡುತ್ತಿರುತ್ತಾಳೆ. ಕೋಣೆಯಲ್ಲಿ ಕತ್ತಲೆಯಿರುವುದರಿಂದ ಅವನಿಗೇನೂ ಕಾಣಿಸುತ್ತಿಲ್ಲ. ಈಗ ಎಲ್ಲವೂ ಶಾಂತವಾಗಿದ್ದಂತೆ ಅನಿಸಿತು. ಗಾಢವಾದ ನಿದ್ದೆಯಲ್ಲಿಯೂ ಸಹ, ಚಿಲ್ಲಿಯ ಮುಖದ ಮೇಲೆ ನಿರ್ಮಲಹಾಸ್ಯ ಲಾಸ್ಯವಾಡುತ್ತಿದೆ. ಅದನ್ನು ನೆನೆದು ವಿನಾಯಕನಿಗೂ ನಗೆ ಬರುತ್ತದೆ. ಆದರೆ ತನ್ನ ಬಗೆಗಿರುವ ಕೆಲವು ಭಯಾನಕ ಕಲ್ಪನೆಗಳ ಜಾಗ್ರತಗೊಂಡು ಕೆರಳಿದಾಗ, ನಗೆ ತಂತಾನೇ ಮರೆಯಾಗುತ್ತದೆ

ದೊಡ್ಡಣ್ಣ ಅಂದು ನಿತ್ಯದಕಿಂತಲೂ ಮೊದಲೇ ಮನೆಗೆ ಬರುತ್ತಾನೆ. ಅದೇ ವಿನಾಯಕನಿಗೆ ಆಶ್ಚರ್ಯ. ಅವನ ನಿತ್ಯದ ಬೈಠಕಿನಲ್ಲಿ ನಡೆದ ವಿಷಯಗಳೆಂದರೆ, ಕೋಳಿ ಮತ್ತು ಕೋಳಿಮರಿಗಳ ಅವತಾರ ಮುಗಿದ ಕಾರಣ ಮತ್ತು ಅವನ ಹೆಂಡತಿಯ ಮೊಲೆಗಳನ್ನು

'ಬಿಲ್ಲಿ'ಯ ಕಚ್ಚಿದ ಕಾರಣಗಳು. ಇಲ್ಲಿಗೆ ವಿಚಾರಣೆ ಮುಕ್ತಾಯಗೊಳ್ಳುತ್ತದೆ. ಆದರೆ ಅಣ್ಣನಿಗೆ ಮಾತ್ರ ಇದಾವುದರ ಪರಿವೆಯೇ ಇದ್ದಂತಿಲ್ಲ. ಏಕೆಂದರೆ ಯಾವುದೋ ಒಂದು ಗಡಿಬಿಡಿಯಲ್ಲಿದ್ದಾನೆ. "ಬೇಗ ಮಾಡು. ಇವತ್ತು ಸಾಹೇಬ ಸಿನೆಮಾ ತೋರಿಸುವವನಿದ್ದಾನೆ" ಇದು ಹೆಂಡತಿಗೆ ಹೇಳಿದ ಮಾತು.

ಅತ್ತಿಗೆಯು ಬಗಲಲ್ಲಿ 'ಬಿಲ್ಲಿ'ಯನ್ನೆತ್ತಿಕೊಂಡು ಗಂಡನ ಹಿಂದೆ ಹೋಗುವಳು. ಮತ್ತೆ ಏನೋ ನೆನಪಾದವರಂತೆ 'ರಾತಿ' ಬೇಗನೆ ತಿರುಗಿಬಂದು ಅವಳ ಕಿವಿಯಲ್ಲಿ ಹೇಳುತ್ತಾನೆ: ಒಂದು ಕೋಳಿ ಮರಿಯನ್ನು ತಂದು ನಾನು ಸುರಕ್ಷಿತವಾಗಿ ಆ ಮೂಲೆಯಲ್ಲಿಟ್ಟಿದ್ದೇನೆ, ಇನ್ನೂ ಅದು ಸತ್ತಿಲ್ಲ ನೀವು ಹಂಗೇ ಅದನ್ನು ಒಗೆದಿದ್ದೀರಿ' !

'ಹಾಂ!' ಆಶ್ಚರ್ಯಚಕಿತನಾಗಿ, ವಿನಾಯಕ ಕೈಯಲ್ಲಿ ಕಂದೀಲು ಹಿಡಿದುಕೊಂಡು ಬರುತ್ತಾನೆ. ಮರಿಯ ಮುಚ್ಚಿದ ಎರಡು ಕಣ್ಣುಗಳು ಪೂರ್ಣ ವಿರಾಮದ ಚಿನ್ಹೆಯಂತೆ ಕಾಣುತ್ತವೆ. ಆಗ, ವಿನಾಯಕ ಸಂತೋಷದಿಂದ ನಲಿದಾಡುವನು. ಆ ಮರಿಯನ್ನು ಕೋಣೆಯ ಮಧ್ಯಭಾಗಕ್ಕೆ ತಂದಿಡುವನು. ಒಂದು ಕ್ಷಣ ಅವನಿಗೆ ಸೃಷ್ಟಿಯ ಸಂಪೂರ್ಣ ಚಲನೆಯೇ ನಿಂತುಹೋದಂತೆ ಭಾಸವಾಗುತ್ತದೆ. ಅಷ್ಟರಲ್ಲಿಯೇ, ಮರಿಯು ತನ್ನ ಕೊರಳನ್ನು ಅಲುಗಾಡಿಸುವುದು! ಮತ್ತು ಅದರ ಅಸ್ಪಷ್ಟವಾದ ಶ್ವಾಸೋಚ್ಛ್ವಾಸ ಕ್ರಿಯೆಯಲ್ಲಿ ವಿನಾಯಕ ಅದರ ಸುತ್ತಲೂ ತಿರುಗುತ್ತಾನೆ. ಚಪ್ಪಾಳೆ ತಟ್ಟಿ ಹಾಡುತ್ತಾನೆ. ಓಡುತ್ತ ಹೋಗಿ ನಂದಿ ಮನೆಯ ಬಾಗಿಲಲ್ಲಿ ನಿಂತು, 'ನಂದೀ, ನಂದೀ' ಎಂದು ಕರೆಯುತ್ತಾನೆ.

"ಹೊತ್ತು ಬಂದಾಗ ಹೇಳುತ್ತೇನೆ ಎಂದು ಅಂದಿರಲಿಲ್ಲವೇ? ಬಾ, ಈಗ..." ಎಂದು ಒಂದೇ ಉಸಿರಿನಲ್ಲಿ ಹೇಳಿದೊಡನೆ, ನಂದಿ ಅವನ ಬೆನ್ನ ಹಿಂದಿನಿಂದ ಬರುತ್ತಾಳೆ

ನಂದಿಯು ಕೋಣೆಯಲ್ಲಿ ಬಂದಾಗ, ಕೋಳಿ ಮರಿಯ ಕಡೆಗೆ ಕೈಮಾಡಿ ತೋರಿಸಿ, "ನೋಡು ನಂದೀ, ಅದೇನಿದೆ? ನೋಡು" ಎನ್ನುತ್ತಾನೆ.

ಮೊದಲ ಸಲಕ್ಕೆ ನಂದಿಯು ಕುತೂಹಲದಿಂದ ಒಂದೇ ಸವನೆ ಕೋಳಿಮರಿಯನ್ನೇ ನೋಡುತ್ತಾಳೆ. ಮೃದುವಾಗಿ ಮರಿಯನ್ನು ತಟ್ಟುವಳು; ಅದರ ಮೈಮೇಲೆ ಕೈಯಾಡಿಸುವಳು "ಸತ್ತ ಕೋಳೀಮರಿ" ಅನ್ನುತ್ತಾಳೆ.

"ಏನು? ಇಲ್ಲ. ಅದು ಸತ್ತಿಲ್ಲ." ವಿನಾಯಕ ಜೋರಾಗಿ ಚೀರುತ್ತಾನೆ

"ನಿನಗೆ ಭ್ರಮೆ. ಕಣ್ಣು ಬಿಟ್ಟು ನೋಡು. ನಾನು ಹೋಗುತ್ತೇನೆ. ನನಗೆ ನಿದ್ದೆ ಬರುತ್ತಿದೆ. ಬೇಕಾದರೆ ಬಾ" ಎನ್ನುತ್ತ ಹತಾಶಳಾಗಿ ನಂದಿ ಅಲ್ಲಿಂದ ಹೊರಡುತ್ತಾಳೆ. ನಂದಿಯ ಈ ರೂಪವನ್ನು ಅವನೆಂದೂ ಕಂಡಿರಲಿಲ್ಲ.

ವಿನಾಯಕನಿಗೆ ಏನೂ ತಿಳಿಯುವುದಿಲ್ಲ. ಕೋಳೀ ಮರಿಯನ್ನು ಎತ್ತುತ್ತಾನೆ; ಒಮ್ಮೆಲೇ ಹಿಂದಕ್ಕೆ ಸರಿಯುತ್ತಾನೆ ನಂದಿಯನ್ನು ನೋಡುವ ಆಸೆಯಾಗುತ್ತದೆ. ಅವಳು ಕಾಣಿಸುವುದಿಲ್ಲ; ಕತ್ತಲೆಯಲ್ಲಿಯೇ ದಿಟ್ಟಿಸಿ ನೋಡುತ್ತಾನೆ. ಕೋಳಿಮರಿ ಬದುಕಿರಲಿಲ್ಲ ಎಂಬುದು ಜ್ಞಾಪಕ ಬರುವುದು. ಅದರ ಅಂತ್ಯ ಸಂಕಟವನ್ನು ಕಣ್ಣಾರೆ ಕಂಡಿದ್ದಾನೆ. 'ಎಂದೂ ಏನೂ ಅಂತರವಿಲ್ಲ' ಎನ್ನುತ್ತ ಮರಿಯನ್ನು ಹುಲ್ಲಿನಲ್ಲಿ ಮುಚ್ಚುತ್ತಾನೆ.

ಆಗ ಹುಲ್ಲಿನಡಿಯಲ್ಲಿ ಏನೋ ಸಂಚರಿಸಿದಂತೆ ಅನಿಸುವುದು. ಚಳಿಯಿಂದಾಗಿ ಮೈಯಲ್ಲಿ ಒಂದು ಬಗೆಯ ನಡುಕು ಹುಟ್ಟುತ್ತದೆ. ಆಗ ಅವನ ಸುತ್ತಲೂ ಸತ್ತುಬಿದ್ದಿದ್ದ ಕೋಳಿ ಮತ್ತು ಕೋಳಿ ಮರಿಗಳು ಅವನನ್ನು ಸುತ್ತುಗಟ್ಟಿ ಹಾರಾಡುತ್ತವೆ; ಕೂಗುತ್ತವೆ. ವಿನಾಯಕನಿಗೆ ಅಂಜಿಕೆ; ಓಡುತ್ತಾನೆ ಅಲ್ಲಿಂದ. ಅವೂ ಕೂಡ ಸಾಲುಸಾಲಾಗಿ ಇವನನ್ನು ಬೆನ್ನಟ್ಟಿ ಬರುತ್ತವೆ. ಅವು ತಮ್ಮ ಚೂಪಾದ ಕೊಕ್ಕಿನಿಂದ ತನ್ನ ಮೈಯನ್ನೇ ಕುಕ್ಕಿ ಕಚ್ಚುತ್ತಿರುವಂತೆ ಭಾಸವಾಗುತ್ತದೆ. ಮನೆಗೆ ಬಂದವನೇ ಧಡಾರನೇ ಬಾಗಿಲು ಹಾಕುತ್ತಾನೆ

ಬೆಳಗಾದಾಗ ವಿನಾಯಕ ವಾಡೆಯಲ್ಲೆಲ್ಲ ಹುಡುಕುತ್ತಾನೆ. ಕೋಳಿ ಮರಿಗಳು ತಿಂದ ಬೀಜಗಳ ಹೊರತು ಮತ್ತೇನೂ ಕಾಣುವುದಿಲ್ಲ, ಅರಳಿದ ಹೂವೊಂದು ನಗುವಂತೆ ತೋರುತ್ತಿದೆ. ಆ ಹೂವು ನಿಸ್ಸೀಮವಾದ ಆಗಸದತ್ತ ನೋಡುತ್ತ, ಪ್ರಳಯದ ಪ್ರತೀಕ್ಷೆ ಮಾಡುವವರಂತೆ ಕಾಣುತ್ತಿದೆ.

ಮರಾಠಿ ಕಥೆ





ಮೂಲ :
ಪು. ಭಾ. ಭಾವೆ

ಕನ್ನಡ ಅನುವಾದ :
ಶೇಷ

ರಾತ್ರಿಯೆಲ್ಲ ಮಳೆ ಸುರಿಯುತ್ತಿದೆ. ದೊಡ್ಡ ಸರುವು ಇದೀಗ ಬಂದು ಹೋಯಿತು. ಎಲ್ಲೆಡೆಗೂ ಆರ್ದ್ರ, ಹಸಿರು, ಬೀದಿಗಳೆಲ್ಲ ತೊಳೆದಿವೆ; ಹೊಳೆಯುತ್ತಿವೆ. ಧೂಳ, ತುಂಬಿದ ಭೂಮಿಯ ಮೇಲೆ ಹಸಿರು ಹಾಸಿದೆ ಹಾಸಿದೆ. ಬೇಸಿಗೆಯಲ್ಲಿ ಎಲ್ಲವೂ ಸತ್ತಹಾಗೆ, ಮುರುಟಿಕೊಂಡ ಹಾಗೆ ಅನಿಸುತ್ತಿದೆ. ಅಂತಹುದರಲ್ಲಿಯೇ ಮತ್ತೆ ಜೀವಕಳೆಯ ಹಸಿರು ಹೊಮ್ಮಿದೆ. ಈ ಹಚ್ಚಹಸಿರನ್ನು ಸುಮ್ಮನೆ ನೋಡುತ್ತ ನಿಂತರೂ ನಮ್ಮ ಆಯುಷ್ಯ ಬೆಳೆಯಬಹುದೆಂದು ಅನಿಸುತ್ತಿದೆ.

ಮುಂಗಿಲ ಕೆಳಗೆ ನಿಂತು ಹುಬ್ಬೇರಿಸಿ ನೋಡಿದೆ. ಮನೆಯ ಹೊರಗೆ ಬಂದು ನೋಡುತ್ತೇನೆ; ಹಾಗೆಯೇ ನೋಡುತ್ತಲೇ ಇರುತ್ತೇನೆ. ಮಳೆ ಸ್ವಲ್ಪ ಹೊರವಾಗಿದೆ. ಆಕಾಶದಲ್ಲಿ ಕರಿಯ ಮೋಡಗಳು ಒಂದೇ ಸವನೆ ಓಡುತ್ತವೆ; ಸಾಲುಸಾಲಾಗಿ ಓಡುತ್ತವೆ. ಅವಕ್ಕೆ ಕೊನೆಮೊದಲಿಲ್ಲ. ನೀಲಿ ಕಿಡಿಕಿಗಳನ್ನೂ ಮರೆಮಾಡಿ ಸಾಗುತ್ತಿವೆ; ಓಡುತ್ತಲೇ ಇವೆ. ಆಗಸವೆಲ್ಲ ಕಪ್ಪುಮೋಡಗಳಿಂದ ಮುಚ್ಚಿದೆ. ಮೋಡಗಳಿಗೆ ಕಪ್ಪಿನಮೇಲೆ ಕಪ್ಪುಬಣ್ಣ ಬಳೆದಂತಿದೆ. ಇಷ್ಟು ದೊಡ್ಡ ಮೋಡವೊಂದು ಕಪ್ಪಿನಲ್ಲಿಯೇ ಕಪ್ಪಾಗಿ ಎದ್ದು ಕಾಣುತ್ತಿದೆ. ಸೂರ್ಯ ಎಲ್ಲಿಯೋ ಅಡಗಿರುವನು. ಬೆಳಗಾದರೂ ಅವನ ದರ್ಶನವಾಗಿಲ್ಲ. ಪೃಥ್ವಿಯಮೇಲೆ ಇವತ್ತು ಮುಗಿಲುಗಳದ್ದೇ ಸಾಮ್ರಾಜ್ಯ. ಮಳೆ ನಿಂತು ನಿಂತು ಬರುತ್ತಲೇ ಇದೆ. ಓಡಾಡುವ ದಾರಿಯೂ ಮಂದವಾಗಿ ಕಾಣುತ್ತಿದೆ ಎಲ್ಲ ಕಡೆಗೂ ಒಂದು ಬಗೆಯ ಸ್ತಬ್ಧತೆ ಹಬ್ಬಿದೆ. ಈ ಮಧ್ಯೆ ಕೋಳಿಯೊಂದು ಉಚ್ಚಸ್ವರದಲ್ಲಿ ಕೂಗಿತು ಮತ್ತು ಆ ಶಾಂತತೆಯನ್ನು ಕದಡಿತು. ಗಂಟಲು ಉಬ್ಬಿಸಿಕೊಂಡು ಎಲ್ಲಿಯಾದರೂ ಕೂಗ... ಆ ಕೋಳಿ ನನ್ನ ಮನಸ್ಸಿಗೆ [illegible] ಕೋಳಿಯ ದನಿ [illegible] ಶಾಂತತೆ ಮತ್ತೆ ಗಾಢವಾಗಿದೆ. ನೀರಿನಲ್ಲಿ ಮೇಣ ಹಪ್ಪುಗಟ್ಟಿದಂತೆ. ಈ ಮೌನದ ಮಡಿಲಲ್ಲಿ ನಾನೊಬ್ಬನೇ ನಿಂತಿರುವೆ. ಮಳೆಯ ಸಿಡುಕಲೊಂದು ನನಗೆ ತಾಗಿತು; ಮೈಗೆ ಹಿತವೆನಿಸಿತು. ತಿರುಗಿ ಮನೆಯಕಡೆಗೆ ನೋಡಿದೆ. ನೀರಿನ ಹನಿಗಳು ಹೆಚ್ಚಾಗಿಯೇ ಬೀಳುತ್ತಿವೆ. ಈ ಕಿರಿಯ ಮನೆಯು ಇದೀಗ ಸ್ನಾನಮಾಡಿ ಬಂದು ನಿಂತ ಮನುಷ್ಯನಂತೆ ಗೋಚರಿಸಿತು. ಮಹಡಿಯ ಮೇಲಿನ ನನ್ನ ಸ್ವಚ್ಛ, ಶುಭ್ರ ಹಾಸಿಗೆ ಕಂಡಿತು. ಮೆತ್ತಗಿನ ನೀಲಿ ತಲೆದಿಂಬು, ಮಂಚದ ಪಕ್ಕದಲ್ಲಿಯ ಅಡ್ಡಣಿಗೆ, ಅಡ್ಡಣಿಗೆಯ ಮೇಲಿನ ದೀಪ, ಪುಸ್ತಕ, ಬಿಹಾರಿನ ರೇಶಿಮೆ ಚಾದರು ಮಳೆಗಾಲದ ಚಳಿಗೆ ಇದು ಅತ್ಯವಶ್ಯ.

ಒಂದುಕ್ಷಣ, ನನಗೆ ಗುಂಗು ಬಂದಂತಾಯಿತು. ಎದುರಿಗಿನ ರಸ್ತೆ ನೋಡಿದೆ. ರಸ್ತೆಯ ದಂಡೆ ರೊಜ್ಜಾಗಿದೆ. ಇದರಮೇಲೆ ಮನುಷ್ಯರ ಪಾದಗಳು ಮೂಡಿವೆ. ಕೆಲವು ಗುರುತುಗಳು ಸಣ್ಣವು; ಕೆಲವು ದೊಡ್ಡವು. ಈ ಹೆಜ್ಜೆಗಳು ಯಾರವು ಇರಬೇಕು ? ಇಷ್ಟು ನಸುಕಿನಲ್ಲಿ ಈ ರಸ್ತೆಯಿಂದ ಯಾರು ಹೋಗಿರಬಹುದು ? ಎಲ್ಲಿಂದ ಬಂದರು ಮತ್ತು ಎಲ್ಲಿಗೆ ಹೋದರು ? ಅದಾವುದೂ ನನಗೆ ತಿಳಿಯದು. ರಸ್ತೆಯ ಮಧ್ಯದಲ್ಲಿ ಮೂಡಿದ ಕೆಲವು ಹೆಜ್ಜೆಗಳನ್ನಷ್ಟೇ ನಾನು ನಿರೀಕ್ಷಿಸುತ್ತಿದ್ದೆ. ಈಗ ಸ್ಪಷ್ಟ ಕಾಣಿಸುವುವು. ಕೆಲ ಮಳೆ ಕಾಣೋದಿಲ್ಲ. ಅಳಿಸಿದಂತಾಗಿ ಕಾಣದಂತೆಯೇ ಆಯಿತು. ಆದರೆ ಈ ಕಾಲು ಯಾರವು ? ಕೆಲವೆಡೆ ಗಟ್ಟಿಯಾಗಿ ಊರಿದ, ಕೆಲವೆಡೆ ಹಗುರಾಗಿ ಕಾಲಿಟ್ಟು ಹೋದ ಗುರುತುಗಳನ್ನು ನಾನು ನೋಡುತ್ತಲೇ ನಿಂತೆ ಅವುಗಳಲ್ಲಿ ನಟ ನೋಟ ಅಲುಗಾಡಲಿಲ್ಲ. ಸ್ಪಷ್ಟವಾಗಿ ಕಾಲೂರಿ ನಡೆದು ಹೋದ ಯಾವನೋ ಅಜ್ಞಾತ ವ್ಯಕ್ತಿಯ ಕಡೆಗೆ ನನ್ನ ಮನಸ್ಸು ಹರಿಯಿತು ಯಾವುದೋ ಬಂಗಲೆಯ ಸೇವಕನ ಮನೆಯಲ್ಲಿ ಬೀಸುವ ಸಪ್ಪು; ಯಾರೋ [illegible] ಹಾಡುವ ಧ್ವನಿಯ ಏರಿಳಿತ, ಚಿಕ್ಕವನಿರುವಾಗ ನದಿಯ ದಾರಳಿ ನೆಲ್ಲಿ ಮೂಡಿದ ನನ್ನ ಪಾದಗಳು ಮಸಕ ಮೂಡಿದ ನಿಂತವು. ಒಂದ್ಕಾಲಿನಿಂದಲೇ ಓಡಿಹೋಗಿ ನನ್ನ ತಾಯಿಯ ತೊಡೆಯಮೇಲೆ ಮಲಗಿದ್ದೆ. ಬೀಸುವ ಕಲ್ಲು ಗರಗರ ತಿರುಗುತ್ತಲೇ ಇತ್ತು. 'ಓವಿ' ಹಾಡುವ ಧ್ವನಿ ಏರುತ್ತಿತ್ತು. ನದಿಯ ದಂಡೆಯಲ್ಲಿಯ ಹೆಜ್ಜೆಗಳು ಈಗಿಲ್ಲ. ಕಾಲು ದೊಡ್ಡವಾಗುತ್ತ ಹೋಗುವುವು. ಈಗ ನನ್ನ ಕಾಲುಗಳನ್ನೇ ನೋಡಿಕೊಂಡೆ. ಇವು ನನ್ನ ಕಾಲುಗಳೇ ? ಎಷ್ಟು ದೊಡ್ಡವಾಗಿವೆ; ಮತ್ತು ಎಷ್ಟು ಪುಷ್ಟವಾಗಿವೆ ! ತಾಯಿಯ ತೊಡೆಯ ಮೇಲಿಂದ ನನಗೆ ಇಷ್ಟು ಕಂಡಿತು: ಬೀಸುವ ಸಪ್ಪಳ; ಮೋಡ ಗುಡುಗಿತು. ಉಗುಳು ನುಂಗಿದೆ; ಎಚ್ಚತ್ತೆ. ಕೊಕ್, ಕೊಕ್ ಒದರುತ್ತ ಕೋಳಿಯೊಂದು ಎದುರಿಗೇ ಓಡಿತು. ಮಿಂಚೊಂದು ಸುಳಿಯಿತು; ವಿವಿಧ ಬಣ್ಣಗಳ ಪ್ರಕಾಶವೇ ಪಸರಿಸಿತು. ನಾನು ಆಕಾಶವನ್ನು ನೋಡಿದೆ. ಮೋಡಗಳ ಮರೆಯ ಮಸಳಿಸಿದ ಬೆಳಕು ಬಿದ್ದಿತು. ಕತ್ತಲೆಯ ಅಲ್ಲಲ್ಲಿ ಕತ್ತರಿಸಿದಂತಾಗಿದೆ.

ಎದುರಿಗಿನ ಬಂಗಲೆಯಲ್ಲಿ ಯಾರೋ ದೀಪ ಆರಿಸಿದರು; ಮಹಡಿಯ ಮೇಲೆ ಬೆಳಕಿತ್ತು. ಆ ಮಹಡಿಯಿಂದಲೇ ಕೊಳಲಿನ ಅಲಾಪ ಕೇಳಿಸುತ್ತಿದೆ. ಅಲ್ಲಿಂದೇನೇ ಆಲಾಪ ಕೇಳಿಸಿತು ಅಂತ ಭಾಸಿಸಿರಿ. ಆ ಆಲಾಪ ನನ್ನ ಮನದ ಚಿಂತೆಯನ್ನು ಕಳೆಯಿತು. ಅದಾವುದೋ ಒಂದು ಹಳೆಯ ನೆನಪು. ಸುಖ-ದುಃಖ ಎರಡೂ ಅನಿಸುತ್ತಿವೆ. ಹೀಗೆಯೇ ಒಬ್ಬ ತರುಣನು ಒಂದು ಮಳೆಗಾಲದ ದಿವಸ ಕೊಳಲು ಊದುತ್ತಿರುತ್ತಾನೆ. ಒಬ್ಬ ಸುಂದರ ತರುಣಿ ಅಂಗ್ಳೆಯ ಮೇಲೆ ತನ್ನ ಮುಖಕಮಲವನ್ನಿಟ್ಟುಕೊಂಡು ಕೇಳುತ್ತಿದ್ದಳು ಆ ಯುವಕ ಎಲ್ಲಿಗೆ ಹೋದ ? ಆ ಯುವತಿ ಎಲ್ಲಿಗೆ ಹೋದಳು ? ಎಲ್ಲರೂ ಬಹಳ ದೂರ ಹೋದವರು ಇದ್ದರೋ ಇಲ್ಲೋ ಎನ್ನುವ ಹಾಗೆ ಅನಿಸಿತು. ನನ್ನ ಮನಸ್ಸಿಗೆ ಹಳಹಳಿಯಾಯಿತು.

ನನ್ನ ಕಾಲುಗಳ ಕಡೆಗೆ ನೋಡಿದೆ. ಇವ ನ್ನ



ವಾಗಿಯೂ ನನ್ನ ಕಾಲುಗಳೇ ಹೌದೇ ? ತೊಟ್ಟಿಲಲ್ಲಿ ಆಟವಾಡಿದ ಕಾಲುಗಳು ಇವೇ ಅಲ್ಲವೇ ? ಇವು ಎಷ್ಟು ಮಳೆಗಾಲಗಳನ್ನು ಕಂಡಿಲ್ಲ ? ಕಷ್ಟ ಮತ್ತು ಧೂಳು ಇವುಗಳ ಮೇಲೆ ಎಷ್ಟು ಘೂಟು ಮೆತ್ತಿಲ್ಲ ? ಇಂದಿನತನಕ ಈ ಕಾಲುಗಳು ಎಲ್ಲೆಲ್ಲಿ ತಿರುಗಾಡಿಲ್ಲ ? ಇವುಗಳ ಪ್ರವಾಸ ಇನ್ನೂ ಎಷ್ಟು ದೂರ ? ಸ್ವಲ್ಪೇ ಉಳಿದಿದೆಯಲ್ಲವೇ ? 'ಉಳಿದುದೇ ಸ್ವಲ್ಪ !' ನನ್ನಲ್ಲಿಯ ಯಾರೋ ಉತ್ತರಿಸಿದಂತಾಯಿತು. ನನ್ನ ತಾಯಿ ನನ್ನ ಕಾಲಿನ ಹಸಿಯನ್ನು ಒರೆಸುತ್ತಿದ್ದಳೆಂದು ನೆನಪಾಯಿತು: ಅದು ಬಹಳ ದಿವಸಗಳ ಹಿಂದೆ ತಾಯಿ ಹೋಗಿಯೇ ಎಷ್ಟೋ ದಿನಗಳುರುಳಿದವು. ನನ್ನ ತಾಯಿ ಎಲ್ಲಿಗೆ ಹೋದಳು ? ಅವಳ ನೆನಹಿನಿಂದ ದುಃಖ ತುಂಬಿ ಬಂದಿತು ತರುಣ ಕೊಳಲಿನ ದೀರ್ಘ ಆಲಾಪ ಎಳೆದನು; ಆ ಆಲಾಪ ಹಳಿಸಿದಂತಾಯಿತು. ಬಿರುಗಾಳಿ ಬೀಸಿತು. ಬಿರುಗಾಳಿಯ ಸುಳಿಯಲ್ಲಿ ಕೊಳಲು ಆಲಾಪ ಕರಗಿಹೋಯಿತು. ನಾನು ಕಕ್ಕಾವಿಕ್ಕಿಯಾಗಿ ನೋಡುತ್ತಲೇ ಇದ್ದೆನು.

'ಅವ್ವಾ, ನನಗ ತಿನಲಿಕ್ಕೆ' ಎಂದು, ಎದುರಿಗಿನ ಮನೆಯ ಹುಡುಗ ನೆನೆದ ಮೈಯಿಂದಲೇ ಒದರಿದನು. ಅವನ ತಾಯಿ, 'ಮೊದಲ ಮೈ ಒರಸಿಕೊ. ಹಿಂಗ ಮಾಡಿದರೆ ಹೆಂಗಪಾ ನೀನು !' ಎಂದಳು. 'ಹಿಂಗ ಮಾಡಿದರ ಹೆಂಗಪಾ ನೀನು !' ಎಂಬ ಮಾತು ಸುಪ್ತಚಿತ್ತವನ್ನು ಕೆದಕಿತು. ಮಲಗಿ ನಿದ್ರಿಸುತ್ತಿದ್ದ ನೆನಪೊಂದು ಮೇಲೆದ್ದಿತು. ಆ ಮಾತಿಗೆ ಈಗ ನಲವತ್ತು ವರುಷಗಳಾದವು. ನಾನು ಮತ್ತು ನನ್ನ ತಾಯಿ ಬೇರೆ ಊರಿಗೆ ಅತಿಥಿಗಳಾಗಿ ಹೋಗಿದ್ದೆವು. ಇಂದಿನಂತೆಯೇ ಮಳೆಗಾಲದ ಒಂದು ದಿವಸ. ಆ ದಿವಸ ನಾನು ಬಲು ಹುಂಬನಂತೆ ಮಾಡಿದೆ. ಹುಡುಗರ ಮೈಮೇಲೆ ಕೆಸರನ್ನು ಎರಚಿದೆ; ಮಳೆಹುಳಗಳಿಗಾಗಿ ಜಗಳ ಕಾದೆ. ಕೊನೆಗೆ ನೊಂದುಕೊಂಡ ನನ್ನ ತಾಯಿ ಒಂದು ಏಟು ಕೊಟ್ಟಳು. ಮುಸುಮುಸು ಮಾಡುತ್ತ ಮಲಗಿದೆ; ನಿದ್ದೆ ಹತ್ತಲಿಲ್ಲ. ಅತ್ತು ಅತ್ತು ಗಲ್ಲಗಳು ತೊಯ್ದಿದ್ದವು. ಅದೇ ಇನ್ನು ಕಣ್ಣು ಮುಚ್ಚಿಕೊಂಡು ಹುಡುಗರ ಸಾಲಿನಲ್ಲಿ ಮಲಗಿದ್ದೆ. ದೀಪ ಸಣ್ಣದು ಮಾಡಿ ತಾಯಿ ನಿಧಾನವಾಗಿ ಹತ್ತಿರ ಬಂದಳು. ತನ್ನ ಸೆರಗಿನಿಂದ ನನ್ನ ಮುಖವನ್ನು ಒರೆಸುತ್ತ, 'ಎಷ್ಟು ! ಹುಂಬತನಾ ಮಾಡತೀಯೆಪಾ ! ಹಿಂಗ ಮಾಡಿದರೆ ಹೇಗಪಾ ನೀನು !' ಮೆಲ್ಲನೆ ಅಂದಳು.

ಆ ಸ್ಮರಣೆಯಿಂದ ಜೀವ ಗಾಬರಿಗೊಂಡಿತು. 'ಅವ್ವಾ, ನಂಗ ತಿನ್ನಲಿಕ್ಕೆ !' ಎಂದು ಜೋರಾಗಿಯೇ ಒದರಿದೆ. ವಾಸ್ತವತೆಗೆ ಇಳಿದು, ನಾಲ್ಕು ದಿಕ್ಕಿಗೂ ನೋಡಿದೆ. ಎಲ್ಲವೂ ಹಸಿರಾಗಿದೆ: ಹಸಿಯಾಗಿದೆ. ಎಲ್ಲವೂ ಜೀವಂತವಾಗಿದೆ. ನನ್ನ ತಾಯಿ ಯಾವಾಗೋ ಹೋಗಿದ್ದಳು. ಆಗ ನಾನು ಎಂಟು ವರುಷದವನಿರಬೇಕು, ತಾಯಿ ತೀರಿದಾಗ ತಂದೆ ಯುದ್ಧಕ್ಕೆ ಹೋಗಿದ್ದರು. ಪರದೇಶದಲ್ಲಿದ್ದರು. ಅವರನ್ನು ನೆನೆದು ತಾಯಿ ಕಳವಳಿಸಿದಳು. ಅವಳು ಸಾಯುವಾಗ ಹುಡುಗರಾದ ನಮ್ಮನ್ನೆಲ್ಲ ಮಾಮಾನ ಮನೆಗೆ ಕಳಿಸಿದರು ಅಲ್ಲಿ ಯಾರೋ ನನಗೆ ವಿಡಾ ಕೊಟ್ಟರು. ತಾಯಿ ತೀರುವಾಗ ನಾನು ವಿಡಾ ತಿನ್ನುತ್ತಿದ್ದೆ. ಶಿವ ಶಿವ! ಏನಾಯಿತು. ಮತ್ತ ನಾ ಏನ ಮಾಡತಿದ್ದೆ. ಅದರ ಕಲ್ಪನಾನೇ ಇದ್ದಿದ್ದಿಲ್ಲ. ಆಮೇಲೆ ಹೊಳೆಯಿತು. ತಾಯಿಯನ್ನು ಹೊರಗೆ ಒಯ್ದು ಮೇಲೆ ನಾನು ಮನೆಗೆ ಮರಳಿ ಬಂದೆ: ಆಗ ನನ್ನ ಬಾಯಿ ವಿಡಾದಿಂದ ಕೆಂಪಾಗಿತ್ತು, ಅವಳ ಕೊನೆಯ ಸ್ಮಾಶ

ದಿಂದ ತೊಯ್ದು ಅಂಗಳವನ್ನು ನೋಡಿದೆ: ಹೊಟ್ಟೆಯಲ್ಲಿ ಸಂಕಟವಾಯಿತು 'ಅವ್ವಾ, ಅವ್ವಾ ನಾನು ತಪ್ಪಿದ ನನಗ ತಿಳೀತಿದ್ದಿಲ್ಲ. ನಾನು ಖರೇ ಹುಂಬ ಸಾಗಿದ್ದ. ನಾನು ತಪ್ಪಿದೆ ನನ್ನನ್ನು ಕ್ಷಮಿಸು. ಅವ್ವಾ!' ಎಂದು ಗಟ್ಟಿಯಾಗಿ ಒದರಬೇಕೆನಿಸಿತು.

ನನ್ನ ಜೀವ ಚಡಪಡಿಸುತ್ತಿದೆ. ನಾಲ್ದೆಸೆಗೂ ನೋಡಿದೆ ಆರ್ದ್ರ, ಕಪ್ಪುಮೋಡವೊಂದು ಮೇಲೆ ತೇಲುತ್ತಿತ್ತು. ಅನಂತ ಆಗಸವನ್ನು ಕಂಡು ಭಯವಾಗುತ್ತಿದೆ. ಈ ಭಯಂಕರ ಆಕಾಶವೇ ನನ್ನ ಮೇಲೆ ಬಿದ್ದರೆ ಎಂದು ನಡುಗಿದೆ. ಒಮ್ಮೊಮ್ಮೆ ನನಗೆ ಚಿಕ್ಕ ಮಕ್ಕಳಂತೆ ಅಂಜಿಕೆ ಬರುತ್ತಿದೆ: ನನಗ ಅನಸ್ತದೆ. ಈ ಅಪರಂಪಾರ ವಿಶ್ವದಲ್ಲಿ ನಾ ಎಲ್ಲೋ ತಪ್ಪೇನಿ. ಎಲ್ಲೆಲ್ಲಿಯೋ, ಹಂಗ ಹಂಗೋ ತಿರುಗುತ್ತಿರುವೆ. ನಾನು ಏಕಾಕಿ. ನಾನು ಅಸಹಾಯಕ ಎಂದೆನಿಸಿತು. ನನ್ನ ತಾಯಿನ್ನ ಹುಡುಕಬೇಕು; ಅವಳ ತೊಡೆಯ ಆಶ್ರಯ ಪಡೆಯಬೇಕು ಎಂದುಕೊಂಡೆ. ನನಗೆ ಯಾರಾದರೊಬ್ಬರ ಆಧಾರ ಬೇಕು. ನಿರಪೇಕ್ಷವಾಗಿ ಪ್ರೀತಿಸುವವರು, ವಿಶ್ವಾಸದಿಂದ ನೋಡಿಕೊಳ್ಳುವವರು ಯಾರಾದರೂ ಬೇಕು, ನನ್ನ ಒದ್ದೆಯಾದ ಕಾಲು ಒರೆಯಿಸುವವರು, ನನ್ನ ಹಣೆಯ ಮೇಲೆ ಕೈಯಾಡಿಸುವವರು. 'ಅವ್ವಾ, ತಿನ್ನಲಿಕ್ಕ' ಎಂದೊಡನೆ ತಿನ್ನಲು ಕೊಡುವವರು ಯಾರಾದರೂ ನನಗ ಬೇಕು. ಯಾರೇ ಇರಲಿ. ದೊಡ್ಡವರ ಆಧಾರ ಬೇಕು. ಇಂದು ನಾನು ಯಾರ ಆಶ್ರಯವನ್ನು ಶೋಧಿಸಲಿ? ನನ್ನ ಹೆಂಡತಿಯ ನೆನಪಾಯಿತು. ಅವಳ ಗೆಳತಿ ಅಕಸ್ಮಾತ್ತಾಗಿ ಬೇನೆ ಬಿದ್ದಳು. ಆಗದೀ ನಸುಕಿನಲ್ಲಿ ಅವಳು ಅಲ್ಲಿಗೆ ಹೋದಳು. ಮನೆಯಲ್ಲಿ ನಾನು ಒಬ್ಬನೇ. ನನ್ನ ಮನಸ್ಸಿನ ಮೇಲೆ ಎಂತೆಂತಹ ಭಾರಗಳು ಬಿದಿವೆ. ಇಂತಹ ಕಾಲದಲ್ಲಿ ನನ್ನ ತಾಯಿ ಇರಬೇಕಿತ್ತು. ಅಂದರೆ ನನ್ನ ಭಾರಗಳನ್ನೆಲ್ಲ ಅವಳ ಮೇಲೆ ಹೊರಿಸಿ ಮುಕ್ತನಾಗಬಹುದಾಗಿತ್ತು. ಸಣ್ಣವನಿದ್ದಾಗ ತಾಯಿಯ ಮೇಲೆ ಹೇರುವ ಭಾರಗಳನ್ನು ಈಗ ಯಾರ ಮೇಲೆ ಹಾಕಲಿ?

ಬೀಸುವ ಕಲ್ಲೂ ತಿರುಗುತ್ತಿದೆ. 'ಓವಿ'ಯ ಹಾಡೂ ಪುನರಾವೃತ್ತಿಯಾಗುತ್ತಿದೆ. ನನ್ನ ಮನಸ್ಸೂ ತಿರುಗುತ್ತಲೇ ಇದೆ. ಕ್ಷಣಾರ್ಧದಲ್ಲಿ ಕಲ್ಲೊಂದು ಭರ್ರನೆ ಬೀಸಿ ಬಂತು; ನೀರಿನ ತೆರೆಗಳ ಮೇಲೆ ವರ್ತುಲಗಳನ್ನು ಮಾಡುತ್ತ ಜಿಗಿಯಿತು. ಎದುರಿಗಿನ ಹುಡುಗ ಆ ಕಲ್ಲನ್ನು ಒಗೆದಿದ್ದ; ಇನ್ನೂ ಒಂದನ್ನು ಒಗೆಯಲಿದ್ದ. ಅಷ್ಟರಲ್ಲಿ ಅವನ ತಾಯಿ ಬಂದಳು. ಮನಸ್ಸು ಬಿಗಿಹಿಡಿದು ಅವನನ್ನು ಮನೆಗೆ ಕರೆದೊಯ್ದಳು. 'ಏಸಾರೆ ಸ್ವಲ್ಪ ಓದು.' ಮಗನಿಗೆ ಹೇಳಿದಳು. ಹುಡುಗನು ಗಾಯನ ಮಾಡುವವನಂತೆ ದೊಡ್ಡ ದನಿ ತೆಗೆದು ಓದಲು ಆರಂಭಿಸಿದ. ಅವನು ತೂಕಡಿಸುತ್ತಾನೆ. ಸಂಜೆಯಾಯಿತು. ಮಾಸ್ತರರ ಮೇಜಿನ ಮೇಲೆ ಛಡಿ ಸಪ್ಪಳ. ಎಲ್ಲ ವರ್ಗಗಳಲ್ಲಿಯೂ ಒಂದೇ ಬಗೆಯ ಕವಿತ ಅನ್ನುವರು ' ಅನುದಿನೀ ಅನುತಾಪೇ ತಾಪಲೋsss ರಾಮರಾಯಾ' (ರಾಮರಾಯಾ ಯಾವಾಗಲೂ ವ್ಯಥೆಯಿಂದ ಪರಿತಪಿಸಿದೆವು.) ಮುಗಿಲಲ್ಲಿ ಮೋಡ ಗುಡುಗಿತು. ಓದುವವರ ಸ್ವರ ಸಣ್ಣಾಯಿತು. ತೇವ ಹವೆಯಲ್ಲಿ, ಎಲ್ಲಿಯೋ ಒಗ್ಗರಣೆ ಹಾಕಿದ ಖಮ್ಮನ್ನ ವಾಸನೆ ಬರುತ್ತಿದೆ. ನನ್ನ ಎಲೆಯಲ್ಲಿ ಬಿಸಿಯ ರೊಟ್ಟಿ ಬೀಳುವುದು, ಮುಂದಿಯ ಪಲ್ಲೆ, ಬಳ್ಳೊಳ್ಳಿಯ ಒಗ್ಗರಣೆ: ಒಗ್ಗರಣೆಯ ವಾಸನೆ. ಮೊದಲೂ ಹೀಗೇ ಬರುತ್ತಿತ್ತು. ಈಗ ಸಹ ಹಾಗೆಯೇ ಇದೆ. ಮುಂದೂ ಹಾಗೆಯೇ ಬರಬಹುದು. ನಾನು ಎಷ್ಟು ಸಲ ಒಗ್ಗರಣೆಯ ವಾಸನೆ ಕುಡದೇನಿ! ಇನ್ನು ಎಷ್ಟು ಸಲ ಕುಡಿಯಬಹುದು! ಸುಮ್ಮ ಸುಮ್ಮನೆ ನಾನು ಏನೇನೋ ಲೆಕ್ಕ ಹಾಕುತ್ತೇನೆ. ನಡುನಡುವೆ ತಿನ್ನುವುದು. ವಸತಿಗೃಹದಲ್ಲಿಯ ಊಟ. ಪ್ರವಾಸದಲ್ಲಿಯ ಊಟ! ಹೀಗೆಯೇ ಎಷ್ಟೋ ವರ್ಷ ನಡೆದೇ ಇದೆ. ತೀರ ರೂಢಿಯೇ ಆಗಿದೆ ಇನ್ನ ಹಿಂಗs ಎಷ್ಟು ವರ್ಷ ನಡೆದೀತು! ಈ ಉಣ್ಣುವುದು. ಮಲಗುವುದು. ಮಾತಾಡುವುದು. ತಿರುಗಾಡುವ ಸಂಖ್ಯೆ-ಇವೆಲ್ಲ ಮುಗಿದಿರಬಹುದೇ! ಎಷ್ಟು! ಮುಗಿದಿರಬಹುದು?

ನನ್ನ ಕಾಲ ಮೇಲೆ ಏನೋ ಸುಳಿದಾಡಿತು. ಒಮ್ಮೆಲೇ ಕಾಲು ಝಾಡಿಸಿ ಕೆಳಗೆ ನೋಡಿದೆ. ಕಾಲಿಗೆ ನಾಲ್ಕಾರು ಕೆಂಪು ಇರುವೆಗಳು ಅಂಟಿಕೊಂಡಿದ್ದವು. ಎರಡನೆಯ ಅಂಗಾಲಿನಿಂದ ಅದನ್ನು ಒರಸಿ ತೆಗೆದೆ. ಅವುಗಳ ದೇಹ, ಮುಖ—ಮುಸುಡಿ ಕಾಣದಂತಾಯಿತು. ಕಾಲು ಅಪ್ಪಳಿಸಿದೆ. ಹಲವಾರು ಇರುವೆಗಳು ಅತ್ತಲಾಗ-ಇತ್ತಲಾಗ ಓಡಿದವು. ಅವುಗಳ ಹುತ್ತಿನ ಹತ್ತಿರವೇ ನಾನು ಕಾಲು ಅಪ್ಪಳಿಸಿದ್ದೆ. ಮುದೆ ಸಕ್ಕರೆಯಂತೆ ಸಜ್ಜಿಗೆಯ ಕಣಗಳಂತೆ ಅವು ತತ್ತಿಗಳನ್ನು ಇಟ್ಟಿವೆ. ಮಳೆಯಿಂದ ಒದ್ದೆಯಾದ ಹುತ್ತಿನ ಬಾಯನ್ನು ಅಷ್ಟಷ್ಟೇ ತೆರೆದಿವೆ. ಒಂದು ಬಾಲಹುಳಕ್ಕೆ ಹತ್ತಿಪ್ಪತ್ತು ಇರುವೆಗಳು ಮುತ್ತಿಕೊಂಡು ಹುತ್ತದ ಬಾಯಿಯ ಕಡೆಗೆ ಎಳೆದು ತರುತ್ತಿವೆ. ಬಾಲಹುಳ ಇನ್ನೂ ಜೀವಂತವಿದೆ. ಮತ್ತೆ ಕೆಲವು ಇರುವೆಗಳು ಅದರ ಕುತ್ತಿಗೆಗೆ ಅಂಟಿ ಎಳೆಯುತ್ತಿವೆ. ನನ್ನ ಮೈಮೇಲೆ ಮುಳ್ಳೆದ್ದುವು. ಈಗಾಗಲೇ ನಾನು ನಾಲ್ಕಾರು ಇರುವೆಗಳನ್ನು ಸಹಜವಾಗಿ ಕೊಂದುಹಾಕಿದೆ: ಅದರಲ್ಲಿ ನನಗೇನೂ ವಿಶೇಷ ಅನಿಸಿರಲಿಲ್ಲ. ಆದರೆ ಈಗ ನನ್ನ ಕೃತಿಯ ಭಯಾನಕತೆಯ ಅರಿವಾಗುತ್ತಿದೆ. ನಾಲ್ಕಾರು ಪ್ರಾಣಗಳನ್ನು ಹೀರಿದೆ. ಅವು ಸಣ್ಣಜೀವಿಗಳ ಪ್ರಾಣಗಳು ಆದರೆ ಅವೂ ಪ್ರಾಣಗಳೇ ಆನೆಯದೂ ಪ್ರಾಣವೇ. ಮನುಷ್ಯರದೂ ಪ್ರಾಣವೇ ಇರುತ್ತದೆ; ಹಾಗೆಯೇ ಇರುವೆಗಳಿಗೂ ಪ್ರಾಣವಿದೆ. ನಾನು ಅವುಗಳ ಪ್ರಾಣ ತಗೊಂಡೆ; ಆದರೆ ಅದನ್ನ ತಿರುಗಿಕೊಡುವ ಸಾಮರ್ಥ್ಯ ನನಗಿಲ್ಲ. ಯಾವುದನ್ನು ನಾನು ಕೊಟ್ಟಿಗಲ್ಲವೋ ಮತ್ತು ಯಾವುದನ್ನು ಎಂದೆಂದೂ ಯಾರಿಗೂ ಕೊಡಲು ಬಗುವುದಿಲ್ಲವೋ, ಅದನ್ನು ನಾನು ತೆಗೆದುಕೊಂಡಿದೆ ; ನಾಶಗೊಳಿಸಿದ್ದೆ. ಆದರೆ ತತ್ತಿಗಳಿಂದ ಹೊರಬರುವ ನೂರಾರು ಇರುವೆಗಳಿಗೆ ಇದೆಲ್ಲದರ ಲಕ್ಷ್ಯವೇ ಇಲ್ಲ. ಇಷ್ಟೊಂದು ಇರುವೆಗಳಲ್ಲಿ ನಾಲ್ಕಾರು ಇರುವೆ ನಾಶಹೊಂದಿದವು; ಅವಕ್ಕೆ ಅದೇನಂತಹ ದೊಡ್ಡ ಮಾತೆನಿಸಲಿಲ್ಲ. ಅವುಗಳ ಆಯುಷ್ಯ ಗತಿಯ ಮೂಲವೇ ಹಾಗಿರಬೇಕು. ಆಯುಷ್ಯದ್ದೇನು ಬಂತು? ಅವುಗಳ ಜೀವನದ ಮೂಲ; ನ್ಯಾಯ ಬುದು_ಬುದು ಅರಳುತ್ತವೆ ಮತ್ತು ಒಡೆಯುತ್ತವೆ. ಈ ಬಾಲಹುಳವು ಹುಟ್ಟಿದೆ; ಈಗ ಸಾಯುತ್ತದೆ; ಹಾಗೆಯೇ ಮನುಷ್ಯನೂ ಈ ಜನ್ಮಕ್ಕೆ ಬರುತ್ತಾನೆ. ಸಾಯುತ್ತಾನೆ. ನಾನು ತತ್ತಿಗಳ ಕಡೆಗೆ ನೋಡಿದೆ. ಬಾಲಹುಳ ಒಳಗೆ ಎಳೆಯಲ್ಪಡುತ್ತಿತ್ತು. ಅದರ ಒದ್ದಾಟದ ಕಲ್ಪನೆ ನನಗಾಯಿತು. ಅದು ಹೀಗೆಯೇ ಒದ್ದಾಡುತ್ತಲೇ ಸಾಯುವುದು: ಅದರ ದೇಹಕ್ಕೆ ನೂರಾರು ಕಡೆ ಕಚ್ಚುವ ವ್ಯಥೆ. ನನಗೆ ಅದನ್ನು ಬಿಡುಗಡೆ ಮಾಡಬೇಕಿತ್ತು. ಕಾಲು ಎತ್ತಿದೆ; ತಡೆದೆ. ಈ ತತ್ತಿಗಳನ್ನು ನಿರ್ಮೂಲಗೊಳಿಸಿ ನಾನೇನು ಪಡೆಯಬೇಕಾಗಿದೆ? ಒಂದು ಬಾಲಹುಳವನ್ನು ಬದುಕಿಸಲು ನಾನು ಹಲವು ಇರುವೆಗಳನ್ನು ಕೊಲ್ಲಲಿದ್ದೆ. ಅವುಗಳ ಮನೆ ಮಣ್ಣುಗೂಡಿಸಲಿದ್ದೆ. ನನ್ನ ಮನೆಯನ್ನೂ ಯಾರಾದರೂ ಮಣ್ಣುಗೂಡಿಸಿದರೆ? ಈ ವಿಚಾರವನ್ನೇ ನಾನು ಮೆಲುಕು ಹಾಕುತ್ತಿದ್ದೆ: ಅದೊಂದು ಘಟನೆಯೇ ಸುರುವಾಯಿತು

ಗುಲಾಬಿ, ಮಲ್ಲಿಗೆ, ಜಾಜಿ, ನಿತ್ಯಮಲ್ಲಿಗೆ, ಪಾರಿಜಾತ—ಎಲ್ಲ ಗಿಡಗಳೂ ಅಲುಗಾಡುತ್ತಿದ್ದವು ಗಿಡಗಳ ಮೇಲೆಲ್ಲ ನೀರಿನ ಹನಿಗಳು ಅಂಟಿಕೊಂಡಿದ್ದವು. ಕೆಳಗೆ ನೀರಿನ ಥಳಿ ಹೊಡೆದಂತಿತ್ತು. ಪಾರಿಜಾತ ಗಿಡದ ಕೆಳಗೆ ಹೂವಿನ ಹಾಸಿಗೆ ಹಾಸಿದೆ. ಜಾಜಿ ಮತ್ತು ನಿತ್ಯ ಮಲ್ಲಿಗೆ ಹೂಗಳು ನೀರಿನಿಂದ ಮುದ್ದೆಯಾಗಿದ್ದವು; ಸುಮ್ಮನೆ ನಾಲ್ಕಾರು ಹೂಗಳನ್ನು ಹರಿದು, ಮೂಗಿಗೆ ಹಿಡಿದುಕೊಂಡೆ. ನೀರಿನಿಂದ ಅವುಗಳ ವಾಸನೆ ಹಾರಿತ್ತು. ಆ ಕೋಮಲ ಹೂ ಕೊಳೆತಂತಾಗಿದ್ದವು. ಗುಲಾಬಿಯ ಪಕಳೆಗಳು ಮಾತ್ರ ವಿವಿಧ ಬಣ್ಣಗಳಿಂದ ರಂಜಿಸುತ್ತಿದ್ದವು. ಗುಲಾಬಿ, ಹಳದಿ, ಬಿಳಿಯ ಚಿಕ್ಕೆಗಳು! ಆ ಹೂಗಳನ್ನೇ ನೋಡುತ್ತ ನಿಂತೆ. ಎಷ್ಟು ಅಚ್ಚರಿಯ ಮಾತು! ಮಣ್ಣು ಅಂದರೆ ಒಂದು ಪದಾರ್ಥ; ಆದರೇನು, ಆ ಮಣ್ಣಿನಿಂದಲೇ ಈ ಹಸಿರು ಗಿಡ ಹುಟ್ಟಿದೆ. ಅದರ ಮೇಲೆ ಇಷ್ಟೊಂದು ಬಣ್ಣಗಳು ಅರಳಿವೆ. ಈ ಬಣ್ಣಗಳಿಗೆ ಆಶ್ರಯ ಮತ್ತು ಆಧಾರ ಕೇವಲ ಮಣ್ಣು! ಮಣ್ಣೇ ಅವುಗಳ ತಾಯಿ! ಈ ಜೀವಂತ ಬಣ್ಣಗಳೆಲ್ಲಿ, ನಿರ್ಜೀವ ಮಣ್ಣೆಲ್ಲಿ! ಆದರೆ ಅವುಗಳ ಸಂಬಂಧ ನಿಕಟವಾದುದು; ಹಾಗೆಯೇ ಮನುಷ್ಯ ಮತ್ತು ಮಣ್ಣುಗಳ ಸಂಬಂಧ. ಮಣ್ಣೇ ಇಲ್ಲದಿದರೆ ಮನುಷ್ಯ ನಿಲ್ಲುವುದು ಎಲ್ಲಿ ? ಹೇಗೆ? ಎಲ್ಲಿಂದ ಬರುತ್ತಾನೆ? ಮತ್ತು ಎಲ್ಲಿಗೆ ಹೋಗುತ್ತಾನೆ! ಮನುಷ್ಯನೂ ಮಣ್ಣಿನಿಂದಲೇ ಹುಟ್ಟುತ್ತಾನೆ: ಮಣ್ಣಿನಲ್ಲಿಯೇ ಹೋಗುತ್ತಾನೆ. ಕಾಳಿದಾಸ, ಪಾಣಿನಿ, ಸಮುದ್ರಗುಪ್ತ, ಶಿವಾಜಿ ಮೊದಲಾದವರೆಲ್ಲರೂ ಅಲ್ಲಿಂದಲೇ ಬಂದರು; ಅದರಲ್ಲಿಯೇ ಹೋದರು!

ಇಲ್ಲಿ, ಈ ಮಣ್ಣಿನಲ್ಲಿ! ಕುತೂಹಲ ದೃಷ್ಟಿಯಿಂದ ಕಾಲ ಕೆಳಗಿನ ಮಣ್ಣಿನ ಕಡೆಗೇ ನೋಡುತ್ತ ನಿಂತೆನು. ಮಣ್ಣಿನ ಬಗೆಗೆ ನನಗೆ ಭಯ ಉಂಟಾಗತೊಡಗಿತು. ಈ ಮಣ್ಣಿನ ಮೇಲೆಯೇ ನಾನಿರುವೆ! ಮಣ್ಣಿನಲ್ಲಿಯೇ ನಾನೂ ಸಹ ಹೋಗುವವನು! ಭೂಮಿಯ ಮೇಲೆ ಪಸರಿಸಿದ ಹಸಿ ಮಣ್ಣನ್ನು ನೋಡಿದೆ. ಇದರಲ್ಲಿ ಯಾರಾರು ಒಂದುಗೂಡಿದ್ದಾರೆ ಈ ಕ್ಷಣದಲ್ಲಿ ನಾನು ಯಾರಾರ ಮಣ್ಣಿನ ಮೇಲೆ ನಿಂತಿರುವೆ? ಮತ್ತು ನನ್ನ ಮಣ್ಣಿನ ಮೇಲೆ ಯಾರು ನಿಲ್ಲಬಹುದು? ಆಕಾಶದ ಕೊನೆಯವರೆಗೂ ಮಣ್ಣೇ ಮಣ್ಣು: ನನ್ನ ಕಣ್ಣೆದುರಿಗೆ ವಿಸ್ತಾರವಾಗಿ ಹಬ್ಬಿದೆ: ಮಣ್ಣಿನಿಂದಲೇ ನನಗೆ ಅಂಜಿಕೆ ಅನಿಸುತ್ತಿದೆ. ಆ ತಣ್ಣಗಿನ ಹಸಿ ಮಣ್ಣಲ್ಲಿ ಬೆರೆತುಹೋಗುವೆನೆಂಬ ಭಯ.

ಈ ವೇಳೆಯಲ್ಲಿ ನನ್ನ ತಾಯಿ ಜೀವಂತವಿದ್ದಿದ್ದರೆ, ಅವಳ ತೊಡೆಯ ಮೇಲೆ ಹಾಯಾಗಿ ಮಲಗಬಹುದಿತ್ತು. ತನ್ನ ಮಾಯೆಯಿಂದ ನನಗೆ ರಕ್ಷಣೆ ನೀಡುತ್ತಿದ್ದಳು. ಆಗ ನನಗೆ ಯಾರ ಭಯವೂ ಇರುತ್ತಿರಲಿಲ್ಲ. ಆದರೆ ಈ ಗಳಿಗೆಯಲ್ಲಿ ನಾನು

ಸುಸ್ಪಷ್ಟವಿದೆ...

# ಅತ್ಯಧಿಕ ಬಿಳುಪಿಗೆ ಟಿನೋಪಾಲ್!




ನೀವೇ ಉಪಯೋಗಿಸಿ ನೋಡಿ. ಕೊನೆಯ ಸಲ ನೀರಿನಲ್ಲಿ ಅದ್ದುವಾಗ ಸ್ವಲ್ಪ ಟಿನೋಪಾಲ್ ಹಾಕಿದಿರೆಂದರೆ ನಿಮ್ಮ ಬಟ್ಟೆಗಳಿಗೆ ಉಜ್ವಲ ಬಿಳುಪು ಬರುತ್ತದೆ! ಟಿನೋಪಾಲ್ ಬಿಳುಪು! ನಿಮ್ಮ ಶರ್ಟು, ಸೀರೆ, ಚದ್ದರ್, ಟವೆಲ್ ಇತ್ಯಾದಿ ಎಲ್ಲಾ ತರದ ಬಟ್ಟೆಗಳೂ ಟಿನೋಪಾಲ್ ಬಿಳುಪಿನಿಂದ ಎದ್ದು ಕಾಣುತ್ತವೆ.

ಇದಕ್ಕೆ ತಗಲುವ ವೆಚ್ಚ? ಬಟ್ಟೆಯೊಂದಕ್ಕೆ ಒಂದು ಪೈಸೆಗಿಂತಲೂ ಕಡಿಮೆ! ಟಿನೋಪಾಲ್ ರೆಗ್ಯುಲರ್ ಪ್ಯಾಕ್, ಇಕಾನಮಿ ಪ್ಯಾಕ್ ಅಥವಾ 'ಒಂದು ಬಾಲ್ದಿಗೆ ಒಂದು ಪ್ಯಾಕೆಟ್'ಗಳಲ್ಲಿ ದೊರೆಯುತ್ತದೆ. ಇಂದೇ ಕೊಳ್ಳಿರಿ.



® ಟಿನೋಪಾಲ್ ಜೆ.ಆರ್. ಗೈಗಿ ಎಸ್.ಎ., ಬಾಲ್,
ಸ್ವಿಟ್ಜರ್‌ಲೆಂಡ್‌ರವರ ರಿಜಿಸ್ಟರ್ಡ್ ಟ್ರೇಡ್ ಮಾರ್ಕ್ ಆಗಿದೆ.

ಸುಹೃದ್ ಗೈಗಿ ಲಿಮಿಟೆಡ್, ಪೋ.ಆ. ಬಾಕ್ಸ್ 11050, ಬೊಂಬಾಯಿ-20 ಬಿಆರ್

ಹೆದರಿದ್ದೆನು. ಈ ಮಣ್ಣು ನನ್ನನ್ನು ನುಂಗಿಬಿಡಬೇಕೆಂದೇ ನಿಂತಿದೆ. ಇವರ ದವಡೆಯಿಂದ ತಪ್ಪಿಸಿಕೊಳ್ಳುವ ಆವಶ್ಯಕತೆ ಅನಿಸಿತು. ಗಡಬಡಿಸಿಕೊಂಡು ಮುನ್ನಡೆದೆ. ಆದರೆ ನಾನು ಹೋದಲ್ಲೆಲ್ಲ ಮಣ್ಣೇ ಇತ್ತು. ನನ್ನ ಮನೆಯ ಆವಾರಕ್ಕೆ ಚಪ್ಪರ ಹಾಕಿದೆ. ಆ ಚಪ್ಪರದ ಹೊರಗೂ ಎಲ್ಲಾ ಮಣ್ಣು. ಈ ಮಣ್ಣಿನಿಂದ ತಪ್ಪಿಸಿಕೊಂಡು ಓಡಿಹೋಗುವುದು ಶಕ್ಯವೇ ಇರಲಿಲ್ಲ ಕೊನೆಗೆ. ಮನುಷ್ಯನು ಮಣ್ಣಿನಲ್ಲಿಯೇ ಕೂಡಿಹೋಗುತ್ತಾನೆ; ಮಣ್ಣಿನ ಕಡೆಯೇ ಎಳೆಯಲ್ಪಡುತ್ತಾನೆ. ಬಾಲಹುಳವೂ ಹೀಗೆಯೇ ಹುತ್ತಿನಲ್ಲಿ ಎಳೆಯಲ್ಪಟ್ಟಿತು. ಒಂದು ಕ್ಷಣ ನಾನು ಥಕಾಯಿಸಿದೆ. ನಾನು ಬಲಹೀನ, ಬುದ್ಧಿಹೀನ ಅನಿಸಿತು. ನನಗೆ ಯಾರಾದರೂ ಏನಾದರೂ ಹೇಳುವವರು ಬೇಕಾಗಿತ್ತು. ಕನಿಷ್ಟ ಪಕ್ಷಕ್ಕೆ 'ಹೋಗು, ಓದುತ್ತ ಕೂಡು!' ಇಷ್ಟನ್ನಾದರೂ ನಿರ್ಧಾರವಾಗಿ ಹೇಳುವವರಾರಾದರೂ ಬೇಕಿತ್ತು. ಅಷ್ಟರಲ್ಲಿ, ಯಾರೋ ನನ ಕಡೆಗೆ ನಡೆದು ಬಂದರು; ಅವರು ಇಬ್ಬರು ಚಿಕ್ಕ ಹುಡಿಗೆಯರು.

ಆ ಹುಡಿಗೆಯರು ಇದೇ ಇನ್ನೂ ಹೆರಳು ಹಾಕಿಕೊಂಡಿದ್ದರು. ಎರಡು ಪುಟ್ಟ ಗೊಂಬೆಗಳಂತೆ ಕಂಡರು. ಒಬ್ಬಳ ಕಣ್ಣಿಗೆ ಕಾಡಿಗೆ ಹಚ್ಚುವ ಮತ್ತು ಕುಂಕುಮವಿಡುವ ತಾಯಿಯ ಕೈ ಕಾಣಿಸಿತು. ನಾನು ಅವರನ್ನೇ ನೋಡುತ್ತಿದ್ದೆ: 'ನಾವು ಸ್ವಲ್ಪ ಹೂಗಳನು ತೆಗೆದುಕೊಳ್ಳೋಣವೆ?' ಅಕ್ಕಿಯ ನುಚ್ಚಿನಂತಿದ ಹಲ್ಲುಗಳನ್ನು ತೆರೆದು ಇಬ್ಬರೂ ಒಂದೇ ಸ್ವರದಲ್ಲಿ ಕೇಳಿದರು. 'ಬೇಕಾದಷ್ಟು ತಗೊಳ್ಳಿರಿ,' ನಾನು ಉತ್ತರಿಸಿದೆ. ಮತ್ತೆ ಅವರನ್ನೇ ನೋಡುತ್ತ ನಿಂತೆ. ಆ ಹುಡಿಗೆಯರು ಒಂದೊಂದು ಗಿಡದ ಬಳಿ ಹೋಗುತ್ತಿದ್ದರು; ಅವರಿಗೆ ನಗಲು ಕಾರಣವೇ ಬೇಕಾಗಿರಲಿಲ್ಲ! ನನಗೇಕೆ ಹೀಗೆ ನಗಲು ಬರುವುದಿಲ್ಲ? ಸಣ್ಣ ಹುಡುಗರು ಕೂಡ ಗಹಗಹಿಸಿ ನಗುತ್ತಾರೆ; ನಗುವನ್ನೇ ಕಳೆದುಕೊಂಡ ಹಿರಿಯ ಮನುಷ್ಯನನು ಕಂಡು ನಗುತ್ತಿರುವರೇ? ಮನುಷ್ಯನ ನಗು ಹೀಗೆ ಹೇಗೆ ಮರೆಯಾಗುತ್ತದೆ? ಚಿಕ್ಕವರಿದ್ದಾಗ ಭರಪೂರ ನಗೆ ಬರುತ್ತದೆ; ಮತ್ತು ದೊಡ್ಡವರಾದ ಮೇಲೆ ಕಿರುನಗೆಯೂ ಮಾಯವಾಗುವುದೇಕೆ! ನೋಡ ನೋಡುತ್ತಾನೇ ಹೇಗೆ ಇಲ್ಲದಂತಾಗುತ್ತದೆ? ಮನುಷ್ಯ ದೊಡ್ಡವನಾಗುವುದು ಹೇಗೆ! ಸಾಯುವುದು ಹೇಗೆ? ಒಳ್ಳೇ ಜೀವ. ನೋಡ ನೋಡುವಂತೆಯೇ ಮನುಷ್ಯ ಕಟ್ಟಿಗೆಯಂತಾಗುವನು. ಪ್ರೇತವಾಗುವನು. ಇದೆಂತಹ ಭಯಾನಕ ವಿಷಯ! ಬಾಲಹುಳವೂ ಈಗ ಪ್ರೇತವಾಗಲಿದೆ. ಈ ವಿಚಾರದಿಂದ ನನ್ನ ಮನಸ್ಸು ರೋಸಿತು. ಆ ಹುಡಿಗೆಯರಿಬ್ಬರೂ ನಕ್ಕರು. ಕೇವಲ ಆ ವಯಸ್ಸಿನ ಹುಡುಗರೇ ನಗುವಂತೆ ನಕ್ಕರು; ನನಗೆ ಒಮ್ಮೆಲೇ 'ಲಿನಾ'ಳ ನೆನಪಾಯಿತು.

ಲಿನೀಯೂ ಹೀಗೆಯೇ ಬಿಟ್ಟು ಬಿಟ್ಟು ನಗುವಳು. ಅಗದೀ ಮನಃಪೂರ್ವಕ ನಗುತ್ತಾಳೆ. ಸಣ್ಣ ಹುಡುಗಿಯಂತೆ ನಗುವಳು. ಲಿನೀ ಸಣ್ಣವಳೇನಲ್ಲ ಎಂ. ಎ. ಕಲಿಯುತ್ತಿದ್ದಾಳೆ. ಅವಳಿಗೀಗ ಇಪ್ಪತ್ತನೆಯ ವರುಷ ನಡೆದಿದೆ. ಅವಳ ಬುದ್ಧಿ ಬಲು ಚುರುಕು. ಓದುವುದೂ ಹೆಚ್ಚು: ಆದರೆ ಸಣ್ಣ ಮಕ್ಕಳಂತೆ ಹುಡುಗಾಟಿಕೆಯ ಸ್ವಭಾವ. ತುಂಬಿ ಬೆಳೆದ ದೇಹ. ಒಮ್ಮೊಮ್ಮೆ ಮಕ್ಕಳಂತೆ ಬಲು ವಿಲಕ್ಷಣ ಮನಸ್ಸು ಅವಳದು.

ಲಿನೀ ಸಮೀಪದಲ್ಲಿರುವ ಹುಡಿಗೆಯರ ವಸತಿಗೃಹದಲ್ಲಿರುತ್ತಾಳೆ. ಅವಳ ತಂದೆ ನನಗೆ ಪರಿಚಿತರು. ಅವರು ವರ್ಹಾಡದಲ್ಲಿ ವಕೀಲರಾಗಿದ್ದಾರೆ. ಮಗಳ ಯೋಗಕ್ಷೇಮ ನೋಡಿಕೊಳ್ಳಲು ನನಗೆ ಹೇಳಿದ್ದಾರೆ. ಅವಳ ಮೇಲೆ ಲಕ್ಷ್ಯವಿಡುವ ನನ್ನ ಕೆಲಸ ಮನೆಯಲ್ಲಿ ಕುಳಿತಲ್ಲಿಯೇ ನಡೆಯಲೆಂದು ಅವಳು ಮೇಲಿಂದ ಮೇಲೆ ನನ್ನ ಮನೆಗೆ ಬರುವಳು. ಒಂದೊಂದು ಸಲ, ಸೂಟಿಯ ದಿನ ನನ್ನ ಮನೆಯಲ್ಲಿಯೇ ಇರುವಳು. ಅಡಿಗೆಮನೆಯಲ್ಲಿ ನನ್ನ ಹೆಂಡತಿಗೆ ಸಹಾಯ ಮಾಡುತ್ತಾಳೆ. ಬಂದಾಗಲೆಲ್ಲ ನನ್ನ ಕೋಣೆಯಲ್ಲಿಯ ಪುಸ್ತಕದ ಕಪಾಟಿನಲ್ಲಿ ಸೌರಿಸುವಳು. ಪುಸ್ತಕಗಳೆಂದರೆ ಅವಳಿಗೆ ಅತಿ ಹುಚ್ಚು.

## ನಿದ್ದೆರಾಜ



ಸಿದ್ಧರಾಜ ಎಂಬ ಹೆಸರಿನ ಹುಡುಗನು
ನಿದ್ದೆ ಮಾಡುವುದರಲ್ಲಿ ಸುಪ್ರಸಿದ್ಧ
ಬೆಳಗ್ಗೆದ್ದು ಮನೆಯವರು ಎಷ್ಟು
ಕರೆದರೂ ಏಳ
'ನಿದ್ದೆರಾಜ' ಎನಲು ದಡಬಡನೆ ಎದ್ದ!

— ಗುಂಡ್ಮಿ ಚಂದ್ರಶೇಖರ ಐತಾಳ

ಪುಸ್ತಕಗಳ ವಿಷಯವಾಗಿ ನನ್ನ ಜೊತೆ ಗಂಟೆಗಟ್ಟಲೆ ಹರಟುವಳು. ನನಗೆ ನಾನಾ ಪ್ರಕಾರದ ಪ್ರಶ್ನೆ ಕೇಳುತ್ತಾಳೆ. ಲಿನೀಯ ಕೆಲವು ಪ್ರಶ್ನೆಗಳಿಗೆ ಉತ್ತರ ಹೇಳಲು ಬರುತ್ತದೆ. ಕೆಲವುಗಳಿಗೆ ಹೇಳಲು ಆಗುವುದಿಲ್ಲ. ಇತ್ತೀಚಿಗೆ ಬಂದ ನನ್ನ ಅನುಭವ ಅಂದರೆ, ಲಿನೀಯ ಅನೇಕ ಪ್ರಶ್ನೆಗಳಿಗೆ ನಿಶ್ಚಿತವಾಗಿ ಉತ್ತರ ಹೇಳಲು ಸಾಧ್ಯವಾಗುತ್ತಿಲ್ಲ. ಅನೇಕ ಪ್ರಶ್ನೆಗಳಿಗೆ ಉತ್ತರವೇ ಇಲ್ಲ; ಮತ್ತು ಅನೇಕ ವಿಷಯಗಳ ತಳಹದಿಯೇ ನನಗೆ ತಿಳಿಯದು. ವಯಸ್ಸು ಹೆಚ್ಚಾದಂತೆ ಅಜ್ಞಾನವೂ ಹೆಚ್ಚುತ್ತದೆ. ಅಥವಾ ಹೀಗೆ ಹೇಳಬಹುದು— ನನ್ನ ಅಜ್ಞಾನವನ್ನು ತಿಳಿದುಕೊಳ್ಳುವ ಜ್ಞಾನದ ದಾರಿ ಹಿಡಿದಿರುವೆನೆಯೊ! ಆದರೆ ಕಲಿಯುತ್ತಿದ್ದಾಗ ಯಾವುದೇ ವಿಷಯದ ಬಗ್ಗೆ ಧಾರಾಸೀತನದಿಂದ ಉತ್ತರ ಹೇಳುತ್ತಿದ್ದೆ. ಅದು ಈಗ ಹೇಳಲಿಕ್ಕೆ ಬರಲೊಲ್ಲದು. ನನ್ನ ವಿಚಾರಗಳು ಅಸ್ತವ್ಯಸ್ತವಾಗಿವೆ. ಮನಸ್ಸು ಗಾಬರಿಗೊಂಡಿದೆ. 'ಹಂಗ ಅಲ್ಲೇ ಅಲ್ಲ!' ಮತ್ತು 'ಹಂಗನ್ಬ ಹೌದು!' ಅಂತ ಲಿನೀ ಹೇಳಲು ಸಮರ್ಥಳು. ಹಾಗೇನೇ ಹೇಳುತ್ತಾಳೆ. ನಗುತ್ತಾಳೆ. ಅವಳ ನಗು ನನಗೆ ಹಿಡಿಸುತ್ತಿದೆ. ಅವಳ ಮಾತು ಸೇರುತ್ತದೆ. ಲಿನಾಳ ಅಂಗೈ ರೇಶಿಮೆಯಂತೆ. ದೇಹ ಸ್ವಲ್ಪ ಸೊರಗಿದೆ. ಗುಲಾಬೀ ಬಣ್ಣ. ಅವಳು ಕೋಣೆಯಲ್ಲಿ ಬಂದರೆ ಬೆಳಕು ಚೆಲ್ಲಿದಂತೆನಿಸುತ್ತದೆ. ಆ ಬೆಳಕು ಯಾತರದು ಎಂದು ನನಗೆ ಗೊತ್ತು. ಅದು ತಾರುಣ್ಯದ ಬೆಳಕು; ಸ್ವಪ್ನದ ಬೆಳಕು. ನನ್ನ ಕಣ್ಣು ಹಣ್ಣಾದವು. ವಯಸ್ಸಾದ ಮನುಷ್ಯನಿಗೆ ಅಂತಹ ಸ್ವಪ್ನಗಳು ಕಾಣಿಸುವುದೇ ಇಲ್ಲ. ವಿಶ್ವಾಸ ಕುಸಿಯುವುದು. ಆಶೆ ಕುಗ್ಗುವುದು. ಜಗತ್ತು ನೀರಸವೆನಿಸುತ್ತದೆ; ರೋಗ ಬಡಿದಂತೆನಿಸುತ್ತದೆ. ಎಲ್ಲವೂ ಕತ್ತಲಲ್ಲಿದ್ದಂತೆ; ಇಂತಹ ವೇಳೆಯಲ್ಲಿ ಆಧಾರವನ್ನು ಎಲ್ಲಿ ಶೋಧಿಸಬೇಕೆಂಬುದೇ ತಿಳಿಯದು.

ನಾಲ್ಕೂ ದಿಟ್ಟಿಗೆ ನೋಡಿದೆ. ಕತ್ತಲೆಯಿಂದ ತುಂಬಿದ ಆಕಾಶ ನಾಲ್ದೆಸೆಗೂ ತೂಗುತ್ತಿತ್ತು. ಪರಕಾರ-ಪೋಲಕಾ ಹಾಕಿಕೊಂಡು ಆ ಹುಡಿಗೆಯರು ಗೊಂಬೆಗಳಂತೆ ಒಳ್ಳೆ ಠೀವಿಯಿಂದ ನನ್ನ ಕಡೆಗೆ ಬಂದರು. ಬದಿಯಲ್ಲಿಯ ಅರಳಿದ ಮುದ್ದಾನ ಮಲಿಗೆಯ ಮಧ್ಯದಲ್ಲಿ ಈ ಗೊಂಬೆಗಳು ಎದ್ದು ಕಾಣಿಸುತ್ತಿವೆ. ಎರಡು ಬಣ್ಣದ ದೊಡ್ಡ ಹೂಗಳೇ ನನ್ನೆಡೆಗೆ ನಡೆದುಬರುತ್ತಿರುವಂತೆ ಅನಿಸಿತು. 'ಹೂ ತೆಗೆದುಕೊಂಡೆವು' ಎಂದು ಗೋಣು ಕೊಂಕಿಸಿ ಆ ಹುಡಿಗೆಯರು, 'ನಾವೀಗ ಹೋಗುತ್ತೇವೆ!' ಎಂದರು.

'ಹೋಗತೀರಾ?' ನಾನು ಉದ್ಗಾರ ತೆಗೆದೆ: 'ಎಷ್ಟು ಬೇಗನೆ?' 'ಇಲ್ಲದ್ದಿದರ ಅವ್ವ ಸಿಟ್ಟಿಗೇಳತಾಳ' ಒಬ್ಬಳು ಕಣ್ಣು ಹೊರಳಿಸಿ ಹೇಳಿದಳು. 'ಅವ್ವ ಸಿಟ್ಟಾಗತಾಳ.' ಇನ್ನೊಬ್ಬಳು ಗಲ್ಲ ಉಬ್ಬಿಸಿ ಅದೇ ಮಾತನ್ನೇ ಅಂದಳು. ಕೈಯಲ್ಲಿ ಕೈ ಹಿಡಿದುಕೊಂಡು ನಡೆದೇ ಬಿಟ್ಟರು. ಹಿಂದಿನಿಂದ ಅವರ ಆಕಾರವನ್ನೇ ನೋಡುತ್ತಿದ್ದೆ. ಈ ಹುಡಿಗೆಯರು ಭೂಮಿಯಿಂದ ಎಲ್ಲಿಂದ ಉದ್ಭವಿಸಿದರು. ಕೋಮಲ ಮಕ್ಕಳು ಭೂಮಿಯ ಮೇಲೆ ಇದೇ ಈಗ ತಲೆಯೆತ್ತುತ್ತಿದ್ದಾರೆ. ಅವರಿಗಿನ್ನೂ ಜಗತ್ತನ್ನು ಬಹಳಷ್ಟು ನೋಡುವುದಿದೆ. 'ಅವ್ವ ಸಿಟ್ಟಿಗೇಳತಾಳ!' ಎರಡು ಶಬ್ದಗಳೇ ನನ್ನ ಕಿವಿಯಲ್ಲಿ ಗುಂಗುಯ್ಯುತ್ತಿದ್ದವು. ನನ್ನ ಮೇಲೆ ಸಿಟ್ಟಾಗುವವರು ಯಾರೂ ಏಕೆ ಇಲ್ಲ? ನನ್ನ ಮೇಲೆ ಸಿಟ್ಟಾಗುವ ಮತ್ತು ನನ್ನ ಹೊಟ್ಟೆಗೆ ನೀಡುವವರೆಲ್ಲರೂ ಹೋದರಾದರೂ ಎಲ್ಲಿಗೆ? ಅಜ್ಜ, ಅಜ್ಜಿ, ಅವ್ವ, ಅಪ್ಪ— ಒಬ್ಬರೂ ಎಲ್ಲಿ ಇಲ್ಲದಂತಾದರು! ಆಕಾಶವನ್ನು ನೋಡಿದೆ. ಆಕಾಶದ ಕಪ್ಪಾದ ಕೊಪ್ಪರಿಗೆಯನ್ನು ಕೆಳು ತಲೆತಿರುಗಿದಂತಾಯಿತು. ತೀರಿದವರು, ಈ ಸತ್ತ ಮನುಷ್ಯರೆಲ್ಲ ಎಲ್ಲಿಗೆ ಹೋಗುತಾರ? ಇದ್ದರೋ ಇಲ್ಲೋ ಹಂಗ ಮಾಡಿ ಹೋಗತಾರ! ಈ ಮನುಷ್ಯರೆಲ್ಲ ಹೋದರೆಲ್ಲಿಗೆ?

ಹುಚ್ಚನಂತೆ ಆಕಾಶವನ್ನೇ ನಿರೀಕ್ಷಿಸುತ್ತ ನಿಂತೆ. ಆಕಾರ ರೆ ನನಗೆ ಭಯ ಹುಟ್ಟುತ್ತಿದೆ. ಭಯದಿಂದ ಸೋತುಹೋದಂತಾಗಿ, ಬೆಚ್ಚಿ ಬರುತ್ತಿದೆ.

ಗಾಳಿ ಜೋರಾಯಿತು. ಮುಗಿಲುಗಳಿಂದ ಸಳಸಳ ಸಪ್ಪಳ ಮಾಡಿತು. ಅದರ ಎಲೆಗಳೆಲ್ಲ ಪಟಪಟ ಉದುರುತ್ತಿವೆ. ಎಲೆಗಳಿಗೆ ಅಂಟಿಕೊಂಡಿದ್ದ ನೀರಿನ ಹನಿಗಳು ಟಪ್‌ಟಪ್ ಎಂದು ನನ್ನ ಮೈಮೇಲೆ ಬಿದ್ದವು. ಗುಲಾಬದಾನಿಯಿಂದ ಒಮ್ಮೆಲೇ ನೀರು ಸಿಂಪಡಿಸಿದಂತೆ ನನ್ನ ಮೈ ಪುಳಕಿಸುವುದು. ದೇಹ ವೆಲ್ಲ ತೊಯ್ದಿತು. ಒಂದೆರಡು ಹನಿಗಳು ನನ್ನ ತುಟಿಯ ಮೇಲೆ ಬಿದ್ದವು. ಈ ನೀರಿನ ವೈಶಿಷ್ಟ್ಯವೇ ಬೇರೆ. ಇಷ್ಟೊಂದು ನೀರು ಎಲ್ಲಿಂದ ಬಂತು! ಪ್ರಶಾಂತ ಸಾಗರದಿಂದಲೇ? ಸಿಂಧುಸಾಗರದಿಂದಲೇ? ಧ್ರುವಸಾಗರದಿಂದಲೇ? ಸಮುದ್ರದ ನೀರು ಆಕಾಶಕ್ಕೆ ಹೋಯಿತು. ಗಾಳಿಯ ಮೇಲೆ ಕುಳಿತು ಪ್ರವಾಸ ಮಾಡಲಾರಂಭಿಸಿತು. ಎಲ್ಲಿಯೂ ನೀರು ಎಲ್ಲಿಗೋ ಹೋಯಿತು. ಅದರೊಳಗಿಂದೇ ಸ್ವಲ್ಪ ನೀರು ಇಲ್ಲಿ ಬಿತ್ತು. ನನ್ನ ಮನೆಯ ಮೇಲೆ, ನನ್ನ ಅಂಗಳದಲ್ಲಿ, ನನ್ನ ತುಟಿಗಳ ಮೇಲೆ! ಎಂತಹ ವಿಲಕ್ಷಣ ವ್ಯಾಪಾರವಿದು! ಎಷ್ಟೊಂದು ಅಪಾಥವ್ಯ! ಎಷ್ಟೊಂದು ಸೂಕ್ಷ್ಮ! ನನ್ನ ತುಟಿಗಳ ಮೇಲೆ ಬಿದ್ದ ಎರಡು ಹನಿಗಳು ನನ್ನ ಪಾಲಿನವೇ ಇರಬೇಕು. ಅವು ಸಮುದ್ರದಲ್ಲಿದ್ದವು. ಆದರೂ ಅವು ನನ್ನ ಸಲುವಾಗಿಯೇ ಇದ್ದವು. ಅಲ್ಲಿಂದ ಇಲ್ಲಿಯ ವರೆಗೆ ಬಂದವು. ಕೆಲವು ಮನುಷ್ಯರಿಗೆ ದೊರೆತವು. ಕೆಲವು ಮಟ್ಟಿಗೆ ದೊರೆತವು. ಯಾಕೆ? ಯಾತರ ಸಲುವಾಗಿ ಇದೆಲ್ಲ ನಡೆಯುತ್ತಿದೆ? ಹೇಗೆ ಸಾಧಿಸುತ್ತಿದೆ? ಈ ವಿಶ್ವವ್ಯಾಪಿ ವ್ಯವಹಾರದಲ್ಲಿ ನನ್ನ ಸ್ಥಾನವೇನು? ಗಾಳಿಯ ವೇಗ ಹೆಚ್ಚಿತು. ಗಿಡದ ಮೇಲಿಂದ ಮತ್ತೆ ಟಪಟಪನೇ ಹನಿಗಳುದುರಿದವು. ಹೊಟ್ಟೆ ಹಿಡಿ ಹಿಡಿದುಕೊಂಡು ನಗುವ ಮನುಷ್ಯರಂತೆ ಟೊಂಗೆಗಳು ಜೋಲಿ ಹೊಡೆದವು. ಅತಿ ಹಣ್ಣಾದ ಹಳದಿ ಎಲೆಗಳು ಹೊರಳುತ್ತ ಹೊರಳುತ್ತ ಕೆಳಗೆ ಬಿದ್ದವು. ಮತ್ತು ಅತ್ತಿಂದಿತ್ತ ಹಾರಾಡತೊಡಗಿದವು. ನಾನು ಆ ಹಣ್ಣಾದ ಎಲೆಗಳನ್ನೇ ನೋಡತೊಡಗಿದೆನು. ಇದೇ ಈಗ ಈ ಎಲೆಗಳು ಗಿಡದ ಮೇಲಿದ್ದವು. ಈಗ ಕೆಳಗೆ ಬಂದವು. ಮಳೆಯ ಭಾರ ಅವಕ್ಕೆ ಅಸಹ್ಯವಾಯಿತು. ನೀರನ್ನು ಕಂಡು ಅವಕ್ಕೆ ಈ ಮುಂದೆ ಬದುಕಲು ಶಕ್ಯವಾಗದೆ ಹೋಯಿತು! ನೀರೇ ಅವಕ್ಕೆ ಸಾವನ್ನು ತಂದಿತು. ಸಾಯುವ ಮನುಷ್ಯನನ್ನ ಗಂಗೆಯಾದರೂ ಎಲ್ಲಿ ಬದುಕಿಸುವಳು. ಇಷ್ಟೊಂದು ಗಾಳಿ ಅವುಗಳನ್ನೆಲ್ಲ ಉಳಿಸಿತು? ನನ್ನ ತಾಯಿ ತೀರುವಾಗಲೂ ಗಾಳಿಯೂ ಇತ್ತು; ನೀರೂ ಇತ್ತು. ಆದರೂ ಅವಳು ಹೋದಳು. ಅಂತೆಯೇ ಈ ಹಳದಿ ಎಲೆಗಳೂ ತಿರುಗಿ ಬಿದ್ದವು: ಗಾಳಿಯ ಪ್ರಯೋಜನ ಹಸಿರು ಎಲೆಗಳಿಗೆ ಮಾತ್ರ. ಗಾಳಿಗೆ ಹಸಿರು ಎಲೆ ನಲಿಯುವವು. ಅದೇ ಗಾಳಿಗೆ ಹಳದಿ ಎಲೆ ಉದುರಿ ಬೀಳುವವು.

ನೂರಾರು ಹಣ್ಣು ಎಲೆಗಳು ಗಾಳಿಯ ಒಂದೇ ಒಂದು ಹೊಡೆತಕ್ಕೆ ಉದುರಿಬಿದ್ದವು! ನಾನು ಆ ಹಣ್ಣು ಎಲೆಗಳನ್ನು ನೋಡಿದೆ. ಅವುಗಳ ಭವಿತವ್ಯ ನನ್ನ ಕಣ್ಣಿಗೆ ಕಟ್ಟಿದಂತಾಯಿತು. ಆ ಎಲೆಗಳೂ ಇನ್ನು ಮಣ್ಣಾಗಲಿವೆ. ಮಣ್ಣಿನಲ್ಲಿಯೇ ಅವೀಗ ಹೊರಳಾಡುತ್ತಿವೆ. ನೋಡು ನೋಡುವಂತೆಯೇ ಮಣ್ಣಿನಲ್ಲಿ ಒಂದುಗೂಡುತ್ತವೆ. ಹಸಿರು ಎಲೆಗಳ ಮಣ್ಣು! ಹಸಿರುತನ ಮತ್ತು ಮಣ್ಣು! ಸಜೀವತೆ ಮತ್ತು ಮಣ್ಣು! ಈ ವಿಚಾರದಿಂದ ನನ್ನ ಮನಸ್ಸು ಕಂಪಿಸಿತು.

ನನ್ನ ತಲೆಯ ಮೇಲೆ ಕೈಯಾಡಿಸಿಕೊಂಡೆ. ಕೂದಲು ಅಲ್ಲಲ್ಲಿ ವಿರಲವಾಗಿವೆ. ನನ್ನ ಒಂದೇ ಒಂದು ಕಪ್ಪು ಕೂದಲೂ ಎಷ್ಟು ದಪ್ಪವಾಗಿತ್ತು. ಆದರೆ ಇಷ್ಟು ಬೇಗನೆ ತಲೆ ಗು ರಿ ಡಾ ಗಿ ದೆ. ಈಗ ನನಗೆ ನಲವತ್ತೊಂಬತ್ತನೆಯ ವರುಷ ನಡೆದಿದೆ. ಚಾಳೀಸದ- ನನ್ನ ಸಂಬಂಧ ಮುಗಿದು ಒಂಬತ್ತು ವರುಷಗಳಾದವು. ವರ್ಷಾವಧಿಯಲ್ಲಿಯೇ ನನಗೆ ಐವತ್ತು ತುಂಬುತ್ತದೆ. ಐವತ್ತು ವರುಷದವನಿಗೆ ಯಾರೂ ತರುಣನೆನ್ನುವುದಿಲ್ಲ. ಅವನಿಗೆ ಅರ್ಧ ಆಯುಷ್ಯ ತುಂಬಿದವನು ಎನ್ನುವುದೂ ಸಹ ಕಠಿಣವೇ ಸರಿ. ಐವತ್ತರನಂತರ ನಾನು ಅರುವತ್ತರವನಾಗಲು ಶಕ್ಯವಿದೆ. ಅರುವತ್ತರನಂತರ ಎಪ್ಪತ್ತು, ಎಪ್ಪತ್ತೈದು. ಏಂಬತ್ತು! ಸಾಕು ಸಾಕು! ಅಂದರೆ, ಇನ್ನು ಮುಂದಿನ ನನ್ನ ಪ್ರವಾಸ ಕೇವಲ ಮುಪ್ಪಿನದಾರಿಯಲ್ಲಿ. ಗಡಿಯಾರದ ಮುಳ್ಳು ಎಂದೂ ವಿರುದ್ಧ ದಿಕ್ಕಿನಲ್ಲಿ ತಿರುಗುವುದಿಲ್ಲ. ನಾನು ಮತ್ತೆ ಸಣ್ಣವನಾಗಲು ಸಾಧ್ಯವಿಲ್ಲ. ನನ್ನ ದಾರಿ ನಿಶ್ಚಿತವಾಗಿದೆ. ನಾನೀಗ ಮುಪ್ಪು ಮತ್ತು ಸ್ಮಶಾನಗಳ ಕಡೆಗೆ ಹೊರಟಿರುವೆ. ಈ ದಾರಿಯಲ್ಲಿ ನನಗೇನೂ ಬಲ ಬರುವಂತಿಲ್ಲ! ಮುಪ್ಪು ಮತ್ತು ಸ್ಮಶಾನ! ಈ ವೇಳೆಗೆ ಸರಿಯಾಗಿ ಊರಿನ ಸ್ಮಶಾನ ಧಗಧಗಿಸುತ್ತಿತ್ತು. ಯಾರನ್ನೋ ಸುಡಲು ಹಾಕಿರಬೇಕು. ಹೀಗೆಯೇ ಅವರು ನನ್ನನ್ನೂ ಸುಟ್ಟು ಹಾಕುವರು. ಅವರು ನನ್ನ ದಾರೀ ಕಾಯುತ್ತಿರುವರು. ಸ್ಮಶಾನ ಮತ್ತು ಮುಪ್ಪು! ಮುಪ್ಪನ್ನೇ ನನಗೆ ಗಂಟುಹಾಕಿದಂತಾಗಿದೆ. ಕೂದಲುಗಳೂ ವಿರಳವಾಗುವುವು. ಹಲ್ಲುಗಳೂ ಬೇಗ ಉದುರುತ್ತವೆ. ಸಂದುಗಳಲ್ಲಿ ನೋಯುವುವು. ದೃಷ್ಟಿ ಮಂದವಾಗುವುದು. ಸಮಗ್ರ ಸೃಷ್ಟಿಸೌಂದರ್ಯ ನನಗೆ ಇದ್ದೂ ಇಲ್ಲದಂತಾಗವುದು. ನಾನು ಮುದುಕನಾಗುವೆನು. ಮಳೆಯ ಹನಿಗಳು ಮಾತ್ರ ತರುಣವಾಗಿಯೇ ಇರುತ್ತವೆ. ಈ ಗಾಳಿ. ಈ ಆಕಾಶ,

ಈ ಭೂಮಿ ಎಷ್ಟು ಇಷ್ಟ ವಾಗಿದೆಯೋ ಅಷ್ಟು. ನಲವತ್ತೊಂಬತ್ತು ಮಳೆಗಾಲಗಳು ನನ್ನನ್ನು ಮುಪ್ಪಿನ ಮಹಾದ್ವಾರಕ್ಕೆ ತಲುಪಿಸಿವೆ. ಆದರೆ ಮಳೆಗೆ ಮುಪ್ಪು ಬರಲಿಲ್ಲ. ಅದು ಮಾತ್ರ ಹಸಿಯಾಗಿ, ಹಸಿರಾಗಿ, ದಂಗೆಕೋರನಂತೆ ಮುನಿಸು ಗುಟ್ಟುತ್ತಲೇ ಇದೆ. ನಾನು ತಾಯಿಯ ತೊಡೆಯಲ್ಲಿಯೇ ಹುದುಗಿಕೊಂಡು ಕುಳಿತಿದ್ದರೆ, ಮುದುಕನಾಗುತ್ತಿರಲಿಲ್ಲವೇನು? ಸಾಯುತ್ತಿರಲಿಲ್ಲವೇನು? ಆದರೆ ನಾನೀಗ ಮುದುಕನೇ ಆಗಹತ್ತಿರುವೆ! ಸಾಯುವವನೇ ಇರುವೆ. ವಾರ್ಧಕ್ಯ ಮತ್ತು ಮೃತ್ಯು!

ಈ ಶಬ್ದ ಹನ್ನೇ ನಾನು ನನ್ನೊಳಗೇ ಉಚ್ಚರಿಸಿದೆ. ಮೋಡ ಮತ್ತೆ ಗುಡುಗಿತು. ಸಿಂಹ ಪಶುವಿನ್ನಂತೆ ಗುಡುಗುಡಿಸಿತು. ಮೊದಲು ಗುಡುಗು ಅನಂತರ ಸಿಡಿಲು ಬಿತ್ತು. ಮುಗಿಲಲ್ಲಿ ಮಿಂಚು ಹೊಳೆಯಿತು. ಗಾಳಿಯ ರಭಸ ಹೆಚ್ಚಿತು. ಗಿಡಗಳ ತಲೆಗಳು ಜೋಲಿ ಹೊಡೆಯುತ್ತ ಅಲ್ಲಾಡಿದವು. ನೂರಾರು ಎಲೆಗಳು ಪಟಪಟ ಕೆಳಗೆ ಬಿದ್ದವು. ನನ್ನ ದೇಹದ ಮೇಲೂ ಬಿದ್ದವು. ನನ್ನ ಸುತ್ತು ತಿರುಗುತ್ತಿದ್ದವು. ಆ ಜೀರ್ಣ ಎಲೆಗಳನ್ನು ನೆಟ್ಟ ನೋಟದಿಂದ ನೋಡಿದೆ. ಮತ್ತೆ ಮಿಂಚು ಹೊಡೆಯಿತು. ಗುಡುಗಿತು. ನನ್ನ ಕಣ್ಣ ಮುಂದೆ ಹಸಿರು... ಹಳದಿ ಪ್ರಕಾಶ ಹೊಳೆಯಿತು. ಎದುರಿಗಿನ ಹುಡುಗ ಚಪ್ಪಾಳೆ ಬಡಿದು ಒದರಿದ. 'ಅಪ್ಪಾ— ಅಪ್ಪಾ!' ಗಾಳಿಯ ವೇಗ ಇನ್ನೂ ಹೆಚ್ಚಿತು. ಎಲೆಗಳನ್ನು ನಾಲ್ಕೂ ದಿಕ್ಕಿಗೆ ಹಾರಾಡಿಸುತ್ತ, ನೊಬ್ಬು ಸವದಿಗಳನ್ನು ಮುಗಿಲೆಡೆಗೆ ಒಯ್ಯುತ್ತ ಗಾಳಿ ರೊಯ್ಯೆಂದು ಬೀಸಿತು. ಎಲೆಗಳ ರಾಶಿಯೊಂದು ನನ್ನ ಮೇಲೇ ಹಾಕುತ್ತ ಬಂದಿತು. ಅದನ್ನು ತಪ್ಪಿಸಲೆಂದು ಬದಿಗೆ ಸರಿದೆನು. ಆ ಎಲೆಗಳ ಚಮತ್ಕಾರಿಕ ಸ್ಪರ್ಶ ನನಗೆ ಬೇಡವೆನಿಸಿತು, ಆಕಾಶ ಮತ್ತೆ ಗರ್ಜಿಸಿತು.



# ಸರಿಯಾದ ದಾರಿಯಲ್ಲಿ ಸರಿಯಾದ ಹೆಜ್ಜೆ

ನಿಮ್ಮ ಪಂಪ್‌ಸೆಟ್ ಏನೊಂದೂ ತೊಂದರೆಯಿಲ್ಲದೆ ಕೆಲಸ ಮಾಡಬೇಕೆಂದೂ ಬೆಳೆಗೆ ನಿಯಮಿತವಾಗಿ ನೀರು ದೊರೆಯಬೇಕೆಂದೂ ನೀವು ಇಚ್ಛಿಸುವುದಾದರೆ ಸರಿಯಾದ ದಾರಿಯಲ್ಲಿ ಸರಿಯಾದ ಹೆಜ್ಜೆ ಇಡಿ. ಎಂದರೆ, ಪಂಪ್‌ಸೆಟ್‌ನ ಸಂಪೂರ್ಣ ರಕ್ಷಣೆಗಾಗಿ ಇಂದೇ 'ಎಲ್ ಅಂಡ್ ಟಿ'(L & T)ಯವರ ಸ್ಟಾರ್ಟರ್ ಹಾಕಿಸಿರಿ. ಯಾವಾಗ ನಿಮ್ಮ ಮೋಟರಿಗೆ ಓವರ್‌ಲೋಡ್ ಆಗುತ್ತದೋ, ಅಥವಾ ಕರೆಂಟ್‌ನ ವೋಲ್ಟೇಜ್ ಕಡಿಮೆ ಆಗುತ್ತದೋ, ಆವಾಗ ಈ ಸ್ಟಾರ್ಟರ್ ಕೂಡಲೇ ನಿಮ್ಮ ಮೋಟರನ್ನು ಕರೆಂಟ್ ಸಪ್ಲೈಯಿಂದ ತಪ್ಪಿಸಿ ಬಿಟ್ಟು, ಅದು ಸುಟ್ಟು ಹೋಗದಂತೆ ರಕ್ಷಣೆ ನೀಡುತ್ತದೆ.

ಇದರ ದೀರ್ಘ ಬಾಳಿಕೆಯ ರಹಸ್ಯ ಇದರಲ್ಲಿ ಜೋಡಿಸಲಾದ ಘನ ಬೆಳ್ಳಿಯ ಕಾಂಟೇಕ್ಟ್! ಈ ಸ್ಟಾರ್ಟರನ್ನು ಲಾರ್ಸನ್ ಅಂಡ್ ಟೂಬ್ರೋ ಅವರು ತಯಾರಿಸುತ್ತಾರೆ. ಲಾರ್ಸನ್ ಅಂಡ್ ಟೂಬ್ರೋರವರ ಹೆಸರು ವಿಶ್ವಾಸಾರ್ಹತೆಯ ಪ್ರತೀಕವಾಗಿದೆ.

ನಾನಾ ತರಹಗಳ ಎಲ್ ಅಂಡ್ ಟಿ ಸ್ಟಾರ್ಟರ್‌ಗಳು ದೊರೆಯುತ್ತವೆ: ಡೈರೆಕ್ಟ್-ಆನ್-ಲೈನ್, ಸ್ಟಾರ್-ಡೆಲ್ಟಾ ಇತ್ಯಾದಿ. ನಿಮ್ಮ ಆವಶ್ಯಕತೆಗೆ ಅನುಸಾರವಾಗಿ ಯಾವುದಾದರೊಂದನ್ನು ಕೊಳ್ಳಿರಿ.







ಸ್ವಿಚ್‌ಗಿಯರ್ ಡಿವಿಜನ್

**ಲಾರ್ಸನ್ ಅಂಡ್ ಟೂಬ್ರೋ ಲಿಮಿಟೆಡ್**

ಪಿ. ಓ. ಬಾಕ್ಸ್ 278, ಮುಂಬಾಯಿ-1
ಪಿ. ಓ. ಬಾಕ್ಸ್ 323, ನವ ದೆಹಲಿ-1
ಪಿ. ಓ. ಬಾಕ್ಸ್ 619, ಕಲ್ಕತ್ತ-16
ಪೋಸ್ಟ್ ಬ್ಯಾಗ್ 5247, ಮದರಾಸು-2




ಮೂಲ :
ಐ. ವಿ. ಎಸ್. ಅಚ್ಯುತವಲ್ಲಿ



ಕನ್ನಡಕ್ಕೆ :
ಯಂ. ಜಿ. ಭೀಮರಾವ್

ಆಗಷ್ಟೇ ತಾನೇ ಕಣ್ಣುಬಿಡಲು ಯತ್ನಿಸುತ್ತಿದ್ದ ಸೂರ್ಯದೇವ. ಊರಿನ ಕೊನೆಯಲ್ಲಿದ್ದ ಹರಿಜನ ಕೇರಿಯಲ್ಲಿ ಬಹಳ ಸಡಗರವಾಗಿತ್ತು. ಹುಡುಗರು ಕೊಂಚ ಹರುಕು, ತುಸು ಶುಭ್ರವೆಂದುಕೊಳ್ಳುವಂತಿದ್ದ ಬಟ್ಟೆಗಳನ್ನುಟ್ಟು ಸಾಲುಸಾಲಾಗಿ ಕೂಳಿತಿದ್ದರು. ಅವರೆದುರಿಗೆ ಎತ್ತರವಾಗಿ ತುಂಬಾ ಹಸಿರೆಲೆಗಳಿಂದ ಕೂಡಿದ ಬೇವಿನ ಮರ ಒಂದಿತ್ತು. ಮರದ ಸುತ್ತ ಗುಡಿಸಿ ಸಗಣಿಯ ನೀರು ಹಾಕಿ ಸಾರಿಸಿ ರಂಗವಲ್ಲಿಯ ಚಿತ್ತಾರಗಳನ್ನು ಬರೆದಿದ್ದರು. ಮೂರು ಕುರ್ಚಿಗಳಲ್ಲಿ ಮಹಾತ್ಮ ಗಾಂಧಿ, ಜವಾಹರಲಾಲ ನೆಹರು, ಲಾಲ್ ಬಹದ್ದೂರ್ ಶಾಸ್ತ್ರಿಯವರ ಭಾವಚಿತ್ರಗಳನ್ನಿರಿಸಿದ್ದರು.

ಹುಡುಗರು ತಮ್ಮ ತಮ್ಮಲ್ಲಿಯೇ ಗುಜುಗುಜು ಮಾತನಾಡುತ್ತಿದ್ದರು. ಆಳೆತ್ತರ ನಿಂತಷ್ಟು ಎತ್ತರ ಹಾಕಿದ ಮರಳುದಿನ್ನೆ ರಾಶಿಯ ಹಿಂದಿನಿಂದ ಸೂರ್ಯ ಇಣುಕಿ ನೋಡುತ್ತಿದ್ದ. ಅಂದು ವೆಂಕಯ್ಯ ಬಹಳ ಉತ್ಸಾಹದಿಂದಿದ್ದ. ಅವನು ಹಿಂದಿನ ದಿನ ಶ್ರಮವಹಿಸಿ ಘನಕಾರ್ಯ ಸಾಧಿಸಿದ್ದ. ಸುಮಾರು ಹನ್ನೆರಡು ವರುಷದ ಹುಡುಗ ವೆಂಕಯ್ಯ.

ವೆಂಕಯ್ಯನಿಗೆ ನಾಲ್ಕು ಜನ ತಮ್ಮಂದಿರು. ಅವನ ತಾಯಿ ಎಲ್ಲಮ್ಮ. ಅವಳ ಗಂಡ ಯುದ್ಧದ ಕಾಲದಲ್ಲಿ ಹೋಗಿ ಸೈನ್ಯಕ್ಕೆ ಸೇರಿದ್ದ. ಆಗಾಗ ಐದೋ, ಹತ್ತೋ ಕಳಿಸುತ್ತಿದ್ದ. ಎಲ್ಲಮ್ಮ ಬೀದಿಯಲ್ಲಿ ಬಿದ್ದ ಸಗಣಿಯನ್ನು ತಂದು ಬೆರಣಿ ಮಾಡಿ ಮಾರಿ ಜೀವನ ಸಾಗಿಸುತ್ತಿದ್ದಳು. ವ್ಯವಸಾಯದ ದಿನಗಳಲ್ಲಿ ಹೊಲ-ಗದ್ದೆಗಳಲ್ಲಿ ಕೂಲಿ ನಾಲಿ ಮಾಡುತ್ತಿದ್ದಳು. ಆ ಕೇರಿಯ ಮುಕ್ಕಾಲು ಜನ ಕೂಲಿಯಿಂದಲೇ ಬದುಕುತ್ತಿದ್ದರು. ಕೂಲಿ ತುಂಬಾ ಸಿಕ್ಕಿದಂದು ಚೆನ್ನಾಗಿ ತಿಂದು ಕುಪ್ಪಳಿಸುತ್ತಿದ್ದರು. ಇಲ್ಲವಾದಂದು ಉಪವಾಸವಿರುತ್ತಿದ್ದರು. ನಾಳೆಗೆ ಉಳಿಸಬೇಕು ಎಂಬ ಯೋಚನೆಯೇ ಅವರಿಗಿರಲಿಲ್ಲ. ಕೇರಿಯಲ್ಲಿ ವಿನಾಕಾರಣ ಮುಷ್ಟಾಮುಷ್ಟಿ ಹೊಡೆದಾಡುವುದೂ ಅಳುಕರೆಗಳೂ ಇಲ್ಲದ ದಿನವೇ ಇರುತ್ತಿರಲಿಲ್ಲ.

ಆ ಕೇರಿಗೆ ತುಸು ದೂರದಲ್ಲಿ ಎತ್ತರವಾದ ಸ್ಥಳದಲ್ಲಿ ತಾಳೆಗರಿ ಛಾವಣಿಯ ಒಂದು ಗುಡಿಸಲಿತ್ತು. ಅದು ಆ ಕೇರಿಯ ಪ್ರಾಥಮಿಕ ಶಾಲೆ— ವಿಶ್ವವಿದ್ಯಾನಿಲಯ. ಆ ಗುಡಿಸಲ ಗುರು— ಕೇಶವರಾಯ. ಇಡೀ ಶಾಲೆಗೆ ಒಬ್ಬನೇ ಉಪಾಧ್ಯಾಯ. ಹಿಂದಿನ ದಿನ ಶಾಲೆ ಬಿಡುವುದು ಇನ್ನೂ ಅರ್ಧಗಂಟೆ ಇದೆ ಎನ್ನುವಾಗ ಯಾರೋ ಇಬ್ಬರು ಬಂದು ಕೇಶವರಾಯನ ಕಿವಿಯಲ್ಲಿ ಏನೋ ಹೇಳಿದರು.

"ಸರಿ ಸರಿ" ಎಂದು ಹೇಳಿ ಕೇಶವರಾಯ ಒಂದು ಕಾಗದದ ಮೇಲೆ ಹುಡುಗರ ಹೆಸರನ್ನೆಲ್ಲಾ ಬರೆದುಕೊಂಡ.

"ಅದ್ಯಾಕ್ಸಾರೂ, ಯಲ್ರಸ್ರೂ ಬರ್ಕತಿದೀರಿ ?" ಕುತೂಹಲದಿಂದ ಕೇಳಿದ ವೆಂಕಯ್ಯ.

"ನಾಳೆ ಗಾಂಧೀಜಿ ಹುಟ್ಟಿದ ದಿನ. ಅದಕ್ಕೋಸ್ಕರ ಸರಕಾರದವರು ಹುಡುಗರಿಗೆ ಸ್ಲೇಟು ಪುಸ್ತಕ ಹಂಚ್ತಾರೆ. ನಮ್ಮ ಸ್ಕೂಲಿನಲ್ಲಿ ಓದೋ ಹುಡುಗರ ಹೆಸರನ್ನೆಲ್ಲಾ ಬರ್ಕೊತಿದೀನಿ !" ಎಂದರು.

ಹುಡುಗರೆಲ್ಲಾ ಉಪಾಧ್ಯಾಯರ ಸುತ್ತ ಮುತ್ತಿದರು.

"ನಂ ತಂಗಿ ಎಸ್ರು ಬರೀರಿ ಸಾರ್ ! ನಂ ತಮ್ಮನ್ಸ್ರು ಬರ್ಕಳಿ ಸಾರ್ !" ಎಂದು ಇರುವವರ ಇಲ್ಲದಿರುವವರ ಹೆಸರನ್ನೆಲ್ಲಾ ಹೇಳಿ ಬರೆಸುತ್ತಿದ್ದರು. ಆ ಗಲಾಟೆಯಲ್ಲಿ ವೆಂಕಯ್ಯ ಓಡೋಡಿ ಮನೆಯ ಹತ್ತಿರ ಬಂದ. ಎಲ್ಲಮ್ಮ ಅದೇ ತಾನೇ ಒಣಗಿದ ಬೆರಣಿಗಳನ್ನು ಆರಿಸಿ ಬಿದಿರು ಬುಟ್ಟಿಯಲ್ಲಿ ಜೋಡಿಸುತ್ತಿದ್ದಳು. ಏದುಸಿರು ಬಿಡುತ್ತಾ ಬಂದ ಮಗನನ್ನು ನೋಡಿ

"ಆಗ್ಲೇ ಇಸ್ಕೂಲು ಬುಟ್ಬುಡ್ತಾ ಮಗಾ ! ಅಂಗಾದ್ರೆ ಈ ಬೆಣ್ಣೆ ತಕ್ಕೊಂಡೋಗಿ ಸಾವುಕಾರ್ರ ರಾಘವಪ್ಪಾರ್ಗೆ ಕೊಡು. ಆಯಮ್ಮ ಪೈಸಾ ಕೊಡ್ತಾರೆ. ಬೆತ್ತಾರಾಗಿ ತಕ್ಕಂಬಾ !" ಎಂದಳು.

"ಬಿ. ಓಗವ್ವಾ ! ನಾಳೇಕೆ ನಮ್ಕೇರಿಗೆ ಯಾರೋ ಬತ್ತವ್ರಂತೆ. ಹೈಕಳಿಗೆಲ್ಲಾ ಸಿಲೇಟು, ಬಳಪ್ಪ ಪುಸ್ತಾಕ ಕೊಡ್ತವ್ರಂತೆ ! ಅದ್ಕೆ ನಮ್ಮೇಸ್ಟ್ರು ಹೈಕ್ಳಸ್ರೆಲ್ಲಾ ಬರ್ಕತವ್ರೆ. ತಮ್ಮೇರೆಸ್ರೂ ಬರೀಸ್ತೀನವ್ವ, ಅವ್ರೆಸ್ರೆಲ್ಲಾ ಹೇಳ್ತೀಯಾ ?"

ಎಲ್ಲಮ್ಮ ತಲೆಕೆರೆದುಕೊಂಡಳು.

"ಅವ್ರೆಸ್ರಾ ! ಹೊಡ್ಸ್ಕೊಳ್ತೀನು ! ಅಮಾಸೆ ದಿನ ಉಟ್ದ ಅವ್ನೆಸ್ರು ಅಮಾಸೆ ಅಂತಾನೇ. ಇನ್ನೊಬ್ಬ ಚಿಕ್ಕ, ನಾಗೀಂದ್ರ, ಚಿಕ್ಕೋನು ಅದ್ಸರಿ ಒದೀ ಸಿಲೇಟು, ಬಳಪ್ಪ ಮಾತ್ರವಾ, ಅತ್ತ ಮೀರಾಯಿ ಏನಾರಾ ಕೊಡ್ತಾರಾ ?" ಆಸೆಯಿಂದ ಕೇಳಿದಳು.

"ಅದ್ಯಾನೋ, ನಂಗೊತ್ತಿಲ್ಲವ್ವ !" ಎನ್ನುತ್ತಾ ಶಾಲೆಯತ್ತ ಓಡಿದ.

ಆ ಹೊತ್ತಿಗಾಗಲೇ ಕೇಶವರಾಯ ಇನ್ನೂರು ಹೆಸರುಗಳನ್ನು ಬರೆದಿದ್ದ. ಇನ್ನೂ ಹೆಸರು ಬರೆಸಲು ಹುಡುಗರು ಗುದ್ದಾಡುತ್ತಿದ್ದರು. ನಾಲ್ಕು ಪುಟಗಳವರೆಗೂ ಹೆಸರು ಭರ್ತಿಯಾಗಿತ್ತು. ಅದರಿಂದ ಬೇಸರಿಸಿಕೊಂಡು 'ಸಾಕು ಹೋಗ್ರೋ' ಎಂದು ಗದರಿದ. ವೆಂಕಯ್ಯ ಏದುಸಿರು ಬಿಡುತ್ತ ಬಂದ.

"ನನ್ನ ತಮ್ಮೇರೆಸ್ರೂ ಬರ್ಕಳಿ ಸಾರ್ !" ಎಂದ. ಅವನ ಕಂಠದಲ್ಲಿ ಧ್ವನಿಸಿದ ಗಡಸುತನ, ಆಣತಿ ಕೇಳಿ ಅವಕ್ಕಾದ ಕೇಶವರಾಯ.

"ನಿನ್ನೆಸ್ರು ಮೊದಲೇ ಬರೆದಾಯ್ತೋ" ಎಂದ.

"ನಂದಲ್ಲ ಸಾರು. ನನ್ನ ತಮ್ಮಿಂದಿರ್ದು ! ಅವರಿಗೂ ಸಿಲೇಟು. ಬಳಪ ಬೇಕು. ನನ್ನಾವೇನಾದ ಬೇಗಾಯ್ತದೆ."

"ಎಲ್ಲರಿಗೂ ಕೊಡಲ್ಲ. ಈ ಶಾಲೆಯಲಿ ಓದ್ತೋ

ರಿಗೆ ಮಾತ್ರ ಕೆ ೞಡ್ಯೋದು" ಎನ್ನುತ್ತಾ ಒಮ್ಮೆ ಹೆಸರು ಗಳನ್ನು ಬರೆದಿದ್ದ ಕಾಗದ ನೋಡಿದ ಕೇಶವರಾಯ.

ಆ ಶಾಲೆಯಲ್ಲಿ ಐದನೆಯ ತರಗತಿಯವರೆಗೂ ಇತ್ತು. ಎಲ್ಲಾ ಸೇರಿದರೆ ಒಟ್ಟು ನಲವತ್ತು ಮಂದಿ ಆಗುತ್ತಿತ್ತು. ಪಟ್ಟಿಯಲ್ಲಿನ ಸಂಖ್ಯೆ ಇನ್ನೂರನ್ನು ಮೀರಿತ್ತು. ಹಾಜರಿಯಲ್ಲಿ ನೂರೈವತ್ತು ಹೆಸರಿತ್ತು. ಇನ್ನೆಷ್ಟು ಬರೆಯೋದು ? ಆ ಕಾಗದಗಳನ್ನು ಮೇಜಿನಲ್ಲಿರಿಸಿ ಬೀಗಹಾಕಿದ. ವೆಂಕಯ್ಯ ಮತ್ತೆ ಓಡೋಡಿ ತಾಯಿಯ ಹತ್ತಿರ ಬಂದು ಗೋಳೋ ಎಂದು ಅಳಲಾರಂಭಿಸಿದ.

"ಅದ್ಯಾಕೊ ! ಉಪಾದ್ರು ಹೊಡದ್ರಾ ?" ಕೇಳಿದಳು ಎಲ್ಲಮ್ಮ.

"ಇಲ್ಲವ್ವ. ನನ್ನ ತಮ್ಮೀರೆಸ್ರು ಬರೀನಿಲ್ಲ. ಬ್ಯಾರ್ಯೋರು ಏಳಿದ್ನೆಲ್ಲಾ ಬರಕಂಡ್ರು..."

"ಆ ! ಯಾನಂದೇ ! ಬಾರ್ಯೋರು ಆಯಪ್ಪನ ಚಿಕ್ಕಪ್ಪನ ಹೈಕಳೆ ! ನಾಷ್ಟ ದಾಯಾದಿಗೋಳಾ ! ಚೀ ! ಈ ಬ್ರಾಮ್ರು ಬುದ್ದೀನೇ ಇಂಗೇನೆಂಬು. ಅದ್ಕೇ ಅವ್ರು ಯಾವಾಗ್ಲೂ ಬಡತನ ತಿಂತೈಥೆ" ಎಂದು ಕ್ರೋಧದಿಂದ ಕೂಗಾಡುತ್ತಾ ಜುಟ್ಟು ಬಿಚ್ಚಿ ಕಟ್ಟಿಕೊಂಡು ಶಾಲೆಯತ್ತ ನಡೆದಳು. ಶಾಲೆಯ ಬಾಗಿಲು ಮುಚ್ಚಿ ಹೊರಟಿದ್ದ ಕೇಶವರಾಯನನ್ನು

"ಏನಯ್ಯಾ ಉಪಾದ್ರೇ ! ನಿಂಗೆ ಬಾಳಾ ಹಾಂಕಾರ ಬಂದೈಥಲ್ಲಾ ! ದಸರಾ ಆಬ್ಬ ಬಂತೂಂದ್ರೆ ಒಂದ್ರು ಪಾಯಿ. ಎರಡ್ರು ಪಾಯಿ ಕಿತ್ಕತೀಯಲ್ಲ. ಅದು ನಿಮ್ಮಾತನ ಮನೆ ಗಂಟು ಅಂದ್ಕಂಡಿದೀಯಾ ? ನನ್ಮಕ್ಳು ನಿಂಗೆ ಎಚ್ಚಾದ್ರೇನಯ್ಯಾ ! ಆ ಬಾಕಿ ಹೈಕ್ಳೆಲ್ಲಾ ನಿನ್ನ ಸೋದರಮಾವನ ಮಕ್ಳು ! ನಮ್ಮ ಹೈವ ಬಾಯಿಬ್ಬ್ಕಂಡು ಬಂದ್ರೆ ಬಾಯಿಗೆ ಬಂದಂಗೆ ಬೋದು ಕಳ್ಸೀಯಂತಯ್ಯ !" ಕೊರಳೆತ್ತಿ ಕೂಗಾಡಿದಳು. ಅವಳ ಕೂಗಾಟ ಕೇಳಿ ಕೇರಿಯ ಜನ ಒಬ್ಬೊಬ್ಬರಾಗಿ ಬಂದು ಸುತ್ತಲೂ ಗುಂಪುಗೂಡಲಾರಂಭಿಸಿದರು. ಕೇಶವರಾಯನಿಗೆ ಆ ಗುಂಪು ಅವಳ ಚೀರಾಟ ಕೇಳಿ ಜೀವ ಬಂದು ಹಿಡಿಯಷ್ಟಾಯ್ತು.

"ಇಲ್ಲಮ್ಮ. ನಿನ್ನ ಮಗನ ಹೆಸರು ಮೊದಲೇ ಬರೆದಿದೀನಿ" ಎಂದ.

"ಅಷ್ಟೆಸ್ರಲ್ಲಯ್ಯಾ ! ಅವ್ನ ತಮ್ದೀರೆಸ್ರು. ಅವ್ರು ನಾಳೆಗೆ ನಿನ್ನ ಸ್ಕೂಲ್ಗೆ ಬರಾಕ್ಕಿಲ್ವ ? ಯಾವೋನೋ ಮಾರಾಯ ಕೊಡ್ತೀವಿ ಅಂದ್ರೆ ನಿಂಗ್ಯಾಕಯ್ಯ ಒಟ್ಟೆ ನೋವು ?"

'ಮೂರ್ಖಸ್ಯ ನಾಸ್ತ್ಯೌಷಧಂ — ಎಂದು ತಿಳಿದ ಕೇಶವರಾವ್ ಆ ಬಾಕಿ ಹುಡುಗರ ಹೆಸರೂ ಬರೆದು ಜೋರಾಗಿ ಓದಿ ಹೇಳಿದ. ಅದನ್ನು ಕೇಳಿದಾಗ ವೆಂಕಯ್ಯನಿಗೆ ತನೆ ಏರಿದಷ್ಟು ಸಂಭ್ರಮವಾಯ್ತು.

★ ★ ★ ★

ವೆಂಕಯ್ಯ ತನ್ನೊಬ್ಬನೇ ತಮ್ಮಂದಿರನ್ನೂ ಎಬ್ಬಿಸಿ ಹೊಳೆಗೆ ಹೋಗಿ ಶುಭ್ರವಾಗಿ ಹಲ್ಲುಜ್ಜಿ ಮುಖತೊಳೆದು ಬಂದ. ಇಡೀ ಮನೆಗೇ ಗಂಡು ಮಕ್ಕಳಿಗೆಲ್ಲಾ ಎರಡು ಹರಿದ ಚಡ್ಡಿಗಳು, ಸಡಿಲವಾಗಿದ್ದ ಅಂಗಿಗಳು– ಮಂಡಿಯವರೆಗೂ ಬರುವಂಥವು. ತಾನೊಂದು ಚಡ್ಡಿ. ಟುಪ್ಪಿ ಕೊಟ್ಟು ಹಾಕಿಕೊಂಡು ಎರಡನೆಯದನ್ನು ಮೊದಲ ತಮ್ಮನಿಗೆ ಕೊಟ್ಟ. ಉಳಿದ ಮೂವರಿಗೆ !

"ಏನವ್ವ, ಯಾವನೋ ದೊಡ್ಮನ್ಸ ಬತ್ತಾವ ನಂತೆ. ಬಟ್ಟೆ ಇಲ್ದೆ ತಮ್ಮಿರ್ಬೀರ್ನ ಎಂಗವ್ವ ಕರ್ಕಂಡೋಗಾದು ?" ಕೇಳಿದ. ಎಲ್ಲಮ್ಮ ತನ್ನ ಹಳೆಯ ಸೀರೆಯನ್ನು ಹರಿದು ಅವರಿಗೆಲ್ಲಾ ಕೌಪೀನ ಹಾಕಿದಳು. ವೆಂಕಯ್ಯ ಚಿಕ್ಕವನನ್ನು ಎತ್ತಿಕೊಂಡು ಉಳಿದವರನ್ನು ಕರೆದುಕೊಂಡು ಹೊರಟ. ಹೊರಗೇ ನಿಂತಿದ್ದ ನೆರೆಮನೆಯ ನಂಜಿ. ಮರಿಗಳನ್ನು ಕರೆದುಕೊಂಡು ಹೋಗುವ ಕೋಳಿಯಂತೆ ಹೊರಟ ವೆಂಕಯ್ಯನನ್ನು ನೋಡಿ.

"ಯಾನೋ ಯಂಕ್ಯಾ ನಿನ್ಕಂಕಳಾಗಿರೋ ಮಗ ಯಾವ ಕಳಾಸು ಓದ್ತದೋ ?" ಅಣಕದಿಂದ ಕೇಳಿದಳು. ವೆಂಕನಿಗೂ ಕೋಪ ಬಂತು.





"ನಿಂಗ್ಯಾಕವ್ವಾ ನಂಜವ್ವಾ ! ನೀನ್ಯಾವ ಕಳಾಸು ಓದ್ಕಂಡಿದೀಯವ್ವಾ ?" ಎಂದ.

"ಅಯ್ಯಾ, ನಿನ್ಬಾಯ್ಗೆ ಮಣ್ಣಾಕ ! ಮೂಲಂಗಿ ಮುಸುಡಿ ಮುಂಡತ್ರದ್ದೇ ! ನಿಮ್ಮವ್ವನಂಗೇನೇ ಮಾತಾಡ್ತೀಯಂದ್ರೆ ಮೇಲ್ಬೀಳ್ತೀಯಾ ? 'ಎದ್ರಾ ಅಂದ್ರೆ ಗುದ್ದಾಕ ಬಂದ್ರು' ಅನ್ನಂಗೆ !" ಎಂದು ಬೈದುಕೊಂಡು ಹೊರಟು ಹೋದಳು. ಅಷ್ಟರಲ್ಲಿ ಖಾದಿ ಸೀರೆಯುಟ್ಟ ಸಮವಸ್ತ್ರಧಾರಿಣಿಯರಾದ ಸುಮಾರು ಇಪ್ಪತ್ತೈದು ಮೂವತ್ತು ಮಂದಿ ಯುವತಿ ಸ್ವಯಂಸೇವಕಿಯರು ರಾಷ್ಟ್ರಧ್ವಜ ಹಿಡಿದು,

"ಜಯ ಜಯ ಭಾರತ ರಾಷ್ಟ್ರಪಿತಾ
ಜಯ ಜಯ ಜಯ ಗಾಂಧೀ ಮಹಾತ್ಮಾ
ಜಯ ಜಯ ಜಯ ಜಯತೇ ..."

ಎಂದು ಹಾಡುತ್ತ ಕೋಣೆಯಂತಿದ್ದ ಕೇರಿಯೊಳಗೆ ಬಂದರು.

"ಇದ್ಯಾನಾ ಗೋಳು ! ಇನ್ನೂ ಕೋಳಿ ಕೂಗಿಲ್ಲ ಆಗ್ಲೇ ಮಾರ್ನೆ ಗುಂಪು ಬತ್ತೈಥಲ್ಲಾ. ಅಲ್ಲಾ ಇದ್ಯಾಕೆ ಇಂಗೆ ಬತ್ತಾವ್ರೆ ಅಷ್ಟೇ ಥಾವ ಕೇಳಿಲ್ವಾಂತೀನಿ ?" ಮುದುಕಿಯೊಬ್ಬಳು ಆಶ್ಚರ್ಯದಿಂದ ಸಿಡುಕಿದಳು. ಆ ಗುಂಪಿಗೆ ಮುಂದಾಳಾಗಿದ್ದವಳೊಬ್ಬಳು ನಿಂತಳು. ಎತ್ತರವಾಗಿ ಬೆಟ್ಟದಂತೆ ಗಂಟು ಹಾಕಿಕೊಂಡು, ಕಣ್ಣಿಗೆ ಕನ್ನಡಕ ಧರಿಸಿ ಒಂದು ಕೈಗೆ ಗಡಿಯಾರ, ಇನ್ನೊಂದು ಕೈಗೆ ಗಾಜಿನ ಬಳೆ ಹಾಕಿಕೊಂಡಿದ್ದಳು. ತುಂಬುಗಲ್ಲ ದಪ್ಪವಾದ ಮೈ, ಕಡೆದ ವಿಗ್ರಹದಂಥ ಮೈಕಟ್ಟು. ಮುದುಕಿಯತ್ತ ತಿರುಗಿ ಹೇಳಲಾರಂಭಿಸಿದಳು.

"ಈ ದಿನ ಗಾಂಧೀಜಿ ಹುಟ್ಟಿದ ದಿನ ಕಣಜ್ಜಿ. ಅವರು ತಮ್ಮ ಬದುಕನ್ನೆಲ್ಲಾ ಪ್ರಜಾಸೇವೆಯ ಸಲುವಾಗಿಯೇ ವಿನಿಯೋಗಿಸಿದರು. ಮುದುಕಲ ಗಾಡಿ ಸಲ ಉಪವಾಸಿಯ ದೇಲ್ಮೆಗಾಗಿ ಬಹಳವಾಗಿ ಶ್ರಮಿಸಿದರು. ಮೊದಲು ನೀವು ಶುಭ್ರವಾಗಿರುವುದನ್ನು ಕಲಿಯಬೇಕು. ನಿಮ್ಮ ಕೇರಿಯ ದೂರದಲ್ಲಿ ತಿಪ್ಪೆಗುಂಡಿ ಮಾಡಬೇಕು. ಮಕ್ಕಳನ್ನು ಆದಷ್ಟು ಶುಭ್ರವಾಗಿರಿಸಿಕೊಳ್ಳಬೇಕು. ಅವರಿಗೆ ವಿದ್ಯೆ ಕಲಿಸಬೇಕು. ನೀವು ನಿಮ್ಮ ಕೇರಿಯನ್ನು ಚೊಕ್ಕಟವಾಗಿರಿಸಿಕೊಂಡರೆ ಎಂತಹ ರೋಗವೂ ಬರುವುದಿಲ್ಲ."

ಶುಭ್ರತೆಯ ಬಗೆಗೆ ಉಪನ್ಯಾಸ ಕೊಡಲಾರಂಭಿಸಿದಳು. ಅವಳ ಉಪನ್ಯಾಸ ನಿರರ್ಗಳವಾಗಿ ಸಾಗುತ್ತಿರುವಂತೆಯೇ ಮತ್ತೊಂದು ಗಲ್ಲಿಯಿಂದ ಧ್ವಜ ಹಿಡಿದು ಸುಮಾರು ಇಪ್ಪತ್ತು ಮಂದಿ ಯುವಕರು ಬಂದರು. ಖಾದಿ ಪಂಚೆ, ಜುಬ್ಬ, ಟೋಪಿ ಧರಿಸಿದ್ದರು. ಅವರ ಕೈಲಿ ಸಲಿಕೆ, ತೆಂಗಿನ ಕಡ್ಡಿಯ ಪರಕೆಗಳಿದ್ದುವು. ಕೆಲವರು ಬಾವುಟ ಹಿಡಿದು ನಿಂತರು. ಮತ್ತೆ ಕೆಲವರು ಗುದ್ದಲಿಯಿಂದ ಕಸ ತೆಗೆದು ಹಾಕಿ

ಹತು. ಊ ಹರು ಪರಕೆಯಿಂದ ಪರಪರನೆ ಗುಡಿಸಲಾರಂಭಿಸಿದರು. ಆ ಧೂಳು ಮೇಲೆದ್ದು ಎಲ್ಲರ ಕಿವಿ, ಮೂಗುಗಳನ್ನು ಹರಿತು. ಮಹಿಳೆಯರ ಗುಂಪು ಯುವಕರತ್ತ ದುರದುರನೆ ನೋಡಿಕೊಂಡು ಹೊರಟು ಹೋಯಿತು.

ಮತ್ತೊಂದು ಗುಂಪು ಧ್ವಜವರ್ಧಕಗಳನ್ನು ಹಿಡಿದುಕೊಂಡು ಹಾಡುತ್ತಾ ಬಂತು. ಅವರೊಂದಿಗೆ ಕೇಶವರಾಯನೂ ಇದ್ದ. ಕೇಶವರಾಯನನ್ನು ಕಂಡೊಡನೆಯೇ "ಮೇಷ್ಟ್ರು, ಮೇಷ್ಟ್ರು" ಎನ್ನುತ್ತಾ ಹುಡುಗರೆಲ್ಲಾ ಸುತ್ತ ಮುತ್ತಿದರು. ಕೇಶವರಾಯ ಹುಡುಗರನ್ನೆಲ್ಲಾ ವರಸೆಯಲ್ಲಿ ಕೂಡಿಸಿ ಗುಡಿಸುತ್ತಿದ್ದ ಕಾರ್ಯಕರ್ತರನ್ನು ಕರೆದು,




"ನೋಡಿ ಈ ಗಲ್ಲಿಗಳನ್ನೆಲ್ಲಾ ನಿನ್ನೆಯ ದಿನ ಸಂಜೆಯೇ ಗುಡಿಸಿಸಿದ್ದೇನೆ. ಮುಂದಿನ ಬೀದಿಗೆ ನಡೆಯಿರಿ" ಎಂದು ಕಳಿಸಿದ. ಅವರು ಮತ್ತೆ ಏನೇನೋ ಹಾಡುಗಳನ್ನು ಹೇಳಿಕೊಂಡು ಹೊರಟು ಹೋದರು. ಕೇಶವರಾಯನೊಂದಿಗೆ ಬಂದಿದ್ದ ಇಬ್ಬರು ಗಾಂಧೀಜಿಯ ಬಾಲ್ಯ, ಅವರ ದೇಶಸೇವಾದಿಗಳ ಬಗ್ಗೆ ಉಪನ್ಯಾಸ ಕೊಟ್ಟರು. ಆ ಹೊತ್ತಿಗಾಗಲೇ ಬಿಸಿಲು ಚುರುಚುರು ಎಂದು ಮೇಲೆರುತ್ತಿತ್ತು. ಎರಡು ರಿಕ್ಷಾಗಳ ತುಂಬಾ ಸ್ಲೇಟು, ಪುಸ್ತಕಗಳ ಬಂದುವು. ಕೇಶವರಾಯ ಹೆಸರು ಕರೆದಂತೆ ಒಬ್ಬೊಬ್ಬರೇ ಬಂದು ಸ್ಲೇಟು ಪುಸ್ತಕಗಳನ್ನು ತೆಗೆದುಕೊಂಡು ಕಾರ್ಯಕರ್ತರನ್ನು ವಂದಿಸಿ ಹೋಗುತ್ತಿದ್ದರು. ಹೀಗೇ ಸುಮಾರು ಇಪ್ಪತ್ತೈದು ಮಂದಿಯವರೆಗೂ ಬಂದು ತೆಗೆದುಕೊಂಡು ಹೋದರು. ಒಂದು ಹೆಸರು ಕರೆದಾಗ ಮೂರು ವರ್ಷದ ಹುಡುಗಿಯೊಂದು ಬಂದು ನಿಂತಿತು. ಕಾರ್ಯಕರ್ತರು ಕೇಶವರಾಯನನ್ನು ನೋಡಿ,

"ಇದೇನನ್ಯಾಯ ಮೇಷ್ಟ್ರೆ ? ಮೂರು ವರ್ಷದ ಮಗು ಓದುತ್ತೇ ?" ಕೇಳಿದರು.

"ಇಲ್ಲ, ನಾನು ಕರೆದದ್ದು ಅವರಕ್ಕನ ಹೆಸರು. ಆ ಹುಡುಗಿ ಮೈ ಚೆನ್ನಾಗಿಲ್ಲವೆಂದು ತನ್ನ ತಂಗಿಯನ್ನು ಕಳಿಸಿದೆ" ಎಂದ.

ಕ್ರಮೇಣ ಒಂದು ಹೆಸರು ಕರೆದಾಗ ನಾಲ್ಕಾರು ಮಂದಿ ಬರುವುದು, ಕಾರ್ಯಕರ್ತರು ಕೊಡುವ ಮೊದಲೇ ಎತ್ತಿಕೊಂಡು ಹೋಗುವುದೂ ಆರಂಭವಾಯ್ತು. ಈ ಗಲಭೆಯಲ್ಲಿ ವೆಂಕಯ್ಯನೂ ಮೇಲೆದ್ದ. ಕೈಲಿದ್ದ ಮಗುವನ್ನು ತಮ್ಮನ ಕೈಗೆ ಕೊಟ್ಟು ಮೇಲೆದ್ದು ನಿಂತ. ಎಲ್ಲರೂ ಗುಂಪಿನಲ್ಲಿ ತಮಗೇನು ಬೇಕೋ ಅದನ್ನು ತೆಗೆದುಕೊಂಡು ಹೋಗುತ್ತಿದ್ದರು. ಎಷ್ಟು ಹೊತ್ತಾದರೂ ಮೇಷ್ಟ್ರು ಅವನ ಹೆಸರು ಕರೆಯಲಿಲ್ಲ. ಅವನ ಹೆಸರು ಬರುವಷ್ಟರಲ್ಲಿ ಅಲ್ಲಿ ಸ್ಲೇಟುಗಳು ಇರುವುದಿಲ್ಲ. ಹಾಗೇ ಯೋಚಿಸುತ್ತಾ ಗುಂಪಿನಲ್ಲಿ ನುಗ್ಗಿದ. ಕೈಗೆ ಸಿಕ್ಕಿದಷ್ಟು ಸ್ಲೇಟುಗಳನ್ನು ಎಳೆದುಕೊಂಡು ಹೋಗಿ ತನ್ನ ಮನೆಯ ಜಗುಲಿಯ ಮೇಲಿರಿಸಿ ಬಂದ. ಮತ್ತೆ ಕೆಲವು ಪುಸ್ತಕಗಳನ್ನು ಹೊತ್ತುಕೊಂಡು ಹೋಗಿ ತಾಯಿಗೆ ಕೊಟ್ಟು ಬಂದ. ಎಲ್ಲವ್ವ ಗುಡಿಸಲ ಮುಂದಿನ ಒಡೆಯ ಮೇಲೆ ಬೀಳುತ್ತಿದ್ದ ಬಿಸಿಲು ಕಾಯುತ್ತಾ ಕುಳಿತಿದ್ದಳು. ಅಂದು ಬೇಯಿಸಿ ತಿನ್ನಲು ಏನೂ ಇರಲಿಲ್ಲ.

೨

"ಏನ್ನಾ ಒತ್ತಾರ್ನಿಂದ ಜನ ಇಂಗೆ ಸಾಯ್ತವ್ರೆ, ಏನ್ನಾನೋ ಮಾತಾಡ್ತವ್ರೆ. ಜೊತ್ಗೆ ಗಿರಬ್ಯಾಕಂತೆ, ಇದ್ಯಾಧಿರೋ ಮನೆ ಕಟ್ಬಬ್ಯಾಡಂತೆ ! ಅದ್ಯಾನೋ ಅವರ ಉದ್ದೇಸ ! ಉಂ ! ಮೈಮುಚ್ಚ ಒಟ್ಟೆ ಗತಿ ಇಲ್ಲ. ಜೊತ್ಗೇನ ಮಡಿಕಳ್ಳಾದು ? ಇರಾದ ಒಂದೇ ಒಂದು ಸೀರೆ ಎರಡಾದ್ರು ಇದ್ದಿದ್ರೆ ಒಂದು ಒಗ್ದು ಒಂದು ಕಟ್ಕೋಬೈದು. ಈ ಎಂಕ ಏನಾನ ಎಣ್ಣಾಗಿಬಿಟ್ಟಿದ್ರೆ ಈ ಒಕ್ಗೆ ಒಂದು ಸಾಲಾನೇ ಉಡಿಸ್ಬೇಕಾಗ್ತಿತ್ತು. ಮಾತಾಡಬೈದು ಚೆಳಿ ಗಡ್ಡಾಂತ ಪರಾಣ ಓಯ್ತದೆ ಹೈಕಳ್ಗೆ ಮೈಗೆ ಒಟ್ಟೆ ಗತಿ ಇಲ್ಲ. ಒಟ್ಟೆ ಅಸೀತದೆ 'ಗಂಜಿ' ಕಾಯ್ಸಾವಾಂದ್ರ ನುಚ್ಚೀ ಗತಿ ಇಲ್ಲ. ಗಾಂಧಿ ಮಾತ್ಮ ಉಟ್ಟಿದ ದಿನ- ನಮ್ಮಂತೆ ಬಡವರಿಗೇಂತ ಆಯುಪ್ಪ ಜೀವ ಕೊಟ್ನಂತೆ. ಅವ್ರು ಉಟ್ಟಿದ ದಿನ ಒಂದೊಂದು ಒಟ್ಟೇನಾದ್ರು ಕೊಟ್ಟಿದ್ರೆ ! ಅದು ಬುಟ್ಟು ಸಿಲೇಟು, ಪುಸ್ತಕ ಕೊಟ್ಟವ್ರೆ ಮಕ್ಕಳ್ನ ಓದಿಸ್ಬೇಕಂತೆ ! ಮುದ್ಲು ಅವರ ಒಟ್ಟೇದಾದ್ರುಲ್ವ ಓದಾದು ... ಈ ಉಪಾದ್ರ ಇಂದೆ ಅಲ್ಲ. ಅ ಆ ಇ ಈ ಗೀಚು ಅನ್ನುಕಿಂತಾ ದನಗೋಳಿಂದೆ ತಿರಿಚ್ತಾ ಓಗೋದೇ ಉತ್ಕ. ರವಷ್ಟು ಬೆಣ್ಣೆ ತಟ್ಟಿ ಮಾರಿದ್ರೆ ಜೀವಣ ಕಳೀತದೆ" ಎಂದು ಒದರಿ ಕುಳಿತಳು. ಆ ಹೊತ್ತಿಗೆ ಎಂಕ ಇಷ್ಟು ಸ್ಲೇಟು ಕದ್ದು ತಂದಿರಿಸಿದ.

"ಏನ್ಲೇ ! ಈಟೊಂದು ಕೊಡ್ತವ್ರಾ !" ಆಶ್ಚರ್ಯದಿಂದ ಕೇಳಿದಳು.

"ತಮ್ಗೀಗೂ ಬೇಕವ್ವಾ !" ಎಂದು ಹೇಳಿ ಮತ್ತೆ ಗುಂಪಿನಲ್ಲಿ ನುಗ್ಗಿದ. ಕೈಲಿ ಸ್ಲೇಟುಗಳನ್ನು ಹಿಡಿದುಕೊಂಡು ಗುಂಪು ಚೆದರಿಸುತ್ತಿದ್ದ ಕಾರ್ಯಕರ್ತನ ಕೈಗೆ ಸಿಕ್ಕಿಬಿದ್ದ ವೆಂಕಯ್ಯ.

"ರ್‍ಯಾಸ್ಕಲ್ ! ಎಷ್ಟು ಸ್ಲೇಟು ಹೊಡೆದು ಕೊಂಡು ಹೋಗಿದ್ದೀ ?" ಎಂದು ಕೋಪದಿಂದ ಎರಡೇಟು ಕೊಟ್ಟ.

"ಲಪ್ಪೋ ಲಪ್ಪೋ" ಎಂದು ಒದರಲಾರಂಭಿಸಿದ ವೆಂಕಯ್ಯ. ಹುಡುಗನ ಚೀರಾಟ ಎಲ್ಲಮ್ಮನ ಕಿವಿಗೆ ಬಿತ್ತು.

"ಅಯ್ಯಯ್ಯಪ್ಪೋ ನನ್ನೈದನ್ನ ಕೊಂದಾಕ್ತ್ರಪ್ಪೋ! ನಿಮ್ಮ ಕೈ ಸೇದೋಗ. ಉಡುಗ ಮಂಡೇದು ಒಂದು ಸಲೇಟು ತಕ್ಕಂಡ್ರೆ ಅದರ ಪರಾಣ ತಗೀತೀರಾ! ನಿಮ್ಮ ಮನೆ ಆ! ನಿಮ್ಮಾತಂದಾ! ಅಯ್ಯ ನಿಮ್ಮೇಡ್ರು ಮುಂಡೇರಾಗ!" ಎಂದು ಕೂಗಾಡುತ್ತ ನಡುನಡುವೆ ಎದೆ ಎದೆ ಬಡಿದುಕೊಂಡು ಅಳುತ್ತಿದ್ದಳು. ಕೇರಿಯವರೆಲ್ಲ ಓಡೋಡಿ ಬಂದರು.

"ವೆಂಕಯ್ಯನನ್ನು ಹೊಡೆದದ್ದು ಕಾರ್ಯಕರ್ತನ ತಪ್ಪು. ಒಳ್ಳೆಯ ಮಾತಿನಲ್ಲಿ ಸ್ಲೇಟುಗಳನ್ನು ವಾಪಸ್ಸು ಪಡೆಯಬಹುದಾಗಿತ್ತು. ಏನೋ ಚಿಕ್ಕ ಹುಡುಗ ದುರಾಸೆಯಿಂದ ಒಂದು ಸ್ಲೇಟು ತೆಗೆದುಕೊಂಡರೆ ಪ್ರಾಣ ಹೋಗುವಂತೆ ಹೊಡೆಯುವುದು ಮಹಾಪರಾಧ. ಗಾಂಧಿಯವರ ಸಿದ್ಧಾಂತಗಳನ್ನು ಹೇಳಿಕೊಡು ಬಂದು, ಅವರ ಹುಟ್ಟಿದ ದಿನದಂದೇ ಒಬ್ಬ ಹುಡುಗನ ಪ್ರಾಣ ತೆಗೆಯುವಂತೆ ಹೊಡೆಯುವುದೇ? ಅಷ್ಟು ಶಾಂತಿ ಇಲ್ಲವಾದರೆ ಇವರೇಥಾ ಕಾಂಗ್ರೆಸ್ಸಿಗರು?" ಎಂದು ಕೂಗಾಡಿದರು. ವೆಂಕಯ್ಯನನ್ನು ಹೊಡೆದ ಕಾರ್ಯಕರ್ತನ ಮುಖ ಕಾಸಿನಗಲವಾಗಿ, ತಲೆ ತಗ್ಗಿಸಿ ನಿಂತ. ಆ ರಾದ್ಧಾಂತ ನಡೆಯುತ್ತಿರುವಂತೆಯೇ ರಿಕ್ಷಾದಲ್ಲಿದ್ದ ಸ್ಲೇಟು ಪುಸ್ತಕಗಳನ್ನು ಉಳಿದವರು ತಮ್ಮ ಕೈಗೆ ಸಿಕ್ಕಿದಷ್ಟು ಹೊತ್ತುಕೊಂಡು ಹೋದರು ಕೇರಿಯವರ ಬಲವಂತದಿಂದ ಕಾರ್ಯಕರ್ತ ಕೈ ಮುಗಿದು ಕ್ಷಮೆ ಕೇಳಿದ. ಕೇಶವರಾಯ ನೋಡುತ್ತಿರುವಂತೆಯೇ ಕಾರ್ಯಕರ್ತ ಮುಖ ಚಿಕ್ಕದು ಮಾಡಿಕೊಂಡು ಹೊರಟು ಹೋದ. ಕುರ್ಚಿಗಳನ್ನೂ ಫೋಟೋಗಳನ್ನೂ ಒಳಗಿರಿಸಿ ಬೀಗ ಹಾಕಿ ಮತ್ತೆ ಬೇವಿನ ಮರದ ಹತ್ತಿರ ಬಂದ ಕೇಶವರಾಯ. ಅಲ್ಲಿ ನಡೆದ ರಾದ್ಧಾಂತದ ಗುರುತಾಗಿ ಒಡೆದ ಸ್ಲೇಟಿನ ಚೂರುಗಳೂ ಕಟ್ಟುಗಳೂ ಹರಿದ ಪುಸ್ತಕಗಳ ಹಾಳೆಗಳೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು.



ಎಲ್ಲೋ ಎಲ್ಲಮ್ಮ ಎತ್ತರದ ಧ್ವನಿಯಲ್ಲಿ ಕೂಗಾಡುತ್ತಿದ್ದಳು.

"ಎಂಕನಿಗೆ ನಾಕೇಟು ಬಿತ್ತು. ಉಂ! ಓಗ್ಲಿ ಬುಡು. ಈ ಜನ ಎದ್ದ ಗಳ್ಗಿ ಒಳ್ಳೇದು; ಒತ್ರಂಟ ರೂಪಾಯಿ ಮಕ ನೋಡ್ತಂಗಾತು. ಇಂಗ್ಯಾಡ್ದಿದ್ರೆ ಆಯ್ತದಾ? ಗುಂಪ್ನಾಗೇ ಗೋಯಿಂದ ಅನ್ಬೇಕು! ಯಂಕ ವಸಿ ಕೈಗೆ ಬಂದಾಂದ್ರೆ ಅನ್ನಕ್ಕೆ ಬರ ಇಲ್ಲ."

ಆ ಮಾತುಗಳನ್ನು ಕೇಳಿದ ಕೇಶವರಾಯನ ಮನಸ್ಸೂ ವ್ಯಗ್ರಗೊಂಡಿತ್ತು. ಏನೋ ಯೋಚಿಸಿಕೊಂಡು ಅಂಗಡಿಯ ಬೀದಿಗೆ ಬಂದ. ಸಾಹುಕಾರ ಚೆನ್ನಯ್ಯನ ಮಗ ಕನಕಯ್ಯ ಒಂದು ರಿಕ್ಷಾದ ತುಂಬಾ ಸ್ಲೇಟು ಪುಸ್ತಕಗಳನ್ನು ತುಂಬಿಸಿಕೊಂಡು ಹೋಗುತ್ತಿದ್ದ.

೩

"ಏನು ಕನಕಯ್ಯ! ಸ್ಲೇಟು ಪುಸ್ತಕ ತೊಗೊಂಡ್ಹೋಗ್ತಿದೀ! ಏಮ್ತಂದೇನೂ ದಾನ ಮಾಡ್ತೀಂತ ಹೇಳಿದಾರೇನು?" ಕೇಳಿದ ಕೇಶವರಾಯ.

"ಹಿಹಿಹೀ......ಹಿಹಿಹೀ......ನಮ್ಮಪ್ಪ ಅಂತಾ ಉದ್ಯೋಗಿಲ್ದಿದ್ದ ಕೆಲಸ ಮಾಡೋಲ್ಲ ಹೋಪ್ಪ. ಏನೋ ಅಗ್ಗವಾಗಿ ಸಿಕ್ತೂಂತ ಕೊಂಡ್ಕೊಂಡೆ. ಐದನೇ ತಾರೀಖು ಕಂಟ್ರಾಕ್ಟರ್ ರಾಮಶೇಷಯ್ಯನೋರ ಏಳನೇ ಮಗನಿಗೆ ಅಕ್ಷರಾಭ್ಯಾಸ ಮಾಡ್ತಾರಂತೆ. ನಮ್ಮ ಬೀದಿ ಮೊದಲಲ್ಲಿರೋ ಪ್ರೈಮರಿ ಸ್ಕೂಲ್ಗೆ ಸೇರಿಸ್ತಾರಂತೆ. ಅವರು ಒಂದು ಐನೂರು ಸ್ಲೇಟು, ಪುಸ್ತಕ ಬೇಕೂಂದ್ರು – ಕೊಂಡ್ಕೊಂಡೆ." ಎಂದ.

"ಅದ್ಸರಿ, ಇಷ್ಟು ಅಗ್ಗವಾಗಿ ಎಲ್ಲಿ ಸಿಕ್ತು?" ಅರ್ಥವಾಗದ ಪರಿಚ್ಛೇದಕ್ಕಾಗಿ ಕೇಳಿದ ಕೇಶವರಾಯ.

"ಆ ತೋಟದಹತ್ರದ ಹರಿಜನ ಕೇರೀಲಿ ಹುಡುಗ್ರಿಗೆ ಸ್ಲೇಟು, ಪುಸ್ತಕ ಹಂಚ್ತಾರೇಂತ ಬೆರಣೆ ಎಲ್ಲವ್ವ ನಿನ್ನೇನೇ ಹೇಳಿದ್ಲು. ಅವಳು ಓದ್ತಾಳೆಯೋ ಉದ್ಧಾರಾ ಆಗ್ತಾಳೆಯೋ? ಸ್ಲೇಟು ಹತ್ತು ಪೈಸಾ, ಪುಸ್ತಕ ಐದು ಪೈಸಾಂತ ಕೊಟ್ರು. ಆ ದಡ್ಡ ಮುಂಡೇವಕ್ಕೆ ಯಾಕೆ ಸ್ಲೇಟು, ಪುಸ್ತಕ. 'ಕತ್ತೆಗೆ ಏಕೆ ಕುಂಕುಮದ ಬೊಟ್ಟು' ಅನ್ನೋ ಹಾಗೆ ಇದಕ್ಕೆ ಬದಲಾಗಿ ಅವರಿಗೆ ಚಕ್ಕುಲಿ ಕೊಡಿಸಿ ಹಾಕಿದರೆ ಬಾಯಿ ಊರಗಲ ಮಾಡಿಕೊಂಡು ತಿನ್ನುತ್ತಿದ್ದರು." ಎಂದ ಕನಕಯ್ಯ.

ಕೇಶವರಾಯನ ಕಣ್ಣ ಮುಂದೆ ಒಡೆದ ಸ್ಲೇಟಿನ ಚೂರುಗಳೂ ಮುರಿದ ಕಟ್ಟುಗಳೂ ಹರಿದ ಪುಸ್ತಕದ ಹಾಳೆಗಳೂ ಸುಳಿದುವು.

"ಹಾಯ್ ಮಹಾತ್ಮ, ನೀನು ಹುಟ್ಟಿದ್ದು ಹುಟ್ಟಿಬಂದಾಅಜ್ಞಾನಿಗಳ ಕಣ್ತೆರೆಯುವುದಕ್ಕೆ ಬೇಡವೆ ಬಾರದೆ! ನೀನು ಮತ್ತೆ ಹುಟ್ಟಿ ಬರಬೇಕು! ಹೌದು ಬಾಪೂ ಮತ್ತೊಮ್ಮೆ ಹುಟ್ಟಿ ಬಾ! ಈ ಕೋಟಿ ಜನರ ಅಹಂಕಾರದ ಅಂಧಕಾರವನ್ನು ಹೋಗಲಾಡಿಸಲು ಬಾ! ಜ್ಞಾನದೀವಿಗೆ ಬೆಳಗಲು ಬಾ! ಇನ್ಯಾರಾದರೂ ಇವರ ಉದ್ಧಾರಕ್ಕೆ ಪ್ರಯತ್ನಿಸಿದರೆ ಅದು "ಬೆಟ್ಟಕ್ಕೆ ಹೊತ್ತ ಕಲ್ಲಾಗುತ್ತದೆ."

ಎಂದುಕೊಂಡು ನಿಡಿದಾದ ಉಸಿರೊಂದನ್ನು ಹುಸೆಯುತ್ತ ನಡೆದ.

* * * * * * * * *

ಮಲಯಾಳಿ ಕಥೆ



# ನುಡಿಯುವ ನೇಗಿಲು

ಮೂಲ:
**ಪೊನ್‌ಕುನ್ನಂ ವರ್ಕಿ**

ಕನ್ನಡಕ್ಕೆ:
**ಕೆ. ಎಸ್. ಕರುಣಾಕರನ್**

ಬಸವಣ್ಣ ಎಂದರೆ ಎಲ್ಲವನ್ನೂ ಘರಿತ-ಬಿಡುತ್ತಿದ್ದ ಔಸೇಪಣ್ಣ. ಆತನೊಬ್ಬ 'ಬಸವನ ಹುಚ್ಚ' ಎಂದು ಉಳಿದ ರೈತರೆಲ್ಲ ಕರೆಯುತ್ತಿದ್ದರು. ಆತನ 'ಕಣ್ಣ'ನ ಬಗೆಗೆ ಅಚ್ಚರಿ ಸೂಚಿಸದ ರೈತರೇ ಇಲ್ಲವೆಂದರೂ ಸರಿಯೆ. ಒಟ್ಟಿನಲ್ಲಿ ಕಣ್ಣ ಔಸೇಪಣ್ಣನ ಜೀವಪದಕವೆಂದು ಬೇಕಾದರೂ ಹೇಳಬಹುದು. ಬೂದುಬಣ್ಣ, ಪುಷ್ಟಿಯಾದ ದೇಹ, ನಸುಬಾಗಿದ ಮೊನಚಾದ ಕೊಂಬುಗಳು, ನಡುಬೆನ್ನಿನ ಮಧ್ಯದಿಂದ ಡುಬ್ಬದ ಬಳಿಗೆ ಸಾಗುವಂತಿದ್ದ ಸುಳಿ, ಹೊರಸಿಡಿಯುವಂತಿದ್ದ ಕಣ್ಣುಗಳು-ಕಣ್ಣನ ಸ್ವರೂಪ ಇದು! ಅದರ ನಡಿಗೆಯಲ್ಲಿ ಏನೋ ಚೆಂದವಿದೆ. ಗದ್ದೆ ಉಳುವುದು ಮೊದಲಾದೆಡೆಗಳಲ್ಲಿ ಔಸೇಪಣ್ಣ ಮನಸ್ಸಿನಲ್ಲಿ ಯೋಚಿಸಿದುದನ್ನು ಅದಾವ ಮಾಯೆಯಿಂದಲೋ ಕಣ್ಣ ತಿಳಿದುಕೊಂಡು ಬಿಡುತ್ತದೆ. ಗುಂಟೆ ಒಡೆಯುವಾಗ, ಒಕ್ಕಲು ಹಾಕುವಾಗ ಎಲ್ಲೆಂದರೂ ಸರಿಯೆ, ಆತ ಉದ್ದೇಶಿಸಿದುದನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಆ ಬಸವಣ್ಣನಿಗಿದೆ. ಸುಮ್ಮನೆ ಬೆದರಿಸುವ ಸಲುವಾಗಿ ಕೈಯಾಡಿಸುವುದರ ವಿನಾ ಔಸೇಪಣ್ಣ ಆ ಎತ್ತನ್ನು ಇದು ವರೆಗೂ ಹೊಡೆದಿಲ್ಲ. ಬೇರಿತರ ರೈತರಂತೆ 'ಬಸವಾ ಗಿಸವಾ ಇತ್ಯಾದಿ ಬಯ್ಗುಳ ಪದವನ್ನು ಕಣ್ಣನ ಬಗೆಗೆ ಹೇಳಬೇಕಾದ ಅಗತ್ಯವೇ ಉಂಟಾಗಿಲ್ಲ. ಗೆಳೆಯರೊಡನೆ ಕೂತುಕತೆ ಹೊಡೆಸುವಷ್ಟೇ ಸ್ನಿಗ್ಧತೆಯಿಂದ ಆತ ಕಣ್ಣನನ್ನು ಮಾತನಾಡಿಸುತ್ತಾನೆ. ಬೇರೆ ಎತ್ತುಗಳು ಎಷ್ಟೇ ಇರಲಿ, ಅವುಗಳೆಲ್ಲವುಗಳ ನೇತಾರ ಈ ಕಣ್ಣ! ಒಂದು ಗದ್ದೆ ಉತ್ತಾದ ಬಳಿಕ ಮತ್ತೊಂದು ಗದ್ದೆಗೆ ಹೋಗುವ ವಿಷಯದಲ್ಲಿ ಕಣ್ಣನಿಗೆ ಹೆಚ್ಚಿನ ಮಾರ್ಗದರ್ಶನವೇನೂ ಬೇಕಿಲ್ಲ. ಅದೆಲ್ಲ ನಿತ್ಯವೂ ಹೇಗಿರಬೇಕೆಂಬುದು ಕಣ್ಣನಿಗೆ ಗೊತ್ತು. ಮುಂದಿನ ಗದ್ದೆಗೆ ಕಾಲು ಹಾಕುವಾಗ ಔಸೇಪಣ್ಣ ಒಮ್ಮೊಮ್ಮೆ ಬೇಡಿಕೊಳ್ಳುತ್ತಿದ್ದ:

"ಲೋ, ಕೊಂಚ ತಡೆಯೋ! ನಾನು ಸೊಲ್ಪ ಎಲಡೆ ಹಾಕ್ಕೊಂಬಿಡ್ತೀವಿ, ಬಾಳ ಒತ್ಯಾಯ್ತಲ್ಲೋ ಎಲಡೆ ಜಗ್ದು!"

ಅದನ್ನು ಕೇಳಿದೊಡನೆಯೇ ಕಣ್ಣ ನಿಂತುಬಿಡುತ್ತಿತ್ತು. ಮನಃತೃಪ್ತಿಯಾಗುವಂತೆ ಎಲೆ ಅಡಿಕೆ ಜಗಿದು ಆ ಬಡರೈತ ಹ್ಯೂಗುಟ್ಟುತ್ತಿದ್ದ. ಕಣ್ಣ ಮತ್ತೆ ಕೆಲಸಕ್ಕೆ ಆರಂಭಿಸುವದು, ಒಂದು ಗದ್ದೆಯನ್ನು ಬಿಟ್ಟು ಮತ್ತೊಂದು ಗದ್ದೆಗೆ ಹತ್ತಬೇಕಾದರೆ ಎಷ್ಟೊಂದು ಜಾಗರೂಕತೆಯಿಂದ ಕಣ್ಣ ಕಾಲಿಡುತ್ತದೆ, ಗೊತ್ತೇ? ಏರಿಯ ಮೇಲಂತೂ ಅದು ಕಾಲು ಹಾಕುತ್ತಲೇ ಇರಲಿಲ್ಲ. ಏಕೆಂದರೆ, ಅದಕ್ಕೆ ಗೊತ್ತು ಏರಿ ಬಹಳ ಶಿಥಿಲವಾಗಿದೆ ಎಂದು; ತಾನು ತುಳಿದರೆ ಅದು ನುಚ್ಚುನೂರಾಗುತ್ತದೆ ಎಂದು.

ಹೇಳುವುದನ್ನೆಲ್ಲ ತಿಳಿದುಕೊಳ್ಳುವ ಸಾಮರ್ಥ್ಯವುಳ್ಳ ಕಣ್ಣನನ್ನು ಕಟ್ಟಿಹಾಕಬೇಕಾದ ಅಗತ್ಯ ಅಷ್ಟಾಗಿ ಇರಲಿಲ್ಲ. ಉಳುವುದು ಮುಗಿದ ಕೂಡಲೇ ಕೆರೆಯ ಕಡೆಗೋ ಹೊಳೆಯ ಕಡೆಗೋ ಅದನ್ನು ನಿರಾತಂಕವಾಗಿ ಬಿಟ್ಟುಬಿಡಬಹುದು. ಹಾಗೆ ಬಿಡುವಾಗ ಮಾತ್ರ ಅಗತ್ಯವಾದ ಒಂದೆರಡು ಮಾತನ್ನೂ ಔಸೇಪಣ್ಣ ಹೇಳಿಬಿಡುತ್ತಿದ್ದ

"ಲೋ, ಏನಾದ್ರೂ ಸೊಲ್ಪ ತಿಂದುಗಿಂದು ಹೊಟ್ಟೆ ತುಂಬಿಸ್ಕೊ. ಆದ್ರೆ ಮಾತ್ರ ನೋಡು, ಅಲ್ಲಿರೋ ಬಾಳೆ ಸಸಿ ಮಾತ್ರ ಹಾಳ್ಮಾಡ್ಬೇಡ ತಿಳೀತೇ? ರೈತರು ಕಷ್ಟಪಟ್ಟು ಹಾಕಿರುವ ಬಾಳೆಯನ್ನೋ ತೆಂಗಿನ ಸಸಿಯನ್ನೋ ಕಣ್ಣ ಇದು ವರೆಗೂ ಕಡಿದಿಲ್ಲ. ಅವನ್ನೆಲ್ಲ ಹೋಗಿ ಕಡಿಯುವದಕ್ಕಿಂತ, ಅವನ್ನು ನೆಡುವವರನ್ನೇ ಕೊಂಬಿನಿಂದ ತಿವಿಯುವುದು ಮೇಲು—ಎಂಬುದು ಅದಕ್ಕೆ ಗೊತ್ತು. ಉಳುಮೆ ಕೆಲಸ ಮುಗಿದೊಡನೆಯೇ ಕಣ್ಣನ ಮೇಲಿರುವ ಕೊಚ್ಚೆಕೆಸರನ್ನು ತೊಳೆಯಲು ಔಸೇಪಣ್ಣ ವಿಶೇಷ ಗಮನಕೊಡುತ್ತಿದ್ದ.

"ಏಯನ್, ಬಲ್ಲ ಕಾಲು ಈ ಕಡೆ ಸೊಲ್ಪ ಎತ್ತೋ.... ಯಾಕೋ ನೀನು ತಲೆ ಅಗಲಾಡಿಸ್ತೀಯಾ?... ಮತ್ತೆ ನೋಡು. ಎಲ್ಲಾದ್ರೂ ನಿನ್ನ ಕೊಂಬುಗಿಂಬು ನನಗೆ ತಗಲ್ಬಿಟ್ರೆ...!...ಲೋ. ಸೊಲ್ಪ ನೈಸಾಗಿ ನಿಂತ್ಕೊಳ್ಳೋಕಾಗೋಲ್ವೇನೋ" ಔಸೇಪಣ್ಣನ ಈ ಒಂದೊಂದು ಮಾತೂ ಕಣ್ಣನಿಗೆ ಸುಸ್ಪಷ್ಟವಾಗಿ ಅರ್ಥವಾಗುತ್ತಿತ್ತು. ಆದರೆ, ಕಣ್ಣನ ಜೋಡಿ ಎತ್ತಿಗೆ ಇವೆಲ್ಲಾ ಪರಭಾಷೆ. ಮೈತೊಳೆಯುವುದು ಎಂದರೇ ಅದಕ್ಕಾಗದು. ಆದರೂ ಆ ಸ್ನೇಹಮಯಿ ರೈತನ ಪ್ರೀತಿಯ ಎದುರು ಅದೂ ತಲೆಬಾಗುವುದು. ಪ್ರೀತಿಸುವ ಸಾಮರ್ಥ್ಯವಿದ್ದರೂ ಹೃದಯವನ್ನು ಪ್ರಯೋಗಿಸಲು ತಿಳಿಯದ ಕೆಲವರು ಕೃಷಿಕರು ಹೇಳುತ್ತಿದ್ದರು: "ಯಾವ ಕುಂಠಿ ಎತ್ತಾದ್ರೂ ಸರಿ. ಔಸೇಪಣ್ಣನ ಕೈಯಿಂದ ಒಂದ್ಹಿಡಿ ಹುಲ್ಲು ತಿಂದ್ರೆ ಅದ್ರ ಸ್ವರೂಪಾನೇ ಬದ್ಲಾಯಿಸ್ತದೆ. ಔಸೇಪಣ್ಣ ಅದೇನೇನೋ ಮುದ್ದು ಮಾತಾಡ್ತಾನೆ ಎತ್ತುಗಳೊಡ್ನೆ" ಎಂದು. ದಿನದ ಹೆಚ್ಚಿನ ಭಾಗವನ್ನೆಲ್ಲ ಆತ ತನ್ನ ಎತ್ತುಗಳಿಗೆ ಆಹಾರ ಹುಡುಕಿಕೊಂಡು ಬರುವುದರಲ್ಲಿಯೇ ಕಳೆಯುತ್ತಿದ್ದ. ಜಾನುವಾರುಗಳ ಸಂರಕ್ಷಣೆಯನ್ನು ಕುರಿತು ಯಾರಾದರೂ ಮಾತನಾಡಿದರೆ ಔಸೇಪಣ್ಣನಿಗೆ ಪಿತ್ತ ಕೆದರುತ್ತದೆ. ಆತ ಕೇಳುತ್ತಿದ್ದ :

"ಜಾನುವಾರ್ಗಳ್ನ ಸಂರಕ್ಷಿಸ್ಬೇಕು ಸಂರಕ್ಷಿಸ್ಬೇಕು ಅಂತ ಎಲ್ರೂ ಬಾಷ್ಣ ಮಾಡ್ತಾರೆ. ಸರ್ಕಾರದೋರು ಎಲ್ಲಾದ್ರೂ ಒಂದ್ಸಲೇಲಿ ಆಂಗ್ಳೆಯಪ್ಪಗಲ ಸ್ಥಳಾನಾದ್ರೂ ಇದ್ಕೆ ಕೊಟ್ಟಿದ್ದಾರ್ಯೆ? ಕೊಡ್ದೇ ಇರೋವಾಗ ಹ್ಯಾಗ್ತಾನೆ ಸಂರಕ್ಷಣೆ ಮಾಡೋದು? ನಾವ್ ಮೂಸೇ ಗಡ್ಡ ಆಮ್ನೆ ಕೊಟ್ಟು ಸಾಕಾವೇ?"

ಎತ್ತಿನ ಹೊಟ್ಟೆ ತುಂಬಿದರೇನೇ ಆತನ ಹಸಿವು ಹಿಂಗುವುದು. ಜಾನುವಾರು ಕೊಟ್ಟಿಗೆಯಲ್ಲಿ ಉಪವಾಸವಿದ್ದರೆ ಆ ಮನೆಯ ಸಂಪತ್ತೇ ನಶಿಸಿಹೋಗುವುದೆಂದು ಅವನ ನಂಬಿಕೆ. ಬಹುಶಃ ಗೆಣಸಿನ ಸಿಪ್ಪೆಗಳನ್ನು ಎತ್ತುಗಳಿಗೆ ಕೊಡುತ್ತಿರುವುದೆಂದು ಭಾವಿಸಿ ಅವನು ಚಿಕ್ಕ ಚಿಕ್ಕದಾಗಿ ಹೆಚ್ಚಿಯೇ ಆತ ಅವುಗಳಿಗೆ ತಿನ್ನಿಸುತ್ತಿದ್ದ. ಅಥವಾ, ಮುಳ್ಳಿರುವ ಯಾವುದಾದರೂ ಗಿಡಗಂಟೆಗಳನ್ನು ಎತ್ತುಗಳಿಗೆ ಹಾಕಬೇಕಿದ್ದರೆ ಮುಳ್ಳನ್ನೆಲ್ಲ ಸವರಿಯೇ ಅವನ್ನು ಆತ ನೀಡುತ್ತಿದ್ದುದು

ಹೊರಗೆಲ್ಲಾದರೂ ಹೋಗಿ ಮನೆಗೆ ವಾಪಸು ಬಂದೊಡನೆಯೇ ಆತ ಕೂಗು ಹಾಕುತ್ತಿದ್ದ : "ಲೋ ಕಣ್ಣಾ!" ಔಸೇಪ್ಪಣ್ಣನ ಸ್ವರ ಕೇಳಿದ್ದೇ ತಡ, ಸ್ನೇಹಶೀಲತೆಯುಳ್ಳ ಕಣ್ಣ ಗುಟುರು ಹಾಕತೊಡಗುತ್ತದೆ. ಈತ ಹತ್ತಿರ ಹೋಗುವತನಕ ಅದು ತಲೆಯನ್ನೆತ್ತಿ ನೋಡುತ್ತ ನಿಲ್ಲುತ್ತದೆ. ಒಂದೋ, ಒಂದು ಹಿಡಿ ಹಸಿ ಹುಲ್ಲು; ಇಲ್ಲವೇ, ಒಂದೆರಡು ಬಾಳೆಹಣ್ಣಿನ ಸಿಪ್ಪೆ—ಈ ಬಹುಮಾನದೊಂದಿಗೇ ಔಸೇಪಣ್ಣ ಸಾಮಾನ್ಯವಾಗಿ ಬರುವುದು. ಔಸೇಪಣ್ಣನ ಕೈಯಿಂದಲೇ ಆ ಪದಾರ್ಥವನ್ನು ಸ್ವಾಹಾ ಮಾಡುತ್ತಿತ್ತು, ಕಣ್ಣ. ಒಮ್ಮೊಮ್ಮೆ ಆತ ಅದರ ಶರೀರವನ್ನು ಸವರುತ್ತಿದ್ದ. ಆಗ ಕಣ್ಣ ಅವನ ಕೈಯನ್ನು ನೆಕ್ಕು

ತ್ತಿತ್ತು. ಆತನ ಕೈಯ ಒಣಗಿದ ಬೆವರಿನ ಉಪ್ಪಿನ ರುಚಿ ಕಣ್ಣನಿಗೆ ಬಲು ಪ್ರಿಯವಾದುದು.

ಎಷ್ಟೇ ಸದ್ದು ಗದ್ದಲಗಳಿರಲಿ, ಔಸೇಪಣ್ಣನ ಧ್ವನಿಯನ್ನು ಕಣ್ಣ ಗುರುತಿಸಿಬಿಡುತ್ತದೆ. ಅವನ ದನಿ ಕೇಳಿದೊಡನೆಯೇ ಗುಡುಗಿನ ಸದ್ದಿಗೆ ನವಿಲು ಸಂತಸಪಡುವಂತೆ ಕಣ್ಣ ಹರ್ಷಪಡುತ್ತಿತ್ತು. ಉಳುವಾಗ ಔಸೇಪಣ್ಣನೇ ನೇಗಿಲು ಹಿಡಿದುಕೊಳ್ಳಬೇಕೆಂದು ಕಣ್ಣನ ಹಟ. ಬೇರೆ ಯಾರಾದರೂ ನೇಗಿಲು ಹಿಡಿದುಬಿಟ್ಟರೆಂದರೆ ತೀರಿತು. ಕಣ್ಣನ ತುಂಟಾಟ ಪ್ರದರ್ಶನ ಇದ್ದೇ ಇರುತ್ತದೆ. ಅದು ತನ್ನ ಹೋರಾಟ ನಿಲ್ಲಿಸಬೇಕಾದರೆ ಔಸೇಪಣ್ಣನೇ ಬಂದು ಹೇಳಬೇಕು. "ಬೇಡ ಕಣೋ. ಅವ್ನ ನನ್ನ ಕಟ್ಟಪ್ಪನಲ್ವೆ? ನಿಂಗೊತ್ತಿಲ್ವೆ ಅವ್ನ?" ಹೀಗೆ ಸಂಧಿ ವಿಗ್ರಹಿಯಾಗಿ ಔಸೇಪಣ್ಣ ನಿಲ್ಲುತ್ತಾನೆ. ಉಳುವಾಗ ಹಾಡಾಗಲೀ ವಾಕ್ಯವಾಗಲೀ ಇಲ್ಲದ ಒಂದು ಬಗೆಯ ರಾಗಾಲಾಪನೆ ಮಾಡುವ ರೂಢಿಯಿದೆ. ಔಸೇಪಣ್ಣ ಅದನ್ನು ಸಮರ್ಥವಾಗಿ ಮೊಳಗಿಸುತ್ತಾನೆ.

"ಹೋಽಽ ...ಓ...ಓ...ಓ...ಓ...ಓ...ಓ!" ಒಂದೆರಡು ನಿಮಿಷಗಳ ಕಾಲ ಹೀಗೆ ಸಾಗುತ್ತದೆ ಅದು.

ಪ್ರೇಮಗಾನಗಳಲ್ಲಿ, ಇಲ್ಲವೇ ವೃಂದಗಾನಗಳಲ್ಲಿ ಕೇಳಬಹುದಾದ 'ಹಮ್ಮಿಂಗ್'ನ ಒಂದು ಪ್ರಾಕೃತ ರೂಪ ಇದು. ಔಸೇಪಣ್ಣನ ಹಮ್ಮಿಂಗ್ ಏರು ದನಿಯಲ್ಲಿ ಹೊರಟಾಗ ಕಣ್ಣ ತನ್ನ ಕಷ್ಟ, ಸಂಕಟ, ಬೆವರುಗಳನ್ನೆಲ್ಲ ಮರೆತು ಆ ನಾದಲಹರಿಯಲ್ಲಿ ತಲ್ಲೀನವಾಗಿ ಹೋಗುತ್ತದೆ. ಕುತ್ತಿಗೆಯ ಗೆಜ್ಜೆಗಳ ಸದ್ದು ಎಡೆಬಿಡದೆ ಕೆಸರಿನಲ್ಲಿ ಹೂಳುತ್ತಿರುವ ಗೊರಸುಗಳ ದನಿಯೂ ಆ ನಾದದ ಲಯಕ್ಕೆ ತಾಳ ಹಿಡಿಯುತ್ತವೆ. ಒಮ್ಮೆ ಒಂದು ತಮಾಷೆಯ ಪ್ರಸಂಗ ನಡೆಯಿತು. ತುಂಡತ್ತಿಲ್ ಕೇಳನ್ ಎಂಬವನ ಮಗ ಪಾಚ್ಚ ಎನ್ನುವವನು ನೇಗಿಲು ಹಿಡಿದಿದ್ದ. ಮೈ ಹಿಗ್ಗೇ ಬೆಚ್ಚಗಾಗಿದ್ದ ನಿಮಿತ್ತ ಔಸೇಪಣ್ಣ ಅಂದು ಹಾಸಿಗೆ ಹಿಡಿದಿದ್ದ. ಒಂದೇ ಒಂದು 'ಅರ' ಕಡಿಮೆಯಾದರೂ ಅಂದಿನ ದಿನ ಕೇಳನ ಗದ್ದೆ ಉತ್ತು ಮುಗಿಯುವುದಿಲ್ಲ. ಹೀಗಾಗಿ ಏನಾದರೂ ಆಗಲಿ ಎಂದು ಯೋಚಿಸಿ ಔಸೇಪಣ್ಣ ಕಣ್ಣ ಮತ್ತು ಅದರ ಜೊತೆಯ ಎತ್ತನ್ನು ಉಳುವುದಕ್ಕೆ ಕಳುಹಿಸಿಕೊಟ್ಟಿದ್ದ. ಉಳಿದ ಎತ್ತುಗಳೊಡನೆಯೂ ತನ್ನ ಜೊತೆಗಾರರೊಡನೆಯೂ ಕಣ್ಣ ಅರ ಕಟ್ಟಿಸಿಕೊಂಡು ಗದ್ದೆಗೆ ಇಳಿಯಿತು. ಒಂದು ಗದ್ದೆಯನ್ನು ಒಂದು ಸಾಲು ಉತ್ತದ್ದಾಯಿತು. ಮುಂದಿನ ಗದ್ದೆ ಉಳತೊಡಗಿದಾಗ ಪಾಚ್ಚನಿಗೆ 'ಹಮ್ಮಿಂಗ್' ಮಾಡಬೇಕೆನಿಸಿತು. ನೇಗಿಲು ಹಿಡಿದುಕೊಂಡೇ ಪಾಚ್ಚ ರಾಗಾಲಾಪನೆ ಮಾಡಿದ. ಸಂಗೀತವನ್ನಾವ ವಸ್ತು ಅವನ ಸಮೀಪಕ್ಕೆ ಸಹ ಎಂದೂ ಸುಳಿದಿರಲಿಲ್ಲ. ಆದರೆ ಹಾಡಬೇಕೆಂದು ಅನಿಸಿದ್ದರಿಂದ ಅವನು ಕೆಟ್ಟಕೆಟ್ಟದಾಗಿ ಹಾಡತೊಡಗಿದ್ದ ಅಷ್ಟೆ. ಆ ದರಿದ್ರ ಸಂಗೀತ ಕೇಳಿಗೋಡ ಕಣ್ಣನಿಗೆ ಎಲ್ಲಿಲ್ಲದ ಕೋಪ ಬಂದಿತು. ತಲೆ ಅಲುಗಿಸಿ ಅದು ತನ್ನ ಪ್ರತಿಭಟನೆಯನ್ನು ಸೂಚಿಸಿತು. ಪಾಚ್ಚನಿಗೆ ಅದು ಅರ್ಥವಾಗಲಿಲ್ಲ. ಆತ ತಿಳಿದ ತನ್ನ ಸಂಗೀತ ಸುಧೆಯನ್ನು ಮೆಚ್ಚಿ ಕಣ್ಣ ತಲೆದೂಗುತ್ತಿದೆಯೆಂದು. ಹಾಡುವವರಲ್ಲಿ ತಮ್ಮ ಹಾಡು ಅಸಹ್ಯವಾಗಿದೆಯೆಂದು ಬೇಗನೇ ತಿಳಿದುಕೊಳ್ಳುವವರು ವಿರಳ. ಬಹಳ ಹೊತ್ತು ಕಣ್ಣ ತನ್ನ ಪ್ರತಿಷೇಧವನ್ನು ವ್ಯಕ್ತಪಡಿಸಿತು. ಏನೇ ಆದರೂ ಪಾಚ್ಚ ಅದನ್ನು ಅರ್ಥಮಾಡಿಕೊಳ್ಳುವುದಿಲ್ಲವೆಂದು ಅದಕ್ಕೆ ಮನದಟ್ಟಾಯಿತು. ಪಾಚ್ಚನ ಸಂಗಡಿಗರಿಗಾದರೋ ಪ್ರಪಂಚದ ಸಮಸ್ತ ರಾಗಗಳೂ ಒಂದೇ. ಅವರಿಂದೆಲ್ಲ ನ್ಯಾಯ ದೊರಕಲಿಲ್ಲ ಕಣ್ಣನಿಗೆ. ಆಗ ಅದು ಗಂಟಲುಗಟ್ಟಿಯಾಗಿ ತೆರೆದು ಹಾಡುಗಾರಿಕೆಯನ್ನೇ ಅಪಮಾನಿಸುತ್ತಿದ್ದ ಪಾಚ್ಚನ ಬಲಗಾಲಿನ ಬೆರಳುಗಳನ್ನು ತನ್ನ ಗೊರಸಿನಿಂದ ತುಳಿದು ಬಿಟ್ಟಿತು

ಪಾಚ್ಚ ಮೂರು ದಿನ ಮೇಲೇಳಲಿಲ್ಲ.



-೨-

**ಸುಮಾರು ಹನ್ನೆರಡು ವರ್ಷಗಳಿಂದ ಅಡೆತಡೆಯಿಲ್ಲದೆ ಕಣ್ಣ ಔಸೇಪಣ್ಣನ ಸಹಾಯಕನಾಗಿ ನಿಂತಿದೆ.**

ಈ ದ್ವಾದಶ ವರ್ಷಗಳಲ್ಲಿ ಅನೇಕ ಬೆಳೆಗಳು ಬಂದಿವೆ. ಹೇಮಂತವೂ ಶಿಶಿರವೂ ಹಲವಾರು ಸಲ ಶೀತಲತಾದಿಗಳನ್ನು ಸವರಿ ಹೋಗಿವೆ. ಊರ ಪಾಳೆಗಾರರು ಜನಸಾಮಾನ್ಯರ ಮೇಲೆ ಎತ್ತುತ್ತಿದ್ದ ಕೆಂಗೋಲುಗಳೂ ಕಿರೀಟಗಳೂ ಉರುಳಿ ಬಿದ್ದವು. ಅದ್ಭುತಕರ ಪರಿವರ್ತನೆಗಳು ನಾಡಿನಾದ್ಯಂತ ತೋರಿಬಂದವು. ಮನುಷ್ಯನನ್ನು ಮನುಷ್ಯ ಶೋಷಣೆ ಮಾಡದಿರುವ ನವೀನ ವ್ಯವಸ್ಥೆಗಳು- ಇಂದು ಮುಂತಾದ ಆಕರ್ಷಣೀಯ ಘೋಷಣೆಗಳು ಮುಗಿಲಿಗೇರುತ್ತಿದ್ದವು. ಆದರೆ ಔಸೇಪಣ್ಣ ತನ್ನ ಪ್ರೀತಿಯ ಎತ್ತುಗಳನ್ನು ಮಾರಬೇಕಾದ ಪರಿಸ್ಥಿತಿಗಿಳಿದಿದ್ದಾನೆ. ಅನ್ನ ಬೆಳೆಯುವ ಭಾಗ್ಯಕೇದಾರವಾದ ಗದ್ದೆಯನ್ನೇ ಅವನು ಅಡವಿಟ್ಟುಬಿಟ್ಟಿದ್ದಾನೆ. ಸಂಪೂರ್ಣ ಮನಸ್ಸಿನಿಂದಲ್ಲ: ಮನಸ್ಸಿದ್ದರೂ ಇಲ್ಲದಿದ್ದರೂ ಹಾಗೆ ಮಾಡಲೇಬೇಕಾಯಿತು. ಆತ ಒಬ್ಬ ತಂದೆ ಕೂಡ. ವಿವಾಹಪ್ರಾಯ ಕಳೆದು ನಿಂತಿರುವ ಹೆಣ್ಣುಮಗಳ ಪ್ರೀತಿಯ ತಂದೆ! ವರ

ಗಳು ತಮಗೆ ಮೂರು ಕಲ್ಲುಗಳ ಒಲೆಯ ಆಸ್ತಿ ಮಾತ್ರವೇ ಇದ್ದರೂ ಮೂರು ಸಾವಿರ ರೂಪಾಯಿ ಗಳ ವರದಕ್ಷಿಣೆ ಕೇಳುವವರಾದ್ದರಿಂದ ಆತ ಹಾಗೆ ಮಾಡಲು ನಿರ್ಬಂಧಿತನಾದ; ಗದ್ದೆಯನ್ನು ಸಾವಿರದ ಐನೂರು ರೂಪಾಯಿಗಳಿಗೆ ಅಡವು ಹಾಕಿದ. ಈ ಹೊಬಲಗು ವರದಕ್ಷಿಣೆಯ ಲೆಕ್ಕಕ್ಕೆ. ಇನ್ನು ಮದುವೆ ಖರ್ಚು ಬೇರೆ ಇದಕ್ಕೋಸ್ಕರ. ಎಷ್ಟೇ ಅಚ್ಚುಮೆಚ್ಚಿನವಾಗಿದ್ದರೂ ಎತ್ತುಗಳನ್ನು ಮಾರದೆ ಬೇರೆ ಉಪಾಯವೇ ಇರಲಿಲ್ಲ

ಹತ್ತಿಪ್ಪತ್ತು ವರುಷಗಳಿಂದ ಹಗಲಿರುಳು ಔಸೇಪಣ್ಣ ದುಡಿಯುತ್ತ ಬರುತ್ತಿದ್ದಾನೆ ಆತ ಒಳ್ಳೆಯ ಬೇಸಾಯಗಾರ ಆದರೆ, ಪ್ರಯೋಜನ ವೇನು ? ಆತನ ತಲೆಗೂದಲು ಬೆಳ್ಳಗಾಯಿತು; ದೃಷ್ಟಿ ಮಂಜಾಯಿತು; ಮೈ ಚರ್ಮ ಸುಕ್ಕಾಯಿತು; ವಾತರೋಗವಂತೂ ನಿತ್ಯ ಸಂಗಾತಿಯಾಯಿತು. ಚೂರಿಯಿಂದ ಇರಿದರೂ ನಾಟದಷ್ಟು ಕಸುವಿತ್ತು ಕೈಗಳಲ್ಲಿ. ಆದರಿಂದೇನುಮಾಡಲಾದೀತು ? ಓಬೀರಾಯನ ಕಾಲದಿಂದಲೇ ಬಳುವಳಿಯಾಗಿ ಬಂದಿದ್ದಂತಹ ಕೃಷಿ ಉಪಕರಣಗಳನ್ನೇ ಅವನು ಉಪಯೋಗಿಸಬೇಕಾಗಿದೆ ಮಣ್ಣಿನ ಸತ್ವ ಕುಗ್ಗಿದೆ. ಗೊಬ್ಬರವಂತೂ ಇಲ್ಲವೇ ಇಲ್ಲ. ಋಗ್ವೇದಗಾನ ಗಳೊಂದಿಗೆ ಔಸೇಪಣ್ಣನ ಜೀವನ ಸಾಗುತ್ತಿತ್ತು. ತನ್ನ ಲೋಕಾಂತ ಯಜ್ಞವಾದ ಕೃಷಿಗೆ ನೆರವೀಯಲು ವರುಣದೇವನನ್ನೂ ಮೇಘದೇವನನ್ನೂ ಪ್ರಾರ್ಥಿಸುತ್ತಿದ್ದ. ಪ್ರಾರ್ಥನಾಯುಗದ ಆ ನಿಸ್ಸಹಾಯತೆಯಿಂದ ಇಂದಿಗೂ ಆತ ಮೇಲೆದ್ದಿಲ್ಲ. ಆದರೆ ಆತನನ್ನು ಮೋಸಗೊಳಿಸುತ್ತಿರುವ ವ್ಯಾಪಾರಿಗಳೂ ಅವರ ಶೋಷಣೆಯ ಮಾರ್ಗಗಳೂ ಪರಿವರ್ತನೆ ಹೊಂದಿವೆ.

ಕಣ್ಣನ ಕತ್ತಿನ ಹಗ್ಗವನ್ನು ಬದಲಾಯಿಸುವ ಸಂದರ್ಭದಲ್ಲಿ ಔಸೇಪಣ್ಣ ಅಲ್ಲಿ ನಿಲ್ಲಲಿಲ್ಲ. ಹಗ್ಗ ಬದಲಾಯಿಸುವಾಗ ಒಂದು ರೂಪಾಯಿ ಭಕ್ಷೀಸು ಸಿಗುತ್ತದೆ ಆದರೆ ಎಷ್ಟು ರೂಪಾಯಿ ಕೊಟ್ಟರೂ ಸಿಗದಂಥ ಕಂಬನಿಗಳೊಡನೆ ಆತ ದೂರ ಸರಿದು ನಿಂತುಬಿಟ್ಟ ಔಸೇಪಣ್ಣನ ಮನೆಯ ಅಂಗಳದಿಂದ ಇಳಿದು ಹೋಗಲು ಕಣ್ಣನಿಗೆ ಮನಸ್ಸಿರಲಿಲ್ಲ. ಕಣ್ಣ ತನ್ನ ಜೀವದ ಜೀವವಾದ ಯಜಮಾನನನ್ನು ಹುಡುಕುವ ಸಲುವಾಗಿ ತಲೆಯೆತ್ತಿ ಅತ್ತಿತ್ತ ನೋಡಿದ. ಔಸೇಪಣ್ಣ ಎಲ್ಲೂ ಕಂಡುಬರಲಿಲ್ಲ ಪರಿಸ್ಥಿತಿ ಆಗ ಬಿಗಡಾಯಿಸಿದೆಯೆಂಬುದನ್ನು ತಿಳಿದು ಕೊಂಡು ಕಣ್ಣ ಒಂದೆರಡು ಬಾರಿ ಗುಟುರುಹಾಕಿತು: ಆ ವೇಳೆಯಲ್ಲಿ ಮನೆಯ ತೆಂಕಣ ಮೂಲೆಯ ಹಲಸಿನ ಮರದ ಬುಡದಲ್ಲಿ ಒಬ್ಬಾತ ಕಂಬನಿ ತೊಡೆಯುತ್ತ ನಿಂತಿದ್ದ: ಯಾರೊಡನೆಯೂ ಏನನೂ ಹೇಳಲು ಇಲ್ಲದ ಮನುಷ್ಯ !

ವಾಚಾಳಿತನವಾಗಲೀ ಪ್ರದರ್ಶನವಾಗಲೀ ಸ್ನೇಹದ ಅಂತರಾತ್ಮದಲ್ಲಿರುವುದಿಲ್ಲ ದುಃಖಿಸಲು ಸಾಧ್ಯತೆಯುಳ್ಳ ಮನಸ್ಸುಗಳು ಪರಸ್ಪರ ಸನಿಹಕ್ಕೆ ಬರುವುದೇ ಸ್ನೇಹವಾದರೆ- ಕಣ್ಣನಂತೆ ಮತ್ತು ಔಸೇಪಣ್ಣನಂತೆ ಸಮೀಪಕ್ಕೆ ಬಂದವರು ಈ ಲೋಕದಲ್ಲಿಯೇ ಇಲ್ಲ ಅನ್ನಬೇಕು. ತೊಡಕು ತೊಂದರೆಗಳ ವಿಷಯವನ್ನು ಅವರು ಪರಸ್ಪರ ವಿನಿಮಯ ಮಾಡಿಲ್ಲ. ಹೀಗಾಗಿ ಅವೆರಡು ಹೃದಯಗಳೂ ಅಗಲಲು ನೋಯುತ್ತಿವೆ.

ಸ್ವಂತ ಪಾಳೆಯದಲ್ಲಿ ಅವಮಾನಿತನೂ ಅಸಹಾಯಕನೂ ಆಗಿಬಿಟ್ಟ ಸೈನಿಕ ಕೆಲವೊಮ್ಮೆ ಶತ್ರು ಪಾಳೆಯದತ್ತ ನೋಡಿಯಾನೆಂಬುದೂ ದಿಟವೆ. ಸ್ವಂತ ಊರಿನಲ್ಲಿ ಅವಮಾನಿತರೂ ನಿಸ್ಸಹಾಯರೂ ಆಗುವಾಗ ಕೃಷಿಕರಲ್ಲಿ ಕೆಲವರು ವೈನಾಡಿನ ಕಾಡುಗಳತ್ತ ಕಣ್ಣು ಹಾಯಿಸುವುದೂ ಉಂಟು.

"ಕಾಣ್ಲಿಕ್ಕೂ ಕೇಳ್ಲಿಕ್ಕೂ ಆಗದಂಥ ಸ್ಥಳ ಅದು. ಒಡಹುಟ್ಟಿದೋರಲ್ಲ ಬಂಧು-ಬಳಗದೋರಲ್ಲ ಬಂದು ಸೇರ್ಲಿಕ್ಕೆ ಎಟುಕೋದಿಲ್ಲ. ಮಲಜ್ವರದ ಕೊಳ್ಳಿ ನಡ್ಯೋ ಸ್ಥಳಕ್ಕೆ ಔಸೇಪು ಮಾಪಿಳೇ. ತಿಳು ತಿಳ್ದೂ ಹೇಗೆ ಹೋಗ್ತೀಯಪ್ಪಾ ?" ನೆರೆಮನೆಯ ಕಿಟ್ಟುಶ್ಯಾರ್ ಮಲಬಾರ್ ಪ್ರಶ್ನೆಯನ್ನು ಮಾತನಾಡಿದ ಔಸೇಪಣ್ಣನೊಡನೆ ಕೇಳಿದ.

"ಬದುಕಿರ್ಲಿಕ್ಕೆ ಏನ್ ಮಾಡಾನ ಸ್ವಾಮಿ ! ನಂಗೆ ಫಲವತ್ತಾದ ಕೊಂಚ ಹಸಿ ಮಣ್ಣುಬೇಕು. ಮಣ್ಣಿನ್ ವಾಸ್ನೆ ಸಿಕ್ದೇ ಹೋದ್ರೆ ನನ್ಮನಸ್ಸು ಬೆಂದ್ಹೋಯ್ತದೆ"

ನೋವು ತುಂಬಿದ ಆ ಬಡ ರೈತನ ಜೀವನ ಗೊತ್ತುಗುರಿ ಇಲ್ಲದ ಗಾಳಿಯಂತೆ ಸಾಗಿತು. ಇಂದು ನಾಳೆ ಎನ್ನುತ್ತ ಮಲಬಾರ್ ಯಾತ್ರೆ ಮಾತ್ರ ಮುಂದೆ ಹೋಗುತ್ತಿತ್ತು ಅಲ್ಲದೆ ತಾನು ವಾಸವಾಗಿದ್ದ ಆ ಏಳುಸೆಂಟ್ ನೆಲವನ್ನು ಸರಿಯಾದ ಬೆಲೆಗೆ ಮಾರಲೂ ಬೇಕಾಗಿತ್ತು: ಅಷ್ಟು ಸಾಲದ್ದಕ್ಕೆ ಔಸೇಪಣ್ಣನ ಮಗಳು ಕತ್ರಿಕುಟ್ಟಿ ಈಗ ಗರ್ಭಿಣಿ ಚೊಚ್ಚಲು ಬಸಿರಿ ತಾನೆ; ಮೊಮ್ಮಗನ ಮುಖವನ್ನೊಮ್ಮೆ ನೋಡಿಬಿಡುವ ಎಂಬ ಗುಪ್ತ ವಾಂಛೆಯೂ ಇದೆ.

ಅಂದು ಹಬ್ಬದ ದಿನ. ಕ್ರಿಸ್ತಾನರನ್ನು ಸಂಬಂಧಿಸಿದಂತೆ, ಎಷ್ಟು ಬಡವರಾದರೂ ಪರವಾಯಿಲ್ಲ ಅಂದಿನ ದಿವ ಸಂತೋಷಕರವಾಗಿ ಕಾಲ ಕಳೆಯುತ್ತಾರೆ ಅಡುಗೆ ಮನೆಯಿಂದ ಮಾಂಸದ ಸಾರಿನ ಸ್ಫೂರ್ತಿದಾಯಕ ಪರಿಮಳ ಹೊರಹೊಮ್ಮುವ ದಿನವದು ಬಾಣಲೆಯಲ್ಲಿ ಚಿಸಪಿಸ ಶಬ್ದದೊಡನೆ ಅಪ್ಪಂ ತನ್ನ ಮದೋನ್ಮತ್ತ ಸುವಾಸನೆಯನ್ನು ಬೀರುವ ದಿನ ಅದು. ತೆಂಗಿನಕಾಯಿ ಚೂರುಗಳನ್ನೂ ಕರಿಬೇವಿನ ಎಲೆಗಳನ್ನೂ ಹಾಕಿದ ಬಿಸಿಬಿಸಿ ಮಾಂಸದ ಸಾರು ಮತ್ತು ಅಪ್ಪಂ (ವೆಳ್ಳೆ ಅಪ್ಪಂ-ಒಂದು ಖಾದ್ಯ ಎರಡು ಪಾತ್ರೆಗಳ ತುಂಬ ಇದ್ದಿದ್ದರೆ ನಿಜವಾಗಿಯೂ ಭೂರಿಭೋಜನ ಆ ಹಬ್ಬದ ದಿನ ಅವಿಲ್ಲದೆ ಹೋದರೆ ಮನೆ ಬಿಕೋ ಎನಿಸುತ್ತದೆ ಆದರೆ ಔಸೇಪಣ್ಣ ನಿಟ್ಟುಸಿರು ಬಿಡುತ್ತ ಕುಳಿತಿದ್ದಾನೆ ಹತ್ತಿರದಲ್ಲೆಲ್ಲೋ ಗದ್ದೆ ಉಳುತ್ತಿದ್ದಾರೆ ಅಲ್ಲೆಲ್ಲಿಂದಲೋ ಇಂಪಾದ ಜಾನುವಾರ ಪ್ರಣವ ಕೇಳಿಬರುತ್ತಿದೆ ಔಸೇಪಣ್ಣನ ಮನಸ್ಸನ್ನು ಅದು ಬಹುವಾಗಿ ಬೇಯಿಸಿತು. ದನಗಳ ಕೊಟ್ಟಿಗೆಯ ಮೇಲಿದ್ದ ಜೇಡನ ಬಲೆ ಹತ್ತಿಕೊಂಡಿರುವ ನೇಗಿಲನ್ನು ಕಂಡು ಆತನ ಅಂತರಂಗದಿಂದ ನಿಟ್ಟುಸಿರುಗಳು ಹೊರಹೊಮ್ಮುತ್ತಿವೆ ಕಣ್ಣನಂತಹ ಒಂದೆರಡು ಎತ್ತುಗಳೂ ಫಲವತ್ತಾದ ನಾಲ್ಕೈದು ಎಕರೆ ಗದ್ದೆಯೂ ಈ ನೇಗಿಲೂ- ತನ್ನ ದುಃಖಪೂರ್ಣವಾದ ಜೀವನದಲ್ಲಿ ಇನ್ನು ಪುನಃ ಸೇರಿಕೊಳ್ಳುವವೆ ? ಹಾ ! ಅಂತಹುದೊಂದು ಭಾಗ್ಯಕ್ಕೆ ಅವಕಾಶವಿದೆಯೆ ?

—ಎಂದೆಲ್ಲ ಆ ನಿಸ್ಸಹಾಯಕ ರೈತ ಚಿಂತಿಸುತ್ತಿದ್ದ.

"ಅಲ್ಲಾಂದ್ರೆ. ನೀವೇನ ಮಕ್ಕಳೋ ಮರಳೋ ? ಹೀಗೇ ಕುಂತುಬಿಟ್ರೆ ಹೆಂಗಾದೀತು ?... ಬಂದ್ಮೇಲೆ ಅನುಭೋಗಿಸ್ಬೇಕು. ಮಗಳ್ನ ನಾಳೆ ದಿನ ಕಳ್ಸ್ಕೊಂಡೋಗಿ ಬಿಡ್ಬೇಡ್ವೆ ?... ಮನ್ಸಾ ಅಂದ್ರೆ ಕಸ್ಟ ಸುಖ ಇದ್ದೇ ಇರುತ್ತಲ್ಲ !" ಮರಿಯಕ್ಕ- ಔಸೇಪಣ್ಣನ ಕುಟುಂಬ- ಆತನಿಗೆ ಹೇಳತೊಡಗಿದಳು.

ಮಗಳನ್ನು ಮರುದಿವಸವೇ ಗಂಡನ ಮನೆಗೆ ಕರೆದುಕೊಂಡು ಹೋಗಿಬಿಡಬೇಕು. ಅವಳಿಗಾದರೋ ಉಚಿತವಾದಷ್ಟು ಬಟ್ಟೆಬರೆಗಳನ್ನು ಕೊಟ್ಟಿಲ್ಲ. ಕೊಡುವ ಮನಸ್ಸಿಲ್ಲದೆ ಅಲ್ಲ ಹಣದ ಅಭಾವ ಅಷ್ಟೆ. ಅವಳ ಅತ್ತೆ ನಾದಿನಿಯರೆಲ್ಲ ಚುಚ್ಚು ಮಾತು, ಅಪಹಾಸ್ಯದ ಮಾತ ಅನ್ನತೊಡಗಿದ್ದರು ಅವನ್ನೆಲ್ಲ ಕತ್ರಿಕುಟ್ಟಿ ತಾಯಿ ಮರಿಯಕ್ಕನೊಡನೆ ಹೇಳುತ್ತಿದ್ದಳು. ಹೇಗಾದರೂ ಮಾಡಿ ಮೂರು ಜೊತೆ ಬಟ್ಟೆ ಅವಳಿಗೆ ಕೊಟ್ಟೇ ತೀರಬೇಕು. ಉಳಿದದ್ದನ್ನೆಲ್ಲ ಕೊಡದೆ ಹೋದರೂ ನಡೆದೀತು ಇದಕ್ಕೆ ಮಾತ್ರ ಇನ್ನು ತಡವಾಗಕೂಡದು. ಹೀಗೆ ಈ ವಿಷಯವನ್ನು ಹೇಗೆ ಪರಿಹರಿಸುವುದೆಂದು ಚಿಂತೆ ಪಡುತ್ತಿರುವಾಗ ತಟ್ಟನೆ ಒಂದು ಭಾಗ್ಯೋದಯವುಂಟಾಯಿತು. ಮರಿಯಕ್ಕನಿಗೆ ಇಪ್ಪತ್ತು ರೂಪಾಯಿಗಳ ಒಂದು ಚೀಟಿ ಲಭಿಸಿತು ಹಸಿವೆಯಲ್ಲಿ ನವೆಯುತ್ತಿದ್ದರೂ ಹೊಟ್ಟೆಗೆ ಬಟ್ಟೆಕಟ್ಟಿ, ಹಿಡಿಯಕ್ಕಿ ಉಳಿಸುತ್ತ ಆಕೆ ಆ ಚೀಟಿಗೆ ಹಣ ಕಟ್ಟುತ್ತಿದ್ದಳು. ಈ ಹಣದೊಂದಿಗೆ ನಿಂತುಕೊಂಡೇ ಮರಿಯಕ್ಕ ತನ್ನ ಗಂಡನಿಗೆ ತಾಕೀತು ಕೊಟ್ಟಿದ್ದು.

ತನಗೋ ಹಣ ಕೂಡಿಡಲು ಆಗಲಿಲ್ಲ. ಕೈಹಿಡಿದವಳಾದರೂ ಅದನ್ನು ಮಾಡಿದಳಲ್ಲ ಎಂದು ಯೋಚಿಸುತ್ತ ಔಸೇಪಣ್ಣ ಎದ್ದ.

"ಅಪ್ಪಾ. ಬಟ್ಟೆ ಕೊಂಚ ದಪ್ಪವಾಗಿರ್ಲಿ" ಕತ್ರಿಕುಟ್ಟಿ ತಂದೆಗೆ ಹೇಳಿದಳು.

"ಇನ್ನೂ ಕಂದಾಯ ಕಟ್ಲಿಲ್ಲ. ಅದ್ನೂ ಕಟ್ಬಿಡಿ ಹಾಗೇನೇ" ಮರಿಯಕ್ಕ ತಿಳಿಸಿದಳು

"ಎಲ್ಲಾ ಆಗಬೇಕೂಂತಂತಂದ್ರೆ ಇಷ್ಟು ದುಡ್ಡು ಎಲ್ಲಿ ಸಾಕಾಯ್ತದೆ ?" ಔಸೇಪಣ್ಣ ಕೇಳಿದ

"ನೀವು ಏನಾದ್ರೂ ಮಾಡ್ಕೊಳ್ಳಿ ನಂಗೊಂದು ಮುಂಡು * ಮಾತ್ರ ಬೇಕೇ ಬೇಕು ಈಗ ಉಟ್ಟಿರೋದ್ರ ಅವಸ್ಥೆ ನೋಡೀಂದ್ರೆ ಹರ್ದು ಹಲಾಕಾಗ್ಬಿಟ್ಟಿದೆ."

"ಅಂದ್ರೆ ಒಂದ್ಕೆಲಸ ಮಾಡು ಕಣೇ. ನೀನೇ ಜವಳಿ ಅಂತ ಓಗಿ ಜವಳಿ ಕೊಂಡ್ಕೊಂಡು ಬಾ ನಾನು ಅಡಿಗೆ ಕಲ್ಸ ನೋಡ್ಕೋತೀನಿ "

"ಇನ್ಮೇಲೆ ನಿಮ್ಗೂ ಒಬ್ಬೋನ್ನ ಬಿಟ್ಬಿಡಿ" ಮರಿಯಕ್ಕ ತಲೆತಗ್ಗಿಸಿ ಹೇಳಿದಳು.

ಕತ್ರಿಕುಟ್ಟಿ ಬಾಯಿಮುಚ್ಚಿ ನಕ್ಕಳು.

"ಹಾಗಂದ್ರೆ ನಂಗೆ ಮೋಸಯಿರೋದೂ ತೋಂದ್ರೆ ಅನ್ನು ನಿಂಗೆ !... ಆ ವಿಷ್ಯ ನೀನು ಕಾಳಜಿ ಮಾಡ

* ಮುಂಡು ಎಂದರೆ ಪಂಚೆ ಎಂದರ್ಥ. ಸಾಮಾನ್ಯವಾಗಿ ಹಳೆ ಕಾಲದ ಮಲಯಾಳೀ ಹೆಂಗಸರು ಪಂಚೆ, ರವಿಕೆ ಧರಿಸುವುದು ರೂಢಿ.

ಬೇಕಿಲ್ಲ" ಔಸೇಪಣ್ಣ ಜಿಡದೆ ಕಾಡಿಸಿದ. "ವಿಊಸೆನೂ ಎದ್ದಿದ್ರೆ ನೀನು ಇಲ್ಲಿರ್ತಿದೆ ಯಾ?"

ಕಂಕುಳಲ್ಲಿ ಕೊಡೆ, ಹೆಗಲಿನಲ್ಲಿ ಧೋತ್ರ, ಸೊಂಟದಲ್ಲಿ ವೀಳ್ಯದ ಚೀಲ–ಏರಿಸಿ ಔಸೇಪಣ್ಣ ಹೊರಟ.

ಹಬ್ಬದ ಸಡಗರ ಕೋಟ್ಟೆಯೊಳಗೆ ಪಟ್ಟಣದಲ್ಲಿ ಕಡಮೆಯೇನಿರಲಿಲ್ಲ. ಕಿರಿಸ್ತಾನರ ಅಂಗಡಿಗಳೊಂದೂ ತೆರೆದಿರಲಿಲ್ಲ. ಆದರೆ ಇತರರ ಜವಳಿ ಅಂಗಡಿಗಳಿದ್ದುವು. ಒಂದೆರಡು ಅಂಗಡಿಗಳಿಗೆ ಹೋಗಿ ಬಟ್ಟೆ ಕ್ರಯಮಾಡಿದ.

"ಅಯ್ಯಯ್ಯೋ ಬೆಂಕಿ ಹತ್ತಿಕೊಂಡಷ್ಟು ಬೆಲೆ!" ಬಟ್ಟೆಗಳಿಗೆ ಇಷ್ಟೊಂದು ಬೆಲೆ ಅಗತ್ಯವಿಲ್ಲವೆಂಬುದು ಆ ಮುದುಕನ ಅಭಿಪ್ರಾಯ "ಅಂತೂ ಒಂದೆರಡು ಅಂಗಡಿಗಳಲ್ಲಿ ವಿಚಾರ್ಸಿ ನ. ಎಲ್ಲಾದ್ರೂ ಒಂದಾಣೆ ಕಮ್ಮಿ ಸಿಕ್ರೂಂತಂತಂದ್ರೆ ಅಲ್ಲೇ ತಕೋಂಬಿಡಾನ".

ಕಾರಿಗಳು ಮುದ್ರೆಯೊತ್ತಿ ಅನುಮತಿಯೀಯದ ರಾಸುಗಳನ್ನು ಕೊಲ್ಲುವ ... ಅಂಗಡಿಯವರ ಮೇಲೆ ಮೊಕದ್ದಮೆ ಹೂಡಲಾಗುತ್ತದೆ. ಉಳಿದೆಲ್ಲಕ್ಕಿಂತಲೂ ಪೌರರ ಆರೋಗ್ಯದ ಕಡೆಗೆ ಹೆಚ್ಚಿನ ನಿಗಾ ಇಡತಕ್ಕ ಮುನಿಸಿಪಾಲಿಟಿಗೆ ಈ ಪರಿಶೋಧನೆಯಲ್ಲಿ ಐಬು ತಗಲುವುದಿಲ್ಲ. ಪರಿಶೋಧಿಸಿ ಮುದ್ರೆ ಹಾಕುವುದು- ಎಂಬ ಏರ್ಪಾಟಿಲ್ಲದಿದ್ದರೆ ಕಸಾಯಿಯವ ಯಾವು ಯಾವುದೋ ಕಾಯಿಲೆ ಕಸಾಲೆ ಬಾಧಿಸಿದ ರಾಸುಗಳನ್ನೆಲ್ಲ ಕೊಂದು ಮನುಷ್ಯರನ್ನು ಸರ್ವನಾಶ ಮಾಡಿಬಿಡುತ್ತಾನಲ್ಲವೆ? ಈ ವಿಷಯದಲ್ಲಿ ಮುನಿಸಿಪಾಲಿಟಿಯ ಉದಾತ್ತವಾದ ಸೇವೆಯನ್ನು ಔಸೇಪಣ್ಣ ಆ ಮುದ್ರೆಗಳಲ್ಲಿ ಕಾಣಬೇಕು ಎತ್ತುಗಳಲ್ಲಿ ಅನೇಕವು ಇನ್ನು ಬದುಕೇ ಬೇಡವೆಂಬ ಆಸೆಯುಳ್ಳವು ಮರಣದ ಅಂದಾದರೂ ಅವಕ್ಕೆ ತಮ್ಮ ಜೀವನದಲ್ಲಿ ಒಂದು ಆಶ್ವಾಸನೆಯುಂಟಾಗುತ್ತದೆ.

ಎಲುಬೂ ಗೊಡ್ಡೂ ಚರ್ಮವೂ ಪರಸ್ಪರ ಸ್ಪರ್ಧಿಸುತ್ತಿದ್ದ ಒಂದು ಎತ್ತನ್ನು ಕುತೂಹಲದಿಂದ ನೋಡಿದ. ಆ ಮುದುಕನ ಹೃದಯಕ್ಕೆ ಬೆಂಕಿ ತಾಕಿತು: ಕಣ್ಣು ಕತ್ತಲೆಯುಂಟಾಯಿತು; ಶರೀರ ನಡುಗಿತು. ಹೌದು, ಹೌದು...ಅದು ಕಣ್ಣನೇ!

"ಕಣ್ಣಾ!!!"

–ಸ್ನೇಹ ತುಂಬಿದ ಹೃದಯದಾಳದಿಂದ ಆ ಧ್ವನಿ ಮೊಳಗಿತು. ಒಂದೇ ನೆಗೆತಕ್ಕೆಂಬಂತೆ ಆತ ಆ ಮೂಕ ಪ್ರಾಣಿಯ ಸಮೀಪಕ್ಕೆ ಸಾಗಿದ. ಯಾವ ಧ್ವನಿ ಆ ಸಾಧುಪ್ರಾಣಿಯ ಕಿವಿಗಳಿಗೆ ಅಮೃತವನ್ನು ಸುರಿದಂತೆ ಆಪ್ಯಾಯಮಾನವಾಗುತ್ತಿದ್ದಿತೋ ಆ ಧ್ವನಿಯ ಆಗಮನ ಕಣ್ಣನ ಮೈಯಲ್ಲಿ ರೋಮಾಂಚನವನ್ನುಂಟುಮಾಡಿತು. ಎತ್ತರವಾದ ಕಟ್ಟಡದ ಮುಂದೆ ಅದು ತಲೆತಗ್ಗಿಸಿ ನಿಂತಿತ್ತು. ಜೀವನ



ಹೀಗೆ ಆತ ನಡೆಯತೊಡಗಿದ. ಈ ರೀತಿ ನಡೆಯುತ್ತಿದ್ದಾಗ ಮುನಿಸಿಪಲ್ ಕಟ್ಟಡದ ಸಮೀಪಕ್ಕೆ ಆತ ತಲಪಿದ. ಅಲ್ಲಿ ಗೋಡೆಯ ಹೊರಗೆ ಅನೇಕ ಎತ್ತುಗಳನ್ನು ನಿಲ್ಲಿಸಿದ್ದು ಕಣ್ಣಿಗೆ ಬಿತ್ತು. ಮೂಳೆ, ಚರ್ಮ ಮಾತ್ರ ಗೋಚರಿಸುತ್ತಿದ್ದ ಮೂಕ ಜೀವಿಗಳು! ತುಂಬ ವಯಸ್ಸಾದ ಎತ್ತು: ಬಾಲಕ್ಕೆ ನಾಲ್ಕಾರು ಮಡಿಕೆಗಳಾಗಿರುವವು: ಗಾಡಿ ಎಳೆದು ಎಳೆದು ಹೆಗಲು ದಡ್ಡು ಬಿದ್ದು ಹೋದವು: ಮುರುಕಲು ಕೊಂಬುಗಳಿಂದ ಕೂಡಿದವು: ಮನುಷ್ಯನ ಜೀವ ಕಾರುಣ್ಯ ದಾರಿದ್ರ್ಯವನ್ನು ಎತ್ತಿ ತೋರಿಸುವಂಥವು-ಹೀಗೆ ಹಲವಾರು ಬಗೆಯ ಎತ್ತುಗಳು ಅಲ್ಲಿದ್ದುವು. ಅವೆಲ್ಲವುಗಳ ದೇಹಗಳ ಮೇಲೂ ಮುನಿಸಿಪಾಲಿಟಿ ತನ್ನ ಗುರಿಯ ಮುಗಿದ ಮುದ್ರೆಯನ್ನು ಅಚ್ಚೊತ್ತಿದ್ದಿತು: ಹಬ್ಬದ ಪಾರಣೆಗೆ ಮನುಷ್ಯ ತಿನ್ನಲು ಸಿದ್ಧವಾದ ಮಾಂಸದ ಅವಶೇಷ ಮಾತ್ರ ಅವುಗಳಲ್ಲಿ ಕಾಣುತ್ತಿದ್ದಿತು. ಮುನಿಸಿಪಾಲಿಟಿಯ ಅಧಿ

ಮೈ ಕೈ ಗಟ್ಟಿಯಾಗಿರುವ ಕಾಲದಲ್ಲಿ ಅತಿಯಾಗಿ ನವೆದದ್ದಾಯಿತು ಕೈಕಾಲುಗಳ ಬಲ ಕುಗ್ಗಿದಾಗ ನಿಂದನೆಗೂ ಕ್ರೌರ್ಯಕ್ಕೂ ಬಲಿಯಾಗಬೇಕಾದುದಕ್ಕಿಂತ ಮರಣವೇ ಎಷ್ಟೋ ಉತ್ತಮ! ಆ ದೃಶ್ಯವನ್ನು ಕಂಡು ಔಸೇಪಣ್ಣ ಬಹಳ ಹೊತ್ತು ಸ್ತಂಭೀಭೂತನಾಗಿ ಅಲ್ಲೇ ನಿಂತು ಬಿಟ್ಟ ಆತನ ಹೃದಯದಲ್ಲಿ ಮುದುಡಿಕೊಂಡಿದ್ದ ಜೀವಕಾರುಣ್ಯ ನೊಂದಿತು ಒಟ್ಟು ನಲವತ್ತರಷ್ಟು ರಾಸುಗಳಿವೆ ಕೆಲವಾರು ಜನರು ಮುದ್ರೆಯೊತ್ತಿಸುವ ಸಲುವಾಗಿ ಎತ್ತುಗಳನ್ನು ಇನ್ನೂ ತರುತ್ತಲೇ ಇದ್ದಾರೆ. ಕೊಲೆಗಡುಕತನಕ್ಕೆ ಮರಣದಂಡನೆಗೆ ಗುರಿಯಾಗಲು ಬಂದ ಗೆಳೆಯನನ್ನೆಂಬಂತೆ ಒಂದೊಂದು ಎತ್ತನೂ ನೋಡುತ್ತ ಔಸೇಪಣ್ಣ ಮುಂದುವರಿದ

ಆಶ್ಚರ್ಯ ಅತ್ಯಾಶ್ಚರ್ಯ!! ಆತ ಒಮ್ಮೆ ನಡುಗಿ ಹೋದ. ಮಂಕಾದ ತನ್ನ ದೃಷ್ಟಿ ತನ್ನನ್ನು ವಂಚಿಸುತ್ತಿದೆಯೇ ಎಂಬ ಸಂದೇಹದಿಂದ ಆತ

ಸುತ್ತೊಮ್ಮೆ ಅದರ ಕಿವಿಗಳಲ್ಲಿ ಹಠಾತ್ತನೆ ಪ್ರತಿಧ್ವನಿಸಿತು ತಲೆಯೆತ್ತಿ ಅದು ನಾಲ್ದೆಸೆಗಳನ್ನು ನೋಡಿತು.

"ಮಗಾ. ನಿನಗೆ ನನ್ನ ಗುರ್ತು ಹತ್ಲಿಲ್ವೇನೋ? ಈ ಸ್ಥಿತೀಲಿ ನಿನ್ನನ್ನು ನಾನು ನೋಡ್ಬೇಕಾ ಯ್ತೇನೋ!"

-ಕಣ್ಣನ ಬಳಿ ನಿಂತು ಸ್ನೇಹಸ್ಪಂದನಗಳು ಉದ್ಭವಗೊಳ್ಳುತ್ತಿದ್ದ ತನ್ನ ಎದೆಗೆ ಅದನ್ನು ಅಪ್ಪಿಕೊಂಡು ಅದರ ಹುಬ್ಬುಗಳನ್ನೂ ನೆತ್ತಿಯನ್ನೂ ಸವರಿದ. ಆ ಕೈಯ ಸ್ನೇಹಸ್ಪರ್ಶ ಏರ್ಪಟ್ಟೊಡನೆಯೇ ಅದರ ಬಾಲ ತನ್ನಿಂದ ತಾನೇ ಎತ್ತಿಕೊಂಡಿತು ಸದ್ದು ಹೊರಹೊಮ್ಮದೆ ಹೃದಯದಲ್ಲಿಯೇ ಕಣ್ಣ ಗುಟುರಿತು. ಕಣ್ಣನ ದೇಹದ ಮೇಲೆ ಮುದ್ರೆ ಒತ್ತಿದ್ದಾರೆಯೋ ಎಂದು ಔಸೇಪಣ್ಣ ಪರೀಕ್ಷಿಸಿದ ಹೌದು; ಮುದ್ರೆಯ ಗುರುತು ಮುಂಗೈಯ ಮೇಲೆ ನಿಚ್ಚಳವಾಗಿ ಕಾಣಿಸುತ್ತಿದೆ, ಅಳಿಸಿ ಹೋಗುವುದಾದ

ತಮಿಳು ಕಥೆ

# ಮಗುವಿನ ಪ್ರಶ್ನೆ

ಮೂಲ ತಮಿಳು :

ಅಖಿಲನ್

ಅನುವಾದ :

ಮತ್ತೂರು ಕೃಷ್ಣಮೂರ್ತಿ



ಹುಡುಗ ಮಣಿ, ಅವನ ತಂಗಿ ಕಮಲೆ, ಇಬ್ಬರೂ ಒಂದೊಂದು ಬಿಳೀ ಕಾಗದದ ಹಾಳೆ, ಪೆನ್ಸಿಲು ಇಟ್ಟುಕೊಂಡು ಬೇರೆ ಬೇರೆಯಾಗಿ ಪಟ್ಟಿ ತಯಾರಿಸುತ್ತಿದ್ದಾರೆ. ಬರೆಯುವುದು. ಅಳಿಸುವುದು. ಬರೆಯುವುದು ತಿದ್ದುವುದು ಮಾಡಿ ಮಾಡಿ ಇಬ್ಬರ ಪಟ್ಟಿಯೂ ಹನುಮಂತನ ಬಾಲ ಬೆಳೆದಂತೆ ಬೆಳೆಯುತ್ತ ಹೋಯಿತು. ದೀಪಾವಳಿಗೆ ತಮತಮಗೆ ಬೇಕಾದ ವಸ್ತುಗಳ ಪಟ್ಟಿ ಅದು.

ಇದ್ದಕ್ಕಿದ್ದಂತೆ ಮಣಿಯ ತಲೆಯಲ್ಲಿ ಸಂಶಯವೊಂದು ತಲೆಯೆತ್ತಿತ್ತು. "ಕಮಲೆ ದೀಪಾವಳಿ ಯಾಕೆ ಬರುತ್ತೆ ಗೊತ್ತೇನೇ ನಿನಗೆ?"

ಉತ್ತರ ಕೊಡಲಾಗದೆ ಕಮಲೆ ಪಿಳಿ ಪಿಳಿ ಕಣ್ಣು ಬಿಟ್ಟಳು. ಅಗಲವಾದ ಕಂಗಳು 'ಉತ್ತರ ಗೊತ್ತಿಲ್ಲ' ಅನ್ನುವುದನ್ನು ಒಪ್ಪಿಕೊಂಡವು. ಮಣಿಗೆ ಖುಷಿಯೋ ಖುಷಿ. ಕಮಲೆಯನ್ನು ಹತ್ತಿರಕ್ಕೆ ಕರೆದು ತನ್ನ ಜ್ಞಾನಪ್ರವಾಹವನ್ನು ತಂಗಿಯ ಕಿವಿಯ ಮೂಲಕ ಹರಿಯಬಿಟ್ಟ. ಹೊಸ ಬಟ್ಟೆ ಉಡುವುದು, ತುಪ್ಪದಲ್ಲಿ ಮಾಡಿದ ಸಿಹಿ ತಿಂಡಿ ತಿನ್ನುವುದು, ಪಟಾಕಿ, ಬಾಣ ಬಿರಸು ಹೊತ್ತಿಸುವುದು ಇವನ್ನೆಲ್ಲ ಮಾಡುವುದಕ್ಕೆ ದೀಪಾವಳಿ ಬರುವುದು-ಎಂಬುದು ಅವನ ವಾದ!

"ಹೋಗೋ ದಡ್ಡ!" ಅಂದಳು ಕಮಲೆ. "ಇದು ಎಲ್ಲರಿಗೂ ಗೊತ್ತೇ ಇದೆ!" ಅಂದಳು.

"ಚಂದ್ರು ನನಗೆ ಹೇಳಿದ ಕಣೇ" ಅಂದ ಮಣಿ. ಚಂದ್ರು ಇವರುಗಳಿದ್ದ ಬಾಡಿಗೆ ಮನೆಯ ಮಾಲಿಕನ ಮಗ.

"ಅವನು ನಿನಗಿಂತ ದಡ್ಡ" ಅಂದಳು ಕಮಲೆ.

"ಸರಿ, ನೀನು, ನಾನು, ಚಂದ್ರು ಮೂವರು ದಡ್ಡರು. ಅಪ್ಪನ ಹತ್ತಿರ ಕೇಳಿ ಬಿಡೋಣವಾ?" ಮಣಿ ಕೇಳಿದ.

"ಬೇಡ ಅಮ್ಮನ ಹತ್ತಿರ ಕೇಳೋಣ" ಅಂದಳು ಕಮಲೆ.

ಆ ಮೇಲೆ ಅವರಿಬ್ಬರೂ ಅವರವರ ಪಟ್ಟಿಯನ್ನು ಪರಸ್ಪರ ತೋರಿಸಿದರು. ಕಮಲೆಯ ಅಕ್ಷರ ಅವಳ ಹಾಗೇ ಮುದ್ದಾಗಿತ್ತಾದರೆ ಅವಳ ತಲೆ ಕೂದಲಿನಂತೆ ಉದ್ದವಾಗಿತ್ತು. ಇನ್ನೂ ಆ ಪಟ್ಟಿಯನ್ನು ಅಪ್ಪನಿಗೆ ತಲುಪಿಸಬೇಕು ಯಾಕಂದರೆ ಆ ಮನೆಯ ಯಜಮಾನರು ಶ್ರೀಮಾನ್ ಸೋಮಸುಂದರ, ಬಿ. ಎ., ಬಿ. ಟಿ.ಯವರ ಕಟ್ಟಾಜ್ಞೆ-ತಮ್ಮ ಪತ್ನಿ ಸರಸ್ವತಿ ಯಾದಿಯಾಗಿ ಮನೆಯಲ್ಲಿ ಯಾರೇ ಆಗಲಿ, ಏನನ್ನೂ 'ಇಂಥದು ಬೇಕು' ಅಂತ ಬಾಯಲ್ಲಿ ಕೇಳಬಾರದು! ಕಾಗದದಲ್ಲಿ ಬರೆದು ಇಡಬೇಕು.

ಮಣಿಗೆ ವಯಸ್ಸು ಒಂಬತ್ತು: ದುಂಡಾದ ಮುಖ ವಿಶಾಲವಾದ ನೆತ್ತಿ: ಬುದ್ಧಿಶಾಲಿತನದ ಕಣ್ಣುಗಳು. ತಂದೆಯಂತೆಯೇ ಇದ್ದ. ಕಮಲೆ ಅವನಿಗಿಂತ ಎರಡು ವರ್ಷ ಚಿಕ್ಕವಳು. ಬೊಗಸೆಗಂಗಳು. ಗುಂಗುರು ಕೂದಲು ತಾಯಿಯ ಪಡಿಯಚ್ಚು.

ಸಂಸಾರದ ಕಷ್ಟನಷ್ಟವೋ, ಸುಖ-ದುಃಖವೋ-

ಏನೂ ತಿಳಿಯದೆ ಮುಗುಧರಾಗಿ ಬೆಳೆಯುತ್ತಿದ್ದರು. ತಾಯಿ ತಾನೇ ಇಸ್ತ್ರಿ ಮಾಡಿಕೊಟ್ಟ ಒಪ್ಪಾಗಿ ಮಡಿಚಿದ ಅಂಗಿಯಲ್ಲಿ ಅಲ್ಲಲ್ಲಿ ತೇಪೆ ಹಾಕಿತ್ತು; ಬಡತನವಿದ್ದರೂ ಆ ಮಕ್ಕಳ ನಡೆ-ನುಡಿಯಲ್ಲಿ ಹಾಕಿಕೊಂಡ ಬಟ್ಟೆಬರೆ ಅಸಹ್ಯಪಡುವಂತೆ ಇರಲಿಲ್ಲ.

ದೊಡ್ಡ ಕಾಂಪೌಂಡಿನಲ್ಲಿ ಹಿಂದಕ್ಕೆ ತಳ್ಳಿ ಇದ್ದ ಔಟ್‌ಹೌಸ್ ಒಂದರಲ್ಲಿ ಇವರುಗಳು ಬಾಡಿಗೆಗೆ ಇದ್ದರು. ಬಾಗಿಲೂ ಹಿಂದುಗಡೆಯೇ. ಬಹಳ ಚಿಕ್ಕ ಮನೆ. ಆ ಇಬ್ಬರು ಮಕ್ಕಳು ಮಾತ್ರ ಕುಳಿತುಕೊಳ್ಳುವಂತಹ ಪುಟ್ಟ ಜಗುಲಿ. ಮೂರೇ ಕೋಣೆ. ಅಡಿಗೆ ಮನೆ, ದೇವರ ಮನೆ, ಪಾತ್ರೆ ತೊಳೆಯುವ ಮನೆ–ಎಲ್ಲವೂ ಒಂದರಲ್ಲಿ; ಮಕ್ಕಳಿಗೆ ಪಾಠ ಹೇಳುವುದು ವಿದ್ಯಾರ್ಥಿಗಳ 'ಹೋಂವರ್ಕ್' ಕರೆಕ್ಟ್ ಮಾಡುವುದು, ಅಧ್ಯಯನ, ವಿಶ್ರಾಂತಿ, ಡ್ರೆಸ್ಸಿಂಗ್ ರೂಮು, ಡ್ರಾಯಿಂಗ್ ರೂಮು, ಗೆಸ್ಟ್ ರೂಮು, ರಾತ್ರಿ ಮಲಗುವುದು-ಇದೆಲ್ಲಕ್ಕೂ ಒಂದು ಕೋಣೆ. ಇನ್ನೊಂದು ಸಣ್ಣ ಕೋಣೆ. ಅದೇ ಶ್ರೀಮಾನ್ ಸೋಮಸುಂದರನ 'ಸ್ಟಡಿ ಕಮ್ ಸ್ಲೀಪಿಂಗ್ 'ರೂಮ್'!

ಹೊರಗೆ ಬಟ್ಟೆ ಒಗೆಯುವುದಕ್ಕೆ ಅನುಕೂಲವಾಗಿದ್ದಿತು.

ಬೆಳಗ್ಗೆ ೬—೩೦ ರ ಸಮಯ. ಅಮ್ಮ ಸರಸ್ವತಿ ಅಡಿಗೆ ಕೆಲಸದಲ್ಲಿ ತೊಡಗಿದ್ದಾಳೆ. ಅಪ್ಪ ಬಟ್ಟೆ ಒಗೆಯುತ್ತಿದ್ದಾನೆ. ಗಪ್-ಚಿಪ್ಪಾಗಿ ಹೋಗಿ ಇಬ್ಬರೂ ತಾವು ಬರೆದ ಪಟ್ಟಿಯನ್ನು ಮೇಜಿನ ಮೇಲೆ ಇಟ್ಟು ಬಂದರು ಮಣಿ ಕಮಲೆಯರು. 'ಊಟಕ್ಕೆ ಬನ್ನಿ' ಅಂತ ಅಮ್ಮ ಕರೆದಳು. ಇಬ್ಬರೂ ಹೋಗಿ ಊಟಕ್ಕೆ ಕುಳಿತರು.

ಅಮ್ಮನ ಹತ್ತಿರ ಕೇಳೋಣವೇನೋ? ಅಂತ ಕಮಲೆ ಕೇಳಿದಳು,— ದೀಪಾವಳಿ ವಿಷಯವನ್ನು- 'ಸಾಯಂಕಾಲ ಕೇಳಿದರಾಯಿತು ಕಣೇ' ಅಂತ ಸನ್ನೆ ಮಾಡಿದ ಮಣಿ. ಬೇಗ ಬೇಗ ಊಟ ಮಾಡಿ, ಅಪ್ಪ ಸ್ನಾನ ಮಾಡಿ ಬರುವುದರೊಳಗೇ ಸ್ಕೂಲಿಗೆ ಓಡಬೇಕು ಅನ್ನುವ ಆತುರ ಅವನಿಗೆ.

ಅಪ್ಪ ಖಂಡಿತಾ ಸಿಟ್ಟಾಗುವುದಿಲ್ಲ. ಆದರೂ ಅವನಿಗೆ ಏನೋ ಭೀತಿ. 'ಕಳ್ಳನ ಮನ ಹುಳ್ಳಗೆ' ಅನ್ನುವ ಹಾಗೆ! ಹೊರಲಾರದಂತಹ ಭಾರವನ್ನು ತಂದೆಯ ಮೇಲೆ ಹೊರಿಸುತ್ತಿದ್ದೇವೆ ಎಂಬುದು ಅವನ ಯೋಚನೆ. ಆದರೆ ಪಕ್ಕದ ಮನೆಯ ಚಂದುವಿನ ತಂದೆ ಅವನು ಕೇಳಿದ್ದನ್ನೆಲ್ಲ ಕೊಂಡು ಕೊಡುತ್ತಿ-ದ್ದಾನೆ. ಹಾಗೆ ಅಪ್ಪ ಯಾಕೆ ಕೊಡಿಸಬಾರದು ಅನ್ನುವುದು ಮಣಿಯ ತರ್ಕ.

ಅವಸರವಸರವಾಗಿ ಡ್ರೆಸ್ ಹಾಕಿಕೊಂಡು ಇಬ್ಬರೂ ಶಾಲೆಗೆ ಓಡಿದರು. ಇವರುಗಳ ಶಾಲೆ ೯—೩೦ ಕ್ಕೆ ಪ್ರಾರಂಭ. ಸಮೀಪದಲ್ಲೇ ಇದೆ. ಅವರ ತಂದೆಯ ಶಾಲೆ ಹತ್ತೂವರೆಗೆ ಪ್ರಾರಂಭ. ಸ್ವಲ್ಪ ದೂರ ಅದು.

ಸೋಮಸುಂದರ ಸ್ನಾನ ಮುಗಿಸಿಕೊಂಡು, ಮಡಿ ಉಟ್ಟು ಸಂಧ್ಯಾವಂದನೆ ಶಾಸ್ತ್ರ ಮಾಡಿ ತನ್ನ ಮೇಜಿನ ಸಮೀಪ ಬಂದ. ಸಾಮಾನ್ಯವಾಗಿ ಸದಾ ನಗುಮುಖ ಅವನದು. ಮೇಜಿನ ಮೇಲಿದ್ದ ಪಟ್ಟಿಯನ್ನು ತೆಗೆದು ನೋಡಿದ. ಮುಖದಲ್ಲಿದ್ದ ಮಂದಹಾಸ ಮಂಗಮಾಯವಾಯಿತು. ಹುಬ್ಬು ಗಂಟಿಕ್ಕಿತು. ಕೋಪವೇ ಬಂದಿತು. ಅಂಗವಸ್ತ್ರ-ದಿಂದ ಮುಖದ ಮೇಲೆ ಕಾಣಿಸಿಕೊಂಡ ಬೆವರ ಹನಿಗಳನ್ನು ಒರಸಿಕೊಂಡ.

ರೇಶ್ಮೆ ಅಂಗಿ, ಟೆರಿಕಾಟ್ ಪ್ಯಾಂಟು, ಬೂಟ್ಸು-ಗಳು, ಬಗೆಬಗೆಯ ಪಟಾಕಿಗಳು ಬೇಕು ಅಂತ ಮಣಿ ಬರೆದಿದ್ದ. ರೇಶ್ಮೆ ಜರಿ ಅಂಚಿನ ಲಂಗ, ಜಂಪರು, ತಂತಿ ಮತಾಪು, ವಿಷ್ಣು ಚಕ್ರಗಳು, ಬೇಕು ಅಂತ ಕಮಲೆ ಕೇಳಿದ್ದಳು. ಕೋಪ ಹೋಗಿ ಪುನಃ ನಗು ಮೂಡಿತು ಅವನ ಮುಖದಲ್ಲಿ. ಎಷ್ಟು ಮುದ್ದು ಮುದ್ದಾಗಿ ಬರೆದಿದ್ದಾಳೆ ಕಮಲೆ ಅಂತ. ಒಂದು ತಪ್ಪು ಸಹ ಇಲ್ಲ. ಎರಡೂ ಪಟ್ಟಿಗಳನ್ನು ಅಂಗಿ ಜೇಬಿನಲ್ಲಿಟ್ಟುಕೊಂಡ. ಊಟಕ್ಕೆ ಬಂದು ಕುಳಿತ. ತಟ್ಟೆಗೆ ಬಡಿಸಿದ್ದಳು ಸರಸ್ವತಿ. ಹೆಸರಿಗೆ ಊಟ ಅದು ಅಷ್ಟೇ. ಸಣ್ಣಕ್ಕಿ ಅನ್ನ, ಬೆಣ್ಣೆ ಕಾಯಿಸಿದ ತುಪ್ಪ, ಒಳ್ಳೊಳ್ಳೆ ಪುಷ್ಟಿಕರವಾದ ತರಕಾರಿಗಳ ಪಲ್ಯ, ಕೆನೆಮೊಸರು—ಇದೆಲ್ಲ ಆರೋಗ್ಯಕರವಾದ ಆಹಾರ ಅಂತ ಪಾಠ ಪುಸ್ತಕ-ದಲ್ಲಿದ್ದುದನ್ನು ಸೋಮಸುಂದರ ಹೇಳಿಕೊಟ್ಟಿದ್ದ ಅಷ್ಟೇ. ಪಾಠ ಹೇಳುವುದಕ್ಕೂ, ಕಾರ್ಯತಃ ನಡೆಸುವುದಕ್ಕೂ ಸಂಬಂಧವಿದೆಯೇ ಪಾಪ! ಅಂತಹ ಊಟ ಮಾಡುವಷ್ಟು ವರಮಾನ ಅವನಿಗಿಲ್ಲ. ಒಂದನ್ನ-ಒಂದು ಸಾರು-ನೀರು ಮಜ್ಜಿಗೆ ಅಷ್ಟೆ

"ಮಕ್ಕಳು ದೀಪಾವಳಿಯ ವಿಷಯವಾಗಿ ನಿನ್ನ ಹತ್ತಿರ ಏನಾದರೂ ಕೇಳಿದರೇನು?"–ಅಂತ ಕೇಳಿದ ಸೋಮಸುಂದರ

"ಊಹೂಂ" ಅಂತ ತಲೆಯಾಡಿಸಿದಳು ಸರಸ್ವತಿ. "ಅವರವರಲ್ಲೇ ಏನೇನೋ ಮಾತಾಡಿಕೊಳ್ಳುತ್ತಿದ್ದರು. ಮನೆಮಾಲೀಕರ ಮಗ ಚಂದ್ರನೂ ಇವರಿಗೆ ಅದೇನೇನೋ ಹೇಳುತ್ತಿದ್ದ" ಅಂದಳು ಸರಸ್ವತಿ. ಪಟ್ಟಿಗಳು ಸಿದ್ಧವಾದುದರ ಮೂಲ ಕಾರಣವನ್ನು ತಿಳಿದುಕೊಂಡ ಸೋಮಸುಂದರ. ಮಡದಿಯ ಹತ್ತಿರ ಏನೂ ಹೇಳಲಿಲ್ಲ. ಬಸ್ಸಿಗೆ ಕ್ಯೂ ನಿಂತಿದ್ದು ಅನಂತರ ಬಂದ ಬಸ್ಸಿನಲ್ಲಿ ನಿಂತುಕೊಂಡೇ ಹಾಗೂ ಹೀಗೂ ಮಾಡಿ ಎರಡು ಮೈಲಿ ದೂರದಲ್ಲಿದ್ದ ಶಾಲೆ ಸೇರಿದ.

ತರಗತಿಗಳಲ್ಲಿ ಈಗೆಲ್ಲ ಮೊದಲಿಗಿಂತ ಹೆಚ್ಚು ವಿದ್ಯಾರ್ಥಿಗಳು. ಮೊದಲಿನ ಹಾಗೆ ಒಬ್ಬೊಬ್ಬರನ್ನೂ ಗಮನಿಸಿ ಹೇಳಿಕೊಡುವ ವ್ಯವಧಾನವಿಲ್ಲ. ಆದರೆ ಇವೊತ್ತು ಯಾಕೋ ಏನೋ ಸೋಮಸುಂದರನ ಗಮನವೆಲ್ಲ ವಿದ್ಯಾರ್ಥಿಗಳು ಹಾಕಿದ್ದ ರಂಗು ರಂಗಿನ ಉಡುಪಿನ ಮೇಲೆಯೇ.

ಸೋಮಸುಂದರನಿಗೆ ಇದ್ದುದು ಮೂರು ಸೆಟ್ಟು ಉಡುಪು ಮಾತ್ರ. ಈ ವಿಷಯದಲ್ಲಿ ಅವನ ಮನೆಯಲ್ಲಿ ಸಮಾಜವಾದ ಸಮಧರ್ಮ ನೆಲೆಸಿತ್ತು. ಆದರೂ ಅದನ್ನೇ ದಿನವೂ ಸರಸ್ವತಿಯು ಶುಭ್ರವಾಗಿ ಒಗೆದು ಒಣಹಾಕಿ, ಮಡಚಿ, ಇಸ್ತ್ರಿ ಹಾಕುತ್ತಿದ್ದಳು. ಸರಸ್ವತಿ ಗಂಡನಿಗೆ ಬರುವ ೧೭೫ ರೂ. ಸಂಬಳದಲ್ಲಿ ಮಕ್ಕಳಿಗೆ ಬಡತನದ ಸೂಚನೆಯನ್ನೇ ಕೊಡದಂತೆ ಹೇಗೋ ಜಾಣ್ಮೆಯಿಂದ ಸಂಸಾರ ನಿಭಾಯಿಸುತ್ತಿದ್ದಳು.

ಸೋಮಸುಂದರನಿಗೂ ವಿದ್ಯಾರ್ಥಿಗಳಿಗೆ ಶಿಕ್ಷಣ ಕಲಿಸುವುದರಲ್ಲಿ 'ಮೋಸ ಮಾಡುವುದು' ತಿಳಿದಿರಲಿಲ್ಲ, ಸಾಚಾ ಮನುಷ್ಯ. ಶ್ರಮಪಟ್ಟು ಕಲಿಸುತ್ತಿದ್ದ. ಎಲ್ಲರೂ ಉತ್ತಮ ದರ್ಜೆಯಲ್ಲಿ ಪಾಸಾಗಬೇಕೆಂಬುದೇ ಅವನ ಧ್ಯೇಯ. ಮನೆಗೆ ವಿದ್ಯಾರ್ಥಿ-ಗಳನ್ನು ಕರೆದು ಸಹ ಪಾಠಹೇಳುತ್ತಿದ್ದ. "ಹೋಂ ವರ್ಕ್" ಪುಸ್ತಕಗಳನ್ನೆಲ್ಲ ತಾನೇ ಹೊತ್ತು ತಂದು ರಾತ್ರಿ ೧೨ ಗಂಟೆ ವರೆಗೆ ಕುಳಿತಿದ್ದು ನೋಡುತ್ತಿದ್ದ. ಶಾಲೆಯಲ್ಲಿ ಕಾಲಹರಣ ಮಾಡಿ ಹೊರಗೆ ಪಾಠ ಹೇಳಿಕೊಟ್ಟು ಹಣ ಗಳಿಸುವ 'ಬುದ್ಧಿ'ಯೂ ಇರಲಿಲ್ಲ ಸೋಮಸುಂದರನಿಗೆ.

ಇದ್ದಕ್ಕಿದ್ದಂತೆ-ಒಂದು ದಿನ ಅತನಿಗೆ ಏನನಿಸಿತೋ ಏನೋ; ಎಂ. ಎ. ಗೆ ಪ್ರೈವೇಟ್ ಆಗಿ ಓದಲು ತೊಡಗಿಬಿಟ್ಟ.

ಸರಸ್ವತಿಯ ಕೆಲಸ ಇನ್ನೂ ಹೆಚ್ಚಿತು. ನಾಲ್ಕು ಗಂಟೆಗೇ ಎದ್ದು ಒಲೆ ಹತ್ತಿಸಬೇಕು. ರಾತ್ರಿ ಇನಿಯನ, ಮಕ್ಕಳ ಊಟವಾಗಿ ತನ್ನದೂ ಮುಗಿದು ಪಾತ್ರೆ ತೊಳೆದಿಟ್ಟು ಹಾಸಿಗೆ ಹಾಸುವಷ್ಟರಲ್ಲಿ ಗಂಟೆ ಹನ್ನೊಂದು ಹೊಡೆಯುತ್ತೆ. ಆಳುಕಾಳುಗಳೇನಿಲ್ಲ. ಎಲ್ಲವನ್ನೂ ತಾನೇ ಮಾಡಬೇಕು, ಬರುವ ವರಮಾನದಲ್ಲಿ ಆಳು ಇಟ್ಟುಕೊಳ್ಳುವುದೆಲ್ಲಿಂದ ಬಂದಿತು.

ದಿನೇ ದಿನೇ ಸರಸ್ವತಿ ಬಡಕಲಾಗುತ್ತಿದ್ದಳು. ವಯಸ್ಸು ಮೂವತ್ತೇ ಆದರೂ ನಲವತ್ತರವಳಂತೆ ಕಾಣಿಸುತ್ತಿದ್ದಳು. ಮನೋಬಲದಿಂದಲೇ ಎಲ್ಲವನ್ನೂ ತೂಗಿಸಿಕೊಂಡು ಹೋಗುತ್ತಿದ್ದಳು. ಆ ಬಲವನ್ನು ಕೊಟ್ಟವನು ಸೋಮಸುಂದರನೇ. ಮಡದಿಗೆ ಇಷ್ಟವಾದ ಉಡಿಗೆತೊಡಗೆ ಕೊಡಿಸಲು ಅವನಿಂದಾಗಲಿಲ್ಲವಾದರೂ ತನ್ನ ಸರ್ವಸ್ವವನ್ನೂ ಅವಳಿಗೆ ಅರ್ಪಿಸಿದ್ದ. ಅದೇ ಅವಳಿಗೆ ಸಕಲ ಸಂಪದವೂ ಆಗಿದ್ದಿತು. ಹೆಂಡತಿಗೆ ಇದಕ್ಕಿಂತ ಏನು ಬೇಕು? ಇದು ಒಂದು ಇಲ್ಲದೆ. ಅಷ್ಟೈಶ್ವರ್ಯ ಇದ್ದರೂ ಯಾವ ಗೃಹಿಣಿಗೆ ಸೌಖ್ಯವಿರುತ್ತದೆ?

ಇಷ್ಟು ಚಿಕ್ಕ ಮನೆ ಆಗಿದ್ದರೂ ಸರಸ್ವತಿ ಅಲ್ಲೇ ಬೇರೆ ಒಂದು ಚಿಕ್ಕ ಕುಟುಂಬಕ್ಕೆ ಅವಕಾಶ ಮಾಡಿಕೊಟ್ಟಿದ್ದಳು. ಎರಡು ಗುಬ್ಬಚ್ಚಿಗಳು ಅಲ್ಲಿ ಸಂಸಾರ ಹೂಡಿದ್ದವು. ಪುಸ್ತಕಗಳ ಬೀರುವಿನ ಮೇಲ್ಭಾಗದಲ್ಲಿ ಅವುಗಳು ಮನೆ ಮಾಡಿಕೊಂಡಿದ್ದವು. ಆ ಗುಬ್ಬಚ್ಚಿ ದಂಪತಿಗಳದೂ ಚಿಕ್ಕಚೊಕ್ಕ ಸಂಸಾರ. ಅವುಗಳಿಗೂ ಎರಡೇ ಮಕ್ಕಳು! ಮಧ್ಯಾಹ್ನ ಮೂರು ಗಂಟೆ ಸಮಯ ಮಕ್ಕಳು ಬರುವುದಕ್ಕೆ ಇನ್ನೂ ಎರಡು ಗಂಟೆ ಇದೆ. ಗಂಡ ಬರುವುದು ಸಂಜೆ ಏಳು ಗಂಟೆಗೇ- ತಮ್ಮ ಸಂಸಾರದ ಬಗೆಗೇ ಯೋಚಿಸುತ್ತ ಕುಳಿತಿದ್ದ ಸರಸ್ವತಿ ಥಟ್ಟನೆ ಗುಬ್ಬಚ್ಚಿ ದಂಪತಿಗಳ ಕಡೆ ನೋಡಿದಳು. ಆ ಗಂಡು-ಹೆಣ್ಣು ನಡೆಸುತ್ತಿದ್ದ ನಾಟಕ ಕುತೂಹಲಕಾರಿಯಾಗಿದ್ದಿತು. ಚೀಚ್ ಚೀಚ್ ಅನ್ನುವುದು, ರೆಕ್ಕೆ ಬಡಿಯುವುದು. ಅಲ್ಲಿಂದಿಲ್ಲಿಗೆ— ಇಲ್ಲಿಂದಲ್ಲಿಗೆ ಹಾರುವುದು, ಜೂಜಾಟ ಆಡುವುದು ಎಲ್ಲಾ ಮಾಡುತ್ತಿದ್ದವು.

ಸರಸ್ವತಿಯ ಮುಖದಲ್ಲಿ ಲಜ್ಜೆ ಮೂಡಿತು. "ನಾಚಿಕೆ ಇಲ್ಲ ನಿಮಗೆ" ಅಂತ ಹೇಳಿ ತನ್ನೆರಡೂ ಕಂಗಳನ್ನೂ ಅಂಗೈಯಲ್ಲಿ ಮುಚ್ಚಿಕೊಂಡಳು. ಅವಳ ಕೆನ್ನೆ ಕೆಂಪಾಯಿತು. ತುಟಿಗಳು ಅದುರಿದವು. ತನಗೇ ತಿಳಿಯದೆ ಮುಖದಲ್ಲಿ ಮಂದಹಾಸ ಮೂಡಿತು. ಕೈಬೆರಳುಗಳ ಸಂದಿಯಿಂದ ಸರಸಸಲ್ಲಾಪದಲ್ಲಿದ್ದ ದಂಪತಿಗಳನ್ನು ನೋಡಿದಳು. ಭಾವಪರವಶಳಾದಳು, ಪುಳಕಿತಳಾದಳು ಯಾಕೆ?

ಗಂಡು ಗುಬ್ಬಚ್ಚಿಯು ಹೆಣ್ಣು ಗುಬ್ಬಚ್ಚಿಗಿಂತ ಸ್ವಲ್ಪ ದೂರದಲ್ಲಿ ಕುಳಿತಿದೆ. ಮುಖದಲ್ಲಿ ಸಿಟ್ಟು ಕಾಣಿಸಿತು. ಮುಖವನ್ನು ಆಗಾಗ ಬೇರೆ ಕಡೆ

ತಿರುಗಿಸುತ್ತಿತ್ತು. ಚಪ್ಪಟೆಪಟ್ಟೆಯಾದ ನಿಲುವು ಗಂಡಸಿನ ಜಬ್ಬರ್; ಬಿಳುಪಾದ ಎದೆ, ಸಹಜ ಸಿದ್ಧವಾದ ಚುರುಕು. ಸರಸ್ವತಿಯಿಂದ ಮಾತ್ರ ಅರಿತುಕೊಳ್ಳಬಹುದಾಗಿದ್ದಂತಹ ಸೋಮಸುಂದರನ ಹಾಗೆ!

ಹೆಣ್ಣು ಹಕ್ಕಿ ಸ್ವರೂಪದಲ್ಲಿ ಚಿಕ್ಕದು. ಕಾಡಿಗೆಯನ್ನು ಎಣ್ಣೆಯಲ್ಲಿ ಕಲಸಿ ಗಂಧವನ್ನು ಸೇರಿಸಿ ಪೂಸಿದರೆ ಹೇಗಿರುತ್ತೋ ಹಾಗಿವೆ ಅದರ ಕಣ್ಣುಗಳು. ಪಾದರಸದಂತೆ ಬಲು ಚುರುಕು. ಆಕರ್ಷಕ ಅದು ತನ್ನ ಎಲ್ಲ ಸೌಂದರ್ಯವನ್ನೂ ಕಣ್ಣುಗಳಲ್ಲೇ ಅಡಗಿಸಿ ಇಟ್ಟುಕೊಂಡಿರುವಂತೆ ಅನಿಸಿತು ಸರಸ್ವತಿಗೆ. ಆದರೂ ಅದರ ಮೇಲೆ ಮುನಿಸು ಬಂದಿತು ಆಕೆಗೆ. ಗಂಡನನ್ನು ಅದೆಷ್ಟು ಕಾಡುತ್ತಿದೆ! ದೂರ ದೂರದಲ್ಲೇ ಇದ್ದು ಮುಗ್ಧನಾದ ಗಂಡನು ಪರಿತಪಿಸುವಂತೆ ಮಾಡುತ್ತಿದೆ. ಇನಿಯನ ಪರಿತಾಪ ಕಂಡು ಹಿಗ್ಗುತ್ತಿದೆ. ಹತ್ತಿರ ಬಂದರೆ ತನ್ನ ಎರಡೂ ಕಾಲುಗಳಿಂದ ಜಿಗಿದು ಜಿಗಿದು ದೂರ ಸರಿಯುತ್ತದೆ. ಅಷ್ಟೇನೇ. ದೂರದಿಂದ ತನ್ನ ದೃಷ್ಟಿ ಬೀರಿ ತನ್ನ ಕಡೆ ಎಳೆಯುತ್ತಿದೆ. ತಕ್ಷಣ ಬೇರೆ ಕಡೆ ನೋಡುತ್ತದೆ. ಅಬ್ಬಾ ಏನು ಬಿಂಕ. ಏನ ಬಿನ್ನಾಣ!'

'ನಟನೆ, ಬರೀ ನಟನೆ— ಎಲ್ಲಾ ವೇಷ' ಎಂದು ತನ್ನ ಗೆಳತಿಗೆ ಹೇಳಿ ನಗುವಂತೆ ನಕ್ಕಳು ಸರಸ್ವತಿ. 'ಏಯ್. ನಾಚಿಕೆಪಡುವಂತೆ. ಭಯಪಡುವಂತೆ ಒಂದೂ ತಿಳಿಯದವಳಂತೆ ನಾಟಕ ಆಡುತ್ತಾ ಇದೀಯಾ...?' ಅಂತ ಕೇಳಿದಳು ಹೆಣ್ಣು ಹಕ್ಕಿಯನ್ನು!

ಐವತ್ತು ರೂಪಾಯಿ ಬಾಡಿಗೆ ಕೊಟ್ಟು ಒಂದು ಸಂಸಾರ ಹೂಡಿದಾಗ ಈ ಗುಬ್ಬಚ್ಚಿ ಕುಟುಂಬವೂ ಇಲ್ಲಿ ಬರುತ್ತದೆ ಎಂದು ನಿರೀಕ್ಷಿಸಿರಲಿಲ್ಲ ಸರಸ್ವತಿ. ಹ್ಯಾಗೋ ಒಂದು ದಿನ ಕಿಟಕಿಯ ಮೂಲಕ ಮೊದಲ ಹೆಣ್ಣು ಹಕ್ಕಿ ಬಂದಿತು; ಅದರ ಹಿಂದೆ ಗಂಡು ಬಂದಿತು. ನಿವೇಶನ ಹುಡುಕಿಕೊಂಡವು. ನಿವೇಶನಕ್ಕೆ ಅರ್ಜಿ ಹಾಕಿ ಶಿಫಾರಸ್ಸಿಗೆ ಯಾರ ಕಾಲನ್ನೂ ಹಿಡಿಯದೆಯೇ ಕಟ್ಟಡ ಕಟ್ಟಿಕೊಂಡವು. ಇಂಜನಿಯರು, ಕಂಟ್ರಾಕ್ಟರು. ಗಾರೆ ಕೆಲಸದವರು. ಬಡಗಿ ಕೆಲಸದವರು ಎಲ್ಲ ಅವುಗಳೇ. ಚಿಕ್ಕ ಚಿಕ್ಕ ಒಣ ಹುಲ್ಲು ಕಡ್ಡಿಗಳು, ಹರಕು ಬಟ್ಟೆ ತುಂಡುಗಳು. ಕಸದ ಚೂರು, ಕಾಗದದ ಚೂರುಗಳು ಎಲ್ಲವನ್ನೂ ಕೊಕ್ಕಿನಲ್ಲಿ ಕಚ್ಚಿ ತಂದು ಹ್ಯಾಗೊ ಮಾಡಿ ಮನೆ ಕಟ್ಟಿದವು. ಸಂಸಾರ ಪ್ರಾರಂಭಿಸಿದವು. ಈಗ ಎರಡು ಮಕ್ಕಳೂ ಇವೆ. ಚಿಕ್ಕ ಚೊಕ್ಕ ಸಂಸಾರ!

ಒಂದು ಸಲ— ಮಳೆಗಾಲ— ೨-೩ ದಿನ ಬಿಡದೇ ಮಳೆ ಸುರಿಯಿತು. ರಾತ್ರಿ ಇದ್ದಕ್ಕಿದ್ದಂತೆ ಮಣಿ— ಕಮಲೆ ಇಬ್ಬರೂ ಅಳುತ್ತಿದ್ದುದು ಕೇಳಿ ಸರಸ್ವತಿ ಅಲ್ಲಿಗೆ ಓಡಿ ಬಂದಳು. ಹೊರಗೆ ಹೋದಿದ್ದ ಸೋಮಸುಂದರನೂ ಛತ್ರಿ ಮಡಿಸುತ್ತ ಒಳಕ್ಕೆ ಬಂದ. ಅಳುತ್ತಿದ್ದ ಮಕ್ಕಳನು ನೋಡಿ 'ಯಾಕ್ರೋ' ಅಂತ ಕೇಳಿದ. ಮಕ್ಕಳಿಬ್ಬರೂ ಗುಬ್ಬಿಗಳ ಗೂಡನ್ನು ತೋರಿಸಿದರು.

ಗೂಡಿನ ಹೊರಗೆ ಬಂದು ಮರಿಹಕ್ಕಿಗಳು ಹಸಿವಿನಿಂದ ತತ್ತಳಿಸುತ್ತ ಕೀಚ್—ಕೀಚ್ ಅಂತ ಕೂಗಾಡುತ್ತಿದ್ದವು ಬಾಯಿಯನ್ನು ಅಗಲವಾಗಿ ಬಿಚ್ಚುತ್ತ ಅಳುತ್ತಿದ್ದವು ತಾಯಿ ತಂದು ಉಣಿಸಿದ



ಆಹಾರ ಸಾಲದೇ ಹೋಯಿತೆಂಬಂತೆ ಅತ್ತವು! ಅವುಗಳ ಅಳು, ಪರದಾಟ ನೋಡಲಾಗದು. ಗಂಡು ಹಕ್ಕಿಯಾದರೋ ಮಕ್ಕಳಿಗೆ ಆಹಾರ ಉಣಿಸುವುದು ತನ್ನ ಕೆಲಸ ಅಲ್ಲ ಅನ್ನುವ ಹಾಗೆ ತನ್ನ ಪಾಡಿಗೆ ದೂರದಲ್ಲಿ ಹೋಗಿ ಕುಳಿತಿದೆ. ತಾಯಿ ಹಕ್ಕಿ ಅತ್ತ-ಇತ್ತ ನೋಡುತ್ತ 'ಮಳೆಗಾಲದಲ್ಲಿ, ಈ ಅವೇಳೆ ಹೀಗೆ ರೋದಿಸಿ ನನ್ನ ಪ್ರಾಣ ತಗೀತಿದೀರಿ ಯಾಕೆ? ಅಂತ ಮಕ್ಕಳನ್ನು ಗದರಿಸುತ್ತಿದೆ ಗದರಿಸಿದರೆ ಸುಮ್ಮನಾಗುವ ಗುಬ್ಬಿ ಮರಿಗಳೇ ಅವು? ಊಹೂ ಮಣಿ—ಕಮಲೆಯರು ಎಷ್ಟೋ ವಾಸಿ. ಕುತ್ತಿಗೆಯನ್ನು ಚಾಚುತ್ತ ಚಾಚುತ್ತ, ಬಾಯಿಯನ್ನು ಇಷ್ಟಗಲ ಮಾಡುತ್ತ, ಅಮ್ಮಾ! ಅಮ್ಮ! ಅನ್ನುತ್ತಿವೆ ಇನ್ನೂ ರೆಕ್ಕೆಗಳೇ ಬಲಿತಿಲ್ಲ! ಇಷ್ಟು ಹಠ ಮಾಡುತ್ತಿವೆ

"ಅಪ್ಪಾ ಪಾಪ! ಅವುಗಳಿಗೆ ಹಸಿವಾ! ಅಪ್ಪಾ" ಎಂದು ಬಿಕ್ಕಿ ಬಿಕ್ಕಿ ಅಳುತ್ತ ಹೇಳಿದ ಮಣಿ. "ಅಮ್ಮಾ! ಅದಕ್ಕೆ ಏನಾದರೂ ಕೊಡಮ್ಮಾ" ಅಂತ ಹಟ ಹಿಡಿದಳು ಕಮಲೆ. ಇವರಿಬ್ಬರ ಅಳುವುದು— ಹುಚ್ಚೇ ದೊಡ್ಡದಾಗಿಬಿಟ್ಟಿತು. ಸೋಮಸುಂದರ—ಸರಸ್ವತಿಯರು ಈಗ ನಾಲ್ಕು ಹಕ್ಕಿಗಳನ್ನು ಸಮಾಧಾನಪಡಿಸಬೇಕಾಯಿತು. ಅಡಿಗೆ ಮನೆಗೆ ಹೋಗಿ ಸ್ವಲ್ಪ ಮೊಸರನ್ನ ಕಲಸಿ ತಂದು ಆ ಬಟ್ಟಲನ್ನು ಸೋಮಸುಂದರನ ಕೈಯಿಗೆ ಕೊಟ್ಟಳು ಆತ ಅದನ್ನು ಗೂಡಿನ ಹತ್ತಿರ ಇಟ್ಟ. ಏನಾಶ್ಚರ್ಯ ತಾಯಿ ಹಕ್ಕಿ ಅದನ್ನು ಅನಲಕ್ಷಿಸಲೇ ಇಲ್ಲ. ಅಲಕ್ಷ್ಯದಿಂದ ನೋಡಿ. ದೂರ ಹೋಗಿ ಕುಳಿತುಬಿಟ್ಟಿತು ಮಣಿಗೆ ಕೋಪ ಬಂದುಬಿಟ್ಟಿತು. "ಏಯ್! ಇದನ್ನು ತಗೆದುಕೊಂಡು ಹೋಗಿ ನಿನ್ನ ಮರಿಗಳಿಗೆ ಕೊಡುತ್ತೀಯೋ ಇಲ್ಲವೋ?" ಅಂತ ಗದರಿಸಿದ ಹಕ್ಕಿಗಳೋ ಇನ್ನೂ ಗಟ್ಟಿಯಾಗಿ ಅಳುತ್ತಿದ್ದವು

"ಅಮ್ಮಾ! ನೀನೇ ಈ ಅನ್ನವನ್ನು ಆ ಹಕ್ಕಿಗಳಿಗೆ ಉಣಿಸಿ ಬಿಡಮ್ಮಾ!" ಅಂದಳು ಕಮಲೆ

ಸೋಮಸುಂದರ ಒಂದು ಸಲಹೆ ಕೊಟ್ಟ. ನಾವೆಲ್ಲ ಇಲ್ಲಿ ಇರುವುದರಿಂದ ಅವು ಹೆದರುತ್ತಿವೆ. ನಾವು ಪಕ್ಕದ ಕೋಣೆಗೆ ಹೋಗಿಬಿಡೋಣ. ಆಗ ತಮ್ಮ ಪಾಡಿಗೆ ಗೆದ್ದುಕೊಳ್ಳುತ್ತವೆ ಅಂದ

ಬಾಗಿಲು ಹಾಕಿಕೊಂಡು ನಾಲ್ವರೂ ಹೊರ

ಬಂದರು. ಆದರೆ ಅಲ್ಲಿ ಒಳಗೆ ಏನು ನಡೆಯುತ್ತಿದೆ ಅಂತ ನೋಡುವ ಕುತೂಹಲ. ಆ ಮರಿಗಳು ಊಟ ಮಾಡಿದರೆ ತಾವು ಊಟ ಮಾಡುವುದು ಅಂತ ಕುಳಿತುಬಿಟ್ಟಿದ್ದಾರೆ ಮಣಿ ಕಮಲೆಯರು.

ಸ್ವಲ್ಪ ಹೊತ್ತು ಬಿಟ್ಟು ನೋಡಿದರು. ಊಹೂಂ ಅನ್ನದ ಬಟ್ಟಲು ಹಾಗೇ ಇದೆ. ಆದರೆ...

ತಾಯಿ ಹಕ್ಕಿಯು ತನ್ನ ಮರಿಗಳನ್ನು ಮೆಲ್ಲ-ಮೆಲ್ಲನೆ ಸಮಾಧಾನಪಡಿಸುತ್ತ ಗೂಡಿನೊಳಕ್ಕೆ ತಳ್ಳಿತು ತಾನು ಅಲ್ಲೇ ಪಕ್ಕದಲ್ಲಿದ್ದ ಮತ್ತೊಂದು ಸಂದಿಯಲ್ಲಿ ಹೊಕ್ಕಿತು ಕೊಕ್ಕಿನಲ್ಲಿ ಎರಡು ಹುಳುಗಳನ್ನು ಕಚ್ಚಿ ತಂದಿತು. ತನ್ನೆರಡೂ ಮಕ್ಕಳ ಬಾಯಿಗೆ ಹಾಕಿತು. ಹಕ್ಕಿಗಳಿಗೆ ಪರಮ ಸಂತೋಷ. ಆನಂದ ! ತಿಂದು ತೃಪ್ತರಾಗಿ ನಿದ್ರಿಸಿದವು

ಸೋಮಸುಂದರನಿಗೆ ಅಂದು ನಿದ್ದೆ ಬರಲಿಲ್ಲ "ಸರಸು ! ನಾಳೆಯಿಂದ ನಾನು ಎಂ. ಎ. ಗೆ ಓದುತ್ತೇನೆ." ಅಂದ ಇದ್ದಕ್ಕಿದ್ದಂತೆ. "ಏನು ಸಮಾಚಾರ? ಯಾಕೆ ?" "ಮಳೆಗಾಲ ಅಂತ ಒಂದಿದೆ ಆ ಕಾಲದಲ್ಲಿ ಮರಿಗಳನ್ನು ಉಪವಾಸ ಕೆಡಹಬಾರದು ಅನ್ನುವುದನ್ನು ಈ ಗುಬ್ಬಚ್ಚಿ ತಿಳಿಸಿತು" "ಅದು ಹೆಣ್ಣು ಹಕ್ಕಿ ಅಲ್ಲವೆ ? ತಂದೆ ಗಳಿಸಿ ತರುವುದನ್ನು ತಾಯಿಯು ಭದ್ರವಾಗಿಟ್ಟು ಆಪತ್ಕಾಲಕ್ಕೆ ಒದಗಿಸುತ್ತಾಳೆ!"

ಸರಸ್ವತಿ ಉಬ್ಬಿದಳು; ಪುಳಕಿತಳಾದಳು ಮರುದಿನ ಮಧ್ಯಾಹ್ನ ಗಂಡು-ಹೆಣ್ಣು ಹಕ್ಕಿ ನಡೆಸಿದ ಸರಸಸಲ್ಲಾಪವನ್ನು ಗಂಡನಿಗೆ ತಿಳಿಸಬೇಕು ಎಂದಿದ್ದಳು. ಮಕ್ಕಳು ಶಾಲೆಯಿಂದ ಹಿಂತಿರುಗಿದರು. ಇಬ್ಬರಿಗೂ ಒಂದೊಂದು ಬಾಳೆಹಣ್ಣು ಕೊಟ್ಟಳು. ಕಾಫಿ ಅಂತ ಹೇಳಬಹುದಾದ ಬಿಸಿ ನೀರನ್ನು ಕೊಟ್ಟಳು ! ಮಕ್ಕಳು ಇಬ್ಬರೂ ಒಳಗೆ ಕುಳಿತು ತಿನ್ನುತ್ತಿದ್ದಾರೆ. ಹೊರಗೆ ಮನೆ ಮಾಲೀಕನ ಮಗ ಚಂದು ಸೇಬಿನ ಹಣ್ಣನ್ನು ಕಚ್ಚಿ ಕಚ್ಚಿ ತಿನ್ನುತ್ತ ಬಂದ, ಬೇಕೆಂತಲೇ. ಚಿಕ್ಕವರ ಎದುರಿನಲ್ಲಿ ತಿನ್ನುವುದು ಅವನ ಸ್ವಭಾವ 'ತನ್ನ ಮಕ್ಕಳು ಯಾರನ್ನೂ ಏನನ್ನೂ ಕೇಳಬಾರದು' ಎನ್ನುವಂತೆ ಸಾಕಿದ್ದಳು ಸರಸು.

ಚಂದ್ರು ಅತ್ತ ಹೋದ. ಕಮಲೆ-ಮಣಿ ಇಬ್ಬರೂ 'ಅಮ್ಮಾ !' ಅಂತ ಕೂಗಿದರು. ಸರಸು ಹೋದಳು. ಮೊದಲೇ ಯೋಚಿಸಿಬಿಟ್ಟಂತೆ ಅಂದು, ದೀಪಾವಳಿಯ ಬಗೆಗೆ ಅಮ್ಮನನ್ನು ಪ್ರಶ್ನಿಸಿಯೇ ಬಿಟ್ಟರು.

"ದೀಪಾವಳಿ ಯಾಕಮ್ಮ ಬರುತ್ತೆ ?" ಮಣಿ ಕೇಳಿದ.

"ಆ ಕಥೆಯನ್ನು ಹೇಳಮ್ಮ" ಕಮಲೆ ರೇಜಿದಳು.

ಸರಸ್ವತಿ ಪ್ರಾರಂಭಿಸಿದಳು.

"ನರಕಾಸುರ ನರಕಾಸುರ ಅಂತ ಒಬ್ಬ ರಾಕ್ಷಸ ಇದ್ದ. ಅವನ......"

"ರಾಕ್ಷಸನೆ ? ಹಾಗಂದರೆ ?" ಮಣಿ ಕೇಳಿದ.

"ಪ್ರೀತಿ ಅನುಕಂಪ ಇಲ್ಲದವರು ರಾಕ್ಷಸರು. ಒಳ್ಳೆಯವರನ್ನು ಹಿಂಸಿಸುವವರು ರಾಕ್ಷಸರು."

"ಸರಿ, ಅವನು......?"

"ಯಾರಿಗೂ ಯಾವ ಕೆಡಕನ್ನೂ ಮಾಡದೆ, ಎಲ್ಲರಿಗೂ ಉಪಕಾರವನ್ನೇ ಮಾಡುತ್ತಿದ್ದ ಜನರನ್ನು ಪೀಡಿಸುತ್ತಿದ್ದ, ಒಳ್ಳೆಯವರಿಗೆಲ್ಲ ಹಿಂಸೆ ಕೊಡುತ್ತಿದ್ದ. ಹೆದರಿಸುತ್ತಿದ್ದ. ಹೊಟ್ಟೆ ಮೇಲೆ ಕಲ್ಲು ಹಾಕುತ್ತಿದ್ದ. ಮನೆಯ ಹೆಂಡಿರು ಮಕ್ಕಳನ್ನೆಲ್ಲ ಕೊಲ್ಲುತ್ತಿದ್ದ..."

"ಯಾಕೆ ಹಾಗೆ ಮಾಡುತ್ತಿದ್ದ ...?" ಮಣಿ ಕೇಳಿದ.

ಮಾತೆತ್ತಿದರೆ ಯಾಕೆ ? ಹೇಗೆ ? ಅಂತ ಕೇಳುವ ಈಗಿನ ಕಾಲದ ಹುಡುಗರ ಪೈಕಿಗೆ ಸೇರಿದವನು ಮಣಿ! ಸರಸು ಸಮಾಧಾನವಾಗಿ ಉತ್ತರ ಕೊಡುತ್ತಿದ್ದಳು.

"ಹೃದಯದಲ್ಲಿಯ ಕರುಣೆ-ಅನುಕಂಪ ಇಲ್ಲದವರು ಮತ್ತೆ ಹೇಗೆ ನಡೆದುಕೊಳ್ಳುತ್ತಾರೆ ? ಅವನು ಆಸೆಬುರುಕ ! ಪ್ರಪಂಚದಲ್ಲಿರುವ ವಸ್ತುವೆಲ್ಲ ತನಗೇ ಬೇಕು ಎಂಬ ದುರಾಸೆ. ಹಲವರು ಒಳ್ಳೆಯವರನ್ನು ಕೆಡಿಸಿದರೇ, ತಾನು ದೊಡ್ಡ ಕೋಟೆ ಕಟ್ಟಿಕೊಳ್ಳಬಹುದು ಅಂತ ಭಾವಿಸಿದ್ದ. ಸಭ್ಯ ಜನರ ಸಾಧು ಜೀವನವನ್ನು ಕೆಡಿಸುವುದೇ ರಾಕ್ಷಸರ ಕಸಬು..."

"ಹೂಂ...ಆ ಮೇಲೆ ?"

"ಒಳ್ಳೆಯ ಜನ ನಿರ್ಭಯವಾಗಿ ಬಾಳುವುದೇ ಕಷ್ಟವಾಯಿತು. ಸಹಿಸಲಾರದ ಕಷ್ಟ. ಕೊನೆಯಲ್ಲಿ ಎಲ್ಲರೂ ಹೋಗಿ ದೇವರಲ್ಲಿ ಮೊರೆಯಿಟ್ಟರು..."

"ದೇವರಲ್ಲಿಯೇ ?"

"ಹೌದು. ಒಳ್ಳೆಯವರಿಗೆ ಕಷ್ಟ ಹೆಚ್ಚಾದಾಗ ದೇವರು ಬಂದು ಕಷ್ಟ ಕೊಡುವವರನ್ನು ಉಗ್ರವಾಗಿ ಶಿಕ್ಷಿಸುತ್ತಾನೆ. ಅದೇ ರೀತಿ ಆಗ ಕೃಷ್ಣ ಪರಮಾತ್ಮ ಸತ್ಯಭಾಮೆಯೊಂದಿಗೆ ನರಕಾಸುರ ಇದ್ದ ಜಾಗಕ್ಕೆ ಬಂದ. ರಾಕ್ಷಸನೊಂದಿಗೆ ಹೋರಾಡಿದ. ಅವನನ್ನು ಕೊಂದು ಹಾಕಿದ. ಹಿಂಸೆ ಕೊಡುತ್ತಿದ್ದವನನ್ನು ನಾಶ ಮಾಡಿದ ದಿನ ದೀಪಾವಳಿ. ಸತ್ಯಕ್ಕೆ ಜಯ ಬಂದ ಸುದಿನ ದೀಪಾವಳಿ. ರಾಕ್ಷಸ ಸತ್ತ ದಿನ ಎಂತಲೇ ನಾವು ದೀಪಾವಳಿ ದಿನವನ್ನು ಆನಂದದಿಂದ ಆಚರಿಸುತ್ತೇವೆ"

"ದೇವರೂ ಯುದ್ಧ ಮಾಡುತ್ತಾನೆಯೇ ಅಮ್ಮ?" ಬೆದರಿ ಬೆದರಿ ಕೇಳಿದಳು ಕಮಲೆ.

"ಒಳ್ಳೆಯತನವಿಲ್ಲದ ರಾಕ್ಷಸರನ್ನು ದೇವರು ಸುಮ್ಮನೆ ಬಿಡುವುದಿಲ್ಲ. ದೇವರು ಅದಕ್ಕೇ ಕೈಯಲ್ಲಿ ಶಂಖ, ಚಕ್ರ, ಗದೆ, ಇದನ್ನೆಲ್ಲ ಹಿಡಿದಿದ್ದಾನೆ. ಒಳ್ಳೆಯವರನ್ನು ಕಾಪಾಡಬೇಕು ಆದರೆ ಕೆಟ್ಟವರನ್ನು ನಾಶಮಾಡಲೇಬೇಕು ಕಣ!"

"ದೀಪಾವಳಿ ದಿನ ನಾನು ಬಂದೂಕಿನಿಂದ ರಾಕ್ಷಸನನ್ನು ಕೊಲ್ಲುತ್ತೇನೆ" ಅಂದ ಮಣಿ.

"ತಂತಿ ಮತಾಪು ಹತ್ತಿಸಿ ನಾನು ಅವನನ್ನು ಸುಟ್ಟು ಬೂದಿ ಮಾಡುತ್ತೇನೆ" ಅಂದಳು ಕಮಲ.

ಸರಸು ನಕ್ಕಳು. ಇಬ್ಬರೂ ಎದ್ದು ಹೊರಗೆ ಆಟಕ್ಕೆ ಹೊರಟರು. ಸರಿಯಾಗಿ ಚಂದು ಬಂದ. ದೊಡ್ಡ ಗಂಟೊಂದನ್ನು ಅವರ ಮುಂದೆ ಬಿಚ್ಚಿದ. ಅದರ ತುಂಬ ಪಟಾಕಿ, ಬಾಣ, ಬಿರುಸು ತಂತಿ ಮತಾಪು, ಅದು-ಇದು ಎಲ್ಲಾ ಇದ್ದವು.

ಇನ್ನೊಂದು ಗಂಟು ಬಿಚ್ಚಿದ, ಭರ್ಜರಿ ಜರಿಲಿನ ಶರಟು, ಪ್ಯಾಂಟು ತಂಗಿಗೆ ತಂದಿರುವ ರೇಶ್ಮೆ ಲಂಗ ಜಂಪರು. ಥಳ ಥಳ ಹೊಳೆಯುತ್ತಿವೆ

"ನನ್ನ ತಂದೆಯವರು ನಮಗೆ ತಂದುಕೊಡುತ್ತಾರೆ" ಅಂದ ಮಣಿ.

"ನಿಮ್ಮಪ್ಪ ಈಗ ನಮ್ಮಪ್ಪನವರ ಹತ್ತಿರ ಮಾತಾಡುತ್ತ ಇದ್ದಾರೆ."

'ಅಪ್ಪ ಯಾಕೆ ಇವರ ಮನೆಗೆ ಹೋದರು' 'ಯಾಕೆ?' ಚಿಂತಿಸತೊಡಗಿದರು ಮಣಿ-ಕಮಲೆಯರು. ಬಾಡಿಗೆ ಹಣವನ್ನು ಮಣಿ ಹತ್ತಿರವೇ ಕಳಿಸುತ್ತಾನೆ, ಸೋಮಸುಂದರ. ಬಗೆಹರಿಯಲಿಲ್ಲ.

ಸೋಮಸುಂದರ ಅಂದು ರಾತ್ರಿ ತಡವಾಗಿ ಮನೆಗೆ ಬಂದ, ಅಮ್ಮನ್ನು ತಂದೆ ಏನಾದರೂ ಕೇಳುತ್ತಾರೆ ಅಂದುಕೊಂಡಿದ್ದ ಕಮಲೆ-ಮಣಿಗೆ ನಿರಾಶೆ

ಆಗಾಯಿತು. ಹೀಗೆಂತ [illegible] ಉತ್ಸಾಹದಿಂದ ಇದ್ದ ಸರಸ್ವತಿಗೂ ಇನಿಯನ ಅಂದಿನ ಇರುವಿಕೆ ನೋಡಿ ಆಶ್ಚರ್ಯವಾಯಿತು. ಟುಟಟುಟಕ್ ಅನ್ನಲಿಲ್ಲ ಆತ. ಕೈಕಾಲು ತೊಳೆದು ಸಂಧ್ಯಾವಂದನೆ ಶಾಸ್ತ್ರ ಮಾಡಿದ. ಊಟ ಮಾಡಿದ. ಎದ್ದು ಹೋಗಿ ತನ್ನ ಕೋಣೆಯ ಮೇಜಿನ ಮುಂದಿದ್ದ ಕುರ್ಚಿಯ ಮೇಲೆ ಕುಳಿತ. ವಿದ್ಯಾರ್ಥಿಗಳ ನೋಟ್ ಬುಕ್ಕನ್ನು ತಿದ್ದಿದ. ತನ್ನ ಎಂ. ಎ. ಪಠ್ಯಪುಸ್ತಕ ಓದತೊಡಗಿದ.

ಸರಸ್ವತಿ ಬೇಗ ಬೇಗ ಕೆಲಸಗಳನ್ನು ಮುಗಿಸಿಕೊಂಡು ಮಕ್ಕಳೊಂದಿಗೆ ಬಂದು ಮಲಗಿದಳು. ಇಬ್ಬರನ್ನೂ ತಟ್ಟಿ ಮಲಗಿಸಿದಳು. ದೀಪ ಆರಿಸಿ ಮೆಲ್ಲನೆ ಎದ್ದು ಪಕ್ಕದ ಕೋಣೆಗೆ ಬಂದಳು. ಗಂಡನ ಮುಖದಲ್ಲಿನ ಬದಲಾವಣೆಯನ್ನು ಆಗ ಗಮನಿಸಲು ಆಯಿತು ಆಕೆಗೆ. ಕ್ಲಾಸಿನಲ್ಲಿ ವಿದ್ಯಾರ್ಥಿಗಳು ಯಾರಾದರೂ ಅಸಭ್ಯರಾಗಿ ವರ್ತಿಸಿದ್ದಾರೆಯೋ? ಒಮ್ಮೊಮ್ಮೆ ಹಾಗಾದರೆ ಹೀಗಿರುತ್ತಿದ್ದ ಸೋಮಸುಂದರ.

"ಇಲ್ಲಿ ನೋಡು. ನಿನ್ನ ಮುದ್ದು ಮಕ್ಕಳು ಬರೆದುಕೊಟ್ಟಿರುವುದನ್ನು" ಅಂತ ಹೇಳಿ ನಿನ್ನೆ ಚಿಣ್ಣಿ ಮಣಿ ಕಮಲೆಯರು ಬರೆದಿಟ್ಟ ಪಟ್ಟಿಯನ್ನು ಸರಸುವಿನ ಮುಖದ ಮೇಲೆ ಬಿಸಾಡಿದ.

"ಇಷ್ಟಕ್ಕೇ ಇಷ್ಟು ಕೋಪವೆ?" ಅಂತ ಮನಸ್ಸಿನಲ್ಲೇ ಅಂದುಕೊಂಡು ಅದನ್ನು ಓದಿ ಸರಸು ನಕ್ಕುಬಿಟ್ಟಳು. ಆಕೆಯ ಮನಸ್ಸಿನಲ್ಲಿ ಕುತೂಹಲ ತುಂಬಿತುಳುಕಿತ್ತು. ಇನಿಯನೊಂದಿಗೆ ಸ್ವಲ್ಪ ಹೊತ್ತು ವಿನೋದ ಮಾಡೋಣ ಅನ್ನಿಸಿತು ಅವಳಿಗೆ.

"ಯಾಕೆ? ತಂದು ಕೊಡಬಾರದೆ? ಬೇಕಾದುದನ್ನು ಬಾಯಲ್ಲಿ ಕೇಳಬಾರದು. ಬರೆದು ಕೊಡಬೇಕು ಅನ್ನುವ ನಿಮ್ಮ ಆಜ್ಞೆಯನ್ನು ನಿಮ್ಮ ಮಕ್ಕಳು ಪಾಲಿಸಿದ್ದಾರೆ."

"ಏನಂದೆ?" ಗರ್ಜಿಸಿದ ಸೋಮಸುಂದರ

"ವರ್ಷಕ್ಕೊಮ್ಮೆ ಬರುತ್ತದೆ ದೀಪಾವಳಿ ಮಕ್ಕಳು ಆಸೆಯಿಂದ ಕೇಳುವುದನ್ನು ಕೊಂಡುಕೊಂಡು ತರಬಾರದೆ?" ಹೀಗೆಂದು ತುಂಟು ನಗೆ ಬೀರಿದಳು ಸರಸ್ವತಿ.

"ನಿನಗೆ ತಲೆ ಇದೆಯೇನೆ? ಅಂತ ಕೇಳಿ ಕಣ್ಣುಗಳಿಂದಲೇ ನುಂಗಿಬಿಡುವಂತೆ ದುರುಗುಟ್ಟಿದ ಅಧ್ಯಾಪಕ ಮಹಾಶಯ. ಕಪಾಳಕ್ಕೆ ಬಿಗಿದು ಅವಳ ಹಲ್ಲುಗಳನ್ನು ಉದುರಿಸಿ, ಪೊಟ್ಟಣ ಕಟ್ಟಿ, ಅವಳ ಕೈಗೆ ಕೊಡಬೇಕು ಅನಿಸಿತು ಅವನಿಗೆ. ವರ್ಷಕ್ಕೊಂದು ದೀಪಾವಳಿಯಂತೆ ದೀಪಾವಳಿ ದಿನಬೆಳಗಾದರೆ ಈ ಮನೆಯ ನಾಲ್ಕು ಜೀವಗಳ ಹೊಟ್ಟೆ ತುಂಬ ಅನ್ನ ಸಿಕ್ಕರೆ ಸಾಕು ಅಂತ ಪ್ರಾಣ ಬಿಡುತ್ತೇನೆ ನಾನು. ದೀಪಾವಳಿಯಂತೆ. ಬರುವ ಸಂಬಳವನ್ನೆಲ್ಲ ನಿನ್ನ ಕೈಗೆ ತಾನೇ ಕೊಡುತ್ತೇನೆ. ಲೆಕ್ಕ ಗಿಕ್ಕ ಇಟ್ಟಿದೀಯಾ ಹಾಸೆ?"

ಬಿಡಲಿಲ್ಲ ಸರಸು. ಇನಿಯನೊಂದಿಗೆ ಜಗಳ ಮಾಡದ ಕುಟುಂಬವೂ ಒಂದು ಕುಟುಂಬವೆ?!

"ದುಡ್ಡಿನ ಲೆಕ್ಕ ಹಾಕುವಂತಹವರು ಮದುವೆ ಮಾಡಿಕೊಳ್ಳಬಾರದು. ಮಕ್ಕಳು ಮರಿಗಳನ್ನು ಪಡೆಯಬಾರದು. ಮನೆಮಾರು ಮಾಡಬಾರದು."

"ಮಕ್ಕಳು ಕೇಳಿರುವುದನ್ನೆಲ್ಲ ತರುವುದಕ್ಕೆ ಎಪ್ಪತ್ತೈದು ರೂಪಾಯಿ ಬೇಕು... ಅವರಿಗೆ ಅದೂ ತಿಳಿಯುವುದಿಲ್ಲ. ಅಂದರೆ ನಿನಗಾದರೂ ವಿವೇಕ ಬೇಡ?"



"ಚಂದ್ರನ ಅಪ್ಪ ಅವರ ಮಕ್ಕಳಿಗೆ ತಂದುಕೊಟ್ಟಿದ್ದಾರೆ. ಹಾಗೇ ನೀವೂ...ನೀವೂ" ಸರಸ್ವತಿ ಮಾತು ಮುಗಿಸಿಲ್ಲ ಇನ್ನೂ... ಬೆನ್ನಿನ ಮೇಲೆ ಒಂದು ಬಿಗಿದ ಸೋಮಸುಂದರ. ಅಧ್ಯಾಪಕ ಸೋಮಸುಂದರನಿಗೆ ಕೋಪ ಬಂದಿತು ಅಂದರೆ ಸಾಕು ಕೈಯಲ್ಲಿನ ಪುಸ್ತಕವೇ ಆಯುಧ!

"ಏನಂದೆ? ಚಂದ್ರನ ತಂದೆಯೆ? ಅವನೊಬ್ಬ ಮನುಷ್ಯನೆ? ಕಡಲೆಣ್ಣೆಯನ್ನು ಬ್ಲ್ಯಾಕ್ ಮಾಡಿ. ಡಾಲ್ಡಾದಲ್ಲಿ ಕೊಬ್ಬು ಸೇರಿಸಿ, ಅಕ್ಕಿ ಗೋಧಿಯಲ್ಲಿ ಕಲ್ಲು ಮಣ್ಣು ಸೇರಿಸಿ ಮಾರಿ ಐದು ವರ್ಷದಲ್ಲಿ ಐದು ಲಕ್ಷ ರೂಪಾಯಿ ಮಾಡಿದಾನೆ. ರಾಜಕೀಯ ಪುಢಾರಿ ಬೇರೆ! ಅವನ ಜತೆ ನನ್ನನ್ನು ಹೋಲಿಸುತ್ತೀಯೇನೆ?"

"ಅವನ ಕುಟುಂಬ ಹೀಗೆ ನಮ್ಮದರ ಹಾಗೆ ಕಷ್ಟಪಡುತ್ತಿಲ್ಲ."

"ಸರಸ್ವತೀ!..."

ಕೋಪ ನೆತ್ತಿಗೇರಿತು ಸೋಮಸುಂದರನಿಗೆ. "ಇಲ್ಲಿ ನೋಡು ಸರಸ್ವತೀ! ಈಗ ಈ ದೇಶದಲ್ಲಿ ಧರ್ಮ ನಶಿಸಿಹೋಯಿತು. ನಮ್ಮ ಕುಟುಂಬ ಮಾತ್ರವೇ ಕಷ್ಟಪಡುತ್ತಿದೆ? ಕಳ್ಳತನ ಮೋಸ ಕಪಟ, ಲಂಚ-ರುಷುವತ್ತುಗಳಲ್ಲಿ ತೊಡಗದೆ ಮಾನವಾಗಿ ಇರಬೇಕು ಅಂತ ಬಯಸುವ ಒಂದೊಂದು ಕುಟುಂಬವೂ ಹೀಗೇ ಕಷ್ಟಪಡುತ್ತಿದೆ. ನಾನು ಮನುಷ್ಯ ಮರ್ಯಾದೆಯಾಗಿ ಬಾಳಬೇಕು ನಾನು. ರಾಕ್ಷಸನಾಗಿ ಬಾಳಲಾರೆ...ಅರೆ..."

"ಮನುಷ್ಯರಾಗಿಯೇ ಬಾಳಿರಿ ನೀವು ನಾವೆಲ್ಲ ಸಾಯುತ್ತೇವೆ" ಗಟ್ಟಿಯಾಗಿಯೇ ಉತ್ತರ ಕೊಟ್ಟಳು ಸರಸ್ವತಿ.

ಸೋಮಸುಂದರನ ಮೊದಲ ಗರ್ಜನೆಯಲ್ಲೇ ಮಕ್ಕಳಿಗೆ ಎಚ್ಚರವಾಗಿಬಿಟ್ಟಿತು. ಮಾತನ್ನೆಲ್ಲ ಕೇಳುತ್ತಿದ್ದರು. ಮಣಿ ಕಮಲೆಯ ಕೆನ್ನೆಯ ಮೇಲೆ ಕೈಯಿಟ್ಟ. ಅವಳ ಮೈ ಬಿಸಿಯಾಗಿತ್ತು. ತುಟಿ ನಡುಗುತ್ತಿತ್ತು.

"ಬಾಯಿ ಬಿಟ್ಟೀಯ!" ಅನ್ನುವಂತೆ ಅವಳು ತುಟಿಗಳ ಮೇಲೆ ಕೈಯಿಟ್ಟಳು

ಅಪ್ಪ-ಅಮ್ಮಂದಿರ ನಡುವಿನ ಈ 'ಯುದ್ಧಕ್ಕೆ' ತಾವೇ ಕಾರಣರು ಅಂತ ಅನಿಸಿತು ಅವರಿಗೆ. ಸರಸ್ವತಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಕುಶಾಲಾಗಿ ಅರೆಗಳಿಗೆ ನಗುತ್ತ ಮಾತಾಡುತ್ತಿರೋಣ ಅಂತ ಆಶಿಸಿದ್ದವಳಿಗೆ ಹೀಗಾಯಿತು. ಎದ್ದು ಹೋಗಿ ಮಲಗಿಬಿಡೋಣ ಅನಿಸಿತು. ಮನಸುಬರಲಿಲ್ಲ ಗಂಡ ಹೇಳಿದ ಮಾತು ಸರಿ ಅನಿಸಿತು ಆತನ ಮನೋವೇದನೆಯ ತೀವ್ರತೆಯ ಅರಿವಾಯಿತು ಅವಳಿಗೆ. "ನನ್ನ 'ಅವರು' ಒಳ್ಳೆಯವರು...ಒಳ್ಳೆಯವರು..." ಅಂತ ಅವಳ ಅಂತರಾತ್ಮ ಹೇಳಿತು.

"ಸರಸು"

ಛಟ್ಟನೆ ಸರಸು ಅವರ ತೊಡೆಗಳ ಮೇಲೆ ಮುಖವಿಟ್ಟು, ಬಿಕ್ಕಿ ಬಿಕ್ಕಿ ಅಳತೊಡಗಿದಳು. ತನ್ನ ಕೈಗಳಿಂದ ಮಡದಿಯ ಕೇಶರಾಶಿಯನ್ನು ನೇವರಿಸಿದ ಸೋಮಸುಂದರನ ಕಂಗಳಲ್ಲಿಯೂ ನೀರು ಉಕ್ಕಿ ಹರಿಯತೊಡಗಿತು

"ಸರಸು...ಸರಸು...ಇಲ್ಲಿ ನೋಡು..."

"ನನ್ನನ್ನು ಮನ್ನಿಸಿ...ನಿಮ್ಮ ದಮ್ಮಯ್ಯ... ಕ್ಷಮಿಸಿ. ನನಗೆ ಎಲ್ಲವೂ ಅರ್ಥವಾಗುತ್ತಿದೆ" ಅಂಗಲಾಚಿದಳು.

"ಸರಸು ನೀನು ನನ್ನನ್ನು ಮನ್ನಿಸಬೇಕು. ನನ್ನ



ಕೋಪಕ್ಕೆ ಕಾರಣ ನೀನೂ ಅಲ್ಲ; ನಮ್ಮ ಮಕ್ಕಳೂ ಅಲ್ಲ. ನಮ್ಮಂಥವರನ್ನು ಈ ದುರವಸ್ಥೆಗೆ ಗುರಿ ಮಾಡುವ, ನಮ್ಮನ್ನೆಲ್ಲ ನುಂಗಿಹಾಕುವ ಕಳ್ಳ ವ್ಯಾಪಾರ ನಡೆಸುವ, ಲಂಚಗೋರರ ಮೇಲೆ ಕೋಪ ಬಂದಿತು. ದೇಶದಲ್ಲಿ ಈಗ ಆಹಾರ ವಸ್ತುಗಳ ಅಭಾವ ಇಲ್ಲ. ಉದ್ಯೋಗಾವಕಾಶ ಇಲ್ಲದಿಲ್ಲ. 'ಮಾನವೀಯತೆ'ಯೊಂದನ್ನು ಹೊರತು ಬೇರಾವುದಕ್ಕೂ 'ಬರ' ಇಲ್ಲ...ನಾನೊಬ್ಬ ಬಡ ಮೇಷ್ಟ್ರು... ನನ್ನ ಕೋಪವನ್ನು ಬೇರೆ ಯಾರ ಮುಂದೆ ತೋರಿಸಲಿ ಸರಸು?" ಅವನ ಗಂಟಲು ಗದ್ಗದಿತವಾಗಿತ್ತು ಮಾತೇ ಸರಿಯಾಗಿ ಹೊರಡಲಿಲ್ಲ. ತನ್ನ ಮೃದುವಾದ ಕೈಯಿಂದ ಮಡದಿಯ ಕಣ್ಣೀರನ್ನು ಒರೆಸಿದ

"ಚಂದ್ರನ ಅಪ್ಪನ ಹತ್ತಿರ ಹೋಗಿದ್ದೆ. ಹಲ್ಲು ಗಿರಿಮು ಕೇಳಿದೆ. ಮುಂದಿನ ತಿಂಗಳ ಬಾಡಿಗೆ ಹಣವನ್ನು ಅದರ ಮುಂದಿನ ಎರಡು ತಿಂಗಳಲ್ಲಿ ತಿಂಗಳಿಗೆ ಇಪ್ಪತ್ತೈದರಂತೆ ಕೊಟ್ಟು ತೀರಿಸುತ್ತೇನೆ ಅಂದೆ"

"ಕಷ್ಟ ಎಲ್ಲರಿಗೂ ಇರುತ್ತೇರೀ" ಅಂತ ಒಂದೇ ಮಾತಿನಲ್ಲಿ ಉತ್ತರ ಕೊಟ್ಟು ಬಿಟ್ಟ ಆ ಧೂರ್ತ. ಜಬರ್ದಸ್ತಿನಿಂದ ಕೇಳುವವರಿಗೆ ಹೇಗೆ ಕೊಡುತ್ತಾನೆ ಅವನು ಬಲ್ಲೆಯಾ? ಮೇಜಿನ ಅಡಿಯಲ್ಲಿ ನೋಟಿನ ಕಂತೆಗಳನ್ನು ಕೊಟ್ಟು ತನ್ನ ಕೆಲಸ ಸಾಧಿಸಿಕೊಳ್ಳುತ್ತಾನೆ. ನನ್ನ ಮುದ್ದು ಮಕ್ಕಳಿಗೆ ಒಂದು ಹೊಸ ಬಟ್ಟೆ ತರಬೇಕು ಅನ್ನೋ ಆಸೆ ನನಗಿರೋದಿಲ್ವೇ ಸರಸು!"

ಸಾಕ್ಷಾತ್ ದೇವರ ತೊಡೆ ಮೇಲೆ ತಲೆಯಿಟ್ಟು ಮಲಗಿರುವುದಾಗಿ ಅನಿಸಿತು ಸರಸ್ವತಿಗೆ

ಲೋಕದಲ್ಲೆಲ್ಲ ಮಾನವೀಯತೆಯ ಅಭಾವವಿದ್ದರೇನು? ಅದು ಅವಳ ಗೃಹದಲ್ಲಿ ಇದ್ದಿತು. ಕೊರಳಿನಲ್ಲಿ ಮಾಂಗಲ್ಯ ರೂಪದಲ್ಲಿ ಪೂರ್ಣವಾಗಿ ಇದ್ದಿತು.

"ಮಕ್ಕಳಿಗೆ ನಾ ಹೇಳುತ್ತೇನೆ. ಹೇಳಿದರೆ ಕೇಳುವುದಿಲ್ಲವೆ ಅವರು"?

"ದೇವರಂತಹ ಮಕ್ಕಳನ್ನು ಹಡೆದಿದೀಯಾ ಸರಸು ನೀನು" ಅಂದ ಸೋಮಸುಂದರ ಪರವಶನಾಗಿ. ಒಂದು ದಿನ ಗುಬ್ಬಚ್ಚಿ ಮರಿಗಳಿಗೆ ಹೊಟ್ಟೆಗೆ ಇರಲಿಲ್ಲ ಅಂತ ತಾವೂ ಊಟ ಮಾಡದೆ ಇದ್ದರು ಕಮಲೆ-ಮಣಿ: ನೆನಪಿಲ್ಲವೆ ಸರಸು? ಅದೇ ಮನೋಭಾವ ಬೆಳೆಯುವಂತೆ ಸಾಕಬೇಕು ನಾವು ನನ್ನ ಹಾಗೆ ಹೇಡಿಯನ್ನಾಗಿಸಬಾರದು. ಧರ್ಮಕ್ಕಾಗಿ ಹೋರಾಡುವುದನ್ನು ಕಲಿಸಬೇಕು. ನೀನೇ ಹೇಳು ಸರಸು, ನನ್ನ ವಿದ್ಯೆ, ಯೋಗ್ಯತೆ, ಸಾಮರ್ಥ್ಯ ಚಂದ್ರನ ಅಪ್ಪನದಕ್ಕಿಂತ ಯಾವ ವಿಧದಲ್ಲಿ ಕಡಿಮೆಯಾಗಿದೆ...ಹೇಳು."

ಗಂಡನನ್ನು ಬಿಗಿಯಾಗಿ ಅಪ್ಪಿಕೊಂಡಳು ಸರಸು "ಈ ಅನ್ಯಾಯಗಳನ್ನು ದೇವರು ತುಂಬ ದಿನ ಸಹಿಸುವುದಿಲ್ಲ...ಖಂಡಿತಾ ಸಹಿಸುವುದಿಲ್ಲ. ಸರಿಮಾಡಿಯೇ ಮಾಡುತ್ತಾನೆ!"

"ಇಲ್ಲಿ ನೋಡು ಸರಸು! ಮಕ್ಕಳು ಕೇಳಿರುವುದನ್ನು ಖಂಡಿತವಾಗಿಯೂ ತಂದುಕೊಡುತ್ತೇನೆ ನಾನು. ಹೌದು...ತಂದು ಕೊಟ್ಟೇ ತೀರುತ್ತೇನೆ. ಇನ್ನು ಮೇಲೆ ಏನನ್ನೂ ಶಾಲೆಗೆ ನಡೆದೇ ಹೋಗಿ ಬಂದು ಮಾಡುತ್ತೇನೆ. ಇದನ್ನು ಸಿದ್ಧಾಂತವೆಂದು ನಿನ್ನ ಕಷ್ಟ-ಕಾರ್ಪಣ್ಯ ವನ್ನು ಹೇಳಿ ಹೇಳಿ ಮಕ್ಕಳನ್ನು ಹೇಡಿಗಳನ್ನಾಗಿ ಮಾಡುವ ಇಷ್ಟ ನನಗಿಲ್ಲ- ದಾಸ್ಯಪ್ರವೃತ್ತಿ ಬೆಳೆಯುವುದಿಲ್ಲ ಅವರಲ್ಲಿ. ಅವರು ಕೇಳುವುದು ನ್ಯಾಯ. ಅದೇ ಧರ್ಮ."

ನಿನ್ನೆ ಮಧ್ಯಾಹ್ನ ತಾ ಕಂಡ ಗುಬ್ಬಚ್ಚಿ ದಂಪತಿಗಳ ಸಲ್ಲಾಪ ಅವಳ ಕಣ್ಣ ಮುಂದೆ ಸುಳಿಯಿತು. ಆ ಗೂಡಿನ ಕಡೆ ನೋಡಿದಳು. ಇನಿಯನ ಮುಖವನ್ನೊಮ್ಮೆ ನೋಡಿದಳು. ಕಣ್ಣುಗಳಲ್ಲಿ ಅದೇನನ್ನು ಹೇಳಿದಳೋ, ಸೋಮಸುಂದರನಿಗೆ ಮಾತ್ರ ಅರ್ಥವಾಗುವ ಭಾವ ಅದು. ಅವನ ಅಂತರಂಗದಲ್ಲಿ ಎದ್ದಿದ್ದ ಜ್ವಾಲಾಮುಖಿ ಶಾಂತವಾಯಿತು.

ಬೆಳಗಾಯಿತು-

ಮನೆಯಲ್ಲಿ ಉತ್ಸಾಹ ತುಂಬಿ ತುಳುಕಾಡಿತು. ಮಕ್ಕಳು ಮೊನ್ನೆ ಬರೆದುಕೊಟ್ಟಿದ್ದ ಚೀಟಿಗಳನ್ನು ಕೈಯಲ್ಲಿಟ್ಟುಕೊಂಡ ಸೋಮಸುಂದರ "ಮಣಿ, ಕಮಲಾ" ಅಂತ ಕೂಗಿದ. ಅವರಿಬ್ಬರೂ ಪರಸ್ಪರ ತಂತಮ್ಮ ಮುಖ ನೋಡಿಕೊಂಡರು. ರಾತ್ರಿ ತಮ್ಮ ತಮ್ಮಲ್ಲಿ ಹೇಳಿಕೊಂಡ ಗುಟ್ಟನ್ನು ಮರೆತಿರಲಿಲ್ಲ.

"ನೀವಿಬ್ಬರೂ ಇವತ್ತು ನನ್ನ ಜತೆ ಪೇಟೆ ಬೀದಿಗೆ ಬರುತ್ತೀರಿ- ನೀವು ಬರೆದಿರುವ ಚೀಟಿಯಲ್ಲಿರುವುದನ್ನೆಲ್ಲ ಕೊಂಡುಕೊಡುತ್ತೇನೆ" ಎಂದು ಹೆಮ್ಮೆಯಿಂದ ಹೇಳಿದ ಸೋಮಸುಂದರ.

ಮಕ್ಕಳು ಸಂತಸದಿಂದ ಜಿಗಿಯಲಿಲ್ಲ. ನಲಿಯಲಿಲ್ಲ. ಮುಖದ ಮೇಲೆ ಸಂತೋಷದ ಒಂದು ರೇಖೆ ಸಹ ಇಲ್ಲ!

"ನಮಗೆ ಬೇಡ ಅಪ್ಪಾ!" ಎಂದ ಮಣಿ.

"ಖಂಡಿತವಾಗಿಯೂ ನಾವು ತೆಗೆದುಕೊಳ್ಳುವುದಿಲ್ಲ ಅಪ್ಪ" ಅಂದಳು ಕಮಲೆ.

ಬೆಚ್ಚಿಬಿದ್ದ ಸೋಮಸುಂದರ.

"ಏನು ಸಮಾಚಾರ? ಯಾಕೆ?" ಅಂತ ಕೇಳಿದ.

"ನರಕಾಸುರನನ್ನು ದೇವರು ಕೊಂದರೆ ತಾನೇ ದೀಪಾವಳಿಯನ್ನು ಆಚರಿಸಬೇಕು? ಅವನಿನ್ನೂ ಜೀವಂತ ಇದಾನಲ್ಲಾ ಅಪ್ಪ?" ಅಂತ ಕೇಳಿದಳು ಕಮಲೆ. ಅಪ್ಪನನ್ನು ದಿಗ್ಭ್ರಮೆಗೊಳಿಸಿದಳು ಕಮಲೆ.

"ಅಪ್ಪಾ!" ಮಣಿ ಮುಂದುವರಿಸಿದ- "ಆ ರಾಕ್ಷಸ, ನರಕಾಸುರನಿಗಿಂತ ದೊಡ್ಡ ರಾಕ್ಷಸನ ಹೊಟ್ಟೆಯೊಳಗೆ ನಾವೆಲ್ಲ ಈಗ ಸಿಕ್ಕಿಕೊಂಡಿದೇವೆ. ದೇವರು ಬಂದು ಈ ರಾಕ್ಷಸನನ್ನು ಕೊಂದು ನಮ್ಮನ್ನು ಇನ್ನೂ ಕಾಪಾಡಿಲ್ಲ. ನಾವ್ಯಾಕೆ ಈಗ ರಾಕ್ಷಸ ಸತ್ತ ಅಂತ ಹಬ್ಬ ಆಚರಿಸಬೇಕು?"

ಮಕ್ಕಳ ಈ ಪ್ರಶ್ನೆಗೆ ಏನುತ್ತರ ಕೊಡಬೇಕು ಅಂತ ಸೋಮಸುಂದರ ಬಹಳ ಹೊತ್ತು ಯೋಚಿಸಿದ. ಹೊಳೆಯಲಿಲ್ಲ...ಸರಸ್ವತಿಗೂ ಉತ್ತರ ಸಿಗಲಿಲ್ಲ. ನಾನೂ ಅಂದಿನಿಂದ ಪರಿತಪಿಸುತ್ತಿದೇನೆ... ಉತ್ತರ ಸಿಕ್ಕಿಲ್ಲ ದಯೆ ಮಾಡಿ ನೀವು ಯಾರಾದರೂ ಹೇಳುತ್ತೀರಾ?

**ಕತೆ ಹೇಳುವುದು ಮನುಷ್ಯನಿಗೆ ಮಾತಿನಷ್ಟೇ ಸ್ವಾಭಾವಿಕ. ಅದಕ್ಕಾಗಿ ಅವನು** ಸಾಹಿತ್ಯಸೃಷ್ಟಿಯ ಪ್ರಾರಂಭದಲ್ಲಿ ಬಳಸಿಕೊಂಡ ಮಾಧ್ಯಮ ಪದ್ಯವೆಂಬುದು ಸಾಮಾನ್ಯವಾಗಿ ಜಗತ್ತಿನ ಯಾವುದೇ ಸಾಹಿತ್ಯಕ್ಕೂ ಅನ್ವಯಿಸುವ ಮಾತು. ಗದ್ಯ ಸಾಹಿತ್ಯದ ಬೆಳವಣಿಗೆಯೊಂದಿಗೆಯೇ-ಪದ್ಯದಲ್ಲಿ ಭಾವಗೀತಗಳಂತೆ-ಕಿರಿದರಲ್ಲೇ ಹಿರಿದನ್ನು ಹೇಳಬಯಸುವ ಸೃಜನಶೀಲ ಸಾಹಿತಿಗೆ ಅಭಿವ್ಯಕ್ತಿ ಮಾಧ್ಯಮವಾಗಿ ಮೈದಳೆಯಿತು ಸಣ್ಣ ಕತೆ.

'ಕರ್ಮವೀರ' ದೀಪಾವಳಿ ಸಂಚಿಕೆಯ ಮೂಲಕ ವೈಶಿಷ್ಟ್ಯಪೂರ್ಣ ಕೊಡುಗೆಯನ್ನು ತನ್ನ ಓದುಗರಿಗೆ ನೀಡುವ ಪರಿಪಾಠವನ್ನು ಇತ್ತೀಚಿನ ವರ್ಷಗಳಲ್ಲಿ ಬೆಳೆಸಿಕೊಂಡು ಬರುತ್ತಿದೆಯಷ್ಟೆ. ಈ ಸಲದ ಕಾಣಿಕೆ 'ಭಾರತೀಯ ಭಾಷೆಗಳಲ್ಲಿ ಸಣ್ಣ ಕತೆ.'

# ಭಾರತೀಯ ಭಾಷೆಗಳಲ್ಲಿ ಸಣ್ಣ ಕತೆ

## ಬಂಗಾಲಿ ಸಣ್ಣ ಕಥೆ

—ಅಹೋಬಲ ಶಂಕರ

ಬಂಗಾಳಿ ಭಾಷೆಯಲ್ಲಿ ಸಣ್ಣ ಕಥೆಗಳು ಹುಟ್ಟಿದುದು ಸುಮಾರು ನೂರು ವರುಷಗಳ ಹಿಂದೆ. ಅಂದರೆ ಕಾದಂಬರಿಯು ಸಾಹಿತ್ಯದ ಹೊಸ ಅಂಗವಾಗಿ ಬೆಳೆಯಲಾರಂಭಿಸಿದಾಗಲೇ. ನೂರೈವತ್ತು ವರುಷಗಳ ಹಿಂದೆ ಶ್ರೀ ಪ್ಯಾರಿಲಾಲ ಮಿತ್ರ ಮತ್ತು ಶ್ರೀ ಕಾಳೀ ಪ್ರಸನ್ನ ಸಿಂಹ ಮೊಟ್ಟ ಮೊದಲ ಕಾದಂಬರಿಗಳನ್ನು ಬರೆದರು. ಅನಂತರ ಬಂಗಾಳಿ ಕಾದಂಬರಿ ಪ್ರಭಾವಶಾಲಿ ಸಾಹಿತ್ಯ ಕ್ಷೇತ್ರವಾಗಿ ಬೆಳೆಯಲಾರಂಭಿಸಿದ್ದು ಶ್ರೀ ಬಂಕಿಮಚಂದ್ರ ಚಟರ್ಜಿಯವರ ಪ್ರತಿಭೆಯಿಂದ. ಆಗಲೇ ಪಾಶ್ಚಾತ್ಯ ಸಾಹಿತ್ಯದಲ್ಲಿ ಸಣ್ಣ ಕಥೆಗಳ ಬೆಳವಣಿಗೆ ಮೋಪಸಾ, ಓ ಹೆನ್ರಿ, ಚೆಕೋವ್ ಮುಂತಾದವರ ಅಮೋಘ ಕೃತಿಯಿಂದ ಅತ್ಯಂತ ಫಲಕಾರಿಯಾಗಿ ಬೆಳೆದು ಆಗ ತಾನೇ ಏಳಿಗೆಗೆ ಬರುತ್ತಿದ್ದ ಬಂಗಾಳಿ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಕಾದಂಬರಿಯಲ್ಲಿ ನುರಿತ ಬಂಕಿಮರೇ ಬಂಗಾಳಿಯಲ್ಲಿ ಮೊದಲ ಸಣ್ಣ ಕಥೆಗಳನ್ನು ಬರೆದರು. ಅವರ 'ಚಿತ್ರ ವಿಚಿತ್ರಾವಳಿ' ಎಂಬ ಸಂಕಲನದಲ್ಲಿ ಪ್ರಕಟವಾದ ಸುರಸ ಕಥೆಗಳು ಈಗಲೂ ಸ್ಮರಣೀಯವಾಗಿವೆ. ಅವರಾದ ಮೇಲೆ ಬಂದ ರೊಮೇಶ ಚಂದ್ರ ದತ್ತ, ನಾಗೇಂದ್ರ ಗುಪ್ತಾ, ಇಂದ್ರನಾಥ ಬ್ಯಾನರ್ಜಿ, ತ್ರೈಲೋಕ್ಯನಾಥ ಮುಖರ್ಜಿ ಮುಂತಾದವರು ಕಾದಂಬರಿಗಳೊಂದಿಗೇ ಕೆಲವು ಮೇಲ್ತರದ ಕಥೆಗಳನ್ನೂ ಬರೆದರು. ತ್ರೈಲೋಕ್ಯನಾಥರ ಕಥೆಗಳಲ್ಲಿ ಬಂಗಾಳಿ ಗ್ರಾಮನಿವಾಸಿಗಳ ಜಾನಪದ ಕಥೆಗಳ ಶೈಲಿ. ರಚನಾತಂತ್ರ ಚೆನ್ನಾಗಿ ಕಂಡುಬಂದುವು ಆದರೆ ಸಣ್ಣಕಥೆಯ ಕಲೆ ತುಟ್ಟತುದಿಗೇರಿದುದು ಕವಿ ಟಾಗೋರರ ಅದ್ವಿತೀಯ ಪ್ರತಿಭೆಯಿಂದ. ಒಂದು ನೂರಕ್ಕಿಂತಲೂ ಹೆಚ್ಚಾಗಿ ಬಂದ ಇವರ ಸಣ್ಣ ಕಥೆಗಳು ನುರಿತ ಕಲಾಶ್ರೇಷ್ಠನ ಕೈಯಲ್ಲಿ ಈ ಕಲೆ ಎಷ್ಟು ಪರಿಣಾಮಕಾರಿಯಾಗಬಲ್ಲುದೆಂದು ತೋರಿಸಿಕೊಟ್ಟವು. ವಂಗ ಸಾಹಿತ್ಯದಲ್ಲೇ ಅಲ್ಲದೆ ಇಡೀ ವಿಶ್ವ ಸಾಹಿತ್ಯದಲ್ಲಿ ಟಾಗೋರರ ಕಥೆಗಳು ಒಂದು ವಿಶಿಷ್ಟ ಸ್ಥಾನಗಳಿಸಿಕೊಂಡಿವೆ. ಅವುಗಳಲ್ಲಿ ತೋರಿಬರುವ ರವೀಂದ್ರರ ಕಲಾನಿಪುಣತೆ, ಅವರ ವೈವಿಧ್ಯಪೂರ್ಣ ಜೀವನಾನುಭವ ಮತ್ತು ಮನೋಜ್ಞವಾದ ಕವಿತಾ ಶೈಲಿ ಈಗಾಗಲೇ ಜಗತ್ಪ್ರಸಿದ್ಧವಾಗಿ ಹೋಗಿವೆ. ಟಾಗೋರರಾದ ಮೇಲೆ ಬಂದ 'ಕಲ್ಲೋಲ' ಎಂಬ ಬಂಡುಕೋರ ಸಾಹಿತಿಗಳ ಗುಂಪಿಗೆ ಸೇರಿದ ಶೈಲಜಾನಂದ ಮುಖರ್ಜಿ, ಬುದ್ಧದೇವ ಬಸು, ಅಚಿಂತ್ಯ ಕುಮಾರ ಸೇನಗುಪ್ತ ಮುಂತಾದವರು ಪಾಶ್ಚಾತ್ಯ ಸಾಹಿತ್ಯದಲ್ಲಿ ಆಗ ಬೀಸುತ್ತಿದ್ದ ಹೊಸತನದ ಬಿರುಗಾಳಿಗೆ ಸಿಲುಕಿ ಜೀವನವನ್ನು ಹೊಸ ದೃಷ್ಟಿಕೋನದಿಂದ ವಿಮರ್ಶಿಸುವಂಥ ಕಥೆಗಳನ್ನು ಬರೆದರೂ ಅವು ಟಾಗೋರರ ಕೃತಿಗಳ ಮಟ್ಟಕ್ಕೆ ಬರಲಿಲ್ಲ. ಆದರೆ ಅದೇ ಗುಂಪಿಗೆ ಸೇರಿ ಆ ಮೇಲೆ ಹೊರಗೆ ಬಂದ ಸ್ವತಂತ್ರ ಮನೋವೃತ್ತಿಯ ಮಾಣಿಕ್ ಬ್ಯಾನರ್ಜಿ ಮತ್ತು ವಿಭೂತಿ ಭೂಷಣ ಬ್ಯಾನರ್ಜಿಯವರು ಮಾತ್ರ ಕೆಲವು ಅತ್ಯಂತ ಪ್ರಭಾವಶಾಲಿ ಕಥೆಗಳನ್ನು ಬರೆದಿದ್ದಾರೆ. ಮಾಣಿಕ್ ಬಂದೋಪಾಧ್ಯಾಯರು ಮಾರ್ಕ್ಸ್‌ವಾದದಿಂದ ಪ್ರಚೋದಿತರಾಗಿ ಪೂರ್ವ ಬಂಗಾಳದ ದೀನ ದಲಿತರ ಜೀವನದ ಹಂಬಲು ಹೋರಾಟಗಳನ್ನು ಶಕ್ತಿಪೂರ್ಣವಾಗಿ ಚಿತ್ರಿಸಿದ್ದಾರೆ. 'ಪಥೇರ್ ಪಾಂಚಾಲಿ' ಎಂಬ ವಿಶ್ವ ವಿಖ್ಯಾತ ಕಾದಂಬರಿ ಬರೆದು ಅಮರರಾಗಿರುವ ವಿಭೂತಿ ಭೂಷಣರು ಅತಿ ಸಾಧಾರಣ ವರ್ಗದ ಜನರ ಬದುಕನ್ನೇ ಆಧಾರವಾಗಿ ಮಾಡಿಕೊಂಡು ಸುಂದರವಾದ ಕಥೆಗಳನ್ನು ಬರೆದಿದ್ದಾರೆ. ಅವರ ಜೀವನ ದೃಷ್ಟಿಯು ಯಾರೊಬ್ಬ ಪಾಶ್ಚಾತ್ಯ ಅಥವಾ ದೇಶೀಯ ಬರೆಹಗಾರನ ಪ್ರಭಾವಕ್ಕೂ ಒಳಗಾಗದೆ ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಪಡೆದಿದೆ...

ಇತ್ತೀಚೆಗೆ ಬಂದಿರುವ ಶ್ರೀ ನಾರಾಯಣ ಗಂಗುಲಿ, ಸುಬೋಧ ಘೋಷ್ ಸಮರೇಶ್ ಬಸು ಮುಂತಾದವರ ಕಥೆಗಳಲ್ಲಿ ಆಧುನಿಕ ಸಾಮಾಜಿಕ ಏರು ತಗ್ಗುಗಳ ಹೊಯ್ದಾಟದಲ್ಲಿ ಸಿಲುಕಿ ಒದ್ದಾಡುವ ಮಧ್ಯಮ ತರಗತಿಯ ಜನರ ಮನದಲ್ಲಾಗುವ [illegible] ವಾಗಿ ವಿಶ್ಲೇಷಿಸಲ್ಪಟ್ಟಿದೆ. ಮೇಲೆ ಹೇಳಿದ ಕಥೆಗಾರರೆಲ್ಲರಿಗಿಂತಲೂ ಹೆಚ್ಚು ಜನಪ್ರಿಯವಾಗಿ, ಇಡೀ ಭಾರತದ ಎಲ್ಲಾ ಭಾಷೆಗಳಲ್ಲೂ ಭಾಷಾಂತರದ ಮೂಲಕ ಪರಿಚಿತರಾಗಿರುವ ಕಥೆಗಾರರೆಂದರೆ ಡಾಕ್ಟರ್ ಬಾಲಾಯಿ ಚಂದ್ರ ಮುಖರ್ಜಿಯವರು. 'ಬನಫೂಲ್' ಎಂಬ ಗುಪ್ತನಾಮದಲ್ಲಿ ವೈದ್ಯವೃತ್ತಿಗೆ ಸೇರಿದ ಶ್ರೀ ಮುಖರ್ಜಿಯವರು ಮುನ್ನೂರಕ್ಕೂ ಹೆಚ್ಚಾಗಿ ಸಣ್ಣಕಥೆಗಳನ್ನು ಬರೆದು ಯಶಸ್ವಿಯಾಗಿದ್ದಾರೆ. ಕೇವಲ ಒಂದೆರಡೇ ಪುಟಗಳಲ್ಲಿ ಅತಿ ಸಂಕ್ಷೇಪವಾದರೂ ಶಕ್ತಿಯುತವಾದ ವಾಕ್ಯಗಳಿಂದ ಕೂಡಿ ರಚಿಸಿದ ಈ ಕಥೆಗಳು ಜೀವನದ ವೈಚಿತ್ರ್ಯವನ್ನು ವೈದ್ಯನೊಬ್ಬನ clinical ದೃಷ್ಟಿಕೋನದಿಂದ ವಿಡಂಬನ ಮಾಡುವ ವೈಖರಿ ಅನುಕರಣೀಯವಾಗಿದೆ. ಈ ಕಥೆಗಳು ಅನಿರೀಕ್ಷಿತವಾಗಿ ಕೊನೆ ಮುಟ್ಟುವ ಬಗ್ಗೆ ಅಮೇರಿಕದ ಓ. ಹೆನ್ರಿಯನ್ನು ನೆನಪಿಗೆ ತರುತ್ತವೆ. ಸ್ವಾತಂತ್ರ್ಯದ ನಂತರ ಈ ಇಪ್ಪತ್ತು ಮೂರು ವರುಷಗಳಲ್ಲಿ ಹೆಸರು ಪಡೆದ ಲೇಖಕರಲ್ಲಿ ಸ್ವರಾಜ್ ಬಂದೋಪಾಧ್ಯಾಯ, ವಿಮಲ ಮಿತ್ರ, 'ಶಂಕರ'. 'ಜರಾಸಂಧ'. ಮುಂತಾದವರು ಹೊಸ ಬಗೆಯ ಕಥೆಗಳನ್ನು ಬರೆದಿದ್ದಾರೆ ಅವುಗಳಲ್ಲಿ ಈಗ ಬಂಗಾಳದ ಜನಜೀವನದಲ್ಲಿ ನಡೆಯುತ್ತಿರುವ ವಿಧವಿಧವಾಗಿ ಆಂದೋಳನಗಳ ಸೂಕ್ಷ್ಮ ಪ್ರತಿಬಿಂಬ ಕಾಣಬರುತ್ತದೆ. ಒಟ್ಟಿನಲ್ಲಿ ಬಂಗಾಳಿ ಸಣ್ಣ ಕಥೆ ಇಡೀ ಭಾರತದ ಇತರ ಸಾಹಿತ್ಯಗಳಿಗೆಲ್ಲ ಮಾದರಿಯಾಗಿ ಎಷ್ಟೋ ಪಾಶ್ಚಾತ್ಯ ಸಾಹಿತ್ಯದ ಉತ್ತಮ ಕೃತಿಗಳಿಗೆ ಸ್ವಲ್ಪವೂ ಕಡಿಮೆಯಿಲ್ಲವೆನ್ನಿಸಿಕೊಂಡಿದೆ.

●●

# ಉರ್ದು ಕಥಾ ಸಾಹಿತ್ಯ

—ಪಂಚಾಕ್ಷರಿ ಹಿರೇಮಠ

ಉರ್ದು ಕಥಾ ಸಾಹಿತ್ಯದ ಆರಂಭದಲ್ಲಿ 'ದಾಸ್ತಾನೆ ಅಮೀರ ಹಮ್ಜಾ', 'ಬೂಸ್ತಾನೆ ಖಿಯಾಲ್', 'ಫಸಾನಯೆ ಅಜಾಯಿಬ್' ದಂಥ ಕಾಲ್ಪನಿಕ ಹಾಗೂ ಅವಾಸ್ತವ ಕಥೆಗಳಿಂದಲೇ ತನ್ನ ಓದುಗರ ಮನವನ್ನು ರಂಜಿಸುತ್ತಲಿತ್ತು.

೧೮೫೭ ರಲ್ಲಿ ಕಥಾಸಾಹಿತ್ಯದ ನಿಜವಾದ ಆರಂಭ ವಾಯಿತೆಂದು ಹೇಳಬೇಕು. ಕಲ್ಪನೆಯೊಂದಿಗೆ ವಾಸ್ತವಿಕತೆ ಸೇರಿಸಿ ಬರೆಯಲು ಆರಂಭಿಸಿದ ಮೊದಲಿಗರಲ್ಲಿ ಶ್ರೀ ರಥನನಾಥ ಸರಷಾರರೆಂದು ಇತಿಹಾಸ ಹೇಳುತ್ತದೆ ಅವರ ಕೃತಿ 'ಫಸಾನಯೆ ಆಜಾದ' ಒಂದು ಮೈಲುಗಲ್ಲು-ಉರ್ದು ಸಾಹಿತ್ಯದಲ್ಲಿ ೧೯೦೧ ರ ವರೆಗೂ ಕಾದಂಬರಿಗಳೇ ಹೆಚ್ಚಾಗಿ ಬಂದವು. ಅನಂತರ ಕಾದಂಬರಿಯ ಸ್ಥಾನವನ್ನು ಕಥೆ ಅಲಂಕರಿಸಿತು- ಸಣ್ಣಕಥೆಯಲ್ಲಿರಬೇಕಾದ ಎಲ್ಲ ಗುಣಗಳು ಆಂಗ್ಲ ಸಾಹಿತ್ಯದಿಂದಲೇ ಎರವಲಾಗಿ ಪಡೆದವುಗಳು ಈ ಮಾತು ದೇಶದ ಎಲ್ಲ ಭಾಷೆಗಳ ಕಥಾ ಸಾಹಿತ್ಯಕ್ಕೂ ಅನ್ವಯಿಸುತ್ತದೆ. ಉರ್ದು ಭಾಷೆಯಲ್ಲಿ ಮೊದ ಮೊದಲು ಆಂಗ್ಲ ಭಾಷೆಯ ಕಥೆಗಳೇ ಅನುವಾದಗೊಂಡು ಪ್ರಕಟವಾದವು. ಅನಂತರ ತುರ್ಕಿ, ರಶಿಯನ್ ಹಾಗೂ ಫ್ರೆಂಚ್ ಭಾಷೆಯ ಕಥೆಗಳು ಬಂದವು. ತುರ್ಕಿ ಕಥೆಗಳನ್ನು ಮೊಟ್ಟ ಮೊದಲು ಉರ್ದು ಭಾಷೆಗೆ ತಂದವರು ಜನಾಬ ಸಜ್ಜಾದ ಹೈದರ್ ಎಲ್ದ್ರಮ ಅವರು.

ಒಳ್ಳೆಯ ಹಾಗೂ ಮೌಲಿಕ ಕಥೆಗಳನ್ನು ಉರ್ದು ಭಾಷೆಯಲ್ಲಿ ಪ್ರಥಮವಾಗಿ ಬರೆದವರೆಂದರೆ ಮುನ್ಷಿ ಪ್ರೇಮಚಂದ ಅವರು. ಅವರು ಅಸಂಖ್ಯಾತ ಕಥೆಗಳನ್ನು ಬರೆದರು. ಅವರ ಮೊದಲ ಕಥಾ ಸಂಗ್ರಹ 'ಸೋಜೆ ವತನ್' ಎಂಬುದು. ಉರ್ದು ಕಥಾ ಸಾಹಿತ್ಯದಲ್ಲಿ ಅವರ ಹೆಸರು ಚಿರಸ್ಮರಣೀಯವಾಗಿದೆ. ಇಂದಿನ ಬರೆಹಗಾರರ ಮೇಲೂ ಪ್ರೇಮಚಂದರ ಪ್ರಭಾವ ಇರುವುದನ್ನು ನಾವು ಗುರುತಿಸಬಹುದಾಗಿದೆ. ಪ್ರೇಮಚಂದರಷ್ಟು ಜೀವನವನ್ನು, ಬದುಕನ್ನು ಬಹು ಹತ್ತಿರದಿಂದ ನೋಡಿದವರು, ನೋಡಿ ಅದನ್ನು ಸಾಹಿತ್ಯದಲ್ಲಿ ಪ್ರಭಾವಪೂರ್ಣವಾಗಿ ಚಿತ್ರಿಸಿದವರು ಇಂದಿಗೂ ಉರ್ದು ಸಾಹಿತ್ಯದಲ್ಲಿ ಇನ್ನೊಬ್ಬರಿಲ್ಲ

ಪ್ರಗತಿಶೀಲ ಲೇಖಕರಲ್ಲಿ ಜನಾಬ ಸಜ್ಜಾದ ಹೈದರ್ ಎಲ್ದ್ರಮ್, ಜನಾಬ ಲತೀಫುದ್ದೀನ ಅಹ್ಮದ್, ಜನಾಬ ನಿಯಾಜ ಫತೆಹಪುರಿ ಹಾಗೂ ಮಜನು ಗೋರಖಪುರಿ ಪ್ರಮುಖರು: ಈ ಕಾಲಕ್ಕೆ ಕಥೆ ಕೇವಲ ಮನೋರಂಜನೆಗಾಗಿ ಅಲ್ಲ; ಅದು ಜೀವನದ ವಾಸ್ತವಿಕತೆಯನ್ನು ಪ್ರತಿಬಿಂಬಿಸುವ ಸಾಧನ ಎನ್ನುವ ಪ್ರಜ್ಞೆ ಲೇಖಕರಲ್ಲಿ ಉಂಟಾಗಿತ್ತು. ಅದರ ಮಾರ್ಗದರ್ಶಕರೂ ಪ್ರೇಮಚಂದರೇ ಆಗಿದ್ದರು, ಪ್ರೇಮಚಂದರ 'ಕಫನ್' ಕಥೆಯನ್ನು ಇಲ್ಲಿ ಹೆಸರಿಸಬಹುದು. ಜಗತ್ತಿನ ಅತ್ಯುತ್ತಮ ಕಥೆಗಳಲ್ಲಿ ಇದೂ ಒಂದು ಎಂದು ಪರಿಗಣಿಸಲಾಗಿದೆ. ಪ್ರೇಮಚಂದರ ಪ್ರಭಾವಕ್ಕೆ ಒಳಗಾದರೂ ಶ್ರೇಷ್ಠ ಕಥೆಗಳನ್ನು ನೀಡಿದವರಲ್ಲಿ ಪಂಡಿತ ಸುದರ್ಶನ, ಜನಾಬ ಆಜಂ ಗರೇವಿ ಜನಾಬ ಅಲಿ ಅಬ್ಬಾಸ ಹುಸೇನಿ ಪ್ರಮುಖರು.

ಮುಂದೆ ೧೯೩೨ ರಲ್ಲಿ ಸಮಾಜದಲ್ಲಿ ಶೀಘ್ರ ಪರಿವರ್ತನೆ ಹಾಗೂ ಕ್ರಾಂತಿಯನ್ನು ಬಯಸುವವರ ಸಂಗ್ರಹ 'ಅಂಗಾರೆ' ಪ್ರಕಟವಾಯಿತು. ಇದರಲ್ಲಿ ಹತ್ತು ಕಥೆಗಳಿವೆ ಈ ಸಂಗ್ರಹದ ಪ್ರಮುಖ ಲೇಖಕರೆಂದರೆ ಜನಾಬ ಸಜ್ಜಾದ ಜಹೀರ; ಶ್ರೀಮತಿ ರಷಿದ ಜಹಾಂ, ಜನಾಬ ಅಹ್ಮದ ಅಲಿ. 'ಅಂಗಾರೆ' ಕ್ರಾಂತಿಯನ್ನೇ ತಂದಿತು, ಅಂದಿನ ಸರಕಾರ ಈ ಕೃತಿಯನ್ನು ಬಹಿಷ್ಕರಿಸಿತು.

೧೯೩೭ ರಿಂದ ೧೯೪೭ ರ ವರೆಗಿನ ಅವಧಿಯಲ್ಲಿ ಜಗತ್ತಿನ ಶ್ರೇಷ್ಠ ಕಥೆಗಳೊಂದಿಗೆ ಸರಿದೊರೆಯಾಗಿ ನಿಲ್ಲಬಹುದಾದಂಥ ಕಥೆಗಳ ರಚನೆ ನಡೆಯಿತು. ಈ ಅವಧಿಯಲ್ಲಿ ಶ್ರೇಷ್ಠ ಕಥೆಗಳನ್ನು ರಚಿಸಿದವರಲ್ಲಿ ಶ್ರೀ ಕೃಷ್ಣಚಂದ್ರ ಜನಾಬ ಅಘಾ ಅಬ್ಬಾಸ ಹುಸೇನಿ, ಜನಾಬ ಸಾದತ್ ಹಸನ್ ಮಂಟೊ. ರಾಜೇಂದ್ರ ಸಿಂಗ ಬೇದಿ. ಶ್ರೀಮತಿ ಇಸ್ಮತ್ ಚುಗ್ತಾಯಿ, ಜನಾಬ ಹಯಾತ್-ಉಲ್ಲಾ-ಅನ್ಸಾರಿ, ಶ್ರೀ ಉಪೇಂದ್ರನಾಥ ಅಷ್ಕ, ಜನಾಬ ಅಹ್ಮದನದೀಂ ಕಾಸಮಿ, ಖ್ವಾಜಾ ಅಹ್ಮದ ಅಬ್ಬಾಸ, ಶ್ರೀಮತಿ ಮುಮ್ತಾಜ ಷರೀನ್, ಶ್ರೀಮತಿ ಖುದೇಜಾ ಮಸ್ತೂರ, ಶ್ರೀಮತಿ ಜಿಲಾನಿ ಬಾನು ಇತ್ಯಾದಿ ಜನ ಪ್ರಮುಖರು

ಶ್ರೀ ಪ್ರೇಮಚಂದರ ನಂತರ ಉರ್ದು ಕಥಾ ಸಾಹಿತ್ಯದ ಚಕ್ರವರ್ತಿಯೆಂದರೆ ಕೃಷ್ಣಚಂದ್ರರೆಂದೇ ಹೇಳಬೇಕು. ಉರ್ದು ಕಥಾ ಸಾಹಿತ್ಯವನ್ನು ಅವರಷ್ಟು ಸಂಪದ್ಭರಿತಗೊಳಿಸಿದವರು ಹಾಗೂ ಅದರ ಗೌರವವನ್ನು ಹೆಚ್ಚಿಸಿದವರು ಇನ್ನೊಬ್ಬರಿಲ್ಲ

ನವ್ಯಕಥೆ ಆರಂಭವಾದಾಗಿನಿಂದ ಶ್ರೀ ಜೋಗೇಂದ್ರ ಪಾಲರ ಹೆಸರು ಉರ್ದು ಕಥಾ ಸಾಹಿತ್ಯದಲ್ಲಿ ತುಂಬ ಕೇಳಿಬರುತ್ತಿದೆ. ನವ್ಯ ಪಂಥಕ್ಕೆ ಅವರು ಆಚಾರ್ಯರೆಂದೇ ಹೇಳಬೇಕು.

ಶ್ರೀಮತಿ ಕುರತ್-ಉಲ್ ಐನ್ ಹೈದರ ತಮ್ಮ ಕೆಲವೇ ಕಥೆಗಳಿಂದ ತುಂಬ ಹೆಸರು ಗಳಿಸಿದ್ದಾರೆ.

ಜನಾಬ ಅಹಮದೀ ಕಾಶ್ಮೀರಿ; ಕಶ್ಮೀರಿಲಾಲ ಝಾಕಿರ್, ಜನಾಬ ಆದಿಲ್ ರಷೀದ. ಜನಾಬ ಬಶೀರ ನಾದಿ; ಜನಾಬ ಅಲಿಸಾಕರ; ಶ್ರೀಮತಿ ನಜಮಾನಿ ಕಹತ್ ಮುಂತಾದ ಕಥೆಗಾರರು ತುಂಬ ಒಳ್ಳೆಯ ಕಥೆಗಳನ್ನು ನೀಡಿದ್ದಾರೆ ಇನ್ನೂ ನೀಡುತ್ತಲಿದ್ದಾರೆ

ಉರ್ದು ಕಾವ್ಯದ ನಂತರ ಉರ್ದು ಭಾಷೆಯಲ್ಲಿ ಕಥಾ ಸಾಹಿತ್ಯದಷ್ಟು ಜನಮನವನ್ನು ಆಕರ್ಷಿಸುವ ಬೇರಿನ್ನಾವ ಪ್ರಕಾರವೂ ಇಲ್ಲವೆಂದೇ ಹೇಳಬೇಕು.

ಉರ್ದು ಕಥಾ ಸಾಹಿತ್ಯ ಬಹು ಸಂಪದ್ಭರಿತವಾಗಿದೆ. ಅದರ ಲೇಖಕರು ಸ್ವದೇಶದಲ್ಲಿ ಮಾತ್ರವಲ್ಲ ಸಮುದ್ರದಾಚೆಯ ರಾಷ್ಟ್ರಗಳಲ್ಲಿ ಕೂಡ ಬಹು ಖ್ಯಾತಿ ಗಳಿಸಿದವರಾಗಿದ್ದಾರೆ.

●●

# ಅಸ್ಸಾಮಿ ಸಣ್ಣಕಥಾ ಸಾಹಿತ್ಯ

—ಎಚ್. ಎನ್. ರಂಗರಾವ್

ಕನ್ನಡದಂತೆ ಅಸ್ಸಾಮಿ ಸಾಹಿತ್ಯ ಪ್ರಾಕಾರಗಳಲ್ಲಿ ಒಂದಾದ ಸಣ್ಣ ಕಥಾ ಸಾಹಿತ್ಯ ಶತಮಾನದ ಹಿಂದೆ ಜಾನಪದ ಕಥಾವಸ್ತುಗಳಿಗಷ್ಟೇ ಸೀಮಿತವಾಗಿತ್ತು. ಕ್ರಮೇಣ ಅದರ ಮೇಲೆ ಪಾಶ್ಚಿಮಾತ್ಯರ ಪ್ರಭಾವ ಹೆಚ್ಚಿ ಆಧುನಿಕ ರೂಪಪಡೆಯತೊಡಗಿತು. ಅಸ್ಸಾಮಿ ಸಣ್ಣ ಕಥೆಗೆ ನಾಂದಿ ಹಾಕಿದವರು ಅಸ್ಸಾಮಿ ಸಾಹಿತ್ಯ ರಥಿ ಸಾಹಿತ್ಯಪ್ರವರ್ತಕರೆಂದು ಹೆಸರಾದ ಲಕ್ಷ್ಮೀನಾಥ ಬೆಜ್‌ಬರುವ ೧೯೬೮ ರಲ್ಲಿ ಇವರ ಶತಾಬ್ದಿಯನ್ನು ಆಚರಿಸಲಾಯಿತು. ಇವರ 'ಸಾಧು ಕಥಾರ್ ಕುಕಿ', 'ಜೋನ್‌ಬಿರಿ', 'ಸುರಭಿ' ಕಥಾ ಸಂಕಲನಗಳು ಮೂರು ಸಂಪುಟಗಳಲ್ಲಿ ಪ್ರಕಟಗೊಂಡಿವೆ. ಜೀವನದ ಮೇಲೆ ಅಧ್ಯಾತ್ಮದ ಪ್ರಭಾವ. ಪ್ರಕೃತಿಯ ಚಿತ್ರಗಳನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಇವರ ಸಮಕಾಲೀನರಾದ ಶರತ್ ಚಂದ್ರ ಗೋಸ್ವಾಮಿಯವರು ತಮ್ಮ ಕೃತಿಗಳಲ್ಲಿ ಪಾಶ್ಚಿಮಾತ್ಯ ಕಲಾಂಶ ತುಂಬಲು ಯತ್ನಿಸಿ ಯಶಸ್ವಿಯಾದರು. ಆಧುನಿಕ ತಾಂತ್ರಿಕತೆ ಅವರ ರಚನೆಯಲ್ಲಿರಲಿಲ್ಲ. ಅವು ಭ್ರಮಾಪೂರಕಗಳು.

ಸ್ವಲ್ಪ ಕಾಲವಾದ ನಂತರ ನಾಗೇಂದ್ರನಾಥ ಚೌಧರಿ ತ್ರೈಲೋಕ್ಯನಾಥ ಗೋಸ್ವಾಮಿಯವರುಗಳು ಬೆಳಕಿಗೆ ಬಂದರು. ಸಾಮಾಜಿಕ ಪ್ರಜ್ಞೆಯನ್ನುಳ್ಳ ಇವರು ಆ ಅಂಶಕ್ಕೆ ತಮ್ಮ ಸಣ್ಣ ಕಥೆಗಳಲ್ಲಿ ಪ್ರಾಮುಖ್ಯ ನೀಡಿದರು. 'ಅರುಣ' ಮತ್ತು 'ಮರೀಚಿಕಾ' ಕಥಾಸಂಕಲನ ರಚಿಸಿದ ಗೋಸ್ವಾಮಿಯವರು ತಮ್ಮ ಪರಿಸರದ ಜನ ಜೀವನದ ಅಧ್ಯಯನ ನಡೆಸಿ. ಜನರ ಕಷ್ಟನಷ್ಟಗಳನ್ನು ಸ್ವತಃ ಅನುಭವಿಸಿ, ಭಾವನೆಗಳ ಛಟ್ಟಿಯನ್ನು ತಮ್ಮ ಕೃತಿಗಳಲ್ಲಿ ಇಳಿಸಿದರು. ಅವರು ತಮ್ಮ ಕಥೆಗಳಿಗೆ ಆಯ್ದುಕೊಂಡ ವಿಷಯಗಳನ್ನು ಗಮನಿಸಿದರೆ ಈ ಮಾತು ಮನವರಿಕೆಯಾಗುವುದು. ಅವರ "ಜಾರಜ" ಎಂಬ ಕಥೆ ವಿಧವೆಯೊಬ್ಬಳಿಗೆ ಸಂಬಂಧಿಸಿದಾಗಿದೆ. ದ್ವಿತೀಯ ಮಹಾಯುದ್ಧವು ಕೂಡ ಅವರ ಕಥೆಗಳಿಗೆ ವಸ್ತುವನ್ನೊದಗಿಸಿದೆ

ಈ ಅಸ್ಸಾಮಿ ಸಣ್ಣಕಥಾ ಲೇಖಕ ಪರಂಪರೆಯಲ್ಲಿ ರೋಮದಾಸ್ ( ರಾಮದಾಸ್ ಎನ್ನುವಲ್ಲಿ ಅಸ್ಸಾಮಿ ಬಂಗಾಳಿ ಉಚ್ಚಾರ ಪ್ರಕಾರ 'ಅ' ಉಚ್ಚಾರ 'ಓ' ಆಗಿರುತ್ತದೆ ) ರವರು 'ಶ್ರೇಷ್ಠ ಗಲ್ಪಾ' ಕಥಾರಿತ ರಚನೆ. ಇವರ ಇನ್ನೊಂದು ಕೃತಿಯಲ್ಲಿ ( 'ಪಥ್ ಪರಿವರ್ತನ' ) ಕಾಲೇಜು ಹುಡುಗಿಯರ ಭಾವನೆ ಪ್ರಣಯ, ಪ್ರೇಮದ ಪ್ರಕಟಣೆ ಹೇಗಿರುತ್ತದೆಯೆಂಬುದನ್ನು ಸ್ವಲ್ಪವೂ ಹಿಂಜರಿಯದೆ ಬರೆದಿದ್ದಾರೆ. ಮುನಿನ್ ಬರ್ಕಾಟಕಿ, ಕೃಷ್ಣಭುಯಾನ್. ಉಮಾಶರ್ಮ. ಹೋಲಿರಾಮ್ ದೇಕಾ; ಲಾಕ್ಷಿ ಫೂಕನ್ ಮೊದಲಾದವರು ಇಚ್ಛಳ ಸಣ್ಣ ಕಥಾ ಸಾಹಿತ್ಯದ ನಿರ್ಮಾಪಕರು. ಹಳ್ಳಿಯ ಜೀವನವನ್ನು ನೈಜವಾಗಿ ಚಿತ್ರಿಸಿದವರುಗಳು. 'ಅಫೋಣಿ ಬಾಯ್'' ಎಂಬುದು ಶ್ರೇಷ್ಠ ಕೃತಿ. ಕಥೆಯಲ್ಲಿ ಸುಸಂಸ್ಕೃತವಾಗಿ ರೂಪುಗೊಂಡ ವರ್ಣನೆಗಳ ವೈವಿಧ್ಯ, ಸರಳ ಸಂಭಾಷಣೆ ಪರ ವಿಚಾರಗಳು. ಭಿನ್ನ ಭಿನ್ನ ಭಾವಗಳ ತೀಕ್ಷ್ಣ ಪ್ರಕಟಣೆ— ಇವೆಲ್ಲ ಅವರುಗಳ ಕೃತಿಯಲ್ಲಿ ಪ್ರತಿಬಿಂಬಿತವಾಗಿವೆ ಮಹಿಬೊರ ಎಂಬ ಹಾಸ್ಯ ಲೇಖಕರು ಹಾಸ್ಯ ಕಥಾಸಾಹಿತ್ಯ ರಚಿಸುವುದರಲ್ಲಿ ಎಲ್ಲರಗಿಂತ ಒಂದು ಕೈ ಮೇಲಿದ್ದಾರೆ. ಘನ ಪಂಡಿತರಾದ ಹೇಮ್ ಬರುವಾರ ಪ್ರಕಾರ. ಅಸ್ಸಾಮಿ ಸಾಹಿತ್ಯದಲ್ಲಿ ಸಣ್ಣ ಕಥೆ ಹೇಳಿಕೊಳ್ಳುವಷ್ಟು ಊರ್ಜಿತವಾಗಿಲ್ಲ. ಎಲ್ಲವೂ ಚೆಕೋವಿಯನ್ (ರಷ್ಯಾ ಕಥೆಗಾರ) ವಾತಾವರಣದವು ಎಂದಿದ್ದಾರವರು. ಹೊಮನ್ ಬರ್ಗೊಹೇನ್‌ರು ಕೆಲವೇ ಕೆಲವು ಕಥೆಗಳನ್ನು ಬರೆದಿದ್ದರೂ ಅವು ಪರಿಸ್ಥಿತಿಯ ಅಧ್ಯಯನ ನಡೆಸಿ ಮನೋವಿಶ್ಲೇಷಣಾತ್ಮಕವಾಗಿ ಬರೆದವುಗಳು ಅವುಗಳಲ್ಲಿ ಮಾನವನ ಭಿನ್ನ ಭಿನ್ನ ಭಾವಗಳು ಸುಸೂಕ್ಷ್ಮವಾಗಿ ರಚಿತವಾಗಿವೆ. ರಾಮದಾಸರು ಬಹುಪಾಗಿ ಭಾಷಾಚತುರರು. ಅವರ 'ಸೇತು ಬಂಧೋನ್' ಮತ್ತು 'ಬರಂ ಜೆತಿ ಯನಮ'— ಈ ಎರಡು ರಚನೆಗಳು ಈ ಮಾತಿಗೆ ಜೀವಂತ ನಿದರ್ಶನಗಳು.

ದೀನನಾಥ ಶರ್ಮಾ ಬರುವರು ಮುಖ್ಯವಾಗಿ ಕಾದಂಬರಿಕಾರರಾದರೂ ಸಣ್ಣಕಥೆಗಳನ್ನು ಬರೆಯುವುದರಲ್ಲೂ ಹೆಸರಾಗಿದ್ದಾರೆ ಇವರ 'ದುಲಾಲ್', 'ಆಕಲ್ ಸರಿಯಾ', 'ಕೋವಾ ಭತುರಿಯಾ', 'ಓತರ್ ತಲಾತ್' ಮತ್ತು 'ಕಲ್‌ಪನಾ', 'ಅಂಬಸ್ತವ'— ಕೃತಿಗಳು ಇವರ ಸಾಮಾಜಿಕ ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿವೆ ತಮ್ಮ ಕಥೆಗಳಲ್ಲಿ ಸಾಮಾಜಿಕ ಜೀವನ, ಅದರಲ್ಲೂ ಹೆಣ್ಣಿನ ನಾನಾ ಮುಖಗಳ ಪರಿಚಯ ಮಾಡಿಸುತ್ತಾರೆ

ಐರೋಪ್ಯ ಸಾಹಿತ್ಯ ಭಾರತೀಯ ಎಲ್ಲಾ ಭಾಷೆಗಳ ಮೇಲೆ ಬೀರಿದ ಪ್ರಭಾವ ಅಸ್ಸಾಮಿಯ ಮೇಲೂ ಇದೆ ಫ್ರಾಯ್ಡ್‌ನಿಂದ ಸ್ಫೂರ್ತಿ ಪಡೆದು ಅಸ್ಸಾಮಿ ಸಣ್ಣ ಕಥೆಗಳನ್ನು ಬರೆದ ಲಕ್ಷ್ಮೀಧರ ಶರ್ಮಾ ರೆಂಬುವರ ಕಾಮ ಪ್ರಚೋದಿತ. ಮುಖ್ಯ ಲೈಂಗಿಕಾರ್ಷಣೆ ಬಹಿರಂಗ ಪ್ರಣಯೋನ್ಮಾದಗಳ ತತ್ತ್ವ ಸಾರುವ ವಸ್ತುಗಳನ್ನು ಆರಿಸಿಕೊಂಡಿದ್ದಾರೆ. ಮಡಿವಂತರು ಇದನ್ನು ಬಹಿಷ್ಕರಿಸಬಹುದು. "ಅವರುಗಳು ಏನೇ ಹೇಳಲಿ ನಾನು ಮಾಡಿಸುವುದು ಜೀವನದರ್ಶನ. ಲೈಂಗಿಕವೂ ಜೀವನದ ಒಂದು ಅಂಶ ಹೊಸ ಮೌಲ್ಯಗಳ ಕುರಿತು ಬರೆಯಲು ನನಗೆ ನಾಚಿಕೆ ಹೇಸಿಗೆಯಿಲ್ಲ' ಎನ್ನುತ್ತಾರವರು

ಹತ್ತು ವರುಷಗಳ ಅನಂತರ ಕವಿತೆ, ನಾಟಕಗಳಂತೆ ಸಣ್ಣಕಥೆಯೂ ತನ್ನ ಜಾಡನ್ನು ಬದಲಿಸಿತು ಈ ಹಿಂದೆ ಸಮಾಜದ ಮಧ್ಯಮ ವರ್ಗದ ಜನಜೀವನವೇ ಕಥಾವಸ್ತುವಾಗಿತ್ತು. ಆದರೀಗ ಕೂಲಿಗಳು ರೈತರ ಸಮಸ್ಯೆ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ರಾಜಕೀಯ ಮತ್ತು ನೈತಿಕ ರೀತಿಗಳನ್ನು ವಿಷಯವನ್ನಾಗಿ ಆರಿಸಿಕೊಂಡು ಕಥೆಗಳ ರಚನೆಯಾಗುತ್ತಿದೆ

ಅಬ್ದುಲ್ ಮಲಿಕ, ಬೀರೇಂದ್ರಕುಮಾರ ಭಟ್ಟಾಚಾರ್ಯ ಭಾಬೇಂದ್ರನಾಥ ಸೈಕಿಯ— ಇವರುಗಳು ಆಧುನಿಕ ಸಣ್ಣ ಕಥಾಸಾಹಿತ್ಯಕ್ಕೆ ಮೆರಗು ತುಂಬಿ ಅದನ್ನು ವೈವಿಧ್ಯಪೂರ್ಣಗೊಳಿಸಿದ್ದಾರೆ.

●●

# ಹಿಂದಿಯ ಸಣ್ಣ ಕಥೆಗಳು

## —ನಾಸು ಬಿ. ಪುತ್ರನ್

ನಿಜವಾದ ಅರ್ಥದಲ್ಲಿ ಹಿಂದಿಯಲ್ಲಿ ಕತೆಗಳು ಅಸ್ತಿತ್ವಕ್ಕೆ ಬಂದುದು ಈ ಶತಮಾನದ ಪ್ರಥಮ ದಶಕದಲ್ಲಿ ಎಂದರೆ ತಪ್ಪಾಗಲಾರದು. ಮುನ್ಷಿ ಪ್ರೇಮಚಂದ್ (೧೮೮೦—೧೯೩೬) ಮತ್ತು ಜಯಶಂಕರ್ ಪ್ರಸಾದ್ (೧೮೮೭—೧೯೩೭) ಇವರು ಈ ಸಾಹಿತ್ಯಾಂಗದ ಅವಳಿ-ಜವಳಿ ಜನಕರು. ಇವರಿಬ್ಬರು ಅಧಿಕ ಪ್ರಿಯರು ಅತಿ ಪರಿಚಿತರು. ಯಥಾರ್ಥತೆಯ ಮಹಾ ಪರಂಪರೆಯನ್ನು ಉದ್ಘಾಟಿಸಿದ ಶ್ರೇಯ ಅವರಿಗೆ ಸಲ್ಲತಕ್ಕದ್ದು. ಪ್ರಸಾದರು ವಿಚಾರಾತ್ಮಕ ಪರಂಪರೆಯನ್ನಿತ್ತರು. ಪ್ರೇಮಚಂದರ ಪರಂಪರೆಯು ಅವರ ಸಮಕಾಲೀನರಾದ ಚಂದ್ರಧರ್ ಶರ್ಮಾ ಗುಲೇರಿ, ಸುದರ್ಶನ, ಪಂಡಿತ ವಿಶ್ವಂಭರನಾಥ ಶರ್ಮಾ, ಕೌಶಿಕ ಮೊದಲಾದ ಲೇಖಕರಿಂದ ಅಭಿವೃದ್ಧಿಗೊಂಡಿತು; ಈಗಲೂ ಯಶಪಾಲ್, ಅಶ್ಕ, ವಿದ್ಯಾಲಂಕಾರ್ ಮೊದಲಾದವರ ಲೇಖನಿಯಿಂದ ಅಭಿವೃದ್ಧಿಗೊಳ್ಳುತ್ತಲಿದೆ. ಪ್ರಸಾದರ ಪರಂಪರೆಗೆ ನೀರೆರೆದವರೆಂದರೆ ಅವರ ಸಮಕಾಲೀನರಾದ ಚತುರಸೇನ್ ಶಾಸ್ತ್ರಿ, ರಾಯ್ ಕೃಷ್ಣದಾಸ, ಸಿಯಾರಾಮ್‌ಶರಣ ಗುಪ್ತ ಮೊದಲಾದವರು. ಅದನ್ನು ಬದುಕಿಸಿಟ್ಟಿರುವ ಶ್ರೇಯ ಭಗವತೀಚರಣ ವರ್ಮಾ, ಜೈನೇಂದ್ರ ಕುಮಾರ್, ವಾತ್ಸಾಯನ ಮತ್ತು ಇನ್ನಿತರರಿಗೆ ಸಲ್ಲತಕ್ಕದ್ದು.

ಸುಮಾರು ೧೯೫೭—೫೮ ರಲ್ಲಿ ಹಿಂದಿಯ ಸಣ್ಣ ಕತೆಯ ಕ್ಷೇತ್ರವು ಬಹಳ ಹೀನ ಸ್ಥಿತಿಯಲ್ಲಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಈ



"ಇವತ್ತು ದೀಪಾವಳಿ — ...ನೀನು ಬೆಂಕಿಕಡ್ಡಿ ಕೊಡದೇ ಹೋಗಿದ್ರೆ ನಾನಿವತ್ತು ದೀಪಾನೆ ಕಾಣ್ತಿರಲಿಲ್ಲ."

ನಿರಾಶಾಜನಕ ಪರಿಸ್ಥಿತಿಯಲ್ಲಿ ಸುಮಾರು ಐದನೇ ದಶಕದ ಮಧ್ಯ ಹಾಗೂ ಅಂತ್ಯದಲ್ಲಿ ಸಣ್ಣ ಕತೆಗಾರರ ಗುಂಪೊಂದು ಉದ್ಭವಿಸಿತು. ಆ ಗುಂಪು ಸಣ್ಣ ಕಥೆಗಳ ಕ್ಷೇತ್ರದಲ್ಲೊಂದು ಆಂದೋಲನವನ್ನೇ ಎಬ್ಬಿಸಿತಲ್ಲದೆ ಆಗಿನಿಂದ ಹಿಂದಿಯಲ್ಲಿ ಸಣ್ಣ ಕತೆಯೇ ಅಭಿವ್ಯಕ್ತಿಯ ಮುಖ್ಯ ಸಾಧನವಾಯಿತು; ಸಾಹಿತ್ಯದ ಇನ್ನಿತರ ಅಂಗಗಳು ಹಿಂದುಳಿದುಬಿಟ್ಟವು. ಆ ಆಂದೋಲನವು 'ನಯೀ ಕಹಾನಿ' (ಹೊಸ ಕತೆ) ಎಂಬ ಹೆಸರನ್ನು ಗಳಿಸಿಕೊಂಡಿತು. ಹೊಸ ಕತೆಯ ನಿರ್ಮಾಣಕ್ಕೆ ಕಾರಣ ಈ ಆಂದೋಲನವೆನ್ನುವುದಕ್ಕಿಂತಲೂ ಆ ಸಾಹಿತ್ಯಾಂಗಕ್ಕೆ ದೊರೆತ ಕ್ರಿಯಾತ್ಮಕ ವಾತಾವರಣ ಎನ್ನಬಹುದು. ಇಲ್ಲಿಯ ಲೇಖಕರು ಪರಂಪರೆಯಾಗಿ ಬಂದಿರುವ ಬಂಧನದಿಂದ ಮುಕ್ತರಾಗಿ ಮೇಲಕ್ಕೆದ್ದು, ಮಾನವನ ಸಮಸ್ಯೆಗಳನ್ನು ಕಣ್ಣಾರೆ ಕಂಡು ಕುಪಿತರಾದರು. ದ್ರವಿತರಾದರು, ಚಿತ್ರಿಸಿ ಸಮಾಜದ ಮುಂದಿಟ್ಟರು; ಸಮಾಜದ ಮುಂದೆ ಕನ್ನಡಿ ಹಿಡಿದರು. ಇದರ ಮುಖ್ಯ ಶಿಲ್ಪಿಗಳೆಂದರೆ- ಕಮಲೇಶ್ವರ್, ಮೋಹನ್ ರಾಕೇಶ್, ರಾಜೇಂದ್ರ ಯಾದವ್. ಈ ಕ್ಷೇತ್ರದಲ್ಲಿ ರೇಣು, ಮಾರ್ಕಂಡೇಯ, ಶಿವಪ್ರಸಾದ್ ಸಿಂಘ್, ಕೃಷ್ಣಬಲದೇವ ವೈದ್ ಮೊದಲಾದ ರಚನಾತ್ಮಕ ಲೇಖಕರೂ ಮಹತ್ವಪೂರ್ಣ ಕೃತಿಗಳನ್ನು ನಿರ್ಮಿಸುತ್ತಿರುವರಾದರೂ ಕಮಲೇಶ್ವರ್-ರಾಕೇಶ್-ಯಾದವ್ ತ್ರಯರು ಉಳಿದವರಿಗೆ ಮಾರ್ಗದರ್ಶಕರಾಗಿ ಸಾಗುತ್ತಿರುವರು. ರೇಣು ಮತ್ತು ಶಿವಪ್ರಸಾದ್ ಸಿಂಘ್ ಅಲ್ಲದೆ ಇನ್ನು ಕೆಲವು ಪ್ರಾದೇಶಿಕ ಲೇಖಕರ ಕತೆಗಳನ್ನು ಪರಂಪರಾಗತ ಅರ್ಥದಲ್ಲಿ ಸಣ್ಣ ಕತೆಗಳೆಂದು ಹೇಳಲಾಗುವುದಿಲ್ಲ. ಆದರೂ ಆ ಕತೆಗಳು ಪ್ರೇಮಚಂದರ ಮಾರ್ಗವನ್ನು ಬಿಟ್ಟು ಹೊಸ ದಾರಿಯನ್ನನುಸರಿಸಿದ್ದು ಮಹತ್ವಪೂರ್ಣ ವಿಷಯ. ಪ್ರೇಮಚಂದರು ವ್ಯಕ್ತಿಗಳ ಬಡತನ ದಾರಿದ್ರ್ಯ ಹಾಗೂ ಒಳ್ಳೆತನವನ್ನು ಚಿತ್ರಿಸಿದರೆ, ರೇಣು ಮತ್ತು ಶಿವಪ್ರಸಾದರವರು ಅವರ ಸರಳ ಸಾಮಾನ್ಯ ಬುದ್ಧಿಯ ಹಿಂದೆ ಅಡಗಿರುವ ಪ್ರಾದೇಶಿಕವಾದರೂ ಆಧುನಿಕಕ್ಕೆ ಬಹಳ ಹತ್ತಿರವಿರುವ ವ್ಯಕ್ತಿತ್ವವನ್ನು ಹುಡುಕಿರುವರು; ಚಿತ್ರಿಸಿರುವರು.

ಕೆಲವೇ ವರುಷಗಳಲ್ಲಿ ಪ್ರಾದೇಶಿಕ ಪಂಥದ ಕಟ್ಟುಕತೆಯಂತೆ ಕಾಣುತ್ತಿದ್ದ ಸಾಹಿತ್ಯವು ಒಂದು ವಿಧದ ಪ್ರತಿಕ್ರಿಯೆಯನ್ನು ನಿರ್ಮಿಸಿತು. ಈ ಪ್ರತಿಕ್ರಿಯೆಯು ಸಣ್ಣ ನಗರಗಳ ಜೀವನವನ್ನು ಚಿತ್ರಿಸಬಯಸಿತು. ಕಮಲೇಶ್ವರ ಎಲ್ಲ ದೃಷ್ಟಿಯಿಂದಲೂ ಹೊಸದಾದ ಚಿರಕಾಲಿಕ ಸಣ್ಣ ಕತೆಗಳೊಂದಿಗೆ ಈ ಕ್ಷೇತ್ರದಲ್ಲಿಯೂ ಕಂಡುಬಂದರು. ದೃಷ್ಟಿ ಕ್ರಮೇಣ ದೊಡ್ಡ ಪಟ್ಟಣದತ್ತ ಹೊರಳಿತು. ಅವರ ಸಮದರ್ಶಿ ವಾತಾವರಣ ಹಾಗೂ ಅದರ ಬಿಗಿತದ ಬಗ್ಗೆ ಅವರಿಗಿರುವ ಉತ್ಸಾಹಪೂರ್ಣ ಒಳದೃಷ್ಟಿ ಉಲ್ಲೇಖನೀಯವಾದದ್ದು. ಚಿತ್ರಿಸಲಾಗದ ಭಾವನೆಗಳನ್ನು ಚಿತ್ರಿಸುವುದರಲ್ಲಿಯೂ ಸಫಲರಾದರು. ಮೋಹನ್ ರಾಕೇಶ್ ಮತ್ತು ರಾಜೇಂದ್ರ ಯಾದವ್ ಇವರಿಬ್ಬರೂ ಅಷ್ಟೇ ಸಫಲರು. ರಾಕೇಶ್ ಮೃದು ಭಾವನೆಯ ಹಲವಾರು ಕತೆಗಳನ್ನು ಒರೆದಿರುವರು. ಹಾಂ, ಅಲ್ಲಿ ಹೆಚ್ಚಿನ ಹೊಸತನಕ್ಕೆ ಸ್ಥಾನವಿಲ್ಲ. ಯಾದವ್ ಅವರ ವಿಷಯದಲ್ಲೂ ಈ ಮಾತು ಸಲ್ಲುತ್ತದೆ- ಅವರು ಹಲವಾರು ಸಾರಿ ಕತೆಗಳಿಗೆ ಆರಿಸಿರುವ ಹೊಸ ಕಥಾವಸ್ತುಗಳಲ್ಲಿಯೇ ಎಡವಿ ಬೀಳುವುದುಂಟು. ಇತ್ತೀಚೆಗೆ ಸಣ್ಣ ಕತೆಗಳನ್ನು ಬರೆದು ಹಿಂದಿ ಸಾಹಿತ್ಯ ಭಂಡಾರವನ್ನು ತುಂಬುತ್ತಿರುವ ಮುಖ್ಯ ಲೇಖಕರಲ್ಲಿ ಡಾ. ಭಾರತಿ, ಭೀಷ್ಮ ಸಹನಿ, ಅಮರಕಾಂತ, ರಾಮಕುಮಾರ್, ನಿರ್ಮಲ ವರ್ಮಾ, ಕೃಷ್ಣ ಸೊಬ್ತಿ ಮತ್ತು ಮನ್ನೂ ಭಂಡಾರಿ, ಶರದ ಜೋಷಿ, ಉಷಾ ಪ್ರಿಯಂವದಾ, ರಘುವೀರ ಸಹಾಯ್, ಶೈಲೇಶ್ ಮಟಿಯಾನಿ, ಹರಿಶಂಕರ ಪರಸಾಯಿ ಉಲ್ಲೇಖನೀಯರು. ಅವರ ಕತೆಗಳಲ್ಲಿ ಎತ್ತಿ ಹೇಳುವಂತಹದ್ದೇನೂ ಇಲ್ಲವಾದರೂ ಅವರು ಒಳ್ಳೇ ಶಿಲ್ಪಿಗಳು; ಕತೆಗಳನ್ನು ಮನದಟ್ಟಾಗುವಂತೆ ಹೇಳಬಲ್ಲರು. ಈ ಗುಂಪಿನ ಲೇಖಕರ ಮಧ್ಯೆ ನಿರ್ಮಲ ವರ್ಮಾ ಮಾತ್ರ ತನ್ನ ಭಿನ್ನ ವ್ಯಕ್ತಿತ್ವದೊಂದಿಗೆ ನಿಂತಿರುವರು. ಅವರ ಭಾಷೆಯ ಪ್ರಯೋಗ ಉಲ್ಲೇಖನೀಯವಾದದ್ದು.

ಇತ್ತೀಚೆಗೆ ಬರುತ್ತಿರುವ ಲೇಖಕರಲ್ಲಿ ವೈಯಕ್ತಿಕ ವೇದನಾಪೂರ್ಣವಾದ ಮಾತಿನ ಚಾತುರ್ಯ ಹಾಗೂ ಪ್ರಾಮಾಣಿಕತೆಯನ್ನು ಕಾಣಬಹುದು; ವರ್ತಮಾನ ಜೀವನದಲ್ಲಿ ಅಡಗಿರುವ ನಿಷ್ಠುರತೆ ಹಾಗೂ ಬಿಗಿತಗಳ ಶೋಧನೆಯಲ್ಲಿ ವ್ಯಸ್ತರಾಗಿರುವುದು ಕಂಡುಬರುವುದು. ಸಾಮಾಜಿಕ ಸಮಸ್ಯೆಗಳಿಗೆ ಲಕ್ಷ್ಯವಿಲ್ಲ. ಪರಿವರ್ತನಾಶೀಲವಾದ ಯುಗದೊಡನೆ ಲೇಖಕರು ಹೆಜ್ಜೆಯನ್ನಿಡುತ್ತಿರುವರು. ಅಗಣಿತ ಸಮಸ್ಯೆಗಳನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸುತ್ತಿರುವರು. ಸತ್ಯವನ್ನೆತ್ತಿ ತೋರಿಸುತ್ತಿರುವ ಸಾಹಸ ಮಾಡುವರು. ಜ್ಞಾನರಂಜನ್, ಕಾಮತಾನಾಥ, ದೂಧ್‌ನಾಥ ಸಿಂಘ್, ಮಧುಕರ ಸಿಂಘ್, ಜಿತೇಂದ್ರ ಭಾಟಿಯ, ಭೀಮಸೇನ್ ತ್ಯಾಗಿ, ವಿಶ್ವೇಶ್ವರ, ಸುದೀಪ್, ಅರವಿಂದ ಸಕ್ಸೇನ, ಸಿದ್ದೇಶ್, ದಾಮೋದರ ಸದನ್, ಗಂಗಾಪ್ರಸಾದ ವಿಮಲ್, ಸುರೇಂದ್ರ ಪ್ರಕಾಶ್, ಹರಿವಂಶ ಕಶ್ಯಪ್, ಹಿಮಾಂಶು ಜೋಶಿ, ಪ್ರದೀಪಪಂತ್, ಅಜಿತ ಪುಶ್ಕಲ್, ಕಾಶೀನಾಥ ಸಿಂಘ್, ಸುಧಾ ಅರೋರ, ಡಾ ಮಹೇಶ್ವರ ಮೊದಲಾದವರ ಕೃತಿಗಳು ಇದಕ್ಕೆ ಸಾಕ್ಷಿ.

ಇಂದು ಹಿಂದಿಯ ಕತೆಯು ಭಾಷೆಯ ಸೀಮೆಯನ್ನು ಮೀರಿ ಮುಂದ ಸಾಗಿದೆ, ಸಾಗುತ್ತಿದೆ. ಮಾನವನ ಕ್ಷೇತ್ರವೈಶಾಲ್ಯವೇ ಇದಕ್ಕೆ ಕಾರಣ. ಭಾಷೆಯ ದೃಷ್ಟಿಯಿಂದಲೂ ಆಗುತ್ತಿರುವ ಪರಿವರ್ತನೆಯನ್ನಿಲ್ಲಿ ಕಾಣಬಹುದು. ಸಾಮಾನ್ಯ ಜನತೆಯ ಭಾಷೆಯಲ್ಲೇ ಲೇಖಕ ಮಾತಾಡುತ್ತಾನೆ- ಕೆಲವೊಮ್ಮೆ ಶುಷ್ಕವಾಗಿ, ಹಲವೊಮ್ಮೆ ನೆರೆಯ ನೀರಿನಂತೆ ಹರಿಯುತ್ತದೆ. ಈ ಸಾಹಿತ್ಯಾಂಗದ ಭವಿಷ್ಯ ಉಜ್ವಲವಾಗಿದೆ.



# ಗುಜರಾತಿ ಸಾಹಿತ್ಯದಲ್ಲಿ ಸಣ್ಣಕತೆ

— ಡಾ|| ಪ್ರಮೋದಕುಮಾರ ಪಟೇಲ

ಗುಜರಾತಿ ಸಾಹಿತ್ಯದಲ್ಲಿ ಆಧುನಿಕ ಸಣ್ಣಕತೆ' ಸಾಹಿತ್ಯ ರೂಪದ ಸ್ಥೂಲ ನಿರೂಪಣ ಮಾತ್ರ ಇಲ್ಲಿನ ನನ್ನ ಉದ್ದೇಶ. ಈ ಕಿರಿಯ ಹರವಿನಲ್ಲಿ ಸಣ್ಣಕತೆಗಳ ಹುಟ್ಟು, ಬೆಳವಣಿಗೆ, ವೈಶಿಷ್ಟ್ಯಗಳ ಸಂಪೂರ್ಣ ವಿವರಣೆ ಅಸಭ್ಯವೇ ಸರಿ. ಗುಜರಾತಿ ಸಣ್ಣಕಥಾ ಸಾಹಿತ್ಯದ ಮತ್ತು ಸಣ್ಣಕತೆಗಾರರ ಸಿದ್ಧಿ-ಸೋಲು ಗಳನ್ನು ನಿರ್ಣಯಿಸುವ ಹವ್ಯಾಸವೂ ಇಲ್ಲಿ ಇಲ್ಲ.

ಗುಜರಾತಿ ಸಾಹಿತ್ಯ ಚರಿತ್ರೆಯಲ್ಲಿ 'ಸಣ್ಣಕತೆ ಯು ವಿಶಿಷ್ಟ ಬಗೆಯ ಸಾಹಿತ್ಯರೂಪವೆಂದು ಮನ್ನಣೆ ಪಡೆದುದು ಈ ಶತಮಾನದ ಮೊದಲ ಎರಡು ದಶಕಗಳ ಕಾಲಾವಧಿಯಲ್ಲಿ. ಕಳೆದ ಶತಮಾನದ ಉತ್ತರಾರ್ಧ ಕಾಲದಲ್ಲಿಯೂ ಹಲವಾರು ಸಂಚಿಕೆಗಳು. ಪತ್ರಿಕೆಗಳು ಕಾಲ್ಪನಿಕ ಮತ್ತು ಅದ್ಭುತರಮ್ಯ ಕತೆಗಳನ್ನು ಪ್ರಕಟಿಸುತ್ತಿದ್ದವು. ಪ್ರೇಮ ಇಲ್ಲವೆ ಕೌಟುಂಬಿಕ ಜೀವನದ ಸಮಸ್ಯೆಗಳೇ ಆ ಕತೆಗಳಿಗೆ ಕಥಾವಸ್ತುವಿನ ಆಗರಗಳು. ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಕತೆಗಳು ಸಾಹಿತ್ಯದ ಮಟ್ಟಕ್ಕೆ ಏರಲಿಲ್ಲ. ಅಂತೆಯೇ ಗುಜರಾತಿ ಸಣ್ಣ ಕತೆಗಳ ಚರಿತ್ರೆಯಲ್ಲಿ ಅವುಗಳಿಗೆ ಸ್ಥಾನವಿಲ್ಲದಾಗಿದೆ. ಆದರೆ ಗುಜರಾತಿ ಆಧುನಿಕ ಸಣ್ಣಕತೆಗಳ ಪ್ರಾಚೀನತೆ ಸುಮಾರು ನೂರೈವತ್ತು ವರುಷಗಳಷ್ಟು ಹಿಂದಕ್ಕೆ ಹೋಗುತ್ತಿದೆ ಎಂದು ಗಮನಿಸಿದರೆ ಸಾಕು.

ಈ ಶತಮಾನದ ಪ್ರಥಮ ದಶಕದಲ್ಲಿ, ಗುಜರಾತಿ ಸಾಹಿತ್ಯವಾಹಿನಿಯಲ್ಲಿ ಹೊಸ ಹೊಸ ಹೊನಲು-ಗಳು ಸೇರಿಕೊಂಡವು. ಅಂತಹವುಗಳಲ್ಲಿ ಸಣ್ಣ ಕಥಾ ಸಾಹಿತ್ಯವೂ ಒಂದು. ಸಣ್ಣಕಥಾ ಪ್ರಪಂಚಕ್ಕೆ, ಶ್ರೀ ಧನಸುಖಲಾಲ ಮೆಹತಾ, ಶ್ರೀ ಕಾಂಚನಲಾಲ ವಾಸುದೇವ ಮೆಹತಾ (ಜನಪ್ರಿಯ ಕಾವ್ಯನಾಮ–'ಮಲಯಾನಿಲ') ಮತ್ತು ಶ್ರೀ ಕನ್ಹಯಾಲಾಲ ಮುನಶಿ ಅವರು ಸ್ವತಂತ್ರವಾಗಿ ಸಣ್ಣ ಕತೆಗಳ ಸೇವೆ ಸಲ್ಲಿಸಲಾರಂಭಿಸಿದರು. ಈ ಮೂವರೂ ಬರೆದ ಸಣ್ಣಕತೆಗಳ ಸ್ವರೂಪ ಬೇರೆ ಬೇರೆಯೇ ಆಗಿದೆ

ಶ್ರೀ ಧನಸುಖಲಾಲ ಮೆಹತಾರವರು ಸ್ವತಂತ್ರ ಕತೆಗಳನ್ನು ಬರೆದರು: ವಿದೇಶೀಯ ಉತ್ತಮ ಕತೆಗಳನ್ನು ಭಾಷಾಂತರಿಸಿದರು. ಶ್ರೀ ಮುನಶಿಯವರ ಕಥಾ ಸಾಹಿತ್ಯವನ್ನು ಪ್ರತ್ಯೇಕವಾಗಿಯೇ ವಿವೇಚಿಸಬೇಕು ಅವರ ಕತೆಗಳ ಕಥಾವಸ್ತು, ಕಲ್ಪನಾರಮ್ಯ ಪ್ರೇಮದಿಂದ, ಸಮಕಾಲೀನ ಹಿಂದೂ ಸಮಾಜದ ವಿಡಂಬನೆ, ಹಾಸ್ಯಗಳ ವರೆಗೂ ಹಬ್ಬಿದೆ: ವೈವಿಧ್ಯಪೂರ್ಣವಾಗಿದೆ. ಪ್ರೇಮಕತೆ ಮತ್ತು ಸಾಮಾಜಿಕತೆ ಎಂಬ ಇಬ್ಬಗೆಯ ಪ್ರವೃತ್ತಿಗಳೂ ಅವರ ಕಥಾ ಸಾಹಿತ್ಯದಲ್ಲಿ ನಿರಂತರವಾಗಿ ಹರಿದುಬಂದಿವೆ. ತರುಣ-ತರುಣಿಯರ ಹೃದಯಗಳಲ್ಲಿ ಮೂಡುವ ಪ್ರೇಮ ಭಾವದ ಮೋಹಕತೆ, ರಮ್ಯತೆಗಳನ್ನೂ ಚಿತ್ರಿಸಿರುವರು. ಸಂಪ್ರದಾಯಗಳಿಗೆ ಕಟ್ಟುಬಿದ್ದ ಹಿಂದೂ ಸಮಾಜದಲ್ಲಿ, ತಲೆತಲಾಂತರವಾಗಿ ಸಾಗಿಬಂದ ಕುರುಡು ಸಂಪ್ರದಾಯ ವಂಚನೆ, ಮೌಢ್ಯ ಮತ್ತು ಜನತೆಯ ಅಜ್ಞಾನಗಳನ್ನು ಬಯಲಿಗೆಳೆವ ಕತೆಗಳನ್ನೂ ರಚಿಸಿರುವರು ಇವರ ಕೆಲವು ಕತೆಗಳು ಕಾವ್ಯಪ್ರಹಸನಗಳೂ ಆಗಿವೆ

ಶ್ರೀ 'ಮಲಯಾನಿಲ'ರೂ ಮುಗ್ಧ ಮನಸ್ಸಿನ ಯುವಕ-ಯುವತಿಯರಲ್ಲಿಯ ಪ್ರೇಮ ಕತೆಗಳನ್ನು ಬರೆದಿರುವರು. ಅವರ ಕತೆ 'ಗೋವಲಾನಿ (ಗೌಳಗಿತ್ತಿ)ಯು ಪ್ರಥಮ 'ಆಧುನಿಕ ಸಣ್ಣಕತೆ'ಯೆಂದು ಅನೇಕ ವಿಮರ್ಶಕರು ಪರಿಗಣಿಸಿರುವರು. ಈ ಕತೆಯು ಆಧುನಿಕ ಪ್ರಥಮ ಕತೆಯೇ, ಅಲ್ಲವೇ ಎಂಬ ಸಮಸ್ಯೆಯ ಚರ್ಚೆ ಇಲ್ಲಿ ಅನವಶ್ಯಕ ಆದರೆ ಸಣ್ಣಕತೆಗೆ ತೀರ ಉಚಿತವಾದ ಕಥಾವಸ್ತುವಿನ ಹೆಣಿಕೆ, ಸನ್ನಿವೇಶಗಳ ಚಿತ್ರಕ ಶಕ್ತಿ, ಕಥನ ಶೈಲಿಯ ಕುಶಲತೆಗಳು ಯಾರೂ ಮೆಚ್ಚಬೇಕಾದುವು. ಗುಜ-ರಾತಿ ಸಣ್ಣ ಕತೆಯು ಒಂದು ನಿಶ್ಚಿತ ಸ್ವರೂಪವನ್ನು ತಳೆದುದು ಈ ಮೂವರೂ ಕತೆಗಾರರಿಂದಲೇ ಎಂದೇ ಹೇಳಬಹುದಾಗಿದೆ. ಶ್ರೀ ಮುನಶಿ ಮತ್ತು ಶ್ರೀ 'ಮಲಯಾನಿಲ' ಅವರ ಹೆಚ್ಚಿನ ಕತೆಗಳಿಗೆ 'ಪ್ರೇಮ'ವೇ ಕಥಾವಸ್ತು. 'ಪ್ರೇಮ' ಆ ಕಾಲದ ಸಮಾಜದಲ್ಲಿಯ ಮಹತ್ವಪೂರ್ಣ ಅಂಶವಾಗಿದ್ದಿತು.

ಗುಜರಾತಿ ಸಣ್ಣಕತೆಯು ಮೂರನೆಯ ದಶಕದಲ್ಲಿ ತನ್ನ ಸ್ವರೂಪ, ಬೆಳವಣಿಗೆಗಳ ದೃಷ್ಟಿಯಿಂದ ಪುಷ್ಟಿಗೊಂಡಿತು. ಈ ಕಾಲದ ಇಬ್ಬರು ಹೆಸರಾಂತ ಸಣ್ಣಕತೆಗಾರರೆಂದರೆ: ಶ್ರೀ ಗೌರೀಶಂಕರ ಜೋಶಿ ('ಧೂಮಕೇತು'— ಕಾವ್ಯನಾಮ.) ಮತ್ತು ಶ್ರೀ ರಾಮನಾರಾಯಣ ಪಾಠಕ ('ದ್ವಿರೇಫ'— ಕಾವ್ಯನಾಮ.) ಇವರೀರ್ವರ ಪ್ರತಿಭೆ ಹಿಡಿದ ದಾರಿ ಬೇರೆ ಬೇರೆ— ಒಂದಕ್ಕೊಂದು ವಿರುದ್ಧ ಎನ್ನಬಹುದಾದಷ್ಟು ಬೇರೆ. ಇವರ ಮೂಲಭೂತ ಮನೋಭಾವ ಜೀವನವನ್ನು ಕಾಣುವ ಕಣ್ಣು. ಕಲ್ಪನೆ ಮತ್ತು ವಾಸ್ತವತೆಗಳ ಸ್ಥಾನಮಾನಗಳೇ ಭಿನ್ನವಾಗಿವೆ. ಇವರಿಬ್ಬರ ವೈಯಕ್ತಿಕ ಸಾಧನೆ—ಸಿದ್ಧಿಗಳ ಮೌಲಿಕತೆಯ ವಿಷಯ ಹಾಗಿರಲಿ; ಆದರೆ ಗುಜರಾತಿ ಸಣ್ಣಕಥಾರೂಪ ಸಾಹಿತ್ಯವನ್ನು, ತಮ್ಮ ತಮ್ಮ ದಾರಿಯಲ್ಲಿ ರೂಪಿಸಿ, ಬೆಳೆಯಿಸಿ, ಪೋಷಿಸಿದ ಕೀರ್ತಿ ಈ ಇಬ್ಬರಿಗೆ ಸಲ್ಲಬೇಕು 'ಧೂಮಕೇತು' ಮತ್ತು ಶ್ರೀ 'ದ್ವಿರೇಫ'ರು ಸೃಷ್ಟಿಸಿದ ಕಥಾಲೋಕವೂ ಬೇರೆ ಬೇರೆಯಾಗಿದೆ. ದಿ. 'ಧೂಮಕೇತು' ಅವರ ಕತೆಗಳ ಹರವು ತೀರ ಹಿರಿದು. ಅವರ ಕತೆಗಳ ಸಂಖ್ಯೆ ಸುಮಾರು ನಾಲ್ಕು ನೂರಕ್ಕೂ ಮಿಕ್ಕಿದಷ್ಟು. 'ದ್ವಿರೇಫ' ಸುಮಾರು ಮೂವತ್ತೈದು—ನಾಲ್ವತ್ತು ಕತೆಗಳನ್ನು ಬರೆದಿರುವರು. ಕತೆಗಳ ಸಂಖ್ಯೆಗಿಂತ ಸತ್ವಕ್ಕೆ ಬೆಲೆ ಹೆಚ್ಚು. ಆಧುನಿಕ ಸಣ್ಣಕತೆಯ ನಿರ್ಮಾಪಕರಲ್ಲಿ ಇವರಿಬ್ಬರ ಕಾಣಿಕೆಯೂ ಬೆಲೆಯುಳ್ಳುದು. ಬಾಳುವಂತಹುದು.

ದಿ 'ಧೂಮಕೇತು' ರವರ ಕಥಾಸೃಷ್ಟಿಯ ಲಕ್ಷಣಗಳನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದಾಗಿದೆ ಇವರು ಸ್ವಭಾವತಃ ಆದರ್ಶವಾದಿ ಅನೈತಿಕ ಪ್ರೇಮದ ವಾತಾವರಣ ಎದ್ದು ಕಾಣುವುದು ಪ್ರಾಚೀನ ಕಾಲದಲ್ಲಿ ಮತ್ತು ಮಧ್ಯಕಾಲೀನ ಕ್ಷಾತ್ರಯುಗದಲ್ಲಿ ನಮ್ಮ ಸಮಾಜವು ಆಳವಾಗಿ ನಂಬಿಕೊಂಡಿದ್ದ ಜೀವನ ಮೌಲ್ಯಗಳ ಬಗೆಗೆ ಇವರಿಗೆ ವಿಶೇಷ ಆಸಕ್ತಿ ಮತ್ತು ಆದರ. ನಿರ್ವ್ಯಾಜ ಪ್ರೇಮ ಪರಾಕ್ರಮ. ವೈರಾಗ್ಯ ತ್ಯಾಗ ಆತ್ಮ ಸಮರ್ಪಣೆ ಸಾಹಸ ಪ್ರವೃತ್ತಿ ಮೊದಲಾದುವೆಲ್ಲವೂ ಸಮಾಜದ ಒಟ್ಟಿನ ಕಲ್ಯಾಣಕ್ಕಾಗಿಯೇ ಎಂಬ ಮೂಲಭಾವ ಇವರ ಕತೆಗಳ ತಳಹದಿ ಇವರ ಬಹುಸಂಖ್ಯಾಕ ಕತೆಗಳ ಹಂದರ ಯಾವುದೋ ಒಂದು ಅಸಾಮಾನ್ಯ ಘಟನೆ, ಅಲೌಕಿಕ ವಿಷಯ ಅಥವಾ ಅಸಾಧಾರಣವಾದ ಸಂಸಾರ ಚಿತ್ರಣಗಳ ಮೇಲೆ ನಿರ್ಮಿತವಾಗಿದೆ ಪಾತ್ರಗಳು ಸ್ವಾಭಾವಿಕವಾಗಿ ಶುದ್ಧ ಸ್ವಭಾವವುಳ್ಳವುಗಳಾಗಿವೆ. 'ಪ್ರೇಮ'ವೇ ಕಥಾವಸ್ತುವಾಗಿದ್ದ ಜಾನಪದ ಕತೆಗಳಿಂದಲೂ ಸ್ಫೂರ್ತಿ ಪಡೆದಿರುವರು. ದಿ. 'ಧೂಮಕೇತು'ರ ಹಲವಾರು ಜನಪ್ರಿಯ ಕತೆಗಳಲ್ಲಿ ಇಂದಿನ ಯಾಂತ್ರಿಕ ಯುಗದ ಪರಿಣಾಮ, ನಾಗರಿಕ ಜೀವನ ಸಂಸ್ಕೃತಿಯ ಪೊಳ್ಳುತನ. ಸರಕಾರೀ ಆಡಳಿತ ವರ್ಗದ ನಿರ್ದಯ ನೀತಿಗಳ ಬಗೆಗಿರುವ ತೀವ್ರ ಅಸಹನೆ. ವಿರೋಧಗಳು ಸ್ಪಷ್ಟವಾಗಿ ಮೂಡಿವೆ. ಕೆಲವು ಕತೆಗಳಲ್ಲಿ ಸ್ವಚ್ಛ ಮತ್ತು ನಿರ್ಮಲವಾದ ಹಳ್ಳಿಯ ಜೀವನವನ್ನು ಹೊಗಳಿರುವರು. ಇವನ್ನೆಲ್ಲ ಪರಿಶೀಲಿಸಿದಾಗ. ಕಾಲ್ಪನಿಕ. ರಮ್ಯ ಕತೆಗಾರನ ಸ್ವಾಭಾವಿಕ ಮನಃಪ್ರವೃತ್ತಿಯೇ ಇಂತಿರುವುದೇ ಎಂದೆನಿಸುವುದು. ಇತ್ತೀಚಿನ ಕೆಲವು ಕತೆಗಳಲ್ಲಿ ಗ್ರಾಮ್ಯಜೀವನದ ಲೋಪ—ದೋಷಗಳನ್ನೂ ಅನ್ಯಾಯ—ಅಧರ್ಮಗಳನ್ನೂ ಚಿತ್ರಿಸಿರುವರು. ಆದರೆ ಈ ಬಗೆಯ ಕತೆಗಳು ಕಲಾತ್ಮಕವಾಗಿಲ್ಲ; ಇವುಗಳ ವಿಶೇಷ ವಿಮರ್ಶೆ ಅನಗತ್ಯ. ದಿ 'ಧೂಮಕೇತು ರವರೇ ತಮ್ಮ ಕತೆ. ಪಾತ್ರಗಳ ವಿಷಯವಾಗಿ. "ಈ ಯುಗದ ಆಳವಾದ ಪ್ರವೃತ್ತಿಗಳಿಗೆ ತೀವ್ರ ಸಂವೇದನೆಯ ಅಥವಾ ಕಟುವಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವ ಪಾತ್ರಗಳು ತೀರ ಅಪರೂಪ ಮಾನವ ಜೀವನದ ಉದ್ವೇಗ ಸಂಕೀರ್ಣತೆಗಳನ್ನು ಪ್ರತಿಬಿಂಬಿಸುವ ಸನ್ನಿವೇಶಗಳೂ ಇಲ್ಲ. ಆಧುನಿಕ ಮಾನವನ ಹೋರಾಟದ ಚಿತ್ರಣವೂ ಇಲ್ಲ..." ಎಂದು ಹೇಳಿರುವರು ಆದರೆ ಯಾವುದೇ ಕಾಲ್ಪನಿಕ. ಮನೋರಂಜಕ ಕಥಾವಸ್ತು ಇರಲಿ. ಇವರ ಕಲಾಸೃಷ್ಟಿಯ ಕುಶಲತೆಯ ಕೈವಾಡ ಆಕರ್ಷಣೀಯವಾದುದು. ಅಚ್ಚುಕಟ್ಟಾದ ಕಥಾವಸ್ತುವಿನ ಹೊಂದಾವಣೆ ಅಸಂದಿಗ್ಧವಾದ ಪಾತ್ರರಚನೆ, ಮನಸೆಳೆವ ಶೈಲಿ ಮೊದಲಾದ ಸಾಹಿತ್ಯ ಗುಣಗಳಿಂದ, ದಿ. 'ಧೂಮಕೇತು'ರವರು ಪ್ರಥಮ ವರ್ಗದ ಸಣ್ಣ ಕತೆಗಾರರೆಂದು ಕೀರ್ತಿವೆತ್ತಿರುವರು 'ತನಖ' (ಭಾಗ ೧—೪) ('ಕಿಡಿಗಳು') ಎಂಬ ಕಥಾಸಂಗ್ರಹ ಸಾಹಿತ್ಯಶಕ್ತಿಯುಳ್ಳುದ್ದು: ಜನಪ್ರಿಯವಾದುದು.

ಗಾಂಧೀಜೀಯವರು ದಕ್ಷಿಣ ಆಫ್ರಿಕೆಯಿಂದ ಭಾರತಕ್ಕೆ ಮರಳಿದನಂತರ. ಗುಜರಾತಿ ಸಣ್ಣಕತೆಗಳ ಕಲ್ಪನಾ— ಸಾಮ್ರಾಜ್ಯದ ಮೆರಗು, ಮಿಂಚುಗಳು ಮರೆಯಾಗತೊಡಗಿದವು ಭಾವನಾಲೋಕ ಭೂಮಿಗೆ ಇಳಿದು ಬಂದಿತು. ವಾಸ್ತವತೆ ತಲೆಯೆತ್ತಿತು. ಹೊಸ ಬರಹಗಾರರು ಗಾಂಧೀಜಿಯವರ ವಿಚಾರ

ಸಂಗಣಿಯ ಪ್ರಭಾವಕ್ಕೆ ಸಿಲುಕಿದರು; ಮನಸೋತರು.

ಶ್ರೀ ರಾಮನಾರಾಯಣ ಪಾಠಕ ('ದ್ವಿರೇಫ')ರು ಈ ಯುಗದ ವಿಚಾರಧಾರೆಯನ್ನು ಅರಿತವರು; ಜೀವನದ ಮಾರ್ಪಾಟುಗಳನ್ನು ಮೈಗೂಡಿಸಿಕೊಂಡವರು. ಇವರದು ಶಾಂತಚಿತ್ತದ ಮನೋಭಾವ; ವಿಚಾರವಾದಿಗಳು; ಸಾಹಿತ್ಯರಂಗದಲ್ಲಿ ಬೌದ್ಧಿಕ ದೃಷ್ಟಿಯುಳ್ಳವರು. ಯಾವಾಗಲೂ ಪ್ರಯೋಗಶೀಲವಾದ ಮನೋವೃತ್ತಿ. ಸುತ್ತಲಿನ ನಿತ್ಯ ಜೀವನವೇ ಅವರ ಸ್ಫೂರ್ತಿಯ ನೆಲೆ; ಕಥಾವಸ್ತುವಿಗೆ ಅಪಾರ ಆಧಾರ. ಕಥಾವಸ್ತು ಮತ್ತು ಶೈಲಿಗಳ ಅನೇಕ ಪ್ರಯೋಗಗಳನ್ನು ಸಣ್ಣಕತೆಗಳ ಮೂಲಕ ಮಾಡಿರುವರು. ಜನತೆಯ ನಿತ್ಯ ಬದುಕಿನಲ್ಲಿ ತೀರ ಸಾಮಾನ್ಯವೆಂದು, ಕ್ಷುಲ್ಲಕವೆಂದು ತೋರುವ ವಿಷಯಗಳಲ್ಲಿಯೇ ಕತೆಗಳಿಗೆ ಕಥಾವಸ್ತುವಿನ ಆಹಾರ ಒದಗಿಸಿದರು. ಜನತೆಯ ಆಂತರಿಕ ಮನೋವ್ಯಾಪಾರಗಳನ್ನು ಕಾಣುವ ಒಳಗಣ್ಣಿದೆ; ಅಂತಃಕರಣವಿದೆ; ಕನಿಕರವಿದೆ—ಸಮಕಾಲೀನ ಸಮಾಜದ ಪ್ರಗತಿಯ ಅರಿವಿದೆ. ಅಂತೆಯೇ ಇವರ ಸಣ್ಣಕಥಾ ಸಮೃದ್ಧಿಕೆ ವಸ್ತುನಿಷ್ಠವಾದ ವಾಸ್ತವತೆಯ ಭದ್ರವಾದ ತಳಹದಿಯಿದೆ. 'ದ್ವಿರೇಫ'ರ ಶೈಲಿಯಲ್ಲಿ ಪರಿಶುದ್ಧ ತಿಳಿಹಾಸ್ಯವಿದೆ. ಜಗತ್ತಿನಲ್ಲಿ ಜೀವನದಲ್ಲಿ ಕಾಣುವ ಅಸಹ್ಯವೆನಿಸುವ ಸಂಗತಿಗಳನ್ನು ಹಿತ—ಮಿತ ಹಾಸ್ಯದಲ್ಲಿ, ಮನನೋಯದಂತೆ ಮಾಡುವ ಕಲೆ ಇವರಿಗೆ ಸಾಧಿಸಿದೆ. ಇವರ ಸಣ್ಣಕತೆಗಳು ಸಮಾಜದಲ್ಲಿಯ ಡಾಂಭಿಕತೆಯ ಮುಸುಕನ್ನು ತೆರೆದವು; ಮಡಿವಂತಿಕೆಯ ಆಡಂಬರ, ಗೊಳ್ಳು ಗಾಂಭೀರ್ಯಗಳನ್ನು ಬಯಲಿಗೆಳೆದವು. ಸಮಾಜ ರೋಗಗಳಿಗೆ ಮದ್ದನು ಊಡಿದವು. 'ದ್ವಿರೇಫ'ರು ಸಾಹಿತ್ಯದಲ್ಲಿಯ ವಾಸ್ತವತೆಯನ್ನು ಮೆಚ್ಚಿದ್ದಾರೆ. ಜೀವನವನ್ನು ಆಳವಾಗಿ, ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆ. ಅಂತೆಯೇ ಅವರು ಚಿತ್ರಿಸಿದ ಪಾತ್ರಗಳಲ್ಲಿ ಮಾನಸಿಕ ಪ್ರವೃತ್ತಿಗಳನ್ನು ಎಳೆಎಳೆಯಾಗಿ ಬಿಡಿಸಿದಾರೆ. ಗುಜರಾತಿ ಸಣ್ಣಕಥಾವಾಹಿನಿಯು 'ದ್ವಿರೇಫ'ರ ಕಥಾಸೇವೆಯಿಂದ ಹೊಸ ರೂಪ ತಳೆಯಿತು; ಬಣ್ಣ ಬದಲಾಯಿಸಿತು. ಆಧುನಿಕ ಸಣ್ಣಕತೆಗಳಿಗೆ ಹೊಸ ದಾರಿಯ ದೀಪವಾದುವು 'ದ್ವಿರೇಫ'ರ ಸಣ್ಣಕತೆಗಳು.

ಈ ಶತಮಾನದ ಮೂರನೆಯ ದಶಕದಲ್ಲಿ ಗುಜರಾತಿ ಸಣ್ಣಕಥಾ ಸಾಹಿತ್ಯ ಹುಲುಸಾಗಿಯೇ ಬೆಳೆಯಿತು. ನವ್ಯ ಕಾವ್ಯದ ಪ್ರಭಾವ ಸಣ್ಣಕತೆಗಳ ಮೇಲೂ ಆಯಿತು. ಸಣ್ಣಕತೆಗಾರರು ನವ್ಯ ಕಾವ್ಯದಂತೆ, ಕತೆಗಳಲ್ಲಿಯೂ ಉದ್ದೇಶಪೂರ್ವಕವಾಗಿಯೇ ಹೊಸ ಮಾಧ್ಯಮವನ್ನು ಬಳಸಿಕೊಂಡರು. ಜಾಗತಿಕ ರಾಜಕೀಯ ರಂಗದಲ್ಲಿಯ ಶೀಘ್ರ ವಾತಾವರಣ. ವ್ಯತ್ಯಾಸಗಳು ಸಾಹಿತ್ಯದ ಮೇಲೆ ಪ್ರಭಾವ ಬೀರಿದವು. ರಶಿಯದ ಕ್ರಾಂತಿ ಅನೇಕ ದೇಶಗಳ ಯುವಕ ಲೇಖಕರಿಗೆ ಸ್ಫೂರ್ತಿಯ ಸೆಲೆಯಾಯಿತು. ಜೊತೆಗೆ ಗುಜರಾತಿ ಸಾಹಿತಿಗಳು ಗಾಂಧೀಜೀಯವರ ಚಳುವಳಿಯ ನವೀನ ಸ್ವರೂಪಗಳನ್ನು ಗಮನಿಸುತ್ತಿದ್ದರು. ತೀಕ್ಷ್ಣ ಸಾಮಾಜಿಕ ಪ್ರಜ್ಞೆ ತರುಣರ ಮನ ಹಿಡಿಯಿತು. ಸಮಾಜ ಜೀವನವನ್ನು ನೋಡುವ ವಾಸ್ತವ ದೃಷ್ಟಿ ಬದಲಾವಣೆಗೊಂಡಿತು. ದೀನ - ದಲಿತರನ್ನು ಕರುಣೆ ಸೌಹಾರ್ದಗಳಿಂದ ಕಾಣುವ ಮನೋವೃತ್ತಿ ತಲೆಯೆತ್ತಿತು. ಜನಸಾಮಾನ್ಯದ ಬಾಳಿನ ಗೋಳಿ ಸಾಹಿತ್ಯದಲ್ಲಿ ವಿಕಟರೂಪ ತಳೆದು ನಗ್ನಸತ್ಯವೆಂದು ಮೆರೆಯಿತು. ಅತಿವಾಸ್ತವತೆಯ ನಗ್ನಸತ್ಯ ದರ್ಶನವೇ

ಈ ಕಾಲದ ಸಣ್ಣ ಕತೆಗಾರರ ಮುಖ್ಯ ಉದ್ದೇ
ವಾಯಿತು.

ಶ್ರೀ ಉಮಾಶಂಕರ ಜೋಶಿ ಮತ್ತು ಸುಂದ
ರಮ್ ಅವರು ತಮ್ಮ ಸಣ್ಣ ಕತೆಗಳಲ್ಲಿ ಗ್ರಾಮ್ಯ
ಜೀವನದ ವಿವಿಧ ಮುಖಗಳನ್ನು ಸ್ವಲ್ಪ ವಿಷಾದವಾ
ಗಿಯೇ ಚಿತ್ರಿಸಿರುವರು. ಶ್ರೀ ಸುಂದರಮ್ ಅವರ
ಕತೆಗಳಲ್ಲಿ, ಕಲ್ಪನಾವಿಲಾಸವಿದೆ; ಲೈಂಗಿಕ ಸಮಸ್ಯೆಗಳ
ಸತ್ವಪೂರ್ಣ ನಿವೇದನೆಯಿದೆ. ಹಳ್ಳಿಯ ಬಾಳಿನ ಅಲೌ
ಕಿಕ ಘಟನೆಗಳ ನಿರೂಪಣೆಯಿದೆ. ಶ್ರೀ ಜೋಶಿ
ಮತ್ತು ಶ್ರೀ ಸುಂದರಮ್ ಅವರು ಸಣ್ಣಕತೆಯ
ಸ್ವರೂಪದ ಬಗೆಗೆ ಸ್ಪಷ್ಟ ನಿಲುವೆಯನ್ನು ತಳೆದ
ವರು; ಪ್ರಧಾನ ಕಥಾವಸ್ತುವಿನ ಸಂಯೋಜನೆಯ
ಪಳಗಿದವರು; ಮಾನವ ಸ್ವಭಾವದ ಸೂಕ್ಷ್ಮ ತರ
ಭಾವನೆ ಮತ್ತು ಪ್ರವೃತ್ತಿಗಳನ್ನು ಎತ್ತಿ ತೋರುವ
ಪ್ರತಿಭಾವಂತರು. ಸಾಮಾನ್ಯವಾಗಿ ಯಾವುದೊಂದು
ಮಹತ್ವಪೂರ್ಣ ಘಟನೆ ಅಥವಾ ಘಟನೆಗಳ ಅಸ್ತಿ
ವಾರದ ಮೇಲೆಯೇ ಇವರ ಕತೆಗಳ ಕಟ್ಟಡ ನಿರ್ಮಾ
ಣವಾದುದು ಗಮನಾರ್ಹವಾಗಿದೆ.

ಶ್ರೀ ಗುಲಾಬದಾಸ ಬ್ರೋಕರರವರು ಸಣ್ಣ ಕ
ಯನ್ನು ಕಾಣುವ ದೃಷ್ಟಿಯೇ ಬೇರೆ ತೆರನಾದುದು
ಅವರು ಪಾತ್ರಗಳ ಮನೋಂತರಾಳದಲ್ಲಿಯ ಭಾವ
ನಾತರಂಗಗಳನ್ನು ಬೆದಕಿ ನೋಡುವ ದೃಷ್ಟಿಯನ್ನೆ
ಪ್ರಧಾನವಾಗಿ ಅನುಸರಿಸಿರುವರು. ಇವರ ಕತೆಗಳಲ್ಲಿ
ವಸ್ತುನಿಷ್ಠೆಗಿಂತ ಪಾತ್ರಸೃಷ್ಟಿಯದೇ ಮೇಲುಗೈ.

ಬೇರೆ ಬೇರೆ ಸನ್ನಿವೇಶಗಳ ವಿಭಿನ್ನತೆಯನ್ನು
ಎತ್ತಿ ತೋರಲು ವಿವೇಚನೆಯ ವೈವಿಧ್ಯ
ಮೆರೆಯಿಸಲು, ಕಥನ ಶೈಲಿಯ ತಂತ್ರವನ್ನು ಮಾ
ಡಿಸಿಕೊಂಡವರು ಶ್ರೀ ಜಯಂತಿಲಾಲರು. ಕಥ
ತಂತ್ರದ ಪ್ರಯೋಗಶೀಲತೆ ಇವರ ಮನೋಧರ್ಮ
ಹಳ್ಳಿಗಳಲ್ಲಿಯ ಜೀವನದ ನೈಜ ಚಿತ್ರಣಗಳನ್ನು
ಬೇಕಾದರೆ ಶ್ರೀ ಪನ್ನಾಲಾಲ ಪಟೇಲರ ಕಥಾ
ಉತ್ತಮ ಉದಾಹರಣೆ. ಪಾತ್ರಗಳ ಮನ -
ಗಳನ್ನು ಮನೋವಿಶ್ಲೇಷಣೆಯ ಒರೆಗಲ್ಲಿಗೆ ಹ
ದಾರೆ. ಗುಜರಾತದ ಗ್ರಾಮ್ಯಜೀವನವನ್ನು
ಹೊಕ್ಕು ನೋಡುವ ಕಲಾವಿದನ ಕುತೂಹಲ ದೃ
ಇವರದು ಶೈಲಿಯೂ ಸತ್ವಪೂರ್ಣವಾಗಿದೆ ಮನ
ವಿಶ್ಲೇಷಣೆ. ಸಾಮಾಜಿಕ ಪರಿಸ್ಥಿತಿಗಳ ಚಿತ್ರಣ
ದೃಷ್ಟಿಯಿಂದ ಇವರ ಕತೆಗಳು ವೈಶಿಷ್ಟ್ಯಪೂ
ವಾಗಿವೆ. ಶ್ರೀ ಮೇಘಾನಿ ಮತ್ತು ಶ್ರೀ ಚುನಿ
ವಾದಿಯಾ ವರ ಕತೆಗಳಲ್ಲಿ ಸೌರಾಷ್ಟ್ರದ ಜಾನಪ
ಜೀವನದ ವೈಲಕ್ಷಣಗಳನ್ನು ಕಾಣುವೆವು.

ಮೂರು ಮತ್ತು ನಾಲ್ಕನೆಯ ದಶಕಗಳಲ್ಲಿ
ಸಣ್ಣ ಕತೆಗಾರರು ಸಾಮಾಜಿಕ ಜೀವನಕ್ಕೆ
ಗಮನವಿತ್ತಿರುವರು. ಸಾಮಾಜಿಕ ಸ್ಥಿತ್ಯಂತರಗಳ
ಆರ್ಥಿಕ ಏಳು - ಬೀಳುಗಳ ಮೂಲಕ ಜನತೆ
ಮೇಲಾದ ಪರಿಣಾಮಗಳನ್ನು ಕಥಾರೂಪದಲ್ಲಿ
ದವಾಗಿ ನಿರೂಪಿಸುವುದೇ ಇವರೆಲ್ಲರ ಉದ್ದೇಶ
ತೋರುತ್ತಿದೆ.

ಶ್ರೀ ಉಮಾಶಂಕರ ಜೋಶಿ ಮತ್ತು ಶ್ರೀ ಸುಂ
ರಮ್ ಅವರ ನಂತರ ಬಂದ ಕತೆಗಾರರಲ್ಲಿ ಕಥನ
ಗಿಂತ ಕಾವ್ಯಶಕ್ತಿಯೇ ಪ್ರಾಶಸ್ತ್ಯ
ಕಾವ್ಯೋಚಿತ ವಸ್ತುಗಳ ಆಯ್ಕೆ. ಕಾವ್ಯಮಯ
ನೆಗಳ ಮಾರ್ಗಗಳೇ ಇವರಿಗೆ ಮೆಚ್ಚುಗೆಯಾದು
ಸಾಹಿತಿ ಸಾಮಾಜಿಕ ಹೊಣೆಗಾರಿಕೆ

ಪ್ರಜ್ಞೆಯಿಂದ ತಮ್ಮ ಧ್ಯೇಯಗಳ ಪ್ರಸಾರ ಕಾರ್ಯ ಕೈಕೊಂಡರು. ಸಾಹಿತ್ಯ ಸೃಷ್ಟಿಗೆ ನಿಶ್ಚಿತವಾದ ಉದ್ದೇಶವೊಂದು ಅತ್ಯವಶ್ಯವೆಂಬುದೇ ಇವರ ನಂಬಿಕೆ. ತಮ್ಮ ಬರವಣಿಗೆಗಳ ಮೂಲಕ ದೀನ–ದಲಿತ ವರ್ಗದವರ ಕರುಣಾಜನಕ ಸ್ಥಿತಿಯನ್ನು ಕಾವ್ಯಮಯವಾಗಿ ಬಣ್ಣಿಸಿ, ಓದುಗನ ಹೃದಯವನ್ನು ಕಲಕುವ ಅನುಕಂಪವನ್ನು ಕೆರಳಿಸುವ ಉದ್ದೇಶವನ್ನು ಸಾಧಿಸಿದರು. ವಾಸ್ತವತೆಗೆ ಕಟ್ಟುಬಿದ್ದರು. ಇವರ ಕತೆಗಳು ಕೆಳವರ್ಗದವರ ಜೀವನಕ್ಕೆ ಹಿಡಿದ ಕನ್ನಡಿಗಳು.

ಕ್ರಿ. ಶ ೧೯೩೦–೫೦ ರ ಅವಧಿಯಲ್ಲಿ, ಗುಜರಾತಿ ಸಣ್ಣಕಥಾ ಸಾಹಿತ್ಯಕ್ಕೆ ಒಂದು ತಿರುವು ಬಂದಿತು. ಶ್ರೀ ಬಕುಲೇಶ ಮತ್ತು ಶ್ರೀ ಜಯಂತ ಖತ್ರಿಯವರು ಸಣ್ಣಕತೆಗಳಲ್ಲಿ ಹೊಸತನವನ್ನು ತಂದರು ಕಲಾತ್ಮಕ ಕತೆಗಳನ್ನು ಬರೆಯಲೆಳಸಿದರು. ಸನ್ನಿವೇಶಗಳ ನಿರೂಪಣೆಯು ಸಾಂಕೇತಿಕವಾಗಿ ಮೂಡಹತ್ತಿತು. ಜೀವನದ ಹೋರಾಟವನ್ನು ಸತ್ವಯುತವಾಗಿ, ಸಾಂಕೇತಿಕವಾಗಿ ಪ್ರತಿಬಿಂಬಿಸುವಲ್ಲಿ ಶ್ರೀ ಜಯಂತ ಖತ್ರಿಯವರು ಹೆಚ್ಚಿನ ಯಶಸ್ಸು ಗಳಿಸಿರುವರು. ಶ್ರೀ ಖತ್ರಿಯವರಲ್ಲಿ ಅಭಿಜಾತ ಪ್ರತಿಭೆಯಿದೆ; ತೀವ್ರ ಸಂವೇದನೆಯಿದೆ ಇವರ ಕತೆಗಳಲ್ಲಿ ಬಾಹ್ಯಜೀವನ ಚಿತ್ರಣ ಅಪರೂಪವಾಗಿದೆ; ಔಪಚಾರಿಕವಾಗಿದೆ ಎಷ್ಟೋ ದುರಂತ ಘಟನೆಗಳ ಸಂಕೇತಮಯತೆ ಓದುಗನನ್ನು ಗೊಂದಲಕ್ಕೀಡು ಮಾಡುವ ಸಂದರ್ಭಗಳೂ ಇಲ್ಲದಿಲ್ಲ

ಭಾರತದ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಗುಜರಾತಿ ಸಣ್ಣಕತೆಗಳ ಸ್ವರೂಪವೇ ಬದಲಾಯಿಸಿತು. ಈ ಅವಧಿಯಲ್ಲಿಯೂ ಸಾಂಪ್ರದಾಯಿಕ ಕಥಾಸಾಹಿತ್ಯ ಸಂಪೂರ್ಣ ಕಣ್ಮರೆಯಾಯಿತೆಂದು ಮಾತ್ರ ಹೇಳುವಂತಿಲ್ಲ. ಸಾಹಿತ್ಯದಲ್ಲಿ ವಾಸ್ತವತೆ ಮತ್ತು ನಿಜವಾದ ಸಾಹಿತ್ಯ ಯಾವುದು ಎಂಬ ವಿಷಯವಾಗಿ ಹೊಸ ಧೋರಣೆಗಳನ್ನು ತಳೆದ ಲೇಖಕರ ಬಳಗವು ಬೆಳಕಿಗೆ ಬಂದಿತು. ಶ್ರೀ ಸುರೇಶ ಜೋಶಿಯವರು 'ಗೃಹಪ್ರವೇಶ' ವೆಂಬ ತಮ್ಮ ಕಥಾ—ಸಂಕಲನದ ಮುನ್ನುಡಿಯಲ್ಲಿ ಕಲೆಯ ಬಗೆಗಿರುವ ತಮ್ಮ ನಿಲುಮೆಯನ್ನು ಸ್ಪಷ್ಟಗೊಳಿಸಿರುವರು. ಅವರ ಅಭಿಪ್ರಾಯದ ಸಾರವನ್ನು ಹೀಗೆ ಸಂಗ್ರಹಿಸಬಹುದಾಗಿದೆ: ಸಾಹಿತ್ಯಕ್ಕೆ ಜನಜೀವನ ಒಂದು ಆಧಾರ. ಈ ಆಧಾರದ ಮೇಲೆ ಸೃಷ್ಟಿಸುವ ಸಾಹಿತ್ಯ ಸ್ವಯಂ ದರ್ಶನಶಕ್ತಿಯುಳ್ಳದಾಗಿರಬೇಕು, ಸ್ವಾತಂತ್ರ್ಯವುಳ್ಳದಾಗಿರಬೇಕು. ಸಾಹಿತ್ಯ ನಿರ್ಮಾಣ ಕಲಾವಿದನ ಸ್ವತಂತ್ರ ಚಟುವಟಿಕೆ ನಾಟಕೀಯವಾಗಿ ಕಾಣುವ ಇವರ 'ತೆಗಳಲ್ಲಿ ಯಾವುದೇ 'ಸಂದೇಶ'ವಿಲ್ಲ. ಹೊರಜಗತ್ತಿನ ಜೀವನಗಳ ವಿಷಯವಾಗಿ ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸುವುದಿಲ್ಲ. ಮಾನವನ ಮನದಲ್ಲಿಯ ಭಾವನೆಗಳೇ ಕಲೆಗೆ ಹೂರಣವಲ್ಲ ವೆಂಬುದೇ ಇವರ ವಿಚಾರದ ತಳಹದಿ ಭಾವನೆಗಳು ಪ್ರತಿಮೆಗಳಿಗೆ ಒಂದು ರೂಪವೀಯುವ ಸಾಧನೆಗಳು ಮಾತ್ರ. ಪ್ರತಿಮಾರೂಪ ತಂತ್ರ ಮಹತ್ವ ಪಡೆಯಿತು. ಈ ಹೊಸ ತಂತ್ರದ ಸಣ ಕತೆಗಳಲ್ಲಿ, ಬಾಹ್ಯ ಜೀವನಕ್ಕೂ ಕಲೆಯ ವಾಸ್ತವತೆಗೂ ಏನೂ ಸಹಸಂಬಂಧವಿಲ್ಲ. ಜೀವನ ಘಟನೆಗಳು ಎಷ್ಟು ಸಾಧ್ಯವೋ ಅಷ್ಟು ಮಿತವಾಗಿರಬೇಕು. ಕಲೆಯ ಕಲ್ಪನೆಯೇ ಬೇರೆಯಾಯಿತು. ಸಾಹಿತ್ಯ ಸೃಷ್ಟಿಯು ಸ್ವಪ್ನಲೋಕವನ್ನೇ ನಿರ್ಮಿಸಲೆಂದು, ಕೆವಲ ವಿಕಲ ಜೀವನದಿಂದ, ದಂತಕತೆಗಳಿಂದ, ಕಾಲ್ಪನಿಕ ವೈಚಿತ್ರ್ಯಗಳಿಂದ ಕಥಾಸಾಮಗ್ರಿಯನ್ನು ಪಡೆದರು. ಆಧುನಿಕ ಮಾನವನ ಅಸ್ತಿತ್ವವನ್ನು ಪ್ರತಿಮಾ ಸಾಹಿತ್ಯದಲ್ಲಿ ನೆಲೆಗೊಳಿಸುವುದೇ ಇವರ ಹಿರಿಯ ಆಶಯ, ಜೀವನದ ಮರದ ಜಾಡ್ಯ, ಅಸಂಬದ್ಧತೆ, ದೀನತೆ, ವ್ಯಕ್ತಿತ್ವ ಶಿಥಿಲತೆ, ಪ್ರಬಲತೆ, ವಿನಾಶ— ಒಂದೊಂದೂ ಕಥಾಸಾಹಿತ್ಯದಲ್ಲಿ ತಲೆದೋರಿದವು. ಪಾತ್ರಸೃಷ್ಟಿಯು ಸಾಂಪ್ರದಾಯಿಕ ಕಲ್ಪನೆ ಕಣ್ಮರೆಯಾಯಿತು ಸಾಮಾಜಿಕ ಅಂಶ ಕಳೆಗುಂದಿತು; ಇಲ್ಲವೆ ಸಂಪೂರ್ಣ ಇಲ್ಲದಂತೆಯೂ ಆಯಿತು. ಜೀವನವೇ ಪ್ರತಿಮಾರೂಪ ತಳೆಯಿತು. ಮಾನವ ಜೀವನದ ವಿಕಟರೂಪ ದರ್ಶನಕ್ಕಾಗಿ ಒಂದಕ್ಕೊಂದು ಸಂಬಂಧವಿಲ್ಲದ ಘಟನೆಗಳ ವರ್ಣನೆ, ಇಲ್ಲವೆ, ಘಟನೆಗಳ ವಿಕೇಂದ್ರೀಕರಣ ರೂಢವಾಯಿತು. ಬಾಳಿನ ಬರೂಪ, ಕೀಳುತನಗಳೇ ಕಥೆಯ ಚೌಕಟ್ಟಿನಲ್ಲಿ ಮೆರೆದವು. ವಾಕ್ಯರಚನೆಯಿಂದ ಮೊದಲುಗೊಂಡು ಭಾಷೆಯ ಸ್ವರೂಪವೂ ಬದಲಾಯಿಸಿತು. ಈ ಹೊಸ ಹಾದಿಯಲ್ಲಿ ಕಥಾಸಾಹಿತ್ಯ ರಚಿಸಿದವರಲ್ಲಿ, ಶ್ರೀ ಸುರೇಶ ಜೋಶಿ, ಶ್ರೀ ಚಂದ್ರಕಾಂತ ಬಕ್ಷಿ, ಶ್ರೀ ಮಧು ರ‍್ಯಾ ಶ್ರೀ ಜ್ಯೋತಿಷ್ ಜಾನಿ, ಶ್ರೀ ರಾಧೇಶ್ಯಾಮ್ ಶರ್ಮಾ. ಶ್ರೀ ಕಿಶೋರ ಜಾಧವ ಇವರು ಪ್ರಮುಖರು. ಆಧುನಿಕ ಸಣ್ಣಕತೆಯ ಲಕ್ಷಣಗಳನ್ನೊಂಡ ಶ್ರೀ ಕಿಶೋರ ಜಾದವ ಅವರ ಕತೆಗಳು ಸಾಂಕೇತಿಕ ಸನ್ನಿವೇಶಗಳನ್ನೊಳಗೊಂಡಿವೆ; 'ಕಲಿಡಿಯೊಸ್ಕೋಪಿ'ನಂತೆ ವರ್ಣ ವೈವಿಧ್ಯವುಳ್ಳವಾಗಿವೆ. ಒಟ್ಟಿನ ಚಿತ್ರಣ ತನ್ನ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಳುವುದಿಲ್ಲ, ಘಟನೆಗಳು ಮಾತ್ರ ಚೆಲ್ಲಾಪಿಲ್ಲಿಯಾಗಿ ಹರಡಿರುತ್ತವೆ. ಪಾತ್ರಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತವೆ. ಹಲವು ಕತೆಗಳಲ್ಲಿ ಜೀವನದ ಆಳವಾದ ನೋಟದ ಅರಿವೂ ಆಗುತ್ತಿದೆ.

ಅತಿ ನವಕಥಾ ಸಾಹಿತ್ಯದ ಚಟುವಟಿಕೆಯ ಮೂಲಕ ಕಳೆದ ಸುಮಾರು ಇಪ್ಪತ್ತು ವರುಷಗಳಲ್ಲಿ ಗುಜರಾತಿ ಸಣ್ಣಕಥಾ ಸಾಹಿತ್ಯದ ಹುಬ್ಬುಗೆ ಹೆಚ್ಚಿದೆ. ಸಾಹಿತ್ಯಕ ದೃಷ್ಟಿಯಿಂದ ಅವುಗಳ ಗುಣಾವಗುಣಗಳ, ಸೋಲು—ಗೆಲುವುಗಳ ಮಾಪನವನ್ನು ನಡೆಯಬೇಕಾಗಿದೆ, ಇಂದಿನ ವಿಮರ್ಶೆ ಬರವಣಿಗೆಯ ಗಾತ್ರಕ್ಕೆ, ಓಟಕ್ಕೆ ತಕ್ಕಂತೆ ಕಾಲಹಾಕುತ್ತಿಲ್ಲ. ಕೆಲವು ಪತ್ರಿಕೆ ಮತ್ತು ಸಂಚಿಕೆಗಳಲ್ಲಿಯ ವಿಮರ್ಶೆ ಓದುಗರನ್ನು ದಿಕ್ಕುಗೆಡಿಸುವಂತಾಗಿದೆ. ತೂಕ ತಪ್ಪದ ವಿಮರ್ಶೆ ಇನ್ನೂ ಬೇಕೆಂಬ ದಾಹ ತಪ್ಪಿಲ್ಲ. ಹಿರಿ-ಕಿರಿಯ ಕತೆಗಾರರ ಕೃತಿಗಳನ್ನು ಸೌಹಾರ್ದ, ನಿಷ್ಪಕ್ಷಪಾತವಾದ ವಿಮರ್ಶೆಯ ಒರೆಗಲ್ಲಿಗೆ ತಿಕ್ಕಿ ನೋಡಬೇಕಾದ ಅವಶ್ಯಕತೆ ಎಂದಿಗಿಂತ ಇಂದು ಹೆಚ್ಚೆನಿಸುತ್ತಿದೆ.

# ಮರಾಠಿ ಕಥಾ ಸಾಹಿತ್ಯ :

--ಪ್ರೊ. ವ. ದಿ. ಕುಲಕರ್ಣಿ

ಮರಾಠಿ ಭಾಷೆಯು ಕ್ರಿ. ಶ. ೧೦—೧೧ ನೆಯ ಶತಮಾನದಲ್ಲಿ ಹುಟ್ಟಿದೆ. ಭಾಷೆಯು ಪ್ರಾಚೀನತೆ ಇಂತಿದ್ದರೂ ಗ್ರಂಥರೂಪ ಸಾಹಿತ್ಯವು ಮೊದಲ ಬಾರಿಗೆ ಉಪಲಬ್ಧವಾಗುವುದು ಒಂದು—ಒಂದೂವರೆ ಶತಕದ ನಂತರವೇ. ಯಾವುದೇ ಭಾರತೀಯ ಭಾಷೆಯ ಚರಿತ್ರೆಯನ್ನು ಅವಲೋಕಿಸಿದರೂ ಸಾಮಾನ್ಯವಾಗಿ ಪ್ರಾರಂಭ ಸಾಹಿತ್ಯ ಪದ್ಯರೂಪದಲ್ಲಿದ್ದುದು ಕಂಡು ಬರುತ್ತಿದೆ. ಆದರೆ ಪದ್ಯರೂಪ ಸಾಹಿತ್ಯದ ಜೊತೆ ಜೊತೆಯಾಗಿ ಗದ್ಯರೂಪ ಸಾಹಿತ್ಯವೂ ಬೆಳೆದುಬಂದುದು ಮರಾಠಿ ಸಾಹಿತ್ಯದ ಒಂದು ವೈಶಿಷ್ಟ್ಯವೆನ್ನಬಹುದಾಗಿದೆ

ಯಾದವ ಕಾಲದಲ್ಲಿ, ಆಖ್ಯಾನ ಮತ್ತು ಕಾವ್ಯಗಳು ರಚಿತವಾಗುತ್ತಿರುವಾಗ ಚರಿತ್ರರೂಪ ಗದ್ಯವೂ ತಲೆಯೆತ್ತಿದೆ ಮಹಾನುಭಾವ ಪಂಥದ ಪ್ರವರ್ತಕ ಶ್ರೀ ಚಕ್ರಧರ ಸ್ವಾಮಿಗಳ ಗುರುಗಳಾಗಿದ್ದ ಶ್ರೀ ಗೋವಿಂದ ಪ್ರಭುಗಳ ಚರಿತ್ರೆ ಒಂದು ಉತ್ತಮ ಉದಾಹರಣೆ. ಇದೊಂದು 'ಸ್ಮೃತಿಚರಿತ್ರೆ'ಯಂತಿದೆ. ಸಂಗ್ರಹ ರೂಪವಾಗಿದ್ದರೂ ಕಥಾಸಾಹಿತ್ಯಾಂಶಗಳು ಸೇರಿಕೊಂಡಿವೆ ಶ್ರೀ ಚಕ್ರಧರ ಸ್ವಾಮಿಗಳೂ ತಮ್ಮ ಅಧ್ಯಾತ್ಮಿಕ ವಿಚಾರ ಮತ್ತು ಆಚಾರ ಸೂತ್ರಗಳನ್ನು ಜನತೆಗೆ ವಿಶದೀಕರಿಸಲು 'ದಂತಕತೆ'ಗಳನ್ನು ಬಳಸಿಕೊಂಡರು. ಇಂತಹ ಗದ್ಯರೂಪ ಕಥಾಸಾಹಿತ್ಯದ ಪೂರ್ವದಲ್ಲಿಯೇ ಜಾನಪದ ಸಾಹಿತ್ಯ ಸಾಕಷ್ಟು ಹುಲುಸಾಗಿತ್ತೆಂದು ಉಲ್ಲೇಖಗಳಿವೆ. ಮರಾಠಿ ಗದ್ಯ ಕಥಾಸಾಹಿತ್ಯವು ಯಾದವ ಕಾಲದಲ್ಲಿ (೧೩—೧೪ ನೆಯ ಶತಮಾನ) ಮಹಾನುಭಾವ ಲೇಖಕರಿಂದಲೇ ಪ್ರಾರಂಭವಾಯಿತೆನ್ನುವುದೇ ಹೆಚ್ಚು ಸೂಕ್ತ

## ಇಂಗ್ಲಿಷ್ ಬರುವ ಪೂರ್ವದಲ್ಲಿ

ಆನಂತರ, ಸುಮಾರು ಒಂದು ಶತಮಾನಕಾಲ ಮರಾಠಿ ಸಾಹಿತ್ಯ ಚರಿತ್ರೆಯಲ್ಲಿ ಅಂಧಕಾರ ಹಬ್ಬಿದಂತಿದೆ. ಹೇಳಿಕೊಳ್ಳಬಹುದಾದ ಯಾವುದೇ ಸಾಹಿತ್ಯಕೃತಿ ಉಪಲಬ್ಧವಿಲ್ಲ ಸಾಹಿತ್ಯ-ಸೃಷ್ಟಿಯೇ ಸುಪ್ತವಾಗಿದ್ದ ಕಾಲವಿದು.

ಸಂಸ್ಕೃತ 'ಪಂಚತಂತ್ರ'ದ ಮರಾಠಿ ರೂಪಾಂತರವು ರಚಿತವಾದುದು ಸುಮಾರು ಕ್ರಿ. ಶ. ೧೫—೧೭ ನೆಯ ಶತಮಾನಗಳಲ್ಲಿ. ಕ್ರಿ. ಶ. ೧೬ ನೇ ಶತಮಾನದಲ್ಲಿ ಗದ್ಯಸಾಹಿತ್ಯದ ಬೆಳವಣಿಗೆ ಅತ್ಯಲ್ಪವಾಗಿದೆ ೧೭ ನೆಯ ಶತಮಾನದಲ್ಲಿ, ಐತಿಹಾಸಿಕ ವ್ಯಕ್ತಿ ಮತ್ತು ಘಟನೆಗಳ ವಿವರಗಳನ್ನೊಳಗೊಂಡ 'ಬಖರೀ' ಎಂಬ ಸಾಹಿತ್ಯರೂಪ ತಲೆಯೆತ್ತಿತು. 'ಬಖರೀ'ಯು ದೀರ್ಘ ಗದ್ಯ ಆಖ್ಯಾನದಂತಿವೆ, ಪೇಶವಾಯಿ ಆಳಿಕೆಯ ಕೊನೆಯವರೆಗೆ ಅಂದರೆ ಸುಮಾರು ಕ್ರಿ ಶ ೧೮೧೮ ರವರೆಗೆ ಮರಾಠಿ ಕಥಾಸಾಹಿತ್ಯ ಇದೇ ಅವಸ್ಥೆಯಲ್ಲಿ ಉಳಿಯಿತು. ಇಂಗ್ಲಿಷ್ ಸಾಹಿತ್ಯದ ಪರಿಚಯದ ನಂತರವೇ ಸಣ್ಣ ಕತೆಯ ಲೇಖನ ಸ್ವತಂತ್ರವಾಯಿತು.

## 'ಕಹಾನೀ'

ಮಹಾರಾಷ್ಟ್ರದಲ್ಲಿ 'ಕಹಾನೀ' ಹೇಳುವ ಪರಂಪರೆ ಇಂದಿಗೂ ನಡೆದುಕೊಂಡು ಬಂದಿದೆ 'ಕಹಾನಿ' ಅಂದರೆ ಧಾರ್ಮಿಕ ವ್ರತಗಳು, ಅವುಗಳ ಉದ್ದೇಶ ಮತ್ತು ಫಲಗಳನ್ನು ಹೇಳುವ ಕತೆಗಳು, ಶ್ರಾವಣ ಮಾಸದಲ್ಲಿ ಸುಮಂಗಲೆಯರು 'ಕಹಾನೀ' ಹೇಳದೆ ಊಟ ಮಾಡುವುದಿಲ್ಲ. 'ಕಹಾನೀ'ಗಳು ಆಕಾರದಲ್ಲಿ ಚಿಕ್ಕವು ಸಣ್ಣ ಸಣ್ಣ ವಾಕ್ಯರಚನೆಯ ಪದ್ಧತಿ 'ಕಹಾನೀ'ಗಳಲ್ಲಿಯ ಲಯಬದ್ಧವಾದ ಭಾಷಾಶೈಲಿ ಕಿರಿದರಲ್ಲಿ ಹಿರಿದನ್ನು ಹೇಳುವ ಶಕ್ತಿ, ಸನ್ನಿವೇಶ ಚಿತ್ರಣದ ಕುಶಲತೆ ಆಕರ್ಷಣೀಯವಾಗಿದೆ. 'ಕಹಾನೀ'ಗಳ ಕರ್ತೃಗಳಾರೆಂದು ಹೇಳುವಂತಿಲ್ಲ ಲೋಕಗಂಗೆಯ ಹೊನಲಿನಲ್ಲಿ ಕುಸುಮಿಸಿದ ಕಮಲಗಳಿವು. 'ಕಹಾನೀ'ಗಳು ವಿಶೇಷತಃ ಹೆಣ್ಣುಮಕ್ಕಳಲ್ಲಿಯೇ ಪ್ರಚಲಿತವಾಗಿರುವುದರಿಂದ. ಇವಕ್ಕೆ 'ಅಪೌರುಷೇಯ ಸಾಹಿತ್ಯ'ವೆಂಬ ಮಾರ್ಮಿಕ ನಾಮಕರಣವೂ ಆಗಿದೆ.

## 'ಬಾಳಮಿತ್ರ' ಮತ್ತು ನೀತಿಕಥಾ

ಒಂದು ಕಡೆ ಮುಖೋದ್ಗತವಾಗಿ ತಲೆತಲಾಂತರವಾಗಿ ಸಣ್ಣಕತೆಗಳು ಉಳಿದು ಬೆಳೆದುಕೊಂಡು ಬಂದರೆ, ಸ್ವತಂತ್ರ ಕಥಾರಚನೆಯ ಮತ್ತು ಅವುಗಳನ್ನು ಮುದ್ರಿಸುವ ಕಾರ್ಯವೂ ಸರಿಸಮನಾಗಿ ನಡೆಯಿತೆಂದೇ ಹೇಳಬೇಕು ತಂಜಾವೂರಿನ ಶ್ರೀ ಸರಫೋಜಿ ರಾಜೆ 'ಇಸಾಪ ನೀತಿ'ಯ ಮರಾಠಿ ಭಾಷಾಂತರವನ್ನು 'ಬಾಲಬೋಧ ಮುಕ್ತಾವಲಿ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಇದು ಕ್ರಿ. ಶ ೧೮೦೬ ರಲ್ಲಿ ಅಂದರೆ, ಮಹಾರಾಷ್ಟ್ರದಲ್ಲಿ ಇಂಗ್ಲೀಷರ ಆಳಿಕೆ ಪ್ರಾರಂಭವಾಗುವ ಮೊದಲೇ, (ಹನ್ನೆರಡು ವರುಷ ಅಂತರ) ಪ್ರಕಟವಾದ ಪ್ರಥಮ ಮರಾಠಿ ಗ್ರಂಥವು. ಆನಂತರ 'ಸಿಂಹಾಸನ ಬತ್ತೀಸಿ', 'ಹಿತೋಪದೇಶ' 'ಇಸಾಪ ನೀತಿ', 'ವೇತಾಳ ಪಂಚವೀಸಿ' ಮೊದಲಾದ ಕಥಾಸಾಹಿತ್ಯ ಬೆಳಕಿಗೆ ಬಂದಿತು. ಶ್ರೀ ಶ. ಕಾ. ಛತ್ರೆ ಅವರು ಫ್ರೆಂಚ್ ಕಥಾಪುಸ್ತಕದ ಮರಾಠಿ ಭಾಷಾಂತರ 'ಬಾಳಮಿತ್ರ'ವನ್ನು ಪ್ರಕಟಿಸಿದರು. 'ಬಾಳಮಿತ್ರ'ವು ತುಂಬಾ ಜನಪ್ರಿಯವಾಯಿತು. ಕ್ರಿ. ಶ. ೧೮೨೦—೧೮೮೫ ರ ಅವಧಿಯಲ್ಲಿ ನೀತಿಬೋಧೆಯ ಕತೆಗಳ ನಿರ್ಮಾಣ ಹೆಚ್ಚಾಯಿತು. ಇಂತಹ ಕತೆಗಳು 'ಬಾಳಮಿತ್ರ'ದ ಪರಂಪರೆಯನ್ನೇ ಅನುಸರಿಸಿದವು. ಬೋಧಪ್ರದವಾದ ಸುಲಭ ಭಾಷೆ. ನೀತಿಬೋಧೆಯೇ ಇವುಗಳ ಮುಖ್ಯ ಉದ್ದೇಶ. ಈ ಕತೆಗಳು ಶಾಲೆಯ ಮಕ್ಕಳನ್ನುದ್ದೇಶಿಸಿಯೇ ಬರೆದವುಗಳಾಗಿವೆ.

## ಸುರಸ ಚಮತ್ಕಾರಿಕ ಕಥೆಗಳು

ಬಾಲಬೋಧೆಯ ನೀತಿಕತೆಗಳ ಜೊತೆಗೆ, 'ಹಾತಿಮತಾಯಿ', 'ಅರೇಬಿಯನ್ ನೈಟ್ಸ್' ಮೊದಲಾದ ಅರಬ್ಬೀ ಭಾಷೆಯ ಸುರಸ ಮತ್ತು ಚಮತ್ಕಾರಿಕ ಕತೆಗಳು ತಲೆದೋರಿದವು. ಅದ್ಭುತರಮ್ಯವಾದ ಈ ಕತೆಗಳು ಲೋಕಪ್ರಿಯವಾದುವು. ಪುರಾಣಗಳಲ್ಲಿಯ ಚಮತ್ಕಾರಿಕ ಆಖ್ಯಾನಗಳು ಸಾಮಾನ್ಯ ಕಥಾರೂಪದಲ್ಲಿ ಹೇಳಲ್ಪಟ್ಟವು. ಮರಾಠಿ ಕಥಾಸಾಹಿತ್ಯ ವಿವಿಧ ರೂಪಗಳನ್ನು ಮೈಗೂಡಿಸಿಕೊಂಡು ವಿಪುಲವಾಗಿ ಬೆಳೆಯಲಾರಂಭಿಸಿತು.

## 'ಕರಮಣೂಕ' ಕಾಲ

ಕ್ರಿ. ಶ. ೧೮೯೦ ರಲ್ಲಿ ಶ್ರೀ ಹರಿ ನಾರಾಯಣ (ಹರಿಭಾವು) ಆಪಟೆಯವರು 'ಕರಮಣೂಕ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ. 'ಸ್ಫುಟಗೋಷ್ಟಿ' ಎಂಬ ಒಕ್ಕಣಿಕೆಯಲ್ಲಿ. ಸ್ವತಂತ್ರ ಕತೆಗಳನ್ನು ಪ್ರಕಟಿಸಲಾರಂಭಿಸಿದರು. ಮಹಾರಾಷ್ಟ್ರದ ಮಧ್ಯಮವರ್ಗದ ಜನಜೀವನದ ನೈಜಚಿತ್ರಣ ಈ ಕತೆಗಳಲ್ಲಿಯ ಪ್ರಧಾನವಸ್ತು. ಮರಾಠಿ ಕಥಾಸಾಹಿತ್ಯಕ್ಕೆ 'ವಾಸ್ತವತೆ'ಯ ಸ್ಪರ್ಶಮಾಡಿಸಿದ ಕೀರ್ತಿ ಶ್ರೀ ಹರಿಭಾವು ಅವರದು. ಇವರ ಕತೆಗಳಿಗೆ. ಕಲಾವಿಲಾಸಕ್ಕಿಂತ ಸಮಾಜದಲ್ಲಿ ನೀತಿ ಸದಾಚಾರಗಳು ನೆಲೆಸಲೆಂಬುದೇ ಮುಖ್ಯ ಉದ್ದೇಶವಾಗಿದ್ದರೂ ಇವಕ್ಕೆ ಕೇವಲ 'ನೀತಿಕತೆ'ಗಳು ಎಂದು ಹೇಳುವಂತಿಲ್ಲ. ಶ್ರೀ ಹರಿಭಾವು ಆಪಟೆಯವರ ಕಾಲದ ಮಧ್ಯಮವರ್ಗದ ಸಾಮಾಜಿಕ ಸ್ಥಿತಿ, ಜೀವನಮೌಲ್ಯಗಳ ಸ್ಥೂಲ ಪ್ರತಿಬಿಂಬ ಈ ಕತೆಗಳಲ್ಲಿ ಕಾಣುತ್ತಿದೆ.

ಶ್ರೀ ಸಹಕಾರೀ ಕೃಷ್ಣರವರು ತಮ್ಮ 'ಕುಟುಂಬಮಾಲಾ' ಎಂಬ ಕಥಾಮಾಲಿಕೆಯಲ್ಲಿ, ಸಮಾಜ ಮಾರ್ಗದರ್ಶನ ದೃಷ್ಟಿಯನ್ನೇ ಮುಂದುವರಿಸಿದರು. ಇವರ ಕೆಲವು ಕತೆಗಳು ತೀರ ಚಿಕ್ಕವು ಇಲ್ಲವೇ ಅತಿ ದೊಡ್ಡವು ಕಿರುಕಾದಂಬರಿಯಂತಹ ಕತೆಗಳೂ ಉಂಟು. ಸರಳ ಶೈಲಿಯಲ್ಲಿ, ವೇಗಪೂರ್ಣವಾಗಿ ಕತೆ ಹೇಳುವುದೇ ಇವರ ತಂತ್ರ, 'ಸಣ್ಣಕತೆ'ಯ ಯಾವುದೇ ಸಾಹಿತ್ಯಕ ಲಕ್ಷಣ. ತಂತ್ರಗಳ ಅಭಾವ ಇವರ ಕೃತಿಗಳಲ್ಲಿ ಒಡೆದು ಕಾಣುತ್ತದೆ. 'ಕರಮಣೂಕ'ದ 'ಸ್ಫುಟಗೋಷ್ಟಿ'ಯ ಕಾಲ ಸುಮಾರು ಕ್ರಿ. ಶ. ೧೮೯೦—೧೯೧೦ ರವರೆಗೆ.

## 'ಮನೋರಂಜನ'ದ ಕಾಲ

'ಮನೋರಂಜನ' ಎಂಬ ಮಾಸಪತ್ರಿಕೆಯು ಕ್ರಿ. ಶ ೧೮೯೫ ರಲ್ಲಿ ಪ್ರಾರಂಭವಾಯಿತು. ಮರಾಠಿ ಕಥಾಸೃಷ್ಟಿಗೆ ಸ್ವತಂತ್ರ ಅಧಿಷ್ಠಾನ ದೊರೆತಂತ್ತು

ಅತ್ಯಾಧುನಿಕ ಸೌಕರ್ಯಕ್ಕೆ ಹೆಸರಾದ ಸ್ಥಳ
ಬೆಳಗಾವಿಯಲ್ಲಿ ಅತಿದೊಡ್ಡ ಭವ್ಯ ಕಟ್ಟಡ

Gram : ANUPAM

Phones { 2005 / 2006 / 2007

# ಹೋಟೆಲ್ ಅನುಪಮ | HOTEL ANUPAM

ಸ್ಟೇಶನ್ ರೋಡ — ಬೆಳಗಾವಿ ★ Station Road, BELGAUM



ನಮ್ಮ ವೈಶಿಷ್ಟ್ಯಗಳು

- ★ ಗಾಳಿ ಬೆಳಕು ತುಂಬಿದ ಕೊಠಡಿ
- ★ ಕಾರು ನಿಲ್ಲಿಸಲು ಸೌಲಭ್ಯ
- ★ ಶುಚಿ-ರುಚಿ ಆಹಾರ
- ★ ಭೋಜನ-ಫಲಾಹಾರಕ್ಕೆ ಪ್ರಶಾಂತ ವಾತಾವರಣ
- ★ ಹಿತಕರ ಸನ್ನಿವೇಶ ಮಿತವಾದ ದರಗಳು
- ★ ಪ್ರತಿಯೊಂದು ರೂಮಿಗೆ ಟೆಲಿಫೋನ್ ಸೌಲಭ್ಯ.

ಸರ್ವರಿಗೂ ದೀಪಾವಳಿಯ
ಶುಭಾಶಯಗಳು



ಬೆಳಗಾವಿ ನಗರದ ಕೇಂದ್ರದಲ್ಲಿರುವ ಏಕಮೇವ ಹೋಟೆಲ್ ಸಂದರ್ಶಿಸಿ ತೃಪ್ತಿಪಡೆಯಿರಿ

ಗಿತು. ಶ್ರೀ ಹರಿಭಾವು ಆಪಟೆ ಅವರ ಕಾಲದಲ್ಲಿ ಸಣ್ಣ ಕತೆಯು ಕಾದಂಬರಿ, ನಾಟಕಗಳ ಮರೆಯಲ್ಲಿ ಅವಿತುಕೊಂಡಿತ್ತು. ಈಗ ಸಣ್ಣಕತೆ ಸ್ವತಂತ್ರವಾಗಿ ತಲೆಯೆತ್ತುವ ಕಾಲ ಒದಗಿತು. ಶ್ರೀ ವಿಠ್ಠಲ ಸೀತಾರಾಮ ಗುರ್ಜರರು ಅಪಾರ ಉತ್ಸಾಹದಿಂದ ಕಥೆಗಳನ್ನು ಬರೆದು ಮರಾಠಿ ಕಥಾ ಸಾಹಿತ್ಯಕ್ಕೆ ನೂರಾರು ಕಥಾ ಪುಷ್ಪಗಳನ್ನರ್ಪಿಸಿದರು. ಬಂಗಾಲಿ ಕಥೆಗಳ ಪ್ರಭಾವ ಈ ಕಾಲದಲ್ಲಿ ಅಚ್ಚಳಿಯದಂತೆ ಮೂಡಿತು. ಘಟನಾ ಪ್ರಧಾನ. ಪ್ರಸನ್ನ ಭಾಷಾ ಶೈಲಿ. ಮೃದುಹಾಸ್ಯ, ಮನೋರಂಜಕ ಸಂವಾದ ಮೊದಲಾದ ಗುಣಗಳಿಂದ ಈ ಕಾಲದ ಕತೆಗಳು ಓದುಗರಿಗೆ ಬೇಸರ ತರಲಿಲ್ಲ. ಆ ಕಾಲದ ವಾಚಕವೃಂದ ಇಂತಹ ಕತೆಗಳನ್ನು ಚೆನ್ನಾಗಿಯೇ ಮೆಚ್ಚಿಕೊಂಡಿತು. ಶ್ರೀ ಕೃ. ಕೇ. ಗೋಖಲೆ ಅವರು ಆಂಗ್ಲ ಕತೆಗಳಿಗೆ ಮರಾಠಿ ವೇಷ ತೊಡಿಸಿದರು. ಮನೋರಂಜನೆ ಇವರ ಕತೆಗಳ ಪ್ರಧಾನ ಹೇತು. 'ಗುರ್ಜರ. ಗೋಖಲೆಯುಗ' ಎನ್ನುವಷ್ಟರ ಮಟ್ಟಿಗೆ, ಮರಾಠಿ ಕಥಾಸಾಹಿತ್ಯಕ್ಕೆ ಇವರಿಬ್ಬರ ಕಾಣಿಕೆ ಮಹತ್ವಪೂರ್ಣವಾದುದು. ಶ್ರೀ ನಾ. ಹ. ಆಪಟೆ, ಶ್ರೀ ಶ್ರೀ ಕೃ. ಕೋಲ್ಹಟಕರ, ಶ್ರೀ ನ. ಚಿಂ. ಕೇಳಕರ. ಶ್ರೀ ಮ ಮ. ಜೋಶಿ, ಶ್ರೀ ಶಿ. ಮ. ಪರಾಂಜಪೆಯವರಂತಹ ಬೇರೆ ಬೇರೆ ಜೀವನ ಕ್ಷೇತ್ರ, ಸಾಹಿತ್ಯ ಕ್ಷೇತ್ರಗಳಲ್ಲಿ ಕೃಷಿಗೈಯುತ್ತಿದ್ದವರನ್ನೂ ಸಣ್ಣ ಕತೆಗಳನ್ನು ಬರೆಯಬೇಕೆಂಬ ಮೋಹ ಆವರಿಸಿದುದು ಈ ಕಾಲದ ಪ್ರಭಾವದಿಂದಂದೇ ಹೇಳಬೇಕು. ಈ ಕಾಲದಲ್ಲಿ ಮರಾಠಿ ಸ್ತ್ರೀ ಕತ್ತಲೆ ಕೋಣೆಯಿಂದ ದಿವಾನಖಾನೆಗೆ ಬಂದಳು. (ಶ್ರೀ ಹರಿಭಾವು ಅವರ ಕಾಲದಲ್ಲಿ ಇವಳು ಅಡಿಗೆ ಮನೆಯಿಂದ ಕತ್ತಲೆ ಕೋಣೆಗೆ ಬಂದಿದ್ದಳು. ಶ್ರೀಮತಿ ಕಾಶೀತಾಯಿ ಕಾನಿಟಕರ ಅವರ ಕತೆಗಳು ಆಗ ಹೆಸರು ಪಡೆದವು.) ಈಗ ಶ್ರೀಮತಿ ಗಿರಿಜಾಬಾಯಿ ಕೇಳಕರ, ಶ್ರೀಮತಿ ಆನಂದಿಬಾಯಿ ಶಿರಕೆ ಇವರು ಕಥಾ ಲೇಖನದಲ್ಲಿ ಯಶಸ್ಸು ಪಡೆದರು.

## 'ಯಶವಂತ', 'ಕಿರ್ಲೋಸ್ಕರ'

'ಮನೋರಂಜನ'ದ ಕಾಲದಲ್ಲಿ, ಮರಾಠಿ ಸಣ್ಣ ಕತೆಗಳಿಗೆ ಮೆಲ್ಲ ಮೆಲ್ಲನೆ ಒಂದು ಆಕಾರ ಬಂದಿತು. ಆಡಂಬರ ಕಡಿಮೆಯಾಗಿ ಆಕಾರಬದ್ಧತೆ ಹೆಚ್ಚಾಯಿತು. ಸಣ್ಣ ಕತೆಗಳು ಜೀವನಾನುಭೂತಿಯನ್ನು ಮೈಗೂಡಿಸಿಕೊಳ್ಳತೊಡಗಿದವು. ಕ್ರಿ. ಶ. ೧೯೨೬ ರಲ್ಲಿ 'ರತ್ನಾಕರ' ಮತ್ತು ಕ್ರಿ. ಶ. ೧೯೨೯ ರಲ್ಲಿ 'ಯಶವಂತ' ಮಾಸ ಪತ್ರಿಕೆಗಳು ಹೊರಟವು. 'ಯಶವಂತ' ಪತ್ರಿಕೆಯು ಸಾಮಾನ್ಯವಾಗಿ ಲಘು ಕತೆಗಳಿಗಾಗಿಯೇ ಮೀಸಲಾಗಿದ್ದ ಪತ್ರಿಕೆ. ಮರಾಠಿ ಕಥಾ ಸಾಹಿತ್ಯ ಚರಿತ್ರೆಯಲ್ಲಿ 'ಕಿರ್ಲೋಸ್ಕರ' ಪತ್ರಿಕೆಯ ಉಗಮ ಒಂದು ಮಹತ್ತರವಾದ ಘಟ್ಟವೆಂದೇ ಹೇಳಬೇಕು. ಈ ಪತ್ರಿಕೆಯು ಲಘು-ಕಥಾ ಸಾಹಿತ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿತು. ಲಘು ಕಥೆಗಳಂತೆ ಪತ್ರಿಕೆಯೂ ಜನಪ್ರಿಯವಾಯಿತು. ಸಣ್ಣ ಕತೆಯು ಮರಾಠಿ ಸಾಹಿತ್ಯದ ಒಂದು ರೂಪವಾಗಿ, ಅಂಗವಾಗಿ ಬೆಳೆಯಿತು. ಶ್ರೀ ಹರಿಭಾವು ಆಪಟೆಯವರ 'ಸ್ಫುಟ-ಗೋಷ್ಟ'ದಲ್ಲಿ ರೂಪುಗೊಂಡ ಸಣ್ಣಕತೆಯು, ಕ್ರಿ. ಶ. ೧೯೪೫ರ ವರೆಗೆ 'ಯಶವಂತ' ಮತ್ತು 'ಕಿರ್ಲೋಸ್ಕರ ಯುಗವೆನ್ನುವಷ್ಟು ಮಟ್ಟಿಗೆ ಪ್ರಚಾರ ಪಡೆಯಿತು. 'ಯಶವಂತ' ಮತ್ತು 'ಕಿರ್ಲೋಸ್ಕರ'- ಈ ಎರಡೂ ಮಾಸಿಕಗಳು ಮರಾಠಿ ಸಾಹಿತ್ಯದ ಬೆಳವಣಿಗೆಗೆ ಮರೆಯಲಾಗದ ಕಾಣಿಕೆಯನ್ನು ಸಲ್ಲಿಸಿವೆ.

ಶ್ರೀ ದಿವಾಕರ ಕೃಷ್ಣ, ಶ್ರೀ ನಾ. ಸಿ. ಫಡಕೆ ಮತ್ತು ಶ್ರೀ ವಿ ಸ. ಖಾಂಡೇಕರ ಇವರು ಈ ಕಾಲದ ಸುಪ್ರಸಿದ್ಧ ಸಣ್ಣಕತೆಗಾರರು. ವಿಶೇಷ ಮನ್ನಣೆಗೆ ಪಾತ್ರರಾದ ಶ್ರೀ ದಿವಾಕರ ಕೃಷ್ಣ ಅವರು ಮರಾಠಿ ಕತೆಗಳನ್ನು 'ಸ್ವಭಾವ ಪ್ರಧಾನ'ವನ್ನಾಗಿ ಮಾಡಿದರು. ಕತೆಗಳಲ್ಲಿ ಕಾವ್ಯಶಕ್ತಿಯ ಪ್ರತಿಭೆ ಮಿಂಚಿತು; ಕತೆ ಕಾವ್ಯಾತ್ಮದೊಂದಿಗೆ ತಾದಾತ್ಮ್ಯ ಪಡೆಯಿತು. ಇವರ ಕಥೆಗಳಲ್ಲಿ 'ಸಂವಾದ'ಕ್ಕಿಂತ ಕಥಾವಸ್ತುವಿಗೆ ಮಹತ್ವ ಬಂದಿತು. ಮರಾಠಿ ಕತೆಗಳು ಒಂದು ನಿಶ್ಚಿತ ಆಕಾರ ಬದ್ಧವಾಗಲು ಸಹಾಯಕವಾಯಿತು.

ಶ್ರೀ ನಾ. ಸಿ. ಫಡಕೆ ತಮ್ಮ ಕತೆಗಳಲ್ಲಿ ಕಥಾ ತಂತ್ರಕ್ಕೆ ಅತಿರಿಕ್ತ ಮಹತ್ವವಿತ್ತರು; ಭಾಷಾಸೌಂದರ್ಯಕ್ಕೆ ವಿಶೇಷ ಗಮನವಿತ್ತರು. ಶ್ರೀ ಫಡಕೆ ಅವರ ಕಥಾರಚನೆಯಲ್ಲಿ ಸಾಮಾನ್ಯವಾಗಿ ಪಾತ್ರಗಳ ಸಂಖ್ಯೆ ಎಷ್ಟು ಸಾಧ್ಯವೋ ಅಷ್ಟು ಕಡಿಮೆ; ಹಾಗೆಯೇ ಅತಿ ಮಿತವಾದ ಸನ್ನಿವೇಶ ಸೃಷ್ಟಿ. ಒಂದೇ ಒಂದು ಸಂಸ್ಕಾರದ ಚಿತ್ರಣ ಇಲ್ಲವೆ ಗುಣಗಳಿಂದ ಇವರ ಕತೆಗಳನ್ನು ಕೂತಪಟ್ಟಿಗೆ ಒಮ್ಮೆಲೇ ಓದಬಹುದು. ಓಗಿರುವುದೇ ಸಣ್ಣ ಕತೆಗಳ ಲಕ್ಷಣವೆಂದು ಶ್ರೀ ಫಡಕೆಯವರ ತೀರ್ಮಾನ. ವ್ಯಾಖ್ಯೆ ತಮ್ಮ ಕಥಾ ರಚನೆಯಲ್ಲಿ ಅವರು ಇದೇ ಧೋರಣೆಯನ್ನೇ ಅನುಸರಿಸಿಕೊಂಡು ಬಂದುದು ಗಮನಾರ್ಹವಾಗಿದೆ. ಮಧ್ಯಮ ವರ್ಗದ ತರುಣ ಪೀಳಿಗೆಗೆ ಹಿಡಿಸುವಂತಹ ಸ್ವಪ್ನ-ಮಯ ಮತ್ತು ಪ್ರಣಯೀ ಜೀವನ ಚಿತ್ರಣವೇ ಇವರ ಕತೆಗಳ ಪ್ರಧಾನ ವಸ್ತುವಾದುದರಿಂದ, ಇವರ ಕತೆಗಳು ಶೀಘ್ರವಾಗಿ ಲೋಕಪ್ರಿಯವಾದವು. ಕತೆಗಳಲ್ಲಿ ವ್ಯಕ್ತಿ ಚಿತ್ರಣಗಳ ಸ್ಪಷ್ಟತೆಯನ್ನೂ ಕಾಣುವೆವು. ಶ್ರೀ ಫಡಕೆ ಅವರ ಸಣ್ಣಕಥಾ ಸಾಹಿತ್ಯ ಸೇವೆಯಿಂದ ಮರಾಠಿಯಲ್ಲಿ ಸಣ್ಣಕತೆಗಳ ಸ್ಥಾನ ಸ್ಥಿರಗೊಂಡಿತು.

ಶ್ರೀ ವಿ. ಸ. ಖಾಂಡೇಕರ ಅವರು ತಮ್ಮ ಕತೆಗಳಲ್ಲಿ. 'ಜೀವನ ದರ್ಶನ'ಕ್ಕೆ ಹೆಚ್ಚು ಗಮನವಿತ್ತಿದ್ದಾರೆ ಹಾಗೆಂದರೆ ಕಥಾತಂತ್ರವನ್ನು ಪೂರ್ಣ ಕೈಬಿಟ್ಟರೆಂದು ಭಾವಿಸಬಾರದು. ತಂತ್ರಕ್ಕಿಂತ ಜೀವನ ದರ್ಶನದ್ದೇ ಮೇಲುಗೈಯೆನ್ನಬೇಕು. ಮಧ್ಯಮ ವರ್ಗದ ಕೌಟುಂಬಿಕ ಮತ್ತು ಸಾಮಾಜಿಕ ಜೀವನ ಚಿತ್ರಣ ಇವರ ಕತೆಗಳಲ್ಲಿ ಹೆಚ್ಚು ಅವಕಾಶ ಪಡೆದಿದೆ. ಧ್ಯೇಯವಾದಿ ಮತ್ತು ತ್ಯಾಗಿ ಆದಂತಹ ವ್ಯಕ್ತಿ ಚಿತ್ರಣಗಳಿಗೆ ಹೆಚ್ಚಿನ ಸ್ಥಾನ ದೊರೆತಿದೆ. ಅಂತೆಯೇ ಶ್ರೀ ಖಾಂಡೇಕರ ಅವರ ಸಣ್ಣ ಕತೆಗಳು ತತ್ತ್ವದರ್ಶಿಯಾಗಿವೆ, ಸಮಸ್ಯಾಪ್ರಧಾನವಾಗಿವೆ; ಮಾನವತೆಗೆ ಆಹ್ವಾನವೀಯುವಂತಾಗಿವೆ. ಸಾಮಾಜಿಕತೆಯೇ ಇವರ ಕತೆಗಳ ಆತ್ಮ. ಇವರ ಕಥಾ ರಚನೆಯಲ್ಲಿ ಅಲ್ಲಲ್ಲಿ ಪುನರಾವೃತ್ತಿ, ಶಿಥಿಲತೆ, ಅಲಂಕೃತವಲ್ಲದ ಭಾಷೆ ಮುಂತಾದವು ಕಂಡುಬರುತ್ತಿವೆ. ಇವರ ಕತೆಗಳಲ್ಲಿಯ ಪ್ರಾಮಾಣಿಕತೆಯ ಪ್ರಭಾವ ಮತ್ತು ಶಕ್ತಿಗಳು ಅತಿ ಬಲವತ್ತರವಾಗಿವೆ. ಇದರಿಂದಾಗಿಯೇ ಶ್ರೀ ಖಾಂಡೇಕರ ಅವರ ಕತೆಗಳ ವಾಚಕ ವೃಂದ ಅತಿಯಾಗಿಯೇ ಬೆಳೆಯಿತು.

ಶ್ರೀ ಯ. ಗೋ. ಜೋಶಿಯವರು ಈ ಕಾಲದ ಪ್ರಮುಖ ಸಣ್ಣ ಕತೆಗಾರರಲ್ಲಿ ಒಬ್ಬರು. ಇವರು ಈ ವರೆಗಿನ ಕಥಾತಂತ್ರವನ್ನು ಬದಿಗೊತ್ತಿ 'ಸ್ವತಂತ್ರ' ವನ್ನೇ ಬಳಸಿಕೊಂಡು ಕಥಾ ರಚನೆ ಮಾಡಿದರು. ಇವರು ಬರೆದ ಕತೆಗಳು ಬಹುಶಃ ಮುಕ್ತವೇದನೆಯಾಳಿಪುಗಳು; ಬಳಸುವ ಭಾಷೆ ಅಪ್ಪಟ ಮರಾಠಿ. 'ಅನುಭೂತಿ' ಇವರ ಕಥಾಕ್ಷೇತ್ರ. ಕತೆಗಳ ಹರವು ಹಳೆಯ ಕಾಲದ ಮಧ್ಯಮ ವರ್ಗದ ಜೀವನಕ್ಕೇ ಮರ್ಯಾದಿತವಾಗಿದೆ. ನವಜೀವನದ ಸಡಗರವನ್ನು ಕುಚೇಷ್ಟೆ ಮಾಡುವುದರಲ್ಲಿಯೇ ಶ್ರೀ ಯ. ಗೋ. ಜೋಶಿ ಅವರ ಕಥನ ಕಲೆ ಇದೆ.

ಖಾಂಡೇಕರ ಮತ್ತು ಜೋಶಿಯವರು ವಿನೋದಕಥ್ಯ ತಮ್ಮ ಕತೆಗಳಲ್ಲಿ ಸ್ಥಾನವಿತ್ತರು.





ಕಿ ಪುಟ ೨೬೮

ವಿನೋದಾತ್ಮಕ ಕತೆಗಳನ್ನು ಹೆಚ್ಚಾಗಿ ಬರೆದವರು ವಿ. ವಿ. ಬೋಕಿಲರವರು. ಚಿಂ. ವಿ. ಜೋಶಿ ನಿಜವಾಗಿ ಸಣ್ಣ ಕತೆಗಾರರಲ್ಲ. ಆದರೆ ಅವರ ಯಾವುದೇ ವಿನೋದಪರ ಲೇಖನದ ಸ್ವರೂಪವು ಸಣ್ಣಕತೆಯ ಸ್ವರೂಪದಂತೆಯೇ ಇದೆ. ನಾ. ಧೋಂ. ತಾಮ್ಹಣಕರ, ಶ್ಯಾಮ್ಸನ್ ಅಮೃಯೆ, ವಿ. ಮಾ. ದೀ. ಪಟವರ್ಧನ, ವಾ. ವಿ. ಜೋಶಿ, ಡಾ॥ ವರ್ಟಿ, ಆಚಾರ್ಯ ಅತ್ರೆ ಮೊದಲಾದವರು ವಿನೋದಾತ್ಮಕ ಸಣ್ಣಕತೆಗಳ ಬೆಳೆಯನ್ನು ಹುಲುಸಾಗಿಸಿದರು.

ಈ ಕಾಲದಲ್ಲಿ ಮರಾಠಿ ಕತೆಯು ನಾಗರಿಕ ವಾತಾವರಣದಿಂದ ಗ್ರಾಮಕ್ಷೇತ್ರಕ್ಕೆ ಸಾಗಿತು. ರ. ವಾ. ದಿಘೆ, ಗ. ಲ. ಠೋಕಳರು ಅದ್ಭುತ ರಮ್ಯವಾಗಿ ಗ್ರಾಮ ಜೀವನವನ್ನು ಚಿತ್ರಿಸಿರುವರು. ಘಟನೆಗಳು ಅತಿರಂಜಿತವಾಗಿವೆ. ವ್ಯಕ್ತಿ ಚಿತ್ರಣವು ಕಣ್ಣು ಕುಕ್ಕುವಷ್ಟು ಅತಿವರ್ಣಿತವಾಗಿದೆ.

ಲಕ್ಷ್ಮಣರಾವ ಸರದೇಸಾಯಿ ಅವರ ಕಥಾಸಾಹಿತ್ಯಕ್ಕೆ ಗೋಮಾಂತಕರ ಜೀವನವೇ ಹಿನ್ನೆಲೆ. ವಿ. ಸ. ಸುಖಟಣಕರ, ಬಾ. ದ. ಸಾತೋಸ್ಕರ, ವಿ. ಲ. ಭರ್ವೆ, ಬಿ. ರಘುನಾಥ ಮುಂತಾದವರು ತಮ್ಮ ತಮ್ಮ ಪ್ರದೇಶಗಳ ಪ್ರಕೃತಿಯನ್ನು ಚಿತ್ರಿಸಿರುವರು.

ಸಮಾಜದಲ್ಲಿ ಸುಶಿಕ್ಷಿತ ಸ್ತ್ರೀಯರ ಒಂದು ವಿಶಿಷ್ಟವರ್ಗ ನಿರ್ಮಾಣವಾಗಿತ್ತು. ಸ್ತ್ರೀ ಜೀವನದ ಪ್ರತ್ಯಕ್ಷ ಅನುಭವ ಮತ್ತು ಸಮಸ್ಯೆಗಳನ್ನು ಸ್ತ್ರೀ ಲೇಖಕಿಯರೇ ಕತೆಗಳ ಮೂಲಕ ದೊಡ್ಡ ಪ್ರಮಾಣದಲ್ಲಿ ಬರೆಯಲಾರಂಭಿಸಿದರು. ವಿಭಾವರೀ ಶಿರೂರಕರರವರ 'ಕಳ್ಯಾಂಚೆ ನಿಃಶ್ವಾಸ' ದೃಷ್ಟಿಯಿಂದ ಕ್ರಾಂತಿಕಾರಕ ಕೃತಿ ಒಂದೇ ಬಗೆಯ ದೃಷ್ಟಿಕೋನವಿದೆ; ಆದರೂ ಕಲಾತ್ಮಕತೆಯ ಅಪೂರ್ವ ಕೃತಿಯೆಂದು ಲೋಕಪ್ರಿಯವಾಯಿತು.' ಕಮಲಾಬಾಯಿ ಟಿಳಕ, ಮಾಲತೀಬಾಯಿ ದಾಂಡೇಕರ, ಶಿರೋಜ ಆನಂದಕರ, ಕುಮುದಿನೀ ರಾಂಗಣೇಕರ ಮುಂತಾದ ಲೇಖಿಕೆಯರು ಸ್ತ್ರೀಯರಲ್ಲಿಯ ಮನೋಭಾವ ಆಶೆ, ಆಕಾಂಕ್ಷೆಗಳ ಚಿತ್ರಣವನ್ನು ಕೋಮಲವಾಗಿ ನಿರೂಪಿಸಿರುವರು.

'ರೂಪಕಕತೆ'ಗಳ ಕಾಲ ಪ್ರಾರಂಭವಾಯಿತು. 'ರೂಪಕ'ಗಳ ಮಾಧ್ಯಮದಿಂದ ಖಾಂಡೇಕರರವರು ಜೀವನ ಮೌಲ್ಯಗಳನ್ನು ವ್ಯಕ್ತಪಡಿಸಲು ಪ್ರಯತ್ನಿಸಿದರು. ವ್ಯಕ್ತಿಯ ಪ್ರಭಾನ್ವಿತ 'ಶಬ್ದಚಿತ್ರ'ಗಳನ್ನು ಕುಮಾರ ರಘುವೀರರು ಬರೆದರು. 'ಶಬ್ದಚಿತ್ರ'ವೂ ಸಣ್ಣಕತೆಯ ಜಾತಿಯದೇ. ಮಧ್ಯಮ ವರ್ಗದ ಕೂಲಿ ಕಾರರ ಜೀವನವು ಮಾಮಾ ವರೇರಕರರವರ ಕತೆಗಳಲ್ಲಿ ಸುಂದರ ಮತ್ತು 'ವಾಸವವಾದ' ವ್ಯಕ್ತಿರೂಪದಲ್ಲಿ ರಚಿತವಾಗಿದೆ. ವಿ. ಡ. ಘಾಟೆ ಅವರು 'ವ್ಯಕ್ತಿಚಿತ್ರಣ'ದಲ್ಲಿ ಸಿದ್ಧಹಸ್ತರು!

'ಸಣ್ಣಕತೆಗಳ ಯುಗ' ಎನ್ನುವ ಮಟ್ಟಿಗೆ ಮರಾಠಿ ಸಣ್ಣಕಥಾ ಸಾಹಿತ್ಯವು ಜೀವನದ ವಿವಿಧ ಕ್ಷೇತ್ರಗಳನ್ನು ವ್ಯಾಪಿಸಿತು. ತಂತ್ರದ ದೃಷ್ಟಿಯಿಂದ ಸುಧಾರಿಸಿತು. ವಿಷಯ ದೃಷ್ಟಿಯಿಂದ ವಿಸ್ತೃತವಾಯಿತು. ಪ್ರಕಾರ ಬಹುರೂಪ ತಳೆಯಿತು 'ರೂಪಕಕಥಾ', ಪ್ರಾದೇಶಿಕ ಕಥಾ, ಜಾನಪದ ಕಥಾ, ಶಬ್ದಚಿತ್ರಾತ್ಮಕ ಕಾವ್ಯಚಿತ್ರಾತ್ಮಕ ಕಥಾ ಮುಂತಾದ ವೈವಿಧ್ಯವಿದೆ. ಮರಾಠಿಯಲ್ಲಿ ಅತಿ ಸಣ್ಣಕತೆಗಳನ್ನು ಪ್ರಥಮವಾಗಿ ಪ್ರಾರಂಭಿಸಿದವರು ಭಾ. ಮ. ಬೋರಿ. ಮರಾಠಿ ಕತೆಗಳು ಹೆಚ್ಚಾಗಿ ಸಭಾವ ಪ್ರಧಾನ. ತಂತ್ರಪ್ರಧಾನ ಮತ್ತು ಜೀವನ ವಿಷ್ಯವಾದುವಾಗಿವೆ.

## ನವಕಥಾ

'ನವಕಥಾ' ಎಂದು ಇಂದು ಗುರುತಿಸಲಾಗುವ ಪ್ರಕಾರವು ಸಾಧಾರಣವಾಗಿ ಕ್ರಿ. ಶ. ೧೯೪೫ ರ ಸುಮಾರಿನಲ್ಲಿ ಪ್ರಾರಂಭವಾಯಿತು. ವಾಮನ ಚೋರಘಡೆ ಅವರ ಕತೆಗಳನ್ನು ನೋಡಿದರೆ ನವಕತೆಯು ಕ್ರಿ. ಶ. ೧೯೩೫ ರ ಆಸುಪಾಸಿನಲ್ಲಿಯೇ ಹುಟ್ಟಿತೆಂದು ಹೇಳಬಹುದಾಗಿದೆ. ಇವರ ಕತೆಗಳಿಗೆ 'ಅಂಗ'ವಿಲ್ಲ; ಲಲಿತ ನಿಬಂಧಕ್ಕೆ ಸಮೀಪವೆನಿಸುವವು. ಮನೋವಿಶ್ಲೇಷಣೆ ಪ್ರತ್ಯಕ್ಷವಾಗಿ ತುಂಬಿಕೊಂಡು ಬರದಿದ್ದರೂ ಅದಕ್ಕೆ ಸ್ವತಂತ್ರ ಮಹತ್ವ ಕೊಡಲಾಯಿತು. ಅಂತರ್ಮುಖಿಯ ದೃಷ್ಟಿಯಿಂದ, ಜೀವನ ಪ್ರಸಂಗಗಳ, ವ್ಯಕ್ತಿಗಳ ಮನೋಚಿತ್ರಣಗಳನ್ನು ಕಾವ್ಯಾತ್ಮಕವಾಗಿ ಹೆಣೆಯುವಲ್ಲಿ 'ಚೋರಘಡೆ'ಯವರು ಹೆಸರು ಪಡೆದವರು. ಅವರ ಭಾಷೆಯೂ ಈ ಆವಿಷ್ಕಾರಕ್ಕೆ ಯೋಗ್ಯ ಮತ್ತು ನೈಜವಾಗಿದೆ.

ಇದೇ ಸುಮಾರಿಗೆ ಕುಸುಮಾವತಿ ದೇಶಪಾಂಡೆಯವರು ಸಣ್ಣಕತೆಗಳನ್ನು ಬರೆಯಲಾರಂಭಿಸಿದರು. ಇವರ ಕತೆಗಳಲ್ಲಿ ಮೋಜಿದೆ. ಅವು ಆಶ್ಚರ್ಯಕರ ಆಶಾದಾಯಕವಾಗಿವೆ, ಕಲಾತ್ಮಕವಾಗಿವೆ. ಅವುಗಳಲ್ಲಿ ಮನಸ್ಸಿನ ವಿವಿಧ ತರಂಗಗಳಲ್ಲಿದು ಭಾವನೆಗಳ ಸೂಕ್ಷ್ಮ ಚಿತ್ರಣವಿದೆ. ಮರಾಠಿ ಕತೆಗಳಿಗೆ ಮನೋವಿಶ್ಲೇಷಣೆಯ ಪ್ರತ್ಯಕ್ಷ ಸಂಬಂಧ ಇಲ್ಲಿಂದ ಪ್ರಾರಂಭವಾಯಿತೆನ್ನಬಹುದು. ಕತೆಯು ಎಷ್ಟು ಮಟ್ಟಿಗೆ ಜೀವನದರ್ಶಿ ಮತ್ತು ಅನುಭವಾತ್ಮಕವಾಗಲು ಸಾಧ್ಯವೆಂಬುದು ಇವರ ಕತೆಗಳಿಂದ ವ್ಯಕ್ತವಾಗುತ್ತಿದೆ.

ವಾಮನ ಚೋರಘಡೆ ಮತ್ತು ಕುಸುಮಾವತಿ ದೇಶಪಾಂಡೆ ಅವರಿಬ್ಬರ ಕತೆಗಳಲ್ಲಿ ಸಾಮಾಜಿಕ ಜೀವನದ ಸಂಪರ್ಕ ವ್ಯಾಪಕವಾಗಿದೆ; ತೀವ್ರವಾಗಿದೆ ಕಥೆಗಳು ಜೀವಂತವೂ ವ್ಯಕ್ತಿನಿಷ್ಠವೂ ಆಗಿವೆ. ಇವರು ಮಾನವ ಜೀವನದ ತತ್ವಗಳನ್ನು ಹುಡುಕಲು ಯತ್ನಿಸಿದರು: ಜೀವನದ ಸಂಕೇತಗಳನ್ನು ಕಟ್ಟಿಕೊಟ್ಟರು. ಭಾಷೆಗೆ ತಟ್ಟಿದ ಜಡತೆಯನ್ನು ತೊಳೆದರು. ಸಣ್ಣಕತೆಗೆ 'ಹೊಸ' ರೂಪ ಕೊಟ್ಟರು.

## 'ಸತ್ಯಕಥಾ', 'ಅಭಿರುಚಿ'

ಕ್ರಿ. ಶ. ೧೯೪೫ ರ ನಂತರ ಮರಾಠಿ ಸಣ್ಣಕತೆಯು ತೀರ ಬೇರೆಯ ರೂಪವನ್ನೇ ತಳೆಯಿತು. ಗಂಗಾಧರ ಗಾಡಗೀಳ, ಅರವಿಂದ ಗೋಖಲೆ. ಪು. ಭಾ. ಭಾವೆ, ದಿ. ಬಾ. ಮೊಕಾಶಿ, ವೆಂಕಟೇಶ ಮಾಡಗೂಳಕರ - ಈ ಕತೆಗಾರ ಪಂಕ್ತಿಯಿಂದ ಮರಾಠಿ ಸಣ್ಣ ಕತೆಯು ಅಂತರ್ಬಾಹ್ಯವಾಗಿ ಬದಲಾಯಿಸಿತು ತೀರ ಚೈತನ್ಯಯುಕ್ತವಾದ ಶರೀರದಿಂದ! 'ಸತ್ಯಕಥಾ', 'ಅಭಿರುಚಿ' 'ಸಾಹಿತ್ಯ' - ಈ ನಿಯತಕಾಲಿಕ ಪತ್ರಿಕೆಗಳು ಹೊಸಬಗೆಯ ಕಥೆಗಳನ್ನು ಅತಿ ಉತ್ಸಾಹದಿಂದ ಪ್ರಕಟಿಸುವ ವ್ರತವನ್ನೇ ಕೈಕೊಂಡವು.

ಜ್ವಾಲಾಮುಖಿಯಿಂದ ಕಾಯ್ದು ಹೋಗಿದ್ದ ಸಮಾಜದ ಮನದ ಅವಸ್ಥೆಯ ಚಿತ್ರಣ ಕತೆಗಳಲ್ಲಿ ಪ್ರಕಟಗೊಂಡಿತು. ಮಾನವ ಜೀವನದ ಚಿರಂತನವಾದ ಮೌಲ್ಯಗಳು ಕುಸಿದುಬಿದ್ದವು. ವಿಕಲತೆ, ವೈಫಲ್ಯಗಳು ತಲೆಯೆತ್ತಿದವು. ಮಾನವನ ಸ್ವಾರ್ಥ ಮೇಲೆದ್ದಿತು. ಅತಿ ವಾಸನತೆ ತಾಂಡವವಾಡಿತು. ಕಥಾ ಲೇಖಕರು ತಮ್ಮ ಪ್ರತಿಭೆಯ 'ಕ್ಷ' ಕಿರಣದಿಂದ ಮಾನವನ ಮನದಾಳದಲ್ಲಿಯ ಸುಪ್ತ ಅರ್ಧ ಸುಪ್ತ ವಾಸನಾ ಆಶೆ ಆಕಾಂಕ್ಷೆ ಬಚ್ಚಿಟ್ಟ ಮೋಸ ವಂಚನೆ. ಸುಳ್ಳು ಮುಂತಾದ ಮನೋವೃತ್ತಿಗಳನ್ನು ಕಾಣಲಾರಂಭಿಸಿದರು. ಆಚಾರ - ವಿಚಾರಗಳಲ್ಲಿಯ ಅಂತರ್ವಿರೋಧ, ಅನುಭವ ಪಡೆವ ಪದ್ಧತಿ, ಜೀವನದ ಸಂಮಿಶ್ರತೆ ಜಟಿಲತೆಗಳೇ ಕತೆಗಾರರಿಗೆ ಅತ್ಯಂತ ಪ್ರಿಯವಾದುವು ಅಭಿವ್ಯಕ್ತಿಯ ಸ್ವರೂಪ ವಿಚಾರ,

**ಕ್ಕಂತೆ ಬದಲಿಸಿತು. ನವ ಕಾವ್ಯಕ್ಕಿಂತ ಮೊದಲೇ** ಒಂದು ಮೂಲಗಾಮಿಯಾದ ಬದಲಾವಣೆ ಭಾಷೆ ಮತ್ತು ಆವಿಷ್ಕಾರಗಳ ಮೂಲಕ ಉಂಟಾಗಿತ್ತು. ಮನೋವಿಶ್ಲೇಷಣೆಯ ಅಭಿನವ ತಂತ್ರ, ಅದೊಂದು ಗ್ರಂಥವೇ ಆಗುವಂತೆ ತೋರಿತು. ಯುದ್ಧೋತ್ತರ ಕಾಲದ ಮಧ್ಯಮ ವರ್ಗದ ಮತ್ತು ಯಂತ್ರಯುಗ ದಿಂದ ಜರ್ಜರಿತನಾದ ಮಾನವನ ಬೇಕು – ಬೇಡ ಗಳನ್ನು ವಿಭಜಿಸಿ, ಅದರ ಬಾಹ್ಯ ದರ್ಶನವು ಕತೆಗ ಳಲ್ಲಿ ಕಂಡಿತು. ಗಾಡಗೀಳರ ಕತೆಗಳು ಹೆಚ್ಚು ಪ್ರತಿಭಟನಾತ್ಮಕ ಮತ್ತು ಧ್ವನಿಪೂರ್ಣವಾಗಿವೆ. ಪು.ಭಾ. ಭಾವೆಯವರ ಕತೆಗಳು ಹಳೆಯ ಸಂಕೇತಗಳಿಂದ ಬಿಡುಗಡೆ ಪಡೆದವು. ನಿಃಸ್ಸಂಕೋಚವಾದ ತೀಕ್ಷ್ಣ ಭಾಷೆಯು ವಿಶಿಷ್ಟ ಭಾವನೆಗಳ ನಿರೂಪಣೆಗೆ ಸಹಾಯಕವಾಗಿದೆ. ಪ್ರಣಯ ಭಾವನೆಗೆ ಉದ್ದೇಶಪೂರ್ವಕವಾದ ಮಹತ್ವದ ಸ್ಥಾನ ದೊರೆತಿದೆ. ಆದರೆ ಈ ಮನೋಭಾವ ನಿಷ್ಪಕ್ಷಪಾತವೂ ದೃಢವೂ ಆಗಿರುತ್ತದೆ. ಇಲ್ಲಿ ಸೂಕ್ಷ್ಮ ಛಾಯೆಗಳ ರಮ್ಯವಿಲಾಸವಿದೆ. ಸಾಮಾಜಿಕ ಡಾಂಭಿಕತೆ ಮತ್ತು ಪಾಶ್ಚಾತ್ಯ ರೀತಿಯ ಆಡಂಬರಗಳ ಸ್ವಾಭಾವಿಕ ನಿರೂಪಣೆಯಿದೆ; ಒಮ್ಮೊಮ್ಮೆ ಭವ್ಯ-ಭೀಷಣವಾಗಿ, ಒಮ್ಮೊಮ್ಮೆ ಅತಿ ಕಾವ್ಯಮಯ ರೀತಿಯಲ್ಲಿ ಆಶೆ ಅನುಭೂತಿಗಳ ಚಿತ್ರಣದಲ್ಲಿ ಭಾವೆ ತನ್ಮಯರಾಗುತ್ತಾರೆ. ಉತ್ಸಾಹಿತ ಮತ್ತು ಶಕ್ತಿಯುತ ನಿವೇದನ ಶೈಲಿಯಿಂದಾಗಿ ಕತೆಗಳು ಉದ್ದವಾಗಿಯೂ ಇರುತ್ತವೆ.

ದಿ ಬಾ. ಮೋಖಾಶಿ ಸ್ವತಂತ್ರ ವಿಶ್ವಾಸವುಳ್ಳವರು. ಭಾವಗಳ ಹೊಯ್ದಾಟ, ಅನಿಸಿಕೆಗಳ ಚಿತ್ರಣಗಳಿಗೆ ತಮ್ಮ ಕತೆಗಳಲ್ಲಿ ಮಹತ್ವಪೂರ್ಣ ಸ್ಥಾನ ವಿತ್ತರು. ಇಂದಿಗೂ ಅವರದೇ ಆದ ಸಜೀವ-ತೆಯ ಲಕ್ಷಣ ಉಳಿದುಕೊಂಡಿದೆ.

ಸದಾನಂದ ರೇಗೆ, ಅಂ. ಶಂ ಅಗ್ನಿಹೋತ್ರಿ ಶಾಂತಾರಾಮ ಶಶಿಕಾಂತ ಪುನರ್ವಸುರವರ ಕಥಾ ರಚನೆಯಿಂದ ಮರಾಠಿ ಕಥಾ ಸಾಹಿತ್ಯ ಗಾತ್ರದಲ್ಲಿ ಹಿಗ್ಗಿತು.

ನವಕತೆ ಳಲ್ಲಿ ಹಳ್ಳಿಯ ಜೀವನದ ಯಾವುದೇ ಭಾವ ಪ್ರಸಂಗ ಮತ್ತು ವ್ಯಕ್ತಿ ಚಿತ್ರಗಳನ್ನು ಸಮರ್ಥವಾಗಿ ಚಿತ್ರಿಸಲಾಗಿದೆ. ವೆಂಕಟೇಶ ಮಾಡಗೂಳಕರರವರು 'ಮಾಣದೇಶಿ ಮಾಣಸೇ' (ಮಾಣದೇಶದ ಮನುಷ್ಯರು) ರನ್ನು ಚಿರಂಜೀವಗೊಳಿಸಲೆಂದೇ ಹಳ್ಳಿಯ ಕತೆಗಳನ್ನು ರಸವತ್ತಾಗಿ ಬರೆದರು. ಬಹುಜನ ಸಮಾಜದಿಂದ ಉಪೇಕ್ಷಿತರಾದ ರಾಮೋಶಿ, ಮಹಾರ, ಭಾಂಗ ಮುಂತಾದ ಜನಾಂಗಗಳ ಕುದಿತವನ್ನು ತಮ್ಮದೇ ಆದ 'ನಿವೇದನ ಶೈಲಿ' ಯಿಂದ ರಸಿಕ ವಾಚಕರಿಗೆ ಪ್ರಿಯವಾಗಿಸಿದವರು ಶ್ರೀ ಮ. ಮಾಟೆಯವರು ಮಾಡಗೂಳಕರರವರು ನಿರ್ಹೇತುಕವಾದ ಗ್ರಾಮೀಣ ಆಡುಭಾಷೆಯಲ್ಲಿಯೇ ಸಹಜಭಾವ ಚಿತ್ರಗಳನ್ನು ಕೆತ್ತಿ ಹೊಸತನವನ್ನು ತಂದುಕೊಟ್ಟರು. ಶಂಕರ ಪಾಟೀಲರು ಹಳ್ಳಿಯ ಜನ ಮತ್ತು ಅವರ ಭಾನಗಡಿಗಳ ಸ್ವಾಭಾವಿಕ ಮತ್ತು ಉತ್ಕಟಶಬ್ದ ಚಿತ್ರಗಳನ್ನು ರಚಿಸಿಸಿದರು. ದ. ಮಾ. ಮಿರಾಸದಾರರವರು ಗ್ರಾಮ್ಯ ಜೀವನದಲ್ಲಿ ಹಾಸುಹೊಕ್ಕಾದ ವಿನೋದವನ್ನು ತಮ್ಮ ಕತೆಗಳಲ್ಲಿ ಅಮರಗೊಳಿಸಿದರು. ಗ. ದಿ ಮಾಡಗೂಳಕರರವರು ಈ ಕ್ಷೇತ್ರದಲ್ಲಿ ಹೆಸರಾದವರು. ಇಂದು ಮರಾಠಿ ಗ್ರಾಮೀಣಕತೆಗಳು ಸರ್ವಾಂಗೀಯವಾಗಿ ಬೆಳೆದಿವೆಯೆಂದೆನಿಸುತ್ತಿದೆ.

**ಈ ನವ್ಯಯುಗದಲ್ಲಿಯೂ ಮಹದೇವಶಾಸ್ತ್ರಿ** ಜೋಶಿಯವರು, ಹಳೆಯಕಾಲದ ಕೌಟುಂಬಿಕ ಜೀವನ ಮೌಲ್ಯ ಮತ್ತು ಆದರ್ಶಗಳನ್ನು ಪ್ರಸ್ಥಾಪಿಸಲು ರಸವತ್ತಾದ ಕತೆಗಳನ್ನು ಬರೆಯುತ್ತಿರುವರು. ಕೊಂಕಣದ ಜನಜೀವನ ಇವರ ಕತೆಗಳಿಗೆ ಹಿನ್ನೆಲೆಯಾಗಿದೆ. ಇವರ ಕತೆಗಳನ್ನೂ ವಾಚಕರು ಮೆಚ್ಚಿಕೊಂಡಿರುವರು. ನಾ. ಗ. ಗೋರೆಯವರಂತಹ ರಾಜಕೀಯ ವ್ಯಕ್ತಿ. ಅತಿಶಯ ಆಶಾಪೂರಿತ ಕತೆಗಳನ್ನು ನವಪ್ರತಿಮೆಗಳ ಸಹಾಯದಿಂದ ಯಶಸ್ವಿಯಾಗಿ ರಚಿಸುತ್ತಿರುವರು. ವಸುಂಧರಾಬಾಯಿ ಪಟವರ್ಧನರವರ ಕಥಾವಿಶ್ವವು ಭಾವಪೂರ್ಣ ಮತ್ತು ರಂಜಕವಾಗಿದೆ.

## ರೂಪಕಥ್ಥಕ

'ರೂಪ ಕಥ್ಥಕ'ವೆಂಬ ಉಪನಾಮದಿಂದ ಬರೆವ ಪು. ಶಿ. ರೇಗೆಯವರ ಕತೆಗಳು ಅಂತರಂಗದ ಭಾವ ಗೀತಗಳಂತಿವೆ. ಕವನಗಳಂತೆ ಅವರ ಕತೆಗಳು ಚಿಕ್ಕವು. ವಿಚಾರಸಂಪನ್ನವಾದುವು

ಕ್ರಿ. ಶ. ೧೯೪೫—೫೦ ರನಂತರ ಮರಾಠಿ ಕತೆ 'ನವಕತೆ' ಎಂದು ಕರೆಯಲ್ಪಟ್ಟಿತು. ಇದರ ಕ್ಷೇತ್ರ ಅತಿವ್ಯಾಪಕ. ಮುಚ್ಚುಮರೆಯಿಲ್ಲದ, ಅರ್ಥಪೂರ್ಣವಾದ ಚಿತ್ರಣಗಳು, ಬದಲಾಗುತ್ತಿರುವ ಸಮಾಜ ಮತ್ತು ಮಾನವನ ಮನೋವಿಶ್ಲೇಷಣೆ ಮಾಡುವ ಕಠಿಣ ಕರ್ಮ ಸಣ್ಣಕತೆಗಳ ಪಾಲಿಗೇ ಬಂದಂತಾಗಿದೆ

ಮನೋವಗಾಹನೆಯ ಸಾಮರ್ಥ್ಯ ಹೆಚ್ಚಿತು ಒಂದೇ ಬಗೆಯ ಅನುಭವಗಳ ನಿವೇದನೆ ಕಂಡರೂ ಅದರ ವಿವಿಧ ಮುಖಗಳ, ಸಂಮಿಶ್ರ ಅನುಭವಗಳ ದರ್ಶನ ಯೋಗ್ಯ ರೀತಿಯಲ್ಲಿ ನಡೆದುಬಂದಿದೆ 'ಮನುಷ್ಯ ಮೊದಲಿದ್ದಂತೆಯೇ ಉಳಿದಿರುತ್ತಾನೆ?' ಎಂದು ಶೋಧವಾಗಲೇಬೇಕು. ಮನುಷ್ಯನ ಮನಸ್ಸು ಇದ್ದ ಸ್ವರೂಪದಲ್ಲಿಯೇ ನಿರ್ಭಯತೆ**ಯಿಂದ ಪ್ರದರ್ಶಿಸುವ ಸ್ಪರ್ಧೆಯನ್ನು ನವಕತೆ ಗಾರರು ಮನದಂದರು. ಅವರ ಬದುಕಿನ ಕ್ಷೇತ್ರ ವಿಸ್ತಾರವಾಯಿತು. ಬಾಳಿನ ಸತ್ವ, ನಗರ ಜೀವನ** ದಲ್ಲಿ ರಲಿ ಹಳ್ಳಿಯ ಜೀವನದಲ್ಲಿರಲಿ ಪ್ರಾದೇಶಿಕ ಜೀವನದಲ್ಲಿರಲಿ ಅಥವಾ ಯಾವುದೇ ಅನನ್ಯ ಸಾಧಾರಣ ವ್ಯಕ್ತಿ, ಘಟನೆ ಅಥವಾ ಮನೋವೃತ್ತಿಗಳಿಗೆ ಆದೇ ವಿಷಯವಾಗಿರುತ್ತದೆ ಅನುಭೂತಿಯು ಯಾವುದೇ ಆಗಿರಲಿ: ಕಲಾತ್ಮಕ ಮಟ್ಟದಲ್ಲಿ ಅರ್ಥಪೂರ್ಣವಾಗಿ ಸಂಘಟಿಸುವ ಕಾಲ ಒದಗಿತು ಈ ಕಲಾತ್ಮಕ ಅನುಭೂತಿಯ ದರ್ಶನಕ್ಕೆ ನಮ್ಮ ಆ ವಿಷ್ಕಾರ ನಮ್ಮ ಆಕಾರ ನಮ್ಮ ಶಬ ಕಲೆ ಮೊದಲಾದ ನಮ್ಮ ನಮ್ಮದೇ ಆದ ಶೋಧ ನಡೆಯಬೇಕಾಗುವುದು.

## ಇಂದು

ಮರಾಠಿ ಕತೆಯ ಇಂದಿನ ಸ್ವರೂಪ ನಮ್ಮದೇ ಆಗಿದೆ. ಶ್ರೀ ಜ. ಜೋಶಿ, ಜ್ಞಾನೇಶ್ವರ ನಾಡಕರ್ಣಿ ಅಚ್ಯುತ ಬರ್ವೆ ಮಂಗೇಶ ಪದಕಿ, ಎ. ವಿ. ಜೋಶಿ, ತಾರಾವನಾರಸೆ, ಸರಿತಾ ಪದಕಿ, ವಿಜಯಾ ರಾಜಾಧ್ಯಕ್ಷ ಮೊದಲಾದವರ ಕತೆಗಳು ಗಮನಾರ್ಹವಾಗಿವೆ. ಆದರೆ ಇಂದಿನ ನವಕತೆಗಳಲ್ಲಿ ಸತ್ವ ಮತ್ತು ಸೌಂದರ್ಯ ಸಂಪನ್ನತೆಗಳನ್ನು ಕಾಣಬೇಕೆಂದರೆ ಜಿ ಎ ಕುಲಕರ್ಣಿ, ವಿದ್ಯಾಧರ ಪುಂಡಲೀಕ, ಕಮಲ ದೇಸಾಯಿ, ಆನಂದ ಮಾಧವ, ಶರಶ್ಚಂದ್ರ ಚಿಮುಲೆ ಇವರ ಕತೆಗಳನ್ನು ನೋಡಬೇಕು ಇವರೆಲ್ಲರ ಪ್ರತಿಭೆ ಬಹುಮುಖವಾದುದೇದಲ್ಲ; ಆದರೆ ಸಜೀವತೆಯು ಅತಿಶಯ ಸತ್ವಯುತವಾದದು; ಗುಣಸಂಪನ್ನವಾದುದು. ಜೀವನ ಚಿತ್ರಣದಲ್ಲಿ ಯಾವ ಯಾವ ಕಲಾದೃಷ್ಟಿಯು ಆವಶ್ಯಕ ಮತ್ತು ಅಪರಿಹಾರ್ಯವಾದುದೋ ಅದನ್ನೆಲ್ಲ ಇವರು ಸ್ವೀಕರಿಸಿರುವರು ಕಥಾನಕ ವ್ಯಕ್ತಿ ಚಿತ್ರಣ, ಆತ್ಮಗತ ಕಾವ್ಯಾತ್ಮ ಚಿಂತನ ಸಂವಾದ

ನಿವೇದನೆ, ಮನೋಅವಗಾಹನ ಇವುಗಳಲ್ಲಿ ಯಾವುದನ್ನೂ ತ್ಯಾಜ್ಯವೆಂದೆನ್ನಲಿಲ್ಲ. ಅಂತೆಯೇ ಇವರ ಕತೆಗಳಲ್ಲಿ ಅನೇಕ ಪರಿಮಾಣಗಳು ( Dimensions ) ಕಂಡುಬರುತ್ತಿವೆ ಇದರಿಂದ ಮೂಲ ಅನುಭವಕ್ಕೆ ಘನತೆ ಉಂಟಾಗಿದೆ. ಕಲೆ ಮತ್ತು ಜೀವನಗಳ ಸಂಬಂಧದ ವಿಷಯವಾಗಿ ಲೇಖಕನ ತಿಳುವಳಿಕೆ ವ್ಯಾಪಕ ಮತ್ತು ವಿಶುದ್ಧವಾಗಿರುತ್ತದೆ.

ಒಂದು ದಿಶೆಯಲ್ಲಿ ಮರಾಠಿ ಸಣ್ಣಕತೆಯು ಹೀಗೆ ನಾಗರಿಕ ಜೀವನದಿಂದ ವಿಕಾಸಗೊಂಡಿತು. 'ದಲಿತ' ವರ್ಗದ ಜೀವನ. ಆಶೆ—ಆಕಾಂಕ್ಷೆಗಳ ಚಿತ್ರಣದಿಂದ ಇನ್ನೊಂದು ದಿಶೆಯಲ್ಲಿ ಅತಿ ವೇಗವಾಗಿ ಆದರೆ ಅವಿರೋಧವಾಗಿ ಬೆಳೆಯುತ್ತಿದೆ. ಶಂಕರರಾವ್ ಖರಾತ, ರಾ. ರೇ ಬೋರಾಡೆಯವರ ಕತೆಗಳಲ್ಲಿ ಪಾರಧೀ, ಮಾಂಗ. ಗಾರುಡಿ— ಇಂತಹ ಲೋಕಬಾಹ್ಯ ಜೀವನಸತ್ವವುಳ್ಳ ಜನಾಂಗದ ಪ್ರಭಾವೀ ಚಿತ್ರಣಗಳನ್ನು ಚಿತ್ರಿಸತೊಡಗಿರುವರು. ಮರಾಠಿ ಕತೆಯು ಈಗ ಮರಾಠಿ ಪ್ರದೇಶದ ಆದಿಮಾನವನ ಅಂತರಂಗದ ಸ್ಥಾನಪಡೆದಿದೆ. ಬಾಳೂರಾವ ಬಾಗೂಲರವರು ಪ್ರಚಂಡ ಶಹರಗಳಲ್ಲಿಯ ಕೊಳಚೆ ಪ್ರದೇಶದಲ್ಲಿ ಕೂಲಿಕಾರ ವಸತಿಗಳಲ್ಲಿರುವ ದಲಿತರ ದಿಗಂತ ದುಃಖಗಳನ್ನು ತಮ್ಮ ಕಥಾವಸ್ತುವನ್ನಾಗಿ ಆಯ್ದುಕೊಂಡರು. ಅತಿಶಯದಾದ ತಳಮಳವೇ ಈ ಎಲ್ಲ ಲೇಖಕರ ಲೆಕ್ಕಣಿಕೆಯ ಶಕ್ತಿಯಾಗಿದೆ. ಇವರ ಕತೆಗಳಲ್ಲಿ, ಲೇಖನಗಳಲ್ಲಿ ವಿದ್ರೋಹದ ಹೊಸ ಬಂಡಾಯದ ಭಾಷೆ ಧ್ವನಿತವಾಗುತ್ತದೆ. ನಿಗ್ರೋ ವಾಙ್ಮಯದ ಆದರ್ಶ ಅವರ ಕಣ್ಣೆದುರಿಗಿದೆ. ಈ ಕಥಾ ಲೇಖಕರ ಜೊತೆಗೆ ಬಾಲೂ ಪಾಧ್ಯೆಯವರು ನಗರಗಳಲ್ಲಿಯ ಬೇರೆ ಬೇರೆ ತರಹದ ಜನರ ವಸತಿಗಳಲ್ಲಿ ಕೂಟುಕೂಟುಗಳಲ್ಲಿ ಕಾಣುವ ದಿಕ್ಕುಗೆಟ್ಟ, ಗೊಡ್ಡಾದ ಆದರೆ ವಿಚಿತ್ರತರ ಹೊಲಸು ಜೀವನವನ್ನು ತಮ್ಮ ಕತೆಗಳಲ್ಲಿ ಎತ್ತಿತೋರಿಸಿರುವರು. ಮರಾಠಿ ಕತೆಯು ಈಗ ಸರ್ವ ವ್ಯಾಪ್ತವಾಗಿರುತ್ತದೆ. ಅದನ್ನು ಚೈತನ್ಯಯುಕ್ತ ಉದ್ದಾಮ ಸಾಹಿತ್ಯವನಾಗಿ ಮಾಡಬೇಕೆಂಬ ಆಹ್ವಾನವನ್ನು ಸ್ವೀಕರಿಸುವ ಶಕ್ತಿ ಕೆಲಮಟ್ಟಿಗೆ ಬಂದಿದೆ.

'Permanent' ಎಂಬುದಕೆ
ಕನ್ನಡದಲೇನೆನಲು
ಕನ್ನಡದ ಕಿಲಾಡಿ ಹೀಗೆಂದ ಬಂದ.
'ಪರಮನೆಂಟ' ಎಂದು ಧಾರವಾಡದ
ಮಂದಿ
ಇದನುಚ್ಚರಿಸುವದು ಕನ್ನಡವೆಂದ !

— ಗುಂಡ್ಮಿ ಚಂದ್ರಶೇಖರ ಐತಾಳ

## ಸಮಾರೋಪ

ಮರಾಠಿ 'ಗೋಷ್ಟ'ವೆಂಬುದು ಯಾದವ ಕಾಲದ ಹೇಳಿಕೆ, ಎಂಟುನೂರು ವರುಷಗಳ ಹಿಂದಿನ ಮಾತು. 'ಮರಾಠಿ ಲಘು ಕಥಾ' ಮಾತ್ರ ಕಳೆದ ಒಂದು ಶತಮಾನಾವಧಿಯಲ್ಲಿ ಹುಟ್ಟಿಕೊಂಡಿದೆ. ಕಹಾಣೀ–ಲೋಕಕಥಾ– ದೃಷ್ಟಾಂತ ಕಥಾಗಳಿಂದ... ಆ 'ಗೋಷ್ಟ'ವು ಕಥಾ– ಲಘುಕಥಾ– ರೂಪಕಥಾ– ವ್ಯಕ್ತಿ ಚಿತ್ರ– ಮನಶ್ಚಿತ್ರ–ವಾಗಿ, ಆದೇ 'ನವಕಥಾ' ಹೇಗಾಯಿತು; ಮತ್ತು ಇಂದಿನ ಬಂಡಖೋರ ಸಾಮರ್ಥ್ಯ ಪಡೆಯುವಷ್ಟು ಪ್ರಬಲ ಹೇಗಾಯಿತು, ಎಂಬುದರ ಶೀಘ್ರ ಓಟದ ನೋಟ ಇಲ್ಲಿದೆ ! ಕಥಾಸಾಹಿತ್ಯಕ್ಕೆ ಎಂದಿಗೂ ಸಾವಿಲ್ಲ. ಆದಕ್ಕೆ, ವಾಚಕ ವರ್ಗ ಎಲ್ಲ ಕಾಲದಲ್ಲಿ. ಎಲ್ಲ ಮಟ್ಟಗಳಲ್ಲಿ ಸಿಕ್ಕೇ ಸಿಗುತ್ತದೆ ಸುದೈವದಿಂದ ಮರಾಠೀ ಕಥಾ ಲೇಖಕರು ಈ ವಾಚಕ ವರ್ಗದ ಅಪೇಕ್ಷಾಭಂಗವನ್ನು ಹೆಚ್ಚಾಗಿ ಎಂದೂ ಮಾಡಿಲ್ಲ. ಪ್ರತಿಯೊಂದು ತಲೆಮಾರಿನ ಪೀಳಿಗೆಯಲ್ಲಿ ಯಾರಾದರೊಬ್ಬ ಸಮರ್ಥ ಕಥಾಲೇಖಕರು ಮರಾಠಿಗೆ ದೊರೆಯುತ್ತಲೇ ಹೋಗಿದ್ದಾರೆ. ಇಂದು ಅನೇಕ ಕಥಾಸ್ಪರ್ಧೆಗಳನ್ನು ವಿವಿಧ ಹಂತಗಳಲ್ಲಿ ಏರ್ಪಡಿಸುತ್ತಿದ್ದಾರೆ; ಮತ್ತು ಇಂತಹ ಸ್ಪರ್ಧೆಗಳಲ್ಲಿ ಎಷ್ಟೋ ಕಥಾಲೇಖಕರು ಉತ್ಸಾಹದಿಂದ ಭಾಗವಹಿಸುತ್ತಿದ್ದಾರೆ. ಇವರ ಮಧ್ಯದೇ ಹೊಸ ಪೀಳಿಗೆಯೊಂದು ಉದಯವಾಗಲಿರುವ ಭಾಗ್ಯಚಿಹ್ನ ತೋರುತ್ತಿದೆ.

●●

# ಕನ್ನಡ ಸಣ್ಣ ಕತೆ

**( ದಿವಂಗತ ಮಿತ್ರ ಬಿ. ವ್ಹಿ. ಶರ್ಮಾ ಅವರ ಪವಿತ್ರ ಸ್ಮೃತಿಗೆ ಸಮರ್ಪಿತ )**

**--ಶಂಕರ ಮೊಕಾಶಿ ಪುಣೇಕರ**

ಸಣ್ಣಕತೆಗೆ ಕನ್ನಡದಲ್ಲಿ ಇಪ್ಪತ್ತು ವರುಷಗಳ ಹಿಂದೆ ಇದ್ದ ಸ್ಥಾನ ಈಗ ಇಲ್ಲ. ವೃತ್ತಪತ್ರ—ದೀಪಾವಳಿ ಸಂಚಿಕೆಗಳು ಹೆಚ್ಚಾದಂತೆ ಸಣ್ಣಕತೆಗೆ ಹಣಕಾಸಿನ ಸಂದರ್ಭದಲ್ಲಿ ಬೆಲೆ ಹೆಚ್ಚಾಗಿರಬಹುದು; ಆದರೆ ಇಪ್ಪತ್ತು ವರುಷಗಳ ಕೆಳಗೆ ಯಾವ ಆದರ-ಉತ್ಸುಕತೆಗಳಿಂದ ಓದುಗರು ಸಣ್ಣಕತೆಯ ಉದಯವನ್ನು ನೋಡುತ್ತಿದ್ದರೋ ಆ ಸಡಗರ ಈಗ ಇಲ್ಲದಾಗಿದೆ. ಕಾದಂಬರಿ ಚಿಕ್ಕದಾಗಿ ಸಣ್ಣಕತೆಯ ಪ್ರಾಕಾರವನ್ನು ಆಕ್ರಮಿಸಿದಂತೆ ತೋರುತ್ತದೆ. ಇದಕ್ಕೆ ಕಾರಣ ಇಲ್ಲದಿಲ್ಲ. ಮುಖ್ಯ ಕಾರಣ ಇತ್ತೀಚಿನ ಕತೆಗಾರರಲ್ಲಿ ತೋರುವ ಸ್ವೋಪಜ್ಞ ( Self-conscious ) ಕಲೆಗಾರಿಕೆ ಹಿಂದಿನ ಪೀಳಿಗೆಯ ಕತೆಗಾರರಲ್ಲಿಯೂ ಕಲೆಗಾರಿಕೆ ಸಾಕಷ್ಟು ಇತ್ತು. ಆದರೆ ಅವರ ಕತೆಗಳ ಸೊಗಸನ್ನು ಸಾರಿ ಹೇಳಲು ಸ್ಪೆಶಾಲಿಸ್ಟರ ಅವಶ್ಯಕತೆ ಇರಲಿಲ್ಲ. ಶ್ರೀನಿವಾಸರ ಕತೆಗಳಲ್ಲಿ ಬೇಕಾದವರಿಗೆ ಸೈಕಾಲಾಜಿ ಬೇಕಾದಷ್ಟು ಉಂಟು. ಜಡವಾದವರಿಗೆ ಕನಿಷ್ಟ ಪಕ್ಷಕ್ಕೆ ಚೆಂದವಾದ ಕತೆ, ನಿರರ್ಗಳ ಭಾಷೆ, ಸುಖವಾದ ಸಂಭಾಷಣೆ, ಕೈಚಾಚಿದರೆ ಎಟುಕುವ ಪಾತ್ರಗಳು, ಜೀವನದುದ್ದಕ್ಕೂ ಮರೆಯಲಾಗದ ಸನ್ನಿವೇಶಗಳು ದೊರಕುತ್ತವೆ. ಆದರೆ ಇತ್ತೀಚಿನ ತರುಣ ಸ್ಪೆಶಾಲಿಸ್ಟ್ ಕತೆಗಾರರ ಸೌಂದರ್ಯ-ಸ್ವಾರಸ್ಯಗಳನ್ನು ವಿವರಿಸಿ ಹೇಳಲಿಕ್ಕೆ ಸ್ಪೆಶಾಲಿಸ್ಟ್ ವಿಮರ್ಶಕರೇ ಕೊಂಟುದಾಸರಾಗಿ ನಿಲ್ಲಬೇಕಾಗುವದು. "ಸ್ವಾಮಿ, ಈ ಕತೆಯಲ್ಲಿ ಕಥಾಭಾಗವೇ ಇಲ್ಲವಾದರೂ ಪ್ರಜ್ಞಾಪ್ರವಾಹವು ಇದೆ ಹೇಗೆ ಅನ್ನುತ್ತೀರೋ? — ಇದರಲ್ಲಿ ಪೂರ್ಣವಿರಾಮಗಳೇ ಇಲ್ಲ. ಪ್ರಜ್ಞೆ ಯಾವಾಗಲೂ ಹರಿಯುತ್ತಲೇ ಇರುತ್ತದೆಯೆಂದು ಸೂಚ್ಯವಾಗಿ ಚುಚ್ಚಿದ್ದಾರೆ" "ಸ್ವಾಮಿ, ಮೂತ್ರವಿಸರ್ಜನೆಗೂ ಲೈಂಗಿಕ ಅರ್ಥವಿದೆಯೆಂದು ಫ್ರಾಯಿಡ್ ಹೇಳಿದ್ದಾನೆ. ಅಂತೆಯೇ ಬೆಂಗಳೂರಿನಲ್ಲಾದ ಮೂತ್ರಬಾಧೆಯನ್ನು ಬೆಳಗೋಳದವರೆಗೆ ಹತ್ತಿಕ್ಕಿ ಕೊನೆಗೆ ವಿಸರ್ಜನೆ ಮಾಡಿದ್ದು ಜೀವನದ ಒಂದು ಘಟ್ಟದ ಸಾಂಕೇತಿಕ ಚಿತ್ರಣವೆಂದು ನಾನು ಗ್ರಹಿಸಿದ್ದೇನೆ. ನಿಮಗೆ ಬೇಕಾದ ಅರ್ಥ ನೀವು ಕಂಡುಕೊಳ್ಳಿರಿ. ಕತೆಗೆ ಬೇಕಾಗುವ ಆದಿ- ಮಧ್ಯ- ಅಂತ್ಯ-ಗಳ ಕ್ರಮ ಇದರಲ್ಲಿ ಉಂಟೆಂಬುದಕ್ಕೆ ನಿಮಗೂ ಸಂದೇಹವಿಲ್ಲ, ನನಗೂ ಸಂದೇಹವಿಲ್ಲ ತಾನೆ!" "ಸ್ವಾಮಿ, ಅಪರಿಚಿತರು ನಿಜವಾಗಿ ಬಂದ ಅತಿಥಿಗಳಾದರೂ ಕೂಡ, ಅವರ ನಾಯಕನ ಹೃದಯದ ಆಳವಾದ ಗಂವ್ಹರದಲ್ಲಿ ಅಡಗಿದ ಎಂಕ್ಸೈಟಿ ನ್ಯೂರೋಸಿಸ್ ಎಂಬ ಭೀತಿಭೂತದ ಪ್ರತ್ಯಕ್ಷೀಭೂತ ಪ್ರತೀಕಗಳಾಗಿ ಅವನನ್ನು ಕಾಡಿ ಕೊನೆಗೆ, (ಅ) ಅವರು ತಮ್ಮ ಊರಿಗೆ ಹೋಗುತ್ತಾರೆ. ( ಬ ) ಅವುಗಳು ಅನ್‌ಕಾನ್ಶಸ್‌ದಲ್ಲಿ ಮುಳುಗುತ್ತವೆ. ನಾಯಕನಿಗೆ ಆರೋಗ್ಯದ ಆರೋಗಣೆ ಮರಳಿ ಬರುತ್ತದೆ. ಇಂತು ಕತೆ ಎರಡು ಲೆವಲ್‌ಗಳಲ್ಲಿ ತನ್ನ ಕೆಲಸ ಸಾಧಿಸುತ್ತದೆ" "ಹೃದಯದಲ್ಲಿ ಕರುಣೆ ಬರುವದಕ್ಕೂ, ಹೊಟ್ಟೆಯಲ್ಲಿ ಕೂಸು ಬರುವದಕ್ಕೂ, ನಲ್ಲಿಯಲ್ಲಿ ನೀರು ಬರುವದಕ್ಕೂ ಪರಸ್ಪರ ಸಾಂಕೇತಿಕ ಸಂಬಂಧ...! ಸ್ವಾಮಿ! ಏಕೆ, ನಿಮಗೆ ಹೊಳೆದಿರಲಿಲ್ಲವೆ ?" "ಕತೆ ಏನೋ ಒಂದು ಪ್ರವಾಹಸ್ಥನದಂತೆ ಇದೆ. ಹಡಗು ಒಂದು ಜೀವನ ಘಟ್ಟ. ಒಂದು ಕುಟುಂಬ, ಶಾಲೆಯಲ್ಲಿಯ ಒಂದು ಕ್ಲಾಸು, ಒಂದು ಆಫೀಸು,... ಯಾವ ಸಂಕೇತವೂ ಆದೀತು. ಹಲವು ನಿಯಮಿತ ಸಂಖ್ಯೆಯ ವ್ಯಕ್ತಿಗಳ ಪರಸ್ಪರ ಸಂಬಂಧ ಅನಿವಾರ್ಯ ಹಾಗು ಸಂಕುಚಿತವಾದಂತೆಲ್ಲ ಅವರವರ ಪ್ರೇಮ-ದ್ವೇಷಗಳೂ ಸಂಕುಚಿತ ಗರ್ತವಾಗಿ ನಿಂತಲ್ಲಿಯೇ ಸುತ್ತತೊಡಗುವವು. ಜೀವನ ಇನ್ನೊಂದು ಘಟ್ಟ ಮುಟ್ಟಿದೊಡನೆ ಗರ್ತ ಅಳಿದು ಹೊಸ ಪ್ರವಾಹವಾಗಿ ಹೊಸ ಕ್ಷಿತಿಜವನ್ನು ನಿರ್ಮಿಸಿಕೊಳ್ಳುವದು. ಲೇಖಕರು ಈ ವಿಚಾರವನ್ನು ಹಡಗಿನ ಸಂಕೇತದಿಂದ ಹಿಡಿದಿಟ್ಟಿರುವದೇ ಅವರ ಕಲೆ!" "ಸ್ವಾಮಿ, ಪಾಶ್ಚಾತ್ಯರು ಎಲ್ಲ ವಿಷಯಗಳಲ್ಲೂ ಡೆಮೊಕ್ರ್ಯಾಟಿಕ್ ಇರುವರು. ಸಮರತಿಯೂ ಕೂಡ ಇಂಗ್ಲಂಡಿನಲ್ಲಿ ಕನ್ಸೆಂಟಿಂಗ್ ಎಡಲ್ಟರಲ್ಲಿ ಮಾತ್ರ ಆಗುತ್ತದೆ. ಭಾರತೀಯರಲ್ಲಿ ಮಾತ್ರ ಆಥಾರಿಟೇರಿಯಾನಿಸಂ ಎಂಬುದು ಇದರಲ್ಲಿಯೂ ಇದೆ. ಆದಕ್ಕಂದೇ ತರುಣ ಜನಾಂಗ ರಿವ್ಹೋಲ್ಟ್ ಹೂಡಿದೆ..." ಇತ್ಯಾದಿ ಜ್ಞಾನವು ಕಲೆಯಾಗಿ ಕನ್ನಡ ಕತೆಯಲ್ಲಿ ಇತ್ತೀಚೆಗೆ ಬರುತ್ತಿದೆ. ಜ್ಞಾನದ ವಿಶದೀಕರಣದ ಕೆಲಸವನ್ನೂ ಕತೆಗಾರ—ವಿಮರ್ಶಕ ಇಬ್ಬರೂ ಕೂಡಿ ಬೆಲೆ ಮಾಡಬೇಕಾಗುತ್ತದೆ. ತತ್ಪರಿಣಾಮವಾಗಿ ಇಷ್ಟೊಂದು ಕತೆಗಳು ಬರುತ್ತಿದ್ದರೂ ಸಾಮಾನ್ಯ ಓದುಗನಿಗೆ ಅವುಗಳ ಅರ್ಥ ಅರಿಯುವ ಪ್ರಯತ್ನದಲ್ಲಿ ರಂಜನೆ ಪಡೆಯುವ ಕೌತುಕವೇ ಇಲ್ಲವಾಗುತ್ತದೆ. ಕನ್ನಡದಲ್ಲಿ ಜ್ಞಾನ ಸಾಹಿತ್ಯದ ಕೊರತೆ ಉಂಟೆಂದು ಅನೇಕರು ಹೇಳುತ್ತಾರೆ. ಕತೆಗಳ ಮುಖಾಂತರ ಹಾಗೂ ಅವುಗಳ ಮೇಲಿನ ವಿಮರ್ಶೆಯ ಮುಖಾಂತರ ಅರ್ಥವತ್ತಾದ ಜ್ಞಾನ ಇತ್ತೀಚೆಗೆ ಕನ್ನಡ ಓದುಗರಿಗೆ ಸಿಕ್ಕುತ್ತಿದೆಯೆಂದು ಸಂತಸ ಪಡಬಹುದಾಗಿದೆ. ವಿಶೇಷತಃ, ನಮ್ಮಲ್ಲಿಲ್ಲದ ಮನೋರೋಗಗಳ ನಿಕಟ ಪರಿಚಯ ಮಾಡಿಕೊಡುವ ಕೆಲಸವನ್ನು ನವ ಕತೆಗಾರರು ಉಚಿತವಾಗಿ ಮಾಡುತ್ತಿದ್ದಾರೆ.

ಸರ್ವಸಾಮಾನ್ಯ ಭಾರತೀಯ ಭಾಷೆಯೊಂದರಲ್ಲಿ ಈ ಪರಿಸ್ಥಿತಿ ಒದಗಿದರೂ ಅದು ಖೇದಕರವೇ ಸರಿ. ಆದರೆ ಕನ್ನಡದಲ್ಲಿ ಇನ್ನೂ ಖೇದಕರ. ಏಕೆಂದರೆ ಕನ್ನಡ ಸಣ್ಣಕತೆಗೆ ಹಿರಿ ವ್ಯಕ್ತಿತ್ವವುಂಟು; ಹಿರಿ ಸಾಂಪ್ರದಾಯವುಂಟು; ಹಿರಿ ಸಾಧನೆಗಳ ಇತಿಹಾಸವುಂಟು. ಆಧುನಿಕ ಅರ್ಥದಲ್ಲಿ 'ಸಣ್ಣಕತೆ'ಯೆಂಬ ಸಾಹಿತ್ಯಿಕ ರೂಪದ ಜನಕ ಮಾಸ್ತಿ ವೆಂಕಟೇಶ ಅಯ್ಯಂಗಾರ ಎಂಬುದರಲ್ಲಿ ಸಂದೇಹವೇ ಇಲ್ಲ. ಸಣ್ಣಕತೆಯ ವೈವಿಧ್ಯದ, ನೈಜತೆಯ, ಅಪರಿಮಿತಿಯ ವಿರಾಟ್ ಸ್ವರೂಪ ಶ್ರೀನಿವಾಸರ ಕತೆಗಳಲ್ಲಿ ೧೯೨೦ ರಿಂದಲೂ ಕಂಡುಬರುತ್ತದೆ. ಶ್ರೀನಿವಾಸರ ಕತೆಗಳಲ್ಲಿ ಮಂತ್ರಿನ ಹುಳು ಹುಟ್ಟಿಸಿದುದೆಲ್ಲ ಮುತ್ತೇ. ಅವರ ಪ್ರಪ್ರಥಮ ಕತೆಯಿಂದ ಕೊನೆಯ ಕತೆಯ ವರೆಗೆ ಓದಿದರೂ ವಿಧವಿಧವಾದ ಪರಿಪೂರ್ಣತೆಗಳ ಮೆರವಣಿಗೆಯನ್ನೇ ನೋಡುತ್ತೇವೆ. ನವ ವಿಮರ್ಶಕರು ಮಾಸ್ತಿಯವರ ಮೇಲೆ ಅಭ್ಯಾಸಗಳನ್ನು ರಚಿಸಿದ್ದು ಕಡಿಮೆ. ಏಕೆಂದರೆ ಅವರಿಗೆ ಸುಲಭವಾದ ಫಾರ್ಮ್ಯುಲಾಗಳು ಶ್ರೀನಿವಾಸರಲ್ಲಿ ಸಿಕ್ಕವು. ಫಾರ್ಮ್ಯುಲಾಗಳನ್ನು ಮೀರಿಸುವ ಕಲೆ ಶ್ರೀನಿವಾಸರದು. ಇಂಥವರ ಹಿತ್ಯವ್ಯದಿಂದಲೇ ಒಂದು ಕಥನಕಲೆಯ, ಒಂದು ಕಥಾವಿಮರ್ಶೆಯ ಸಂಪ್ರದಾಯ ಮೂಡಿಬರಬಹುದಾಗಿತ್ತು. ಆದರೆ ಅವರಿಂದ ಕಲಿತ ಸಮಕಾಲೀನರಲ್ಲಿ (ನವರತ್ನ ರನ್ನು ಬಿಟ್ಟರೆ) ಹೆಚ್ಚಿನ ಪ್ರತಿಭೆ ಇರಲಿಲ್ಲ. ಆನಂದರಲ್ಲಿಯ ಶಕ್ತಿ ಸಮಗಮನದ ಕುದುರೆಯಲ್ಲ. 'ನಾ ಕೊಂದ ಹುಡುಗಿ'ಯನ್ನು ಬರೆದವರೂ 'ಭವತಿ ಭಿಕ್ಷಾಂದೇಹಿ'ಯನ್ನು ಬರೆದವರೂ ಒಂದೇ ವ್ಯಕ್ತಿಯೆಂದು ನಂಬಲಾಗುವುದಿಲ್ಲ. 'ಶ್ರೀ ಸ್ವಾಮಿ', ಎಂ. ವಿ. ಸೀತಾರಾಮಯ್ಯನವರಲ್ಲಿ ಪ್ರತಿಭೆಗಿಂತ ನಿರೂಪಣೆ ಹೆಚ್ಚಿನದು. ಬೇಂದ್ರೆ ಬರೆದ ಕತೆಗಳಲ್ಲಿ, ವಿಶೇಷತಃ 'ಹರಿದ ಕತ್ತಿ' ಹಾಗೂ ಹ. ಪಿ. ಜೋಶಿಯವರು ಬರೆದ ಹಲವು ಕತೆಗಳಲ್ಲಿ ಚೇಂಗ್ಸೆಯವರ 'ಛಪ್ಪರಬಂದ'ದಲ್ಲಿ ಇನ್ನೊಂದು ಗುಣ ಕನ್ನಡಕ್ಕೆ ಬರಬಹುದಾಗಿತ್ತು. ಅದು ನಿಗೂಢವಾಸನೆಗಳ ಚಿತ್ರಣ. ಆದರೆ ಈ ಅಪರೂಪವಾದ ಗುಣ ಆಯಾ ಲೇಖಕರಲ್ಲಿಯೇ ನಿಂತುಹೋದದ್ದು ಕಂಡು ಬರುತ್ತದೆ. ಮುಗಳಿ, ಬೆಟಗೇರಿ, ಕೃಷ್ಣ ಕುಮಾರರಲ್ಲಿ ಸಾಮಾನ್ಯ ಜೀವನ ಚಿತ್ರಣದ ಕಲೆ ಚೆನ್ನಾಗಿ ಅರಳಿತ್ತು. ಕಡುಕೋಣಿ ಪುರಾಣಿಕ ( ಮೀಸಲು ಮೀಸೆ); ಇಂಥವರ ಹಾಸ್ಯಪ್ರಜ್ಞೆ ಅಲ್ಲಿಯೇ ಮುದುಡಿದುದು ಕನ್ನಡಕ್ಕೆ ಹಾನಿ. ಗೊರೂರರ ಹಾಸ್ಯದ ರೀತಿ ಬೇರೆ. ಕುವೆಂಪು — ಪು. ತಿ. ನ — ದೇವುಡು — ಶ್ರೀನಿವಾಸ ಹಾವನೂರರ ಚಿತಾರಿತನ ಒಂದೆರಡೇ ಸಂಗ್ರಹಕ್ಕೆ ನಿಂತುಹೋದವು. ರಾಜರತ್ನಂ ವಿ. ಜಿ. ಭಟ್ಟರದೂ ಇದೇ ಹಾಡು. ಇತ್ತೀಚಿಗೆ ಕೊರಟಿ ಉತ್ತಮ ನಿರೂಪಣೆಯಲ್ಲಿ ಬಳೆದ್ದಾರೆ.

ಇವರೆಲ್ಲ ಅಷ್ಟನನ್ನು ಅಲ್ಲಗಳೆಯದ ಕತೆಗಾರರು. ಇವರಲ್ಲಿ ಮಾಸ್ತಿ ರೀತಿಯ ಪ್ರಭಾವವೇ ಇದೆಯೆಂದು ಹೇಳಲಾಗದು. ಇವರೆಲ್ಲ ಮಾಸ್ತಿಯವರ ಶಿಷ್ಯರಲ್ಲದಿದ್ದರೂ ಅಭಿಮಾನಿಗಳು. ಆದರೆ ಇವರಲ್ಲಿ

ಕೊಡ ಮಾಸ್ತಿಯವರ ಕಲೆಯ ಐತಿಹಾಸಿಕ ಮಹತ್ವದ ಬಗ್ಗೆ ವಿಚಾರ ಮಾಡಿದವರು ಕಡಿಮೆ. ಇದೇ ಕಾರಣದಿಂದ ಪ್ರಗತಿಶೀಲರಿಂದ ಮಾಸ್ತಿ-ಪರಂಪರೆಗೆ ಧಕ್ಕೆ ತಗುಲಿದಾಗ ಇವರು ಗಾಬರಿಗೊಂಡು ಮಿಕಿ ಮಿಕಿ ನೋಡುತ್ತ ಕುಳಿತರೇ ಹೊರತು ಅದರ ದೂರಗಾಮಿಯಾದ ಪರಿಣಾಮಗಳನ್ನು ಅರಿಯದೇ ಹೋದರು.

ಮಾಸ್ತಿ ಕತೆಗಳು ವಿಶ್ವಮಟ್ಟಕ್ಕೆ ಬರುತ್ತಿವೆ-ಯೆಂಬುದು ಸತ್ಯವಾದರೂ ಮಹತ್ವದ ಮಾತಲ್ಲ. ವಿಶ್ವಮಟ್ಟದ ಕತೆಗಳನ್ನು ಅಕಸ್ಮಾತ್ತಾಗಿ ಯಾರಾದರೂ ಬರೆಯಬಹುದು. ಇದಕ್ಕೆ ತನ್ನದೇ ಆದ ಬೆಲೆ ಇದೆಯೇ ಹೊರತು ಐತಿಹಾಸಿಕ ಬೆಲೆ ಕಡಿಮೆ. ಒಂದು ಕಲಾ ಸಂಪ್ರದಾಯದ ಆದ್ಯ ಪ್ರವರ್ತಕನು ಆಯಾ ಜನಜೀವನದ ಆಳ ರಸಗ್ರಾಹಿಯಾಗಿದ್ದರೆ ಅವನು ಹುಟ್ಟಿಸಿದ ಸಂಪ್ರದಾಯ ಒಂದು ಸಂಸ್ಕೃತಿ ಘಟ್ಟದ ನಿಗೂಢ ಸಂಸ್ಕಾರಗಳನ್ನೆಲ್ಲ ಸಾಹಿತ್ಯ ರೂಪಕ್ಕೆ ಭಟ್ಟಿ ಇಳಿಸಲು ಸಮರ್ಥವಾಗುವುದು. ಸಾಹಿತ್ಯದ ಇತಿಹಾಸ ಕಾಲಕಾಲಕ್ಕೆ ಬರುವ ಹುಲುಸಿನ ದಿನಗಳಿಗೆ ಇದೇ ಕಾರಣ. ಡಾಸೋವಸ್ಕಿ-ತುರ್ಜನೀವ್-ಟಾಲ್ಸಟಾಯ್-ಚೆಕವ್ ಇವರೆಲ್ಲ ಸಮಕಾಲೀನರಾದದ್ದು ಕಾಕತಾಲೀಯ ನ್ಯಾಯದಿಂದಲ್ಲ. (ತುರ್ಜನೀವ್ ಬಿಟ್ಟರೆ) ಉಳಿದವರಿಗೆ ರಶಿಯನ್ ಜೀವನದ ಬಗ್ಗೆ ಗಾಢಪ್ರೇಮ ಹಾಗು ಪುಷ್ಕಿನ್ನನ ವೈಶಿಷ್ಟ್ಯದ ಬಗ್ಗೆ ಅಭಿಮಾನ ಇದ್ದವು. ಬಹುದಿನ ಪಡಬಿದ್ದ ರಶಿಯನ್ ನಾಡು ಏಕಸಮಯಾವಚ್ಛೇದದಲ್ಲಿ ಒಮ್ಮೆಲೆ ತನ್ನ ಹುಲುಸನ್ನು ವ್ಯಕ್ತಗೊಳಿಸಿ ಒಂದೇ ಬಸುರಿನಲ್ಲಿ ವಿಶ್ವಕ್ಕೆಯೇ ಮುಕುಟಮಣಿಗಳಾದ ನಾಲ್ಕೈದು ಕತೆಗಾರರನ್ನು ಹಡೆದಿತು. ಕನ್ನಡದ ನವೋದಯದಲ್ಲಿ ಈ ಗುಣಗಳೇ ಇದ್ದವು. ಆದರೆ...ಅಭಿಮಾನವಿದ್ದಲ್ಲಿ ಪ್ರತಿಭೆಯಿಲ್ಲ; ಪ್ರತಿಭೆಯಿದ್ದಲ್ಲಿ ಅಭಿಮಾನವಿಲ್ಲ. ಪರಂಪರೆಯಾಗಬೇಕೆಂದದ್ದು ನಿಷ್ಕಾರಣ ಬೈಗುಳಗಳ ಮುಖಾಂತರ ಹೋಳು ಹೋಳಾಗಿ ಹೋಯಿತು. ಡಾಸ್ಟೊವಸ್ಕಿ-ತುರ್ಜನೀವರು ದುಡ್ಡಿನ ವಿಷಯದಲ್ಲಿ ಜಗಳಾಡಿದ್ದರು. ಆದರೆ ಡಾಸ್ಟೊವಸ್ಕಿ ತನ್ನ ಕಾದಂಬರಿಗಳಲ್ಲಿ ಅಲ್ಲಲ್ಲಿ "ಇಂಥ ಪ್ರಸಂಗವನ್ನು ಬಣ್ಣಿಸಲಿಕ್ಕೆ ತುರ್ಜನೀವನೇ ಬೇಕಿತ್ತು!" ಎಂದು ಗೌರವದಿಂದ ಬರೆಯುತ್ತಾನೆ.

ಪರಂಪರೆಯ ನಿಷ್ಕಾರಣ ಖಂಡೀಕರಣಕ್ಕೆ ಪ್ರಗತಿಶೀಲದ ಆಕ್ರಮಕ ವಾದಶೀಲತೆ ಒಂದು ನಿಮಿತ್ತ. ನವೋದಯದ ಲೇಖಕರಲ್ಲಿಯೇ ಈ ಪರಂಪರೆಯ ಐತಿಹಾಸಿಕ ಅರ್ಥಗ್ರಹಣ ಸವಿಮರ್ಶವಾಗಿ ಆಗದೇ ಇದ್ದ ಮೂಲಕ ನಂತರ ಆದ ನವೋದಯದ ಮೇಲಿನ ದಾಳಿಗಳನ್ನೆಲ್ಲ ಮೂಕವಾಗಿ ಸಹಿಸುವ, ಇಲ್ಲವೆ ತಾವೇ ಬದಲಾಗುವ ಪರಿಸ್ಥಿತಿ ಬಂದಿತು. ಇರಲಿ- ಪ್ರಗತಿಶೀಲ ಲೇಖಕರಾದ ಅನಕೃ. ತರಾಸು, ಕಟ್ಟೀಮನಿ, ಅರ್ಚಕ, ಕೈಯ್ಯಾರ. ನಿರಂಜನ ಕೋ. ಚೆನ್ನಬಸಪ್ಪ, ಹಿರೇಮಲ್ಲೂರ, ಇಂಥವರಲ್ಲಿ ಇದ್ದ ದೊಡ್ಡ ಗುಣಗಳೆಂದರೆ ತತ್ವನಿಷ್ಠೆ ಹಾಗು ಗದ್ಯಶೈಲಿ. ದೊಡ್ಡ ಕೊರತೆಯೆಂದರೆ ಜೀವನನಿಷ್ಠೆಯ ಅಭಾವ. ಇವರಲ್ಲಿ ಜೀವನದ ಕೈಜಚಿತ್ರಣಕ್ಕಿಂತ ಕರುಣಾಪೂರಿತ ಚಿತ್ರಣ ಹೆಚ್ಚು. ಕಟ್ಟೀಮನಿಯವರಲ್ಲೂ ಕರುಣೆಯೇ ಉದ್ದಿಶ್ಯವಾದರೂ, ಅವರ ಸ್ವಂತ ಅನುಭವ, ಸ್ವಂತ ಪಾತ್ರಗಳು ಹಾಗು ಶಕ್ತಿಯುತ ಗದ್ಯಶೈಲಿ ಅವರ ಕಾದಂಬರಿಗಳ ಶಕ್ತಿಯನ್ನು ಕಾಯ್ದಿವೆ. ಇದೇ ಗುಣ ಅವರ ಕತೆಗಳಲ್ಲಿ ಕಂಡುಬರುವದಿಲ್ಲ.

ಪ್ರಗತಿಶೀಲರಲ್ಲಿ ಕನಿಷ್ಟ ಪಕ್ಷಕ್ಕೆ ತತ್ವನಿಷ್ಠೆಯಾದರೂ ಇತ್ತು. ಅವರು ತತ್ವಕ್ಕಾಗಿ ಕಲೆಯನ್ನು ಬಲಿ ಕೊಟ್ಟರು. ನವ್ಯರು ಕಲೆಗಾಗಿ ಜೀವನವನ್ನೇ ಬಲಿ ಕೊಡಲು ನಿಂತಿದ್ದಾರೆ. ಸಮಾಜದ ಲೋಪದೋಷಗಳನ್ನು ಅತಿರಂಜಿತಗೊಳಿಸಿದರೆ ಕಲೆಗೆ ಹಾನಿಯಾದರೂ ಕೂಡ ಸಮಾಜದ ಕಣ್ಣಾದರೂ ತೆರದಾವು. ಎಂದೂ ಪ್ರಗತಿಶೀಲರ ವಿಚಾರ ಪುಸ್ತಕಗಳಲ್ಲಿ ಓದಿದ ಮನೋರೋಗಗಳನ್ನು ಇಂದೇ ಬಣ್ಣಿಸಿದರೆ ಅವು ನಾಳೆಯಾದರೂ ಸಮಾಜದಲ್ಲಿ ಬಂದಾವು ಎಂದು ನವ್ಯರ ಆಶೆ. ಈ ಎರಡೂ ವಿಚಾರಸರಣಿಯವರು ಕಲೆ ಜೀವನಕ್ಕಿಂತ ಒಂದು ಹೆಜ್ಜೆ ಮುಂದೆ ಇರಬೇಕೆಂದು ನಂಬುವವರು. ಸಾಮಾನ್ಯ ಪ್ರಗತಿಶೀಲನಲ್ಲಿ ಪ್ರತಿಭೆ ಕಡಿಮೆ ಇದ್ದರೂ ಸಾಮಾಜಿಕ ಹೊಣೆಯ ಅರಿವಾದರೂ (ಕನಿಷ್ಟ ತಾತ್ವಿಕವಾಗಿಯಾಗಲಿ) ಇರುತ್ತಿತ್ತು. ಆದ್ದರಿಂದ ಅವರು ಓದುಗರನ್ನು ಮರೆಯಲಿಲ್ಲ. ನವ್ಯರ ಕಲಾನಿಷ್ಠೆ ಓದುಗರನ್ನೇ ಮರೆಯುತ್ತದೆ. ಈ ಎರಡರ ನ್ಯಾಯದಲ್ಲಿ ನಾವು ಮುಖ್ಯ ಮುದ್ದೇಮಾಲನ್ನೇ ಮರೆತಿದ್ದೇವೆ - ಮಾಸ್ತಿ ಸಂಪ್ರದಾಯದ ಜೀವನನಿಷ್ಠೆಯನ್ನು! ಕಲೆ ಜೀವನದೊಳಗಿಂದ ಅರಳಿ ಬಂದರೆ ಮಾತ್ರ ನೈಜವಾಗಬಲ್ಲದು- ಒಂದು ಹೆಜ್ಜೆ ಮುಂದೆಯೇ ಓಡಿಯೇನೆಂಬುದು ರಾಜಕಾರಣ.

ನವ್ಯರಲ್ಲಿಯೂ ಮಾಸ್ತಿ ಸಾಂಪ್ರದಾಯದವರಿದ್ದಾರೆ. ಆದರೆ ಹಾಗೆ ಹೇಳಿದರೆ ಸಿಟ್ಟಿಗೇಳುತ್ತಾರೆ. ಮೊನ್ನೆ ಮೊನ್ನೆಯ ವರೆಗೆ ತಾಂಗಿಯೇ ಅಭಿಮಾನದಿಂದ 'ನಾನು ಮಾಸ್ತಿ ಸಾಂಪ್ರದಾಯದವ!' ನೆಂದು ಹೇಳಿಕೊಳ್ಳುತ್ತಿದ್ದ ಕೆಲವು ತರುಣ ಕತೆಗಾರರು ನವ ವಿಮರ್ಶಕರ ದುರ್ಬೋಧನೆಗೆ ಒಳಗಾಗಿ, "ಇತ್ತಿತ್ತ ನನ್ನದೇ ರೀತಿಯನ್ನು ಹುಟ್ಟಿಸಿಕೊಂಡಿದ್ದೇನೆ; ನನ್ನದೇ ವ್ಯಕ್ತಿತ್ವ ಅಭಿವ್ಯಕ್ತಿಗೊಳಿಸಿದ್ದೇನೆ; ನನ್ನದೇ ಟೆಕ್ನಿಕ್ ಬಳಸಿಕೊಂಡಿದ್ದೇನೆ," ಎಂದು ಕೊಚ್ಚುವದನ್ನು ಕೇಳುತ್ತೇವೆ. ಸಂಪ್ರದಾಯವೆಂದರೆ ಸಾಂಪ್ರದಾಯಿಕತೆಯಲ್ಲ. ಸಂಪ್ರದಾಯ ವ್ಯಕ್ತಿತ್ವವನ್ನು ಅಲ್ಲಗಳೆಯುವದಿಲ್ಲ; ಆಯಾ ವಸ್ತುವಿಗೆ ಬೇಕಾಗುವ ತಂತ್ರಕ್ಕೆ ಬಾಧೆ ತರುವದಿಲ್ಲ. ವಸ್ತುವಿಲ್ಲದೆ ಅನುಭವವಿಲ್ಲದೆ ಹೊಸ ತಂತ್ರಕ್ಕಾಗಿಯೇ ಎಂದು ಬರೆಯುವವರು ಖೊಟ್ಟಿ (fake) ಲೇಖಕರು. ತಂತ್ರಕ್ಕೆಯೇ ಕೊಟ್ಟ ಅವಾಸ್ತವ ಮಹತ್ವದಿಂದಾಗಿ ಅವರ ಕಲೆಗೇ ಬಾಧೆ ಬಂದಿದೆ ಕೆಲವು ನೈಜ ಕತೆಗಾರರು ತಮ್ಮ ನೈಜತೆಗೆ ತಾವೇ ಕೊಡಲಿ ಹಾಕಿ ಕೊಳ್ಳುತ್ತಿದ್ದಾರೆ. ಕಲೆಗೆ ಮಾರಕವಾಗುವದು ಕಲ್ಪಕನಿಷ್ಠೆ, ಎಂಬುದನ್ನು ಮರೆಯಬಾರದು.

ಹೊಸ ಕತೆಗಾರರಲ್ಲಿ ಬೆಳವಣಿಗೆ ಇಲ್ಲದಿಲ್ಲ. ನವ ಲೇಖಕರಲ್ಲಿ ಕೆಲವರು ಸ್ವಭಾವತಃ ನವ್ಯರು; ಕೆಲವರು ಕಾಲಮಾನ ಪರಿಸ್ಥಿತಿಗೆ ಅನುಕೂಲವಾಗಿ ನವ್ಯರಾದವರು. (ನನ್ನೊಂದು ಅಪ್ರಕಟಿತ ಲೇಖನದಲ್ಲಿ ಈ ಎರಡು ರೀತಿಗಳನ್ನು ಕ್ರಮಶಃ ಅರ್ಜುನ-ಬೃಹನ್ನಳಾ ರೀತಿ ಹಾಗು ಭೀಮ- ಸೈರಂಧ್ರೀ ರೀತಿ ಎಂದು ಅರ್ಥೈಸಿದ್ದೇನೆ, ಅರ್ಜುನ ಬೃಹನ್ನಳೆಯಾದದ್ದು ಕಾಲಧರ್ಮಕ್ಕಾಗಿ. ಭೀಮ ಸೈರಂಧ್ರಿಯ ರೂಪ ತಳೆದದ್ದು ಒಂದು [illegible]ಕ್ಕಾಗಿ) ಕೆಳಗೆ ಕೆಲವು ಕತೆಗಳನ್ನು ಉದಾಹರಿಸಿದ್ದೇನೆ. ಅದೇ ಲೇಖಕರು ಬೇರೆ ಕತೆಗಳಲ್ಲಿ ಬೇರೆಯಾಗಿ ಕಾಣಬಹುದು.

ಮೊದಲನೆಯ ರೀತಿಯಲ್ಲಿ: ಅನಂತ ಮೂರ್ತಿಯವರ 'ಘಟಶ್ರಾದ್ಧ'. ಚಿತ್ತಾಲರ 'ಆಟ', ದೇಸಾಯಿಯವರ 'ಚಂದು', ಲಂಕೇಶರ 'ದಾಮುವ', ಸದಾಶಿವರ 'ಹಲಸು', ರಾಘವರ 'ಶ್ರಾದ್ಧ', ಇತ್ಯಾದಿ ಕತೆಗಳು ಸುಪ್ತಚೇತನವನ್ನು ಅರಿಯಲು ತಂತ್ರವನ್ನು ಸಾಕಷ್ಟು ಸೊಫಿಸ್ಟಿಕೇಶನ್ ದಿಂದ ಬಳಸಿವೆಯೆಂದು ಒಪ್ಪಬಹುದು.

ಎರಡನೆಯ ರೀತಿಯಲ್ಲಿ: ಸದಾಶಿವರ 'ನಲ್ಲಿಯಲ್ಲಿ ನೀರು ಬಂತು' ಚಿತ್ತಾಳರ 'ಪಯಣ', ಶಾಸನೀಸರ 'ತಬ್ಬಲಿಗಳು' ಇವು ಸಫಲವಾಗಿವೆ.

ಕೊನೆಯ ಮಾತು: ಈ ಲೇಖನವನ್ನು ದಿವಂಗತ ಬೃಹನ್ಮಠದ ವೀರೇಶ ಶರ್ಮಾ ಅವರ ಪವಿತ್ರ ಸ್ಮೃತಿಗೆ ಅರ್ಪಿಸಿದ್ದೇನೆ. ಅವರ ಅಕಾಲ ಮರಣದಿಂದ ಒಬ್ಬ ದಿವ್ಯಜೀವಿ. ಸ್ನೇಹಿತ ಹಾಗು ಸಾಹಿತ್ಯ ಪ್ರೇಮಿಯನ್ನು ಕಳಕೊಂಡಿದ್ದೇವೆ. ೧೯೬೬ ರಲ್ಲಿ ಒಂದು ನಿಮಿತ್ತ ನಾವಿಬ್ಬರೂ ಬೆಂಗಳೂರಿನಲ್ಲಿ ಒಂದು ಹೋಟೆಲಿನಲ್ಲಿ ಎರಡು ದಿವಸ ನಿಂತಿದ್ದವು. ಅಂದೇ ಓರ್ವ ನವ್ಯ ಲೇಖಕರ ಕಥಾಸಂಗ್ರಹ ನನ್ನ ಕೈಗೆ ಸಿಕ್ಕಿತ್ತು. ಮಧ್ಯಾಹ್ನ ಒಂದೆರಡು ಕತೆಗಳನ್ನು ಓದಿ ನಾನು 'ಕನ್ನಡ ಸಾಹಿತ್ಯ ಯಾವ ದಿಶೆಗೆ ಬಂದಿತಲ್ಲ!' ಎಂದು ಒಬ್ಬನೆ ವಿಷಣ್ಣನಾಗಿ ಕುಳಿತಿದ್ದನು. ಶರ್ಮಾ ವಕೀಲರು ಸಂಜೆ ಮರಳಿದರು. ನನ್ನ ವಿಮನಸ್ಕತೆಯನ್ನು ಕಂಡು ವಿಚಾರಿಸಿದರು. ಅವರಿಗೆ ಆ ಪುಸ್ತಕದ ಒಂದೆರಡು ಕಥೆಗಳನ್ನು ಹೇಳಿ "ಬುದ್ಧಿವಂತ ಲೇಖಕರು ಇಂಥ ಕತೆ ಬರೆಯುತ್ತಿದ್ದಾರೆ" ಎಂದು ಜೋರಾಗಿ ತಕರಾರು ಮಾಡಿ "ಇಂಥ ಲೇಖಕರಿಗೆ ಬುದ್ಧಿ ಕಲಿಸಲಿಕ್ಕೆಂದೇ ನಾನೂ ಒಂದು Petty Crime ದ ಮೇಲೆ ಕತೆ ಬರೆಯುವವನಿದ್ದೇನೆ" ಎಂದು ಅದೇ ತಲೆಯಲ್ಲಿ ಬಂದ ಒಂದು ಕಥಾವಸ್ತುವನ್ನು ಅವರೆದುರಿಗೆ ಹೇಳಿದೆನು. ನನ್ನೊಡನೆ ಯಾವಾಗಲೂ ಬಹುವಚನದಿಂದ ಮಾತಾಡುವ ಶರ್ಮಾ ವಕೀಲರು ಒಮ್ಮೆಲೆ ನನ್ನ ಹೆಗಲ ಮೇಲೆ ಕೈ ಹಾಕಿ, "ನೀನು ಈ ಕತೆ ಬರೆಯಬೇಡ! ಅದನ್ನು ತಲೆಯಲ್ಲಿ ಕೂಡ ಇಟ್ಟುಕೊಳ್ಳಬೇಡ. ಉಳಿದವರು ಬೇಕಾದದ್ದು ಮಾಡಲಿ!" ಹೀಗೆಂದು ಆಗ್ರಹಪಡಿಸಿದರು. ಇಂದಿಗೂ ನಾನು ಆ ಕತೆಯನ್ನು ಬರೆದಿಲ್ಲ, ಅದರ ಕಥಾವಸ್ತುವನ್ನು ಇನ್ನೊಬ್ಬರಿಗೆ ಉಸುರಿಲ್ಲ. ಈಗ ಹತ್ತು ತಿಂಗಳ ಹಿಂದೆ ಪುಣೆಯಲ್ಲಿ ಆಪರೇಶನ್ ನಂತರ ಅವರ ಮೃತ್ಯುವಾಯಿತೆಂದು ಮೊನ್ನೆ ಮೊನ್ನೆ ಗೊತ್ತಾಯಿತು. ಆಗೊಮ್ಮೆ ಈಗೊಮ್ಮೆ ಕೀಳು ಕತೆಗಳನ್ನು ಓದಿ ನನ್ನ ಆ ಕತೆಯನ್ನು ಬರೆಯಲು ಆಸೆಯಾದಾಗ ಶರ್ಮಾವಕೀಲರ ನೆನಪಾಗುತ್ತದೆ. ಅವರು ನನ್ನಿಂದ ತೆಗೆದುಕೊಂಡ ಪ್ರಮಾಣ ನೆನಪಾಗುತ್ತದೆ. ಜೀವನದ ಬಗ್ಗೆ ಅವರ ಆಸ್ಥೆ, ಸಾಹಸ, ಪ್ರೇಮ, ಹೊಣೆ ಇವು ಕಣ್ಣಿಗೆಕಟ್ಟುತ್ತವೆ.

●●

ಅನುದಿನದ ಜೀವನದಲ್ಲಿ
ಪ್ರಕಾಶ ಮತ್ತು
ಸುಖವನ್ನು
ನೇಯುತ್ತದೆ...



ಮಫತಲಾಲ ಗ್ರುಪ್

AIYARS.M. 132 KN

# ತೆಲುಗು ಸಾಹಿತ್ಯದಲ್ಲಿ "ಸಣ್ಣಕಥೆ"

ವಾಸ್ತವವಾಗಿ 'ಸಣ್ಣ ಕಥೆ' ಭಾರತೀಯ ಸಾಹಿತ್ಯದ ಸ್ವರೂಪವೇ ಅಲ್ಲ. ಕಾದಂಬರಿಗಳಂತೆ ಪಾಶ್ಚಾತ್ಯ ದೇಶಗಳಿಂದ 'ವಲಸೆ' ಬಂದ ಒಂದು ಕಲಾರೂಪ. ಆದುದರಿಂದ ಅವುಗಳ ಒಳಿತು ಕೆಡಕುಗಳನ್ನೂ ಆಗು ಹೋಗುಗಳನ್ನೂ ನಿರ್ಣಯಿಸುವದದರಲ್ಲಿ ಪಾಶ್ಚಾತ್ಯ ಸಾಹಿತ್ಯವೇ ಆಧಾರ.

"ಸಣ್ಣಕಥೆ" ಎಂದರೇನು? ಲಕ್ಷಣಗಳೇನು? ಆಕಾರದಲ್ಲಿ ಸಣ್ಣ ಕಥೆ ಎಂದರೆ ಸಾಮಾನ್ಯವಾಗಿ ಪರಿಮಿತಿಯಲ್ಲಿ ಚಿಕ್ಕದಾಗಿದ್ದರೆ ಸಣ್ಣ ಕಥೆ ಎಂದು ಎಳೆಯುವವರೂ, ಕಾದಂಬರಿಗಿಂತ 'ಸಣ್ಣಕಥೆ'ಯನ್ನು 'ಅಯ್ಯೋ ಸಣ್ಣ ಕಥೆ ತಾನೆ', ಎನ್ನುವಂಥ ದೃಷ್ಟಿಯುವರೂ ನಮ್ಮಲ್ಲಿ ಹೇರಳವಾಗಿದ್ದಾರೆ. ಆದರೆ ಪೂರ್ವದಲ್ಲಿ ಗ್ರೀಕ್ ನಾಟಕಗಳಿಗೆ ಹಿಡಿಯುತ್ತಿದ್ದ ಕಾಲ, ಸ್ಥಳ ಭಾವ ನಿಯಮಗಳನ್ನೇ 'ಸಣ್ಣ ಕಥೆ'ಗಳಿಗೂ ಪಾಶ್ಚಾತ್ಯರು ಆಪಾದಿಸಿದರು. ಒಂದು ಘಟನೆ, ಒಂದು ಮಾತು, ಒಂದು ದೃಷ್ಟಿ, ಒಂದು ಕೆಲಸ, ಎಲ್ಲವನ್ನೂ ಸಮ್ಮಿಳನಗೊಳಿಸಿ ಸಂಕ್ಷಿಪ್ತವಾಗಿ ಹೇಳುವುದೇ ಸಣ್ಣಕಥೆಯ ಸ್ವರೂಪ. ಹೀಗೆ ಒಂದು ಭಾವವನ್ನು ಪ್ರಧಾನವಾಗಿರಿಸಿಕೊಂಡು ಸಣ್ಣ ಸಣ್ಣ ವಿವರಣೆಗಳೊಂದಿಗೆ ಹೇಳುವ ಶಕ್ತಿಯನ್ನು ಕಲಾಭಿಜ್ಞರು 'ಪರಿಣಾಮ ಪದ್ಧತಿಯ ಕಲೆ' Impressionistic method of art ಎಂದು ಕರೆಯುತ್ತಾರೆ. ಇದೊಂದು ಪ್ರತ್ಯೇಕ ಕಲಾರೂಪ.

ಕಾಲ, ಸ್ಥಳ, ಸ್ಥಿತಿಗತಿಗಳಿಗನುಸಾರವಾಗಿ ಕಲಾರೂಪಗಳು ತಲೆಎತ್ತುತ್ತವೆ. ಮಾನವನ ಮಾನಸಿಕ ವೈಶಾಲ್ಯಕ್ಕೂ ನೈತಿಕ, ಸಾಮಾಜಿಕ ಸೂತ್ರಗಳಿಗೂ ಅನುಗುಣವಾಗಿ ಕಲೆ ರೂಪಗೊಳ್ಳುತ್ತದೆ. ಹಾಗೆಯೇ ಸಾಹಿತ್ಯದಲ್ಲಿ ನಮ್ಮ ಇಂದಿನ ನಾಗರಿಕತೆಯನ್ನನುಸರಿಸಿ ಚಿರಸ್ಥಾಯಿಯಾಗಿರುವಂತೆ, ಸ್ನೇಹ, ದ್ವೇಷ, ತ್ಯಾಗ, ಸ್ವಾರ್ಥ, ಉದ್ರೇಕ, ಪ್ರೇಮ, ಅನುರಾಗ, ಆಸೆ ಆಕಾಂಕ್ಷೆ ಮುಂತಾದ ಭಾವಗಳು ಕಥಾವಸ್ತುಗಳಾಗುತ್ತವೆ. ಸಣ್ಣಕಥೆಗಳಲ್ಲಿ ಸಾಧಾರಣವಾಗಿ ಇವೇ ಕಥಾವಸ್ತುಗಳು. ಸಣ್ಣ ಕಥೆಗಳಲ್ಲಿ ನೂತನ ರೀತಿ, ನೀತಿಗಳನ್ನು ಅಳವಡಿಸಲು ಲೇಖಕನಿಗೆ ಅವಕಾಶವಿದೆ. ಆ ಪ್ರಕಾರ ಆಯಾ ಲೇಖಕನ ದೃಕ್ಪಥಗಳಿಗನುಸಾರವಾಗಿರುತ್ತದೆ. ಅಲ್ಲದೆ ಆಯಾ ಕಾಲಗಳಲ್ಲಿನ ನಾಗರಿಕತೆಯಲ್ಲೂ ಮಾನವತೆಯ ಮೌಲ್ಯಗಳಲ್ಲೂ ಉಂಟಾಗುವ ಬದಲಾವಣೆ ಎಲ್ಲ ಕಲೆಗಳಲ್ಲಿರುವಂತೆಯೇ ಸಾಹಿತ್ಯದಲ್ಲಿಯೂ ಪ್ರತಿಬಿಂಬಿಸುವುದು ಸಹಜ. ಹಾಗೆ ಸ್ವಲ್ಪ ಮಟ್ಟಿಗಾದರೂ ಸಾಹಿತ್ಯದಿಂದಾಗಿ, ಸಾಮಾಜಿಕ, ವೈಯಕ್ತಿಕ, ಮಾನಸಿಕ, ನೈತಿಕ ಬದಲಾವಣೆಗಳು ಬರುವುದೂ ಸಹಜ.

'ಸಣ್ಣ ಕಥೆ' -ಅದರ ತಂತ್ರ, ವೈಶಿಷ್ಟ್ಯಗಳನ್ನು ಅರ್ಥ ಮಾಡಿಕೊಳ್ಳುವಂಥವರದೇ ಒಂದು ಪ್ರತ್ಯೇಕ ವರ್ಗ. "ಒಂದಾನೊಂದು ಊರು, ಆ ಊರಿನಲ್ಲಿ ಒಬ್ಬ ರಾಜ, ಅವನಿಗೊಬ್ಬ ಮಗ..." ಹೀಗೆ ಮೊದಲಾಗುವ ಗೊತ್ತುಗುರಿ ಇಲ್ಲದ ಸನ್ನಿವೇಶಗಳಿಂದ ಹೆಣೆಯುವಂಥ ಕಥೆಗಳನ್ನು ನಮ್ಮ ಅಜ್ಜಿ ಹೇಳುತ್ತಿದ್ದಾಗ ಕೇಳಿ ಮೈಮರೆಯುತ್ತಿದ್ದೆವು. ಸುಮಾರು ಅಂಥದೇ ಒಂದು ಬಗೆಯ ಮಾನಸಿಕ ವಿಕಸನ ಹೊಂದಿರುವವರು ನಮ್ಮಲ್ಲಿ ಕೆಲವರಿಗೆ ದೊಡ್ಡವರಾದರೂ "ಸಣ್ಣಕಥೆ" ಅಷ್ಟಾಗಿ ರುಚಿಸದು.

ಅದಗ ಕಲಾದೃಷ್ಟಿಯಿಂದ ಅರ್ಥಮಾಡಿಕೊಂಡು, ರಸಾನುಭವ ಪಡೆಯುವವರಿಗೆ 'ಸಣ್ಣ ಕಥೆ' ಸಾಹಿತ್ಯ ಶ್ರೇಣಿಯಲ್ಲಿ ಒಂದು ಉನ್ನತ ಸಾಹಸವೇನೇ ಸಣ್ಣ ಕಥೆಯ ಲೇಖಕ ತನ್ನ ಓದುಗರ ಊಹಾಬಲವನ್ನೂ ಅವಗಾಹನ ಶಕ್ತಿಯನ್ನೂ ಗೌರವಿಸುತ್ತಾನೆ. ಆದುದರಿಂದ ತಾನು ತನ್ನ ಸೃಷ್ಟಿಗಳಲ್ಲಿ ಕೆಲವು ಸೂಚನೆಗಳನ್ನು ಕೊಡುತ್ತಾ ಕೆಲವು ವಿಷಯಗಳನ್ನು ಓದುಗರ ಊಹೆಗೇ ಬಿಟ್ಟಾಗ ಅವರೇ ಊಹಿಸಿಕೊಂಡು ಗಾಳಿಗೋಪುರಗಳನ್ನು ನಿರ್ಮಿಸಿಕೊಳ್ಳುತ್ತಾರೆ.


ಮೂಲ :

**ಶ್ರೀಮತಿ ಕಲ್ಯಾಣ ಸುಂದರಿ ಜಗನ್ನಾಥ, ಎಂ. ಎ.**

ಕನ್ನಡಕ್ಕೆ :

**ಎಂ. ಜಿ. ಭೀಮರಾವ**


ಆಂಧ್ರ ದೇಶದಲ್ಲಿ ವ್ಯಾವಹಾರಿಕ ಭಾಷೆಯನ್ನು ಸಾಹಿತ್ಯಕ್ಕೆ ಅಳವಡಿಸಿರುವವರು ಸಾಮಾಜಿಕ ಸಂಸ್ಕರಣಕರ್ತ ಶ್ರೀ ಕಂದುಕೂರಿ ವೀರೇಶಲಿಂಗಂ ಪಂತುಲು. ಸುಮಾರು ಒಂದು ಶತಮಾನದ ಮೊದಲು. ಆ ನಂತರವೇ ವ್ಯಾವಹಾರಿಕ ಭಾಷೆ ಸಾಹಿತ್ಯ ರೂಪದಲ್ಲಿ ಹೊರಬಂತು.

ನಂತರ ಸುಮಾರು ನಲವತ್ತು ವರ್ಷಗಳ ಕೆಳಗೆ ಪ್ರಸಿದ್ಧ 'ಕನ್ಯಾಶುಲ್ಕ' ಕಾದಂಬರಿಯನ್ನು 'ಮುತ್ಯಾಲಸರ'ವೆಂಬ ನೂತನ ಛಂದಸ್ಸಿನಲ್ಲಿ ರಚಿಸಿದವರು ಕೀರ್ತಿಶೇಷ ಶ್ರೀ ಗುರಜಾಡ ಅಪ್ಪಾರಾಯರು. ಅವರು ಮೊತ್ತಮೊದಲ ಬಾರಿಗೆ ತೆಲುಗಿನಲ್ಲಿ ಸಣ್ಣ ಕಥೆಗಳನ್ನು ಪರಿಚಯ ಮಾಡಿಸಿದರು ಆ ಕಥೆಗಳು ಲಕ್ಷಣ, ಪರಿಣಾಮಗಳಲ್ಲಿ ಸಣ್ಣ ಕಥೆಯ ಸಾಹಿತ್ಯಕ್ಕೆ ಪ್ರಮಾಣಗಳು.

ನಂತರದ ದಿನಗಳಲ್ಲಿ ಸಣ್ಣ ಕಥೆ ಭಾವಕವಿತೆಗಳಂತೆ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡವು.

'ಚಲಂ'- (ಗುಡಿಪಾಟಿ ವೆಂಕಟಾಚಲಂ)ರವರು ಅನೇಕ ಸಣ್ಣ ಕಥೆಗಳನ್ನು ರಚಿಸಿದರು. ಪರಿಣಾಮದಲ್ಲಿ ಕೆಲವು ತುಂಬಾ ದೀರ್ಘವಾದರೂ ಶಿಲ್ಪದಲ್ಲಿ ಸಣ್ಣ ಕಥೆಗಳೇ. ಅವರ ಕಥೆಗಳೆಲ್ಲ ಉತ್ತಮ ಶ್ರೇಣಿಯವು ಆದರೆ ಅವುಗಳಲ್ಲಿ ಲೈಂಗಿಕ ವಿಷಯಗಳು ಅಮಿತ ಪ್ರಧಾನವಾದುದರಿಂದ ಕೆಲವು ಮಡಿವಂತರಿಗೆ 'ಮೈಲಿಗೆ' ಎಂದು ತೋರಿತು. ಅವರ ಸೃಷ್ಟಿಗಳು ಸಾಮಾಜಿಕ. ಮತೀಯ ಅನ್ಯಾಯಗಳನ್ನೂ, ದೌರ್ಜನ್ಯಗಳನ್ನೂ ಅಕ್ರಮಗಳನ್ನೂ ಚೆನ್ನಾಗಿ ವಿಮರ್ಶಿಸಿವೆ ಸಾಮಾಜಿಕ ನೀತಿ ಮಾರ್ಗಗಳಿಂದ ಅವರ ಪಾತ್ರಗಳು 'ಅಡ್ಡದಾರಿ' ಹಿಡಿಯುತವೆ. ಆದರೂ ಓದುಗರ ಸಹಾನುಭೂತಿಯನ್ನು ಗಳಿಸುತ್ತವೆ. ಇದರಿಂದಾಗಿ ಯುವಜನಾಂಗವನ್ನು 'ಚಲಂ'ರವರ ಕಥೆಗಳು ತುಂಬಾ ಆಕರ್ಷಿಸುತ್ತವೆ ಮುಖ್ಯವಾಗಿ ಸಾಹಿತ್ಯಪ್ರೌಢಿಮೆಯಿಂದ ಬಹಳ ಆದರಣೀಯವಾದುವು. ಅವರ ರಚನೆಗಳಿಂದ ಸಮಾಜದಲ್ಲಿ ವಿಧವಾ ವಿವಾಹ, ಮಹಿಳೆಯರಿಗೆ ಸಮಾನ ಸಾಮಾಜಿಕ ಹಕ್ಕು ಬಾಧ್ಯತೆಗಳು ಬಹಳ ಮಟ್ಟಿಗೆ ರೂಢಿಗೆ ಬಂದುವು ಎನ ಬಹುದು-

ನನ್ನ ಚಿಕ್ಕಂದಿನಲ್ಲಿ ಒಬ್ಬರು ಹೆಂಡತಿಯನ್ನು 'ಹೋಗಿ ಬನ್ನಿ' ಎಂದು ಬಹುವಚನ ಪ್ರಯೋಗದಿಂದ ಸಂಬೋಧಿಸುತ್ತಿದ್ದರು. ಅವರು 'ಚಲಂ' ರವರ ಭಕ್ತರು "ಗಂಡನನ್ನು ಹೆಂಡತಿ ಬಹುವಚನದಿಂದ ಸಂಬೋಧಿಸಿದರೆ ಗಂಡ ಹೆಂಡತಿಯನ್ನು 'ಏಯ್ ಏನೇ' ಎಂದು ಸಂಬೋಧಿಸುವುದು ಅನ್ಯಾಯ. ಗಂಡ-ಹೆಂಡತಿಗೆ ಹೆಂಗಸು-ಗಂಡಸಿಗೆ ಪ್ರತ್ಯೇಕ ನೀತಿ ನಿಯಮಗಳಿವೆಯೆ? 'ಚಲಂ'ರವರು ಹೇಳಿದ್ದು ನೂರಕ್ಕೆ ನೂರು ಪಾಲು ಸರಿ"–ಎನ್ನುತ್ತಿದ್ದರು.

'ಚಿಂತಾ ದೀಕ್ಷಿತರು' ಅನೇಕ ಕಥೆಗಳನ್ನು ಬರೆದಿದ್ದಾರೆ. ವ್ಯಂಗ್ಯ, ಅಣಕಗಳನ್ನು ತುಂಬಿಕೊಂಡ ಅವರ ಕಥೆಗಳನ್ನು ವಿಶಾಲದೃಷ್ಟಿಯಿಂದ ವೀಕ್ಷಿಸಿದರೆ ಉತ್ತಮ ದರ್ಜೆಯವೆಂದೇ ಪರಿಗಣಿಸಬಹುದು ಅಡವಿ ಬಾಪಿರಾಜುರವರೂ ಅನೇಕ ಸಣ್ಣ ಕಥೆಗಳನ್ನು ಬರೆದಿದ್ದಾರೆ ಚಿತ್ರಕಲಾವಿದರೂ ಕವಿಯೂ ಆದುದರಿಂದ ಅವರ ಕಥೆಗಳಲ್ಲಿ ಆ ಕಲಾ ಪ್ರಭಾವ ಚೆನ್ನಾಗಿ ಗೋಚರಿಸುತ್ತದೆ.

ನಂತರದಲ್ಲಿ ಸಣ್ಣಕಥೆಯ ಸೃಷ್ಟಿಕರ್ತರು ಶ್ರೀ ಮಲ್ಲಾಡಿ ರಾಮಕೃಷ್ಣಶಾಸ್ತ್ರಿಗಳು ಮತ್ತು ಶ್ರೀಪಾದ ಸುಬ್ರಹ್ಮಣ್ಯಶಾಸ್ತ್ರಿಗಳು ಶ್ರೀ ಮಲ್ಲಾಡಿ ರಾಮಕೃಷ್ಣಶಾಸ್ತ್ರಿಯವರು ತಮ್ಮ ರಚನೆಗಳಲ್ಲಿ ತೆಲುಗು ನುಡಿಗಟ್ಟುಗಳನ್ನು ವಿಶೇಷವಾಗಿ ಅಳವಡಿಸಿದ್ದಾರೆ. ಅದು ಅವರ ರಚನಾವೈಶಿಷ್ಟ್ಯ. ಅವರ ಕಥಾವಸ್ತುಗಳು ಹಳೆಯವಾದರೂ ನವಯುವಜನಾಂಗದ ಮನಸ್ಸು ಆಕರ್ಷಿಸುವಂತೆ ಬರೆಯಬಲ್ಲರು ಅವರ ಕೃತಿಗಳಲ್ಲಿ ಪಾಂಡಿತ್ಯ, ರಸಜ್ಞತೆ, ಪ್ರೌಢಿಮೆಗಳು ತುಂಬಿತುಳುಕುತ್ತಿರುತ್ತವೆ ಶ್ರೀಪಾದ ಸುಬ್ರಹ್ಮಣ್ಯ ಶಾಸ್ತ್ರಿಗಳ ಕಥೆಗಳಲ್ಲಿ ವಸ್ತುವಿಗಿಂತ ಮಿಗಿಲಾಗಿ ಶಿಲ್ಪಪ್ರಧಾನವಾಗಿದೆ

ಗುರುತುಲ್ಯರಾದ ಇವರೆಲ್ಲರ ನಂತರದವರೆ ಅನೇಕ ಮಂದಿ ಹೊರಬಂದಿದ್ದಾರೆ ಅವರುಗಳಲ್ಲಿ 'ಚಲಂ'ರವರ ಪ್ರಭಾವ ಬಹಳ ಪಡೆದು ಲೇಖನ ಪ್ರಾರಂಭಿಸಿದವರು ಶ್ರೀ ಕೊಟುಂಬರಾಯರು. ಬುಚ್ಚಿಬಾಬುರವರು ಮುಂತಾದವರು. ಈ ದಶಕಕ್ಕೆ ಸೇರಿದ ಖ್ಯಾತ ಲೇಖಕರು ಇನ್ನೂ ಅನೇಕ ಮಂದಿ ಇದ್ದಾರೆ,

ಹತ್ತುವರ್ಷಗಳಿಂದೀಚೆಗೆ ಸಣ್ಣ ಕಥೆ ತುಂಬ ಅಭಿವೃದ್ಧಿ ಹೊಂದಿದೆ. ಯುವತಿಯರು ಯುವಕರು ಯಂತ್ರಗಳಂತೆ ಕಥೆಗಳನ್ನು ಸೃಷ್ಟಿಸಲಾರಂಭಿಸಿದ್ದಾರೆ. ನೂರರ ಸಂಖ್ಯೆಯಲ್ಲಿ ಕಥೆಗಳು ಅಚ್ಚಾಗುತ್ತಿವೆ. ಈ ಉತ್ಸಾಹ ಮೆಚ್ಚುವಂಥದೇ- ಆದರೆ ಎಲ್ಲೋ ಕೆಲವು ಕಥೆಗಳನ್ನುಳಿದು ಮಿಕ್ಕವು ಕಾಗದದ ಹೂವಿನಂತೆ ನಿರ್ಗಂಧ ಕುಸುಮಗಳು. ಕಥಾಸಾಹಿತ್ಯ ಇನ್ನೂ ಪ್ರೌಢಾವಸ್ಥೆಯನ್ನು ತಲುಪಿಲ್ಲ.

ಈ ಪರಿಸ್ಥಿತಿಗೆ ಅನೇಕ ಕಾರಣಗಳಿವೆ. 'ಹೊಸತು ಹೊಚ್ಚು, ಹಳೆಯದು ಕೊಚ್ಚು' ಎಂಬುದನ್ನು ದ್ವಿಗುಣೀಕೃತವಾಗಿ ಆಚರಿಸುವ ಆಧುನಿಕ ವ್ಯಕ್ತಿಗಳು ಕೆಲವರು ಹುಟ್ಟಿಕೊಂಡರು ಅವರ ಪ್ರಭಾವ ಯುವಕರ ಮೇಲೆ ಉಂಟಾಯ್ತು, ಅವರು ಹಳೆಯ ವಸ್ತುಗಳನ್ನಾಗಲೀ, ರೀತಿ ನೀತಿಗಳನ್ನಾಗಲೀ, ಕಲೆಯನ್ನಾಗಲೀ, ಸಂಪ್ರದಾಯವನ್ನಾಗಲೀ ಹೇಸಲಾರಂಭಿಸಿದ್ದಾರೆ ಯಾವುದೊಂದು ಬಗೆಯ ಸಹಾನುಭೂತಿಯಾಗಲೀ ಸಾಹಸಕ್ಕಾಗಲೀ ಅವರ ಹೃದಯ ಒಡಂಬಡದು.—ಇಂದಿನದೆಲ್ಲಾ ಸಂಸ್ಕೃತಿ ಪಂಥವೆಂಬುದು ಅವರ ನಂಬಿಕೆ. ಇವರೊಂದಿಗೆ ವಿದ್ಯೆಯ ಮೇಲೆ ಆಸಕ್ತಿ ಕಡಿಮೆಯಾಯ್ತು, ಬದುಕಿನ ಸಮಸ್ಯೆ ಬೃಹದಾಕಾರವಾಯ್ತು ತಿಳಿದುಕೊಳ್ಳಬೇಕೆಂಬ ಅಭಿಲಾಷೆ ಕಡಿಮೆಯಾಯ್ತು, ಕಥೆಗಳಿಗೆ ಭಾವದ ಕೊರತೆ ಮಿತಿಮೀರಿತು.

ಇವೆಲ್ಲವುಗಳೊಂದಿಗೆ ರಾಜಕೀಯ ಪ್ರಾಬಲ್ಯ ಸಣ್ಣ ಕಥೆಗಳ ಮೇಲೂ ಉಂಟಾಗಿದೆ. ಹಾಗಿರಬೇಕಾದುದೇನೋ ಸರಿ. ದೇಶ, ಕಾಲ, ಸ್ಥಿತಿ ಎಂತಹ ಕಲೆಯ ಮೇಲಾದರೂ ಪ್ರತಿಬಿಂಬಿಸುತ್ತದೆ. ಆದರೆ ರಾಜಕೀಯವು ಕಲೆಯ ಬೆಲೆಯಾಗಬಾರದು. ರಾಜಕೀಯದ ಆಸರೆ ಪಡೆದ ಕಲೆ ಚಿರಸ್ಥಾಯಿಯಾಗದು. ಫ್ರಾನ್ಸಿನ ಮಹಾಕ್ರಾಂತಿಯ ಕಾಲದಲ್ಲಿ ಜಾಕ್ವಿಸ್ ಲೂಯಿ ಡೇವಿಡ್ ಮತ್ತು ಯುಜಿನೀ ಡಿಲಾಕ್ರಾಯ್‌ರಂಥ ಖ್ಯಾತ ಚಿತ್ರಕಾರರು ಉದ್ದೇಶಪೂರಿತವಾದ ಕ್ರಾಂತಿಪ್ರದವಾದ ಚಿತ್ರಗಳನ್ನು ಸೃಷ್ಟಿಸಿದರು. ಪ್ರಜೆಗಳಲ್ಲಿ ಎದುರುಬೀಳುವ ಭಾವವನ್ನು ಹೊಡೆದೆಬ್ಬಿಸಿದರು. ಆದರೆ ಅವರ ಚಿತ್ರಗಳು ಉತ್ತಮ ದರ್ಜೆಗೇ ಸೇರಿದ್ದವು ಕಲೆಯಲ್ಲಿ ಪ್ರೌಢಿಮೆ, ಶಿಲ್ಪಗಳಿದ್ದು ಉತ್ತೇಜನ ನೀಡಿದುವು. ಹಾಗೆಯೇ ನಮ್ಮ ದೇಶದಲ್ಲಿಯೂ ಬೌದ್ಧಮತ ಬೋಧಿಸಿದ ಐಹಿಕ ಸೌಖ್ಯದ ಮೇಲಣ ವಿರಕ್ತಿ ಮೇರೆಮೀರಿದಾಗ ಆ ವಿಶ್ವಾಸದ ಮೇಲೆ ಸೂತ್ರಗಳನ್ನು ವಿರೋಧಿಸಿ ಅಮಿತ ಶೃಂಗಾರ ಸಾಹಿತ್ಯ ಸುಸಂಸ್ಕೃತಿಯಲ್ಲಿ ಹೊರಬಂತು. ಪಾಶ್ಚಾತ್ಯ ದೇಶಗಳಲ್ಲಿಯ ಕ್ರೈಸ್ತ ಮತದಲ್ಲಿ ಶಾರೀರಿಕ ಸೌಖ್ಯವನ್ನು ನಿಷೇಧಿಸಿದಾಗ ಅದನ್ನು ವಿರೋಧಿಸಿದ ಲೇಖಕರಲ್ಲಿ ಪ್ರಮುಖರು ವಿಕ್ಟರ್ ಹ್ಯೂಗೋ ಮತ್ತು ಡಿ ಹೆಚ್ ಲಾರೆನ್ಸ್.

ಆದುದರಿಂದ ಪರಿಸ್ಥಿತಿಯ ಬದಲಾವಣೆಗಾಗಿ ಸೃಷ್ಟಿಸಿದ ಸಾಹಿತ್ಯದಲ್ಲಿ ಶಾಶ್ವತೆಯನ್ನು ತರಬೇಕೆಂದರೆ ಪ್ರತ್ಯೇಕ ಪ್ರೌಢಿಮೆಯೇ ಆಗತ್ಯ. ಹಾಗಿಲ್ಲವಾದಾಗ ಆ ಸಾಹಿತ್ಯದಲ್ಲಿ ಉತ್ಕೃಷ್ಟತೆ ಇರದು.

ನಮ್ಮ ಪುರಾತನ ಸಂಪ್ರದಾಯಗಳನ್ನೂ ಸಂಸ್ಕೃತಿಯನ್ನೂ ತ್ಯಜಿಸಿ ಸಮಾಜ ಬದಲಾಗುತ್ತಿದೆ ಆ ರೀತಿಯನ್ನೇ ಎಲ್ಲ ಕಥೆಗಳಲ್ಲಿಯೂ ಪ್ರತಿಬಿಂಬಿಸಿದಂತೆ ಸಣ್ಣ ಕಥೆಗಳಲ್ಲೂ ಪ್ರತಿಬಿಂಬಿಸಲಾಗಿದೆ. ಒಳ್ಳೆಯದೇ. ಆದರೆ ವಾಸ್ತವಿಕತೆಯ ಹೆಸರಿನಲ್ಲಿ ಕೆಲವು ಲೇಖಕರು ನೈತಿಕ ಪತನಕ್ಕೆ ಶಿರಬಾಗುತ್ತಿದ್ದಾರೆ. ಅಶ್ಲೀಲವನ್ನು ವಿವರಿಸುವುದು ಅವರ 'ಚಿಹ್ನೆ'ಯಾಗುತ್ತಿದೆ. ಸೌಕುಮಾರ್ಯಕ್ಕೆ ತಾವಿಲ್ಲದಂತಾಗಿದೆ. ದೌರ್ಜನ್ಯ ಕ್ರಮೇಣ ಅತಿಯಾಗುತ್ತಿದೆ.

ಇಂತಹ ಸ್ಥಿತಿಗೆ ಕಾರಣ— ಇಡೀ ವಿಶ್ವದಲ್ಲಿಯೇ ಬದುಕಿನ ಮೌಲ್ಯ ಇಳಿಮುಖವಾದಂತೆ ನಮ್ಮ ಸಾಹಿತ್ಯದಲ್ಲೂ ಭಾವಪತನವಾಗಿದೆಯೇನೋ' ಅಥವಾ ಅವಮಾನ, ಅಲಕ್ಷ್ಯ, ಧನ ಮತ್ತು ಶಾರೀರಿಕ ಸೌಖ್ಯಗಳು ಮಾತ್ರ ಮಾನವರಿಗೆ ಪರಮಾವಧಿ ಎಂಬ ಸಿದ್ಧಾಂತ ಬೋಧಕವಾದ ರಾಜಕೀಯ ಸಾಮಾಜಿಕ ವ್ಯವಸ್ಥೆಯಿಂದ ಇದೇ ಅಭ್ಯುದಯವೆಂದು ನಮ್ಮ ಯುವಕರು ಭಾವಿಸುತ್ತಿದ್ದಾರೇನೋ ಎನಿಸುತ್ತಿದೆ.

ಬಹುಮಾನಪಡೆದ. ಅನುಭವಶಾಲಿಯಾದ ಖ್ಯಾತ ಲೇಖಕರೊಬ್ಬರು ನನಗೆ ಪರಿಚಿತರು—ಅವರು ಅಭ್ಯುದಯ ಲೇಖನಗಳನ್ನು ಪ್ರಕಟಿಸಲು ಹೆದರುತ್ತಿದ್ದರು, ಈಗ ಅವರಿಂದ ಬರೀ ಅಂಥವೇ ಲೇಖನಗಳು ಹೊರಬರುತ್ತಿವೆ. ಅವರಿಗೆ ಬುದ್ಧಿ ಬಂದಂತೆ ಕಾಣುತ್ತದೆ "ಕಳೆದವಾರ ಒಂದು ಒಳ್ಳೆಯ ಕಥೆ ಹೊರಬಂತು" ಎಂದರು. ಕಥೆಯ ಸಾರಾಂಶ ಕೇಳಿದಾಗ ಹೇಳಿದರು: "ಒಬ್ಬ ಗೃಹಿಣಿಗೆ ತುಂಬಾ ಕಾಯಿಲೆಯಾಗಿತ್ತು. ಹಾಸಿಗೆ ಹಿಡಿದು ಮಲಗಿದ್ದುದರಿಂದ ಗೃಹಕೃತ್ಯ ನಿರ್ವಹಣೆಗೆ ಮತ್ತು ಗಂಡನಿಗೆ ಅಡಿಗೆ ಮಾಡಿ ಬಡಿಸಲೆಂದೂ ತನಗಿಷ್ಟು ನೆರವಾಗಲೆಂದೂ ತನ್ನ ತಂಗಿಯನ್ನು ಕರೆಸಿಕೊಂಡಳು. ಆ ತಂಗಿ ಭಾವನೊಂದಿಗೆ ಸಲಿಗೆಯಿಂದಿದ್ದು ಅನೈತಿಕವಾಗಿ ನಡೆದುಕೊಂಡಳು. ಕೊನೆಗೆ ಭಾವ, ನಾದಿನಿ ಪ್ರಿಯತಮ, ಪ್ರೇಯಸಿಯಾದರು. ಕೊನೆಗೆ ರೋಗಿಯಾದವಳನ್ನು ಬಿಟ್ಟು ಎಲ್ಲೋ ಹೊರಟು ಹೋದರು." ಎಂದರು. ಇದು ಕಥಾಸಾರ.

ನನಗೆ ಮೈನಡುಕ ಬಂದಂತಾಯ್ತು. "ಹಾಗಾದರೆ ಗಂಡನನ್ನೂ ತಂಗಿಯನ್ನೂ ನಂಬಿದ ಆ ಗೃಹಿಣಿಯ ಗತಿ ಏನು? ಮೇಲಾಗಿ ಅವಳು ಪಾಪ ಹಾಸಿಗೆ ಹಿಡಿದ ರೋಗಿಯಲ್ಲವೆ?" ಎಂದೆ. ಅವರು ವಿಕಟವಾದ ನಗೆ ನಕ್ಕು, "ಆ ವಿಷಯದಲ್ಲಿ ನಿನಗೇಕಷ್ಟು ವ್ಯಥೆ? ಅದು ಸಹಜ. ಶಾರೀರಿಕ ಬಯಕೆಗಳನ್ನು ಬಿಗಿ ಹಿಡಿದುಕೊಂಡು ಎಷ್ಟು ದಿನವೆಂದು ರೋಗಿಷ್ಟೆಗಾಗಿ ಕಾದಿರಲಾಗುತ್ತದೆ?" ಎಂದು ಕೇಳಿದರು. ನೈತಿಕ ಪತನವನ್ನು ಸಹಾನುಭೂತಿಯಿಂದ ಚಿತ್ರಿಸುತ್ತಿದ್ದರೆ ಪರಿಣಾಮವೇ ಬೇರೆಯಾಗಿರುತ್ತಿತ್ತು. ಆದರೆ ಲೇಖಕರು ನಿಲ್ಲಿಸಿದ ಘಟ್ಟ ಒಹಳ ಜನಗಳಿಗೆ ಮೆಚ್ಚಿಗೆಯಾಯ್ತು. ಏಕೆಂದರೆ ಅವರಲ್ಲಿ ಅಂಥವರು ಎಷ್ಟು ಜನರೋ!

ಇತ್ತೀಚಿಗೆ ಅಮೇರಿಕನ್ ಲೇಖಕರ ಪ್ರಭಾವ ನಮ್ಮ ಲೇಖಕರ ಮೇಲೂ ಬೀಳುತ್ತಿದೆ. ಮಾನ, ಮರ್ಯಾದೆಗಳನ್ನು ತೊರೆದ ನಾಯಕಿಯರು, ತಾವು ಹೆಣ್ಣುಗಳನ್ನು ವಶಪಡಿಸಿಕೊಂಡು ದುಷ್ಟ ವರ್ತನೆಯಿಂದ ಇದ್ದ ಹೊರತೂ ವ್ಯಕ್ತಿತ್ವವನ್ನಾಗಲಿ, ಪೌರುಷವನ್ನಾಗಲೀ ಪ್ರದರ್ಶಿಸಿದಂತಾಗುವುದಿಲ್ಲವೆಂಬ ತಪ್ಪು ಭಾವನೆಯಿಂದ ಭೋಗಲಾಲಸೆಯ ಗುಲಾಮರಾಗುವ ನಾಯಕರು ಇವರ ರಚನೆಗಳಲ್ಲಿ ಸುಳಿಯುತ್ತಿದ್ದಾರೆ.

ಈ ಒಂದು ಪ್ರಭಾವಕ್ಕೊಳಗಾಗದ ಇನ್ನೊಂದು ದರ್ಜೆಯ ಲೇಖಕರಿದ್ದಾರೆ. ಅವರು ಅತಿ ಬುದ್ಧಿವಂತರೆಂದುಕೊಳ್ಳುತ್ತಾರೆ. ಅವರ ಅನುಕರಣೆ ಇಂಗ್ಲಿಷ್ ಕಾದಂಬರಿಗಳು. ಭಾವಾನುವಾದ ಮಾಡಿದರೂ ಪ್ರೇರೇಪಣೆಯಿಂದ ಬರೆದರೂ ಹಾಗೆ ಹೇಳಿಕೊಳ್ಳಲು "ಅವಮಾನ" ಅದರಿಂದಾಗಿ ಸ್ವಂತ ಸೃಷ್ಟಿ ಎಂದು ಕೊಟ್ಟಿಕೊಂಡು ಹಣಗಳಿಸುವುದೂ ಹೆಸರುಗಳಿಸುವುದೂ ಅವರ ಹುಸಿ ಆಕಾಂಕ್ಷೆ. ಆದರೆ 'ಕಳ್ಳನ ಹೆಂಡತಿ ಎಂದಿಗೂ ರಂಡೆಯೇ' ಅದನ್ನವರು ಯೋಚಿಸರು.

ಯಾವ ಲೇಖಕನೇ ಆಗಲಿ. ಅನುವಾದವೇ ಆಗಲಿ ಅನುಕರಣೆಯೇ ಆಗಲಿ ಹಾಗೆಂದು ಹೇಳಿಕೊಂಡರೆ ಅವನ ಗೌರವಕ್ಕೆ ಮೆರುಗೆ ಹೊರತು ಕುಂದಲ್ಲ. ಅಂಥವರಿಗೆ ಧಿಕ್ಕಾರ.

ಕಥಾಸಾಹಿತ್ಯ ಇಷ್ಟೊಂದು ಅಡ್ಡದಾರಿಯ ಪಾಲಾದರೂ ಅಲ್ಲಲ್ಲಿ ಒಬ್ಬೊಬ್ಬರು ಎಳೆಮರೆಯ ಕಾಯಿಯಂತೆ ಒಂದೊಂದು ಉತ್ತಮ ಕಥೆಗಳನ್ನು ಹೆಣೆಯುತ್ತಿದ್ದಾರೆ. ಇದು ನಿಜವಾಗಿಯೂ ಹೆಮ್ಮೆ ಪಡುವಂಥದು. ಇಂಥವರು ಯಾವ ಪ್ರಭಾವಕ್ಕೂ ಒಳಗಾಗದವರು. ಸತತ ಅಭ್ಯಾಸ, ಸೃಜನ ತೃಷೆಯಿಂದ ರಚಿಸುತ್ತಾರೆ.

ಕ್ರಾಂತಿಕಾರರ ಲೇಖನಗಳು ಅಭ್ಯಾಸಕ್ಕೆ ಒಂದು ಬಗೆಯ ಚಿಹ್ನವಾದರೂ-ಇಂದು-ಆ ಒಂದು ದೃಷ್ಟಿಯಲ್ಲಿ ಲೇಖಕರು ಕಲಾರಾಧನೆ ಮಾಡಿದರೆ, ಕಲೆ ಚಿರಂಜೀವಿಯಾಗುಳಿಯುತ್ತದೆ. ಹಾಗೆ ಚಿರವಾಗಿರಲು ಅವಕಾಶವೂ ಇದೆ. ಡಿ ಎಚ್. ಲಾರೆನ್ಸನಿಗೂ ವಿಕ್ಟರ್ ಹ್ಯೂಗೋವಿಗೂ ಇರುವ ವ್ಯತ್ಯಾಸ ಗಮನಾರ್ಹ. ಇಬ್ಬರೂ ವಿರುದ್ಧ ಸ್ವಭಾವದ, ತತ್ತ್ವದ ಲೇಖಕರು.

ಅಶ್ಲೀಲವನ್ನು ಅರ್ಚಿಸುವಂಥವರು ಎಂದಿಗೂ ಕಲಾರಾಧಕರಾಗಲಾರರು.

ಈ ಯುಗದ ಕಾಲವೇಗಕ್ಕೂ ಸಂಸ್ಕೃತಿಗೂ "ಸಣ್ಣ ಕಥೆ" ಅತ್ಯಗತ್ಯ. ಅದನ್ನು ಪ್ರತಿಯೊಬ್ಬ ಕಥಾ ಲೇಖಕನೂ ಗವನಿಸಬೇಕು. ಸೃಜನ ತೃಷೆ, ಊಹೆ ನಮ್ಮಲ್ಲಿ ಅನೇಕರಿಗಿದೆ. ಆ ಶಕ್ತಿಯನ್ನು ಉಪಯೋಗಿಸಿಕೊಳ್ಳಬೇಕು. ಒಂದು ಕಲಾಕುಸುಮವನ್ನು ನಿರ್ಮಿಸಿ ಆನಂದಿಸುವ ಹಂಬಲವನ್ನು ಬೆಳೆಸಿಕೊಳ್ಳಬೇಕು. ಆಗಲೆ ಅಗ್ಗದ ಲೇಖನಗಳು ಸಾಹಿತ್ಯಸೀಮೆಯ ಬಳಿ ಸುಳಿಯಲು ಅಂಜುತ್ತವೆ.

ಮನೆಯ ಮುಂದೆ ಲಕ್ಷಣವಾಗಿ ಸಾರಿಸಿ ಗಡಿಬಿ ಚಿತ್ತಾರದ ರಂಗವಲ್ಲಿಯನ್ನಿರಿಸಿ ದೂರ ನಿಂತು ತೃಪ್ತಿಯಿಂದ ನೋಡುವ ಗೃಹಿಣಿಯ ಮನೋಭಾವ ಸೃಜನ ತೃಷೆಯಿಂದ ಕಾವ್ಯ ಕೃತಿಗಳನ್ನು ರಚಿಸಿ ಮುಗಿಸಿದ ಲೇಖಕನ ಮನೋಭಾವಗಳೆರಡೂ ತೃಪ್ತಿಯಿಂದಿರುತ್ತವೆ.

ಪರಮೇಶ್ವರನು ಕೂಡ ಸೃಷ್ಟಿಕಾರ್ಯ ಪೂರ್ಣವಾದನಂತರ ಸಂತೋಷದಿಂದ ತಾಂಡವನಾಡಿದನಂತೆ.



# ತಮಿಳು ಕಥಾಸಾಹಿತ್ಯ

ಮತ್ತೂರು ಕೃಷ್ಣಮೂರ್ತಿ

ತಮಿಳು ಸಾಹಿತ್ಯದ ಬೆಳವಣಿಗೆ ಉತ್ತಮ ರೀತಿಯಲ್ಲೇ ಪ್ರಾರಂಭವಾಗಿದೆ. "ಶಿಲಪ್ಪದಿಕಾರಂ" ದಿಂದ "ಕಂಬನ್" ರಾಮಾಯಣದ ವರೆಗಿನ ಕಾವ್ಯ ರಮ್ಯ, ನೀತಿಪ್ರದವಾಗಿದೆ ತಮಿಳು ಗದ್ಯದ ಕಥಾ ಸಾಹಿತ್ಯ 'ವೀರಮಾಮುನಿವರ್' ಎಂಬ ನಾಮದಲ್ಲಿ ಬರೆದ ಇಟಲಿಯ ಪಾದ್ರಿ ಫಾದರ್ ಕಾನ್‌ಸ್ಟಂಟೈನ್ ಬೆಸ್‌ಚಿಯಿಂದ ಪ್ರಾರಂಭವಾಯಿತು. ವೇದನಾಯಗಂ ಪಿಳ್ಳೈಯ "ಪ್ರತಾಪ ಮುದಲಿಯಾರ್ ಚರಿತ್ರಂ" ತಮಿಳಿನ ಪ್ರಥಮ ಸ್ವೀಕೃತ ಕಾದಂಬರಿಯಾಗಿ ಬಂದಿತು. (ಇದು ಕನ್ನಡದಲ್ಲಿಯೂ ಬಂದಿದೆ.) ಇದರ ನೆಳಲಿನಲ್ಲೇ ಬಂದ "ರಾಜಂ ಐಯರ್" ಅವರ "ಕಮಲಾಂಬಾಳ ಚರಿತ್ರಂ" ಮತ್ತು "ಮಾಧವಯ್ಯ" ಅವರ "ಪದ್ಮಾವತೀ ಚರಿತ್ರಂ" ಇವೂ ಸೇರಿ ಮೂರು ಕಾದಂಬರಿಗಳೂ ಪಾಶ್ಚಾತ್ಯ ಚಿಂತನ ಮತ್ತು ಪಾಶ್ಚಾತ್ಯ ಸಾಹಿತ್ಯದ ಪ್ರಭಾವವನ್ನು ತೋರಿದವು. ಆದರೆ ೨೦ ನೇ ಶತಮಾನದ ಆಧುನಿಕ ತಮಿಳು ಸಾಹಿತ್ಯದ ಬೇರು ಸುಬ್ರಮಣ್ಯ ಭಾರತಿಯವರ ಕವಿಕೃತಿ ಮತ್ತು ತಿರು. ವಿ. ಕಲ್ಯಾಣ ಸುಂದರನಾರ್ ಅವರ ಗದ್ಯ ಕೃತಿಯಲ್ಲಿ ಮೂಡಿಬಂದಿತು. ಹಾಗೆಯೇ ವಿ ವಿ. ಎಸ್. ಐಯರ್ ಅವರ "ಮಂಗೈಯರ್ ಕರಿಸಿಯನ್ ಕಾದಲ್" ಸಣ್ಣ ಕಥಾ ಸಂಕಲನವೂ ಸಣ್ಣ ಕತೆಗಳ ಏಳಿಗೆಯ ಅಂಕುರಾರ್ಪಣ ಎನ್ನಬಹುದು.

ಆಧುನಿಕ ತಮಿಳು ಸಾಹಿತ್ಯ ಬೌದ್ಧಿಕ ಪ್ರಪಂಚಕ್ಕೂ ತನ್ನ ಅಮೌಲ್ಯವಾದ ಕೊಡುಗೆಯನ್ನಿತ್ತಿದೆ. ತಿರು. ವಿ. ಕಲ್ಯಾಣ ಸುಂದರನಾರ್ ಅವರ ಕೃತಿಗಳು ಹಳತಿನ ತಲೆಮಾರಿನಲ್ಲಿ ಹೊಸತಿನ ತಿರುಳನ್ನು ಸಂಮಿಳಿಸಿ ಹಳತು-ಹೊಸತರ ಗಂಗಾ - ಯಮುನೆಯ ಸಂಗಮದ ಅನುಪಮ ಸಾಹಿತ್ಯಸಿದ್ಧಿಯಲ್ಲಿ ಪರ್ಯವಸಾನವಾಗಿವೆ ಅವರ ಕೃತಿಗಳಾದ "ಮಾನವ ಜೀವನ ಮತ್ತು ಮಹಾತ್ಮಾ ಗಾಂಧಿ" ಮತ್ತು "ಹೆಣ್ಣಿನದ ಗರಿಮೆ" ತಮಿಳು ಸಾಹಿತ್ಯದ ಪ್ರವಾಹದಲ್ಲೇ ಒಂದು ತಿರುವು ಎನ್ನಬಹುದು. ಮಾತ್ರವಲ್ಲ: ಇದು ಮುಂದಿನ ಆಧುನಿಕ ಸಾಹಿತ್ಯ ಪೀಳಿಗೆಯ ಉತ್ತಮ ಸಾಹಿತಿಗಳಾದ ಎ. ಎಸ್. ಜ್ಞಾನಸಂಬಂಧಂ, ಡಾ. ಮು. ವರದರಾಜನಾರ್, ಜಿ ರಾಜವೇಲು ಮತ್ತು ನಾ ಪಾರ್ಥಸಾರಥಿ ಇವರುಗಳಿಗೆ ಮಾರ್ಗದರ್ಶನ ನೀಡಿತು. ಈ ಸಾಹಿತ್ಯಧಾರೆಯ ಪ್ರಮುಖ ಗುಣ ಎಂದರೆ, ಇದು ಸರಳವೂ ಸುಲಭವೂ ಲಲಿತವೂ ಆಗಿದ್ದು ಸಾಮಾನ್ಯ ಓದುಗರೂ ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದಾದ ನೆಲೆಗೆ ಇಳಿದಿದ್ದುದೇ ಆಗಿದ್ದಿತು. ಆಧುನಿಕ ತಮಿಳು ಸಾಹಿತ್ಯದ ಪೋಷಕ ವರ್ಗದಲ್ಲಿ ಪತ್ರಕರ್ತ ಟಿ. ಎಸ್. ಚೊಕ್ಕಲಿಂಗಂ ಅವರ ಹೆಸರು ಬಹಳ ಮುಖ್ಯ.

ಇಪ್ಪತ್ತನೇ ಶತಮಾನದ ಮೂರನೇ ದಶಕದಲ್ಲಿ "ಮಣಿಕೊಡಿ' ಎಂಬ ತಮಿಳು ಸಣ್ಣಕಥಾ ಸಂಕಲನದ ನಿಯತಕಾಲಿಕದ ಬಿಡುಗಡೆ ಪ್ರಾರಂಭವಾಯಿತು. ಇದು ಬಹಳ ಕಾಲ ನಡೆಯಲಿಲ್ಲ. ಆದರೂ ಈ ಸಂಚಿಕೆ ತಮಿಳು ಸಾಹಿತ್ಯದ ಆಧುನಿಕ ಪ್ರಗತಿಗೆ ನೆರವಾಯಿತು. 'ಪುದುಮೈ ಪಿತ್ತನ್' (ಎಸ್. ವೃದ್ಧಾಚಲಂ) ಮತ್ತು ಕು. ಪಾ. ರಾಜಗೋಪಾಲನ್ ಇವರಿಬ್ಬರೂ ಪಾಶ್ಚಾತ್ಯ ಸಣ್ಣ ಕತೆಗಳಿಂದ ಪ್ರಭಾವಿತರಾಗಿ ಆ ಧಾಟಿಯನ್ನು ತಮಿಳಿನ ಸಣ್ಣಕಥಾ ಸಾಹಿತ್ಯದಲ್ಲಿಯೂ ಬಳಕೆಗೆ ತಂದರು. ಇವರ ಕೃತಿ ಪ್ರಕಾಶನ ಕೇವಲ ಮಣಿಕೊಡಿಯಲ್ಲಿ ಮಾತ್ರವೇ ಅಲ್ಲದೆ "ಕಲೈಮಗಳ್" ನಲ್ಲಿಯೂ ಪ್ರಕಾಶವಾಗುತ್ತಿತ್ತು. ಪುದುಮೈ ಪಿತ್ತನ್ ಮತ್ತು ರಾಜಗೋಪಾಲನ್‌ರವರ ಲೇಖನಿಯಲ್ಲಿ ಹಳತು-ಹೊಸತಿನ ಸಮರಸ ಸಂಗಮವಾಯಿತು.

ಭಾಷೆಯ ಗತಿ ಕಾಲದ ಗತಿಯ ಹೆಜ್ಜೆಯನ್ನು ಅನುಸರಿಸಿಯೇ ತೀರುತ್ತದೆ. ತಮಿಳು ಸಾಹಿತ್ಯವೂ ಇದಕ್ಕೆ ಅಪವಾದವಲ್ಲ. ಸ್ವಾತಂತ್ರ್ಯ ಹೋರಾಟದ ಪ್ರಭಾವಕ್ಕೆ ಆಧುನಿಕ ತಮಿಳು ಸಾಹಿತ್ಯವೂ ಸಿಕ್ಕಿತು. ಇಪ್ಪತ್ತನೇ ಶತಮಾನದ ಮೂರನೆ ದಶಕದಲ್ಲಿ 'ಕಲ್ಕಿ' ಯವರ (ಕಲ್ಕಿ ಕೃಷ್ಣಮೂರ್ತಿ) ಮೂಲಕ ಆಧುನಿಕ ತಮಿಳು ಸಾಹಿತ್ಯ ಸ್ವಾತಂತ್ರ್ಯ ಸಮರದ ವಿಚಾರ ಧಾರೆಯನ್ನು ಪ್ರವಹಿಸತೊಡಗಿತು. ಕಲ್ಕಿಯವರು ತಿರು. ವಿ ಕ (ತಿರು ವಿ ಕಲ್ಯಾಣ ಸುಂದರಂ) ಅವರ ಗರಡಿಯಲ್ಲಿ ಪಳಗಿ ತಮಿಳು ಸಾಹಿತ್ಯದ ಗದ್ಯ ಶೈಲಿಯನ್ನು ಸಾಧಿಸಿದರು. ಕಲ್ಕಿಯ ಲೇಖನಿಯಲ್ಲಿ ಹಾಯ್ದು ಬಂದ ತಮಿಳು ಗದ್ಯ ಸಾಹಿತ್ಯ ಅದೆಷ್ಟು ಸುಲಲಿತವೂ ಸರಳವೂ ಸರ್ವ ಸುಲಭವೂ ಆಗಿದ್ದಿತೆಂದರೆ ಕಠಿಣವಾದ ಆರ್ಥಿಕ, ಅಂತರರಾಷ್ಟ್ರೀಯ ಮತ್ತು ರಾಜಕೀಯ ಸಮಸ್ಯೆಗಳನ್ನು ಎಲ್ಲರಿಗೂ ಅರ್ಥವಾಗುವಂತೆ ವರ್ಣಿಸಲು, ತಿಳಿಸಲು ಕಲ್ಕಿ ಬಿಟ್ಟರೆ ಇಲ್ಲ ಎನ್ನುವಂತೆ ಇದ್ದಿತು. ಕಲ್ಕಿಯ 'ತ್ಯಾಗಭೂಮಿ' ಮತ್ತು 'ಮಕುಟಪತಿ' ಕಾದಂಬರಿಗಳು ಗತಕಾಲದ ಸ್ವಾತಂತ್ರ್ಯ ಸಮರದ ಕಥಾ ಸನ್ನಿವೇಶದ ಪ್ರತಿಬಿಂಬವಾಗಿವೆ ಎಂದರೆ ಅತಿಶಯೋಕ್ತಿಯಾಗಲಾರದು ಅವರ 'ಅತಿಯಾಸೆಗೆ' (ಕನ್ನಡದಲ್ಲಿ ಬಂದಿದೆ) ಸಾಹಿತ್ಯ ಅಕಾಡಮಿ ಪ್ರಶಸ್ತಿ ಗಳಿಸಿದೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಕಲ್ಕಿ ಐತಿಹಾಸಿಕ ಕಾದಂಬರಿಗಳ ಕರ್ತೃವಾದರು ಇದರಲ್ಲಿ ಅಖಿಲನ್ ಅವರು ಕಲ್ಕಿಗು ಪಟ್ಟಶಿಷ್ಯರಾಗಿದ್ದಾರೆ.

ಸಾಹಿತ್ಯ ಗತಿಯ ವಿವಿಧ ವೈವಿಧ್ಯಗಳು ಕಾಲಕ್ರಮದಲ್ಲಿ ಹಳತು – ಹೊಸತು ವಿಚಾರಧಾರೆಗಳ ಘರ್ಷಣೆ ಸಂಪ್ರದಾಯ ತಾತ್ಕಾಲಿಕ ಆಚಾರ-ವಿಚಾರಗಳ ನಡುವಿನ ಭಿನ್ನಾಭಿಪ್ರಾಯಗಳು ಇವುಗಳ ನೆರಳನ್ನು ಪ್ರತಿಬಿಂಬಿಸುತ್ತವೆ ಹಳೆಯ ಕಾಲದಲ್ಲಿ ಉಗಮವಾದಾಗ ಸಕಾರಣವಾಗಿದ್ದು, ಕಾಲಾನ ಕ್ರಮದಲ್ಲಿ ಕಾರಣ ಲುಪ್ತವಾಗಿ ಕೇವಲ ಕಾರ್ಯ, ಆಚಾರ ಮಾತ್ರ ರೂಢಿಯಲ್ಲಿದ್ದಾಗ ನವಪೀಳಿಗೆಯ ತಾರ್ಕಿಕ ಮಿದುಳಾದರೋ ತತ್ಕಾಲದಲ್ಲಿ ಕೇವಲ ಕಾರ್ಯವಾಗಿ ತೋರುತ್ತ ಸಕಾರಣ ಸಮರ್ಥನೆಯಿಲ್ಲದೆ ಇರುವಾಗ ಅಂಥ ಸಂದರ್ಭದಲ್ಲಿ ಪರಿಸ್ಥಿತಿ, ಕಾಲ, ದೇಶ, ವರ್ತಮಾನ, ವಾತಾವರಣ ಎಲ್ಲ ಬೇರೆಯಾದಾಗ ಹಳೆಯ

ಸಂಪ್ರದಾಯ ಹೊಸ ವಿಚಾರ, ಎರಡರ ಘರ್ಷಣೆ ಒದಗಿ, ಅಂಥ ಪರಿಸ್ಥಿತಿಯಲ್ಲಿ ಸಮತೋಲನ ಸ್ಥಿತಿಯಲ್ಲಿ ಇರಲಾಗದೆ ಹೋದಾಗ, ಬಿಸಿರಕ್ತದ ತರುಣ ಪೀಳಿಗೆ ಹಳತನ್ನು ಧಿಕ್ಕರಿಸಿ, ಹೊಸ ವಿಚಾರಧಾರೆಯೇ ಸಾಕು; ಹಳತು ನರಕ ಎಂಬ ಚಿಂತನವನ್ನು ತಮ್ಮ ಸಾಹಿತ್ಯಧಾರೆಯ ಮೂಲಕ ಪ್ರತಿಬಿಂಬಿಸಲು ಹೊರಟದ್ದು ಉಂಟು. ಅಂಥ ಹಂತ ತಮಿಳು ಸಾಹಿತ್ಯದಲ್ಲಿಯೂ ಒದಗಿದ್ದೇ ಆಗಿದೆ. ಅದರ ಫಲವೇ "ಸ್ವಮರ್ಯಾದಾ ಚಳುವಳಿ" ಹಾಗೂ "ದ್ರಾವಿಡ ಚಳುವಳಿ."

"ದ್ರಾವಿಡ ಚಳುವಳಿ" ಯ ಸಾಹಿತಿಗಳು ಭಾವಾವೇಶಕ್ಕೊಳಗಾಗಿ ವೀರವಾಣಿಯನ್ನು ಮೊಳಗಿಸಿದರು. ತಮಿಳು ಸಾಹಿತ್ಯ ಈ ಹಂತದಲ್ಲಿ ವೀರಭಾಷೆಯ ಹಂತವನ್ನು ಮುಟ್ಟಿತು. ಸಿ. ಎನ್. ಅಣ್ಣಾದೊರೈ ಮತ್ತು ಕರುಣಾನಿಧಿ ಈ ಹಂತದ ತಮಿಳು ಸಾಹಿತ್ಯದ ಪೋಷಕರಾದರು. ಈ ಹಂತದಲ್ಲಿ ತಮಿಳು ಸಾಹಿತ್ಯದ ಶೈಲಿ ತನ್ನ ಗತಿಯನ್ನು ಬದಲಿಸಿ "ವೀರಶೈಲಿ"ಗೆ ಜನ್ಮ ಕೊಟ್ಟಿತಾದರೂ ಈ ಸಾಹಿತ್ಯ ಶೈಲಿಯ ಕರ್ತೃಗಳ ಕೃತಿಯ ಉತ್ತಮಮಟ್ಟದ ಚಿಂತನ, ಮಥನ ತನ್ಮೂಲಕ ಪ್ರಾದುರ್ಭವಿಸಿದ ಸಾಹಿತ್ಯ ನವನೀತವಾಗಿಂದೆ ಕೇವಲ ಉದ್ರೇಕ, ಉದ್ವೇಗ, ಭಾವಾವೇಶದ ಸತ್ ಚಿಂತನರಹಿತ್ಯ ಸಾಹಿತ್ಯ ಶೈಲಿಯಾಗಿದ್ದಿತು. ಈ ರೀತಿಯ ಬಿಸಿ ಸಾಹಿತ್ಯ ಬಿಸಿ ರಕ್ತದ ತರುಣ ಪೀಳಿಗೆಗೆ ಪ್ರೋತ್ಸಾಹ ಕೊಟ್ಟಿತು. ದೇವನ್‌ರವರ ಶೈಲಿ, ಕಥಾ ನಿರೂಪಣಾ ವಿಧಾನ, ತಮಿಳು ಸಾಹಿತ್ಯದಲ್ಲಿ ಮೈಲಿಗಲ್ಲು.

ಮತ್ತೊಂದು ಅತಿರೇಕ ಎಂದರೆ ಪಂಡಿತ ಸಾಹಿತ್ಯ. ಪಂಡಿತ ಸಾಹಿತ್ಯ ಕೃತಿಗಳಿಂದ ಪಂಡಿತ ಶ್ರೇಷ್ಠರು "ಹಳತೇ ಚಿನ್ನ. ಹಳತೆಲ್ಲ ಹೊನ್ನು" ಎಂಬ ಪಂಗಡಕ್ಕೆ ಸೇರಿದವರಾಗಿದ್ದರು. ಈ ವರ್ಗದವರು ಹಳತಿನಲ್ಲಿ ಹೇಳಿದ ತಮಿಳು ಸಂಪ್ರದಾಯ ಕಥೆಗಳನ್ನೇ ರೂಪಾಂತರಿಸಿ ಕೃತಿಗಿಳಿಸುತ್ತಿದ್ದರು. ಸಮಯಕ್ಕೆ ಬೇಕಾದುದು ಎಂದರೆ ಹಳತಿನಲ್ಲಿಯ ಗುಣವನ್ನೂ ಹೊಸತಿನ ಗುಣವನ್ನೂ ಸಮನ್ವಯಗೊಳಿಸಿ ಆಧುನಿಕ ಪೀಳಿಗೆಗೆ ಮಾರ್ಗದರ್ಶನ ನೀಡಬೇಕಾದುದು. ಹಾಗೆ ಸಮಯಕ್ಕೆ ಒದಗಿದಂಥ ಕೃತಿಗಳಲ್ಲಿ ಡಾ॥ ಮು. ವರದರಾಜನಾರ್ ಅವರ ಕಾದಂಬರಿಗಳು, ಕು. ರಾಜವೇಲು ಅವರ ರಾಷ್ಟ್ರೀಯ ಸ್ವಾತಂತ್ರ್ಯ ಸಮರದ ಹಿನ್ನೆಲೆಯ ಕಾದಂಬರಿಗಳು ಹಾಗೂ ದೇಶೀಯ, ಸ್ಥಾನೀಯ, ಭಾಷಾಶೈಲಿಯನ್ನನುಕರಿಸಿ ಒರೆದಂಥ ಷಣ್ಮುಗಸುಂದರಂ, ತಿ.ಜಾನಕೀ ರಾಮನ್, ಶ್ರೀಮತಿ ಜೇಸುದಾಸನ್, ಜಯಕಾಂತನ್ ಮುಂತಾದವರ ಕೃತಿಗಳು ಕಿ. ವಾ. ಜಗನ್ನಾಥನ್‌ರವರು ಉದ್ದಾಮ ಪಂಡಿತರಾಗಿದ್ದು ಧಾರ್ಮಿಕ ವಿಚಾರಗಳನ್ನು ಜನಸಾಮಾನ್ಯಕ್ಕೂ ಅರ್ಥವಾಗುವ ರೀತಿಯಲ್ಲಿ ವಿವರಿಸಿದ್ದಾರೆ.

ಆಧುನಿಕ ತಮಿಳು ಸಾಹಿತ್ಯ ಕೃತಿಗಳಲ್ಲಿ ಪ್ರಮುಖವಾದ ಕೊಡುಗೆ ಅಖಿಲನ್ ಅವರದು. ಅವರ ಕಾದಂಬರಿಗಳು, ಕಥೆಗಳು ತತ್ಕಾಲದ ಸಮಸ್ಯೆಗಳ ಬಗ್ಗೆ ಕುರಿತವಾಗಿದ್ದು ವರ್ತಮಾನ ಸಮಾಜ ಚೇತನದ ಪ್ರತಿಬಿಂಬವಾಗಿವೆ. "ನೆಂಜಿಲ್ ಅಲೈಕಳ್" 'ಪಾವೈ ವಿಳಕ್ಕು', ಪುದು ವೆಳ್ಳಂ", "ಚಿತ್ತಿರ ಪಾವೈ", "ಪೊನ್ ಮಲರ್" ಇವು ಅಂಥ ಕೃತಿಗಳು. ಪೊನ್ ಮಲರ್ ಎಂಬ ಕಾದಂಬರಿಯ ಒಂದು ಲಕ್ಷ ಪ್ರತಿಗಳು ಒಂದೇ ವಾರದಲ್ಲಿ ಮಾರಾಟವಾಗಿ ಹೊಸ ಕ್ರಾಂತಿ ಎಬ್ಬಿಸಿದೆ.

ಮಹಿಳಾ ಸಾಹಿತಿಗಳಲ್ಲಿ ಸಮಾಜದ ಸಮಸ್ಯೆಯ ನೈಜ ನೆಲೆಯ ವಿವರಣೆಯನ್ನೂ ಅತಿ ಕ್ಲಿಷ್ಟವಾದ ಸಾಮಾಜಿಕ ಸಮಸ್ಯೆಯನ್ನೂ ಕಥಾತಂತುವಿನ ಹಂದರದಲ್ಲಿ ಹೆಣೆಯಬಲ್ಲವರು ಎಂದರೆ ರಾಜಂ ಕೃಷ್ಣನ್, ಅನುತ್ತಮಾ, ರಂಗನಾಯಕಿ.



# ಮಲಯಾಳದಲ್ಲಿ ಸಣ್ಣಕಥೆ

—ಕೆ. ಎಸ್. ಕರುಣಾಕರನ್

ಪಾಶ್ಚಾತ್ಯ ಸಾಹಿತ್ಯದ ಸಂಪರ್ಕದ ಪರಿಣಾಮವಾಗಿ ಭಾರತೀಯ ಭಾಷಾ ಸಾಹಿತ್ಯಗಳಲ್ಲಿ ಬೇರೆ ಬೇರೆ ಸಾಹಿತ್ಯ ಪ್ರಕಾರಗಳು ಮೂಡಿಬಂದಿರುವ ಅಂಶ ಸರ್ವವೇದ್ಯವಾದುದು. ಮಲಯಾಳ ಭಾಷಾ ಸಾಹಿತ್ಯದಲ್ಲಿ ಸಣ್ಣಕಥೆಯು ಆವಿರ್ಭಾವವಾದುದೂ ಇದೇ ಜಾಡಿನಲ್ಲೇ. ಆಂಗ್ಲ ವಿದ್ಯಾಭ್ಯಾಸವನ್ನು ಪಡೆದ ಕೆಲವಾರು ಮಹನೀಯರುಗಳು ಸಣ್ಣ ಕಥೆಗಳನ್ನು ಬರೆಯ ತೊಡಗಿದರು. ಇವರಲ್ಲಿ ಮುಖ್ಯರಾದವರೆಂದರೆ ವೇಂಗಯಿಲ್ ಕುಞ್ಞರಾಮನ್ ನಾಯನಾರ್ ಮೂರ್ಕೋತ್ ಕುಮಾರನ್, ಒಡುವಿಲ್ ಕುಞ್ಞಕೃಷ್ಣ ಮೆನೋನ್. ಸಿ. ಕುಞ್ಞರಾಮ ಮೆನೋನ್ (ಎಂ. ಆರ್. ಕೆ ಸಿ.), ಅಂಬಾಡಿ ನಾರಾಯಣ ಪೊದುವಾಳ್. ಕೆ. ಸುಕುಮಾರನ್ ಮೊದಲಾದವರು. ೧೮೯ಳಕ್ಕಾಗಲೇ ಮೂರ್ಕೋತ್ ಕುಮಾರನ್ ತಮ್ಮ ಕಥೆಗಳನ್ನು 'ಮಲಯಾಳ ಮನೋರಮ' ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು. ಮಲಯಾಳ ಸಣ್ಣಕಥೆಗಳಿಗೆ ಭದ್ರ ಬುನಾದಿಯನ್ನು ಹಾಕಿದ ಕೀರ್ತಿ ಇ. ಪಿ. ಕೃಷ್ಣ ಪಿಳ್ಳೆಯವರಿಗೆ ಸಲ್ಲಬೇಕು. "ಕೇಳೀ ಸೌಧ" ಎಂಬ ಆವರ ಕಥಾ ಸಂಕಲನ ಅತ್ಯಂತ ಜನಪ್ರಿಯವಾಯಿತು. ರಾಮ ವಾರ್ಯರ್ ಎಂಬವರೂ ಒಳ್ಳೆಯ ಕಥೆಗಳನ್ನು ಬರೆದಿರುವರು.

ಎ. ಬಾಲಕೃಷ್ಣ ಪಿಳ್ಳೆ (ಕೇಸರಿ)ಯವರ ರಂಗಪ್ರವೇಶವಾದಂದಿನಿಂದ ಸಣ್ಣಕಥೆಗಳಿಗೆ ಪರಿವರ್ತನೆಯ ಹೊಸ ಗಾಳಿ ಬೀಸಿತು. ಅವರ ನಾಯಕತ್ವದಲ್ಲಿ ಕೇರಳ ನಾಡಿನಾದ್ಯಂತ ಅನೇಕಾನೇಕ ಯುವಕರು ಸಣ್ಣಕಥೆಗಳ ರಚನೆಗೆ ತೊಡಗಿದರು. ತಗಳಿ ಶಿವಶಂಕರನ್ ಪಿಳ್ಳೆ, ಕೇಶವದೇವ್ ಮೊದಲಾದವರು ವಾಸ್ತವವಾದಿ ಸಂಪ್ರದಾಯದ ಅಗ್ರಗಣ್ಯ ಲೇಖಕರಾದರು. ಕನ್ನಡದಲ್ಲಿ ಪ್ರಗತಿಶೀಲ ಪಂಥದವರು ಹುಟ್ಟಿಕೊಂಡಂತೆ ಮಲಯಾಳದಲ್ಲಿ ಪುರೋಗಮನ ಸಾಹಿತ್ಯ ಪಂಥದವರ ಉದಯವಾಯಿತು. ಸಮಕಾಲೀನ ಸಮಾಜಜೀವನದ ವಿರೀತಗಳ ನಗ್ನ ಚಿತ್ರಗಳನ್ನು ಕೊಡುವುದರಲ್ಲಿ ಇವರೆಲ್ಲ ಕೃತಕೃತ್ಯರಾಗಿದ್ದಾರೆ. ಕೇಶವದೇವ್ ಅವರಂತೆ ಪ್ರತಿಪಾದನ ರೀತಿಯಲ್ಲಿ ಕಲಾಪ್ರಜ್ಞೆಯನ್ನು ಬೆರೆಸಲೂ ವೈವಿಧ್ಯವನ್ನು ತರಲೂ ಸಮರ್ಥರಾದ ಕಥೆಗಾರರು ಮಲಯಾಳದಲ್ಲಿ ಮತ್ತೊಬ್ಬರಿಲ್ಲ. ಎಸ್. ಕೆ. ಪೊಟ್ಟೆಕ್ಕಾಡ್, ವೈಕಂ ಮಹಮ್ಮದ್ ಬಷೀರ್, ಪೊನ್‌ಕುನ್ನಂ ವರ್ಕಿ, ಲಲಿತಾಂಬಿಕಾ ಅಂತರ್ಜನಂ, ಪೊನ್‌ಕುನ್ನಂ ರಾಫಿ, ಕಾರೂರ ನೀಲಕಂಠ ಪಿಳ್ಳೆ, ಉರೂಬ್, ನಾಗವಳ್ಳಿ ಆರ್. ಎಸ್ ಕುರುಪ್ ಮುಂತಾದವರು ಶಾಶ್ವತವಾದ ಜೀವನಮೌಲ್ಯಗಳನ್ನು ಪ್ರತಿಪಾದಿಸುವ ಶ್ರೇಷ್ಠ ಸಣ್ಣ ಕಥೆಗಳನ್ನು ಮಲೆಯಾಳದಲ್ಲಿ ಬರೆದಿದ್ದಾರೆ; ಭಾಷೆಯ ಕಸುವನ್ನು ಹಿಗ್ಗಿಸಿದ್ದಾರೆ. ನಾಗವಳ್ಳಿಯವರು ವೈಜ್ಞಾನಿಕ ಕಥೆ-ಕಾದಂಬರಿಗಳನ್ನು ಸೃಷ್ಟಿಸಿರುವ ಸಂಗತಿ ಸ್ಮರಣೀಯವಾದುದು.

## ಸ್ವಾತಂತ್ರ್ಯಾನಂತರ

ಸ್ವಾತಂತ್ರ್ಯಾನಂತರ ಭಾರತದ ಆರ್ಥಿಕ ಸಾಮಾಜಿಕ ರಾಜಕೀಯ ಹಾಗೂ ನೈತಿಕ ಸಮಸ್ಯೆಗಳಲ್ಲಿ ಕೂಲಂಕಷವಾಗಿ ಅಧ್ಯಯನ ನಡೆಸಿ ತಮ್ಮ ಸೂಕ್ಷ್ಮ ಸಂವೇದನೆಗಳಿಗೆ ಬೌದ್ಧಿಕ ಆವರಣ ಕೊಟ್ಟು ಪರಿಣಾಮಕಾರಿ ಅಭಿವ್ಯಕ್ತಿ ನೀಡಿದ ಹಲವಾರು ಕಥಾ ಲೇಖಕರು ಮಲಯಾಳದಲ್ಲಿದ್ದಾರೆ. ಎಂ ಟಿ. ವಾಸುದೇವನ್ ನಾಯರ್, ಮಾಧವಿ ಕುಟ್ಟಿ ಕೋವಿಲನ್ ಜಿ. ವಿವೇಕಾನಂದನ್. ಮಲಯಾಟ್ಟೂರ್ ರಾಮಕೃಷ್ಣನ್ ಪಾರಪ್ಪುರಂ ಎನ್. ಮೋಹನನ್ ಇ ವಾಸು ರಾಜಲಕ್ಷ್ಮಿ (ಈಗ ದಿವಂಗತ) ಎನ್. ಪಿ ಮುಹಮ್ಮದ್ ನಂದನಾರ್. ಇ. ಎಂ. ಕೋವೂರ್- ಮೊದಲಾದವರು ಇವರಲ್ಲಿ ಪ್ರಸಿದ್ಧರು. ನವ್ಯ ಕಥೆಗಳೂ ಮಲೆಯಾಳದಲ್ಲಿ ಮೂಡಿಬಂದಿವೆ. ಪಿ. ಕೆ ಎಸ್. ಜಿ ಕೆ. ವಿ, ಮುಕುಂದನ್, ವಿಜಯನ್ ಮೊದಲಾದವರು ಈ ನವ್ಯ ಪೀಳಿಗೆಯ ಸತ್ವಶಾಲಿಗಳೂ ಭಾವನಾ ಸಂಪನ್ನರೂ ಆದ ಕಥಾ ಲೇಖಕರು.

ಒಟ್ಟಿನಲ್ಲಿ ಮಲಯಾಳ ಸಣ್ಣಕಥೆ ಅಂಗಸೌಷ್ಠವದಿಂದಲೂ ಕಲಾವಂತಿಕೆಯಿಂದಲೂ ಸರ್ವಸಂಪನ್ನವಾಗಿ ಶೀಘ್ರಗತಿಯಿಂದ ಬೆಳೆಯುತ್ತಿದೆಯೆಂದೇ ಹೇಳಬೇಕು. ವಿಶ್ವಸಾಹಿತ್ಯದಲ್ಲಿ ಗೌರವಸ್ಥಾನವನ್ನು ಪಡೆದ ಮಲಯಾಳ ಕಥೆಗಳೂ ಇವೆ. ಇಂದು ಕೇರಳದ ಸಜೀವವಾದ ಸಾಹಿತ್ಯ ಪ್ರಕಾರ ಸಣ್ಣಕಥೆಯೆಂದರೆ ಉತ್ಪ್ರೇಕ್ಷೆಯಾಗಲಾರದು.

## ಬೆಡಗಿನ ಲೋಕದಲ್ಲಿ . . . .

# ನೂರು ಚಿತ್ರಗಳ ನೆನಹುಗಳು

— ಅಶ್ವತ್ಥ



ಸ್ಟುಡಿಯೋಕ್ಕೆ ಹೊರಡಲಣಿಯಾದಾಗ

'ನನ್ನ ನೂರು ಚಿತ್ರಗಳ ನೆನಹುಗಳು.' 'ಕರ್ಮವೀರ' ಪತ್ರಿಕೆಯ ಸಂಪಾದಕರು ನನಗೆ ಕೊಟ್ಟಿರುವ ವಿಷಯವಿದು. ನೂರು ಚಿತ್ರಗಳು ಇಷ್ಟು ಬೇಗ ಪೂರ್ತಿಗೊಂಡವೆ? ಎಂಬ ಅಚ್ಚರಿ ಒಂದೆಡೆಯಾದರೆ, ಯಾವ ಚಿತ್ರದ ಪಾತ್ರವೂ ನನ್ನ ಮನಸ್ಸಿಗೆ ತೃಪ್ತಿ ನೀಡಲಿಲ್ಲವಲ್ಲ– ಎಂಬ ಅಸಮಾಧಾನ ಇನ್ನೊಂದೆಡೆ.

ಆದಷ್ಟು ನೈಜತೆಯಿಂದ ಅಭಿನಯಿಸುವುದು ನನ್ನ ಧ್ಯೇಯ. ಆತ್ಮತೃಪ್ತಿ ಇಲ್ಲದೆ ಪಾತ್ರ ಜೀವಂತವಾಗದೆಂಬುದು ನನ್ನ ನಂಬಿಕೆ. ಹಾಗೆ ನೂರು ಚಿತ್ರಗಳನ್ನು ಜರಡಿಗೆ ಹಿಡಿದು ನೋಡಿದಾಗ ಕೆಲವು ಚಿತ್ರಗಳ ಪಾತ್ರಗಳಾದರೂ ನನಗೆ ಸ್ವಲ್ಪ ಮಟ್ಟಿನ ತೃಪ್ತಿ ನೀಡಿವೆ ಎಂಬುದೇ ನನ್ನ ಸಮಾಧಾನ.

ಬಲವಂತದಿಂದ ಬಣ್ಣ ಹಚ್ಚಿಕೊಂಡವ ನಾನು. ಅಭಿನಯದ ಗಂಧವೇ ಗೊತ್ತಿಲ್ಲದ ನನಗೆ ನಾಟಕದ ಹುಚ್ಚು ಹಿಡಿಸಿದವರು ಈಗ ಧಾರವಾಡ ಆಕಾಶವಾಣಿಯಲ್ಲಿರುವ ಶ್ರೀ ವಾಮನರಾವ್ ಅವರು.

ಹಾಗೆ ನನ್ನ ಅವರ ಸ್ನೇಹವೂ ಆಕಸ್ಮಿಕ. ಬಹುಶಃ ೧೯೪೪ ರ ಮಾತು. ಆಗ ಶ್ರೀ ವಾಮನರಾವ್ ಹಾರ್ಡ್ವಿಕ್‌ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು. 'ಮಯೂರ ಆರ್ಟ್ಸ್' ಎಂಬ ಹವ್ಯಾಸಿ ನಾಟಕ ತಂಡವೊಂದನ್ನು ಅವರು ಸಂಘಟಿಸಿದ್ದರು. ವಿದ್ಯಾಭ್ಯಾಸ ಮುಂದುವರೆಸಲಾಗದೆ ಮುಂದಿನ ಜೀವನದ ತಲಾಷ್ ನಡೆಸಿದ ನನಗೆ ಹವ್ಯಾಸಿ ತಂಡದ ಪರಿಚಯವೂ ಜೊತೆಗೇ ಶ್ರೀ ವಾಮನರಾಯರ ಪರಿಚಯವೂ ಆಯಿತು.

ವಿದ್ಯಾರ್ಥಿವೃಂದದ ನಾಟಕವೊಂದರಲ್ಲಿ ಅವರು ಮಾತಿಲ್ಲದ ಪಾತ್ರವೊಂದನ್ನು ನೀಡಿದರು. ನಾನು ಮರುಮಾತಿಲ್ಲದೆ ಒಪ್ಪಿದೆ. ನನ್ನ ಬಣ್ಣದ ಜೀವನದ ಹೊಸ ಅಧ್ಯಾಯ ಆರಂಭವಾದುದು ಹೀಗೆ.

ವಿದ್ಯಾಭ್ಯಾಸ ಮುಂದುವರೆಸಲಾಗದೆ ನಿರುದ್ಯೋಗಿಯಾಗಿ ಅಲೆಯುತ್ತಿದ್ದೆ ಎಂದು ಹೇಳಿದೆನಲ್ಲ! ಇಲ್ಲಿ ನಾನು ಪ್ರಾರಂಭದ ಜೀವನದ ಬಗ್ಗೆ ನಾಲ್ಕು ಮಾತು ಹೇಳಿದರೆ ಅಪ್ರಸ್ತುತವಾಗಲಾರದು.

ಆಗರ್ಭ ಶ್ರೀಮಂತನಾಗಿ ಹುಟ್ಟಿದವ ನಾನಲ್ಲ. ೧೯೨೫ ರಲ್ಲಿ ನಾನು ಮೈಸೂರಿನಲ್ಲಿ ಜನಿಸಿದೆ. ನಮ್ಮದು ಸಂಪ್ರದಾಯಸ್ಥ ಮನೆತನ. ತಂದೆ ಹೊಳೆನರಸಿಪುರದ ಕರಗನಹಳ್ಳಿ ಸುಬ್ಬರಾಯರು. ತಾಯಿ ಸಾಕಮ್ಮ. ತಂದೆ ವೃತ್ತಿಯಲ್ಲಿ ಪುರೋಹಿತರು.

ಇಬ್ಬರು ಸಹೋದರಿಯರು ಹಾಗೂ ಒಬ್ಬ ಸಹೋದರನ ಮಧ್ಯೆ ಹುಟ್ಟಿದ ನನಗೆ ಅಶ್ವತ್ಥನಾರಾಯಣ ಎಂದು ಹೆಸರಿಟ್ಟರು. ದೊಡ್ಡ ಕುಟುಂಬ. ಅಲ್ಪ ಆದಾಯ. ಹೀಗಾಗಿ ಕಷ್ಟದ ಜೀವನದಲ್ಲೇ ನಾನು ಬೆಳೆದೆ.

ಮೂರು ವರುಷದ ಮಗುವಾಗಿದ್ದಾಗಿನಿಂದಲೇ ಸೋದರತ್ತೆ ಶ್ರೀಮತಿ ತಿಪ್ಪಮ್ಮ ಅವರ ಮಡಿಲಿನ ಸಾಕುಮಗುವಾಗಿ ಬೆಳೆದರೂ ಹದಿಮೂರನೆಯ ಎಳವೆಯಲ್ಲಿ ತಾಯಿಯನ್ನು ಕಳೆದುಕೊಂಡಾಗ ಜೀವನದಲ್ಲಿ ನಾನು ಮೊದಲ ಪೆಟ್ಟನ್ನು ಅನುಭವಿಸಿದೆ. ಐದನೆಯ ವಯಸ್ಸಿನಲ್ಲಿ ತಂದೆಯವರು ನಮ್ಮಿಂದ ಅಗಲಿದರು. ಇಂಥ ಆಘಾತಗಳ ನೋವಿನ ದಿನಗಳಲ್ಲಿ ನನಗೆ ವಾತ್ಸಲ್ಯದ ಹಸ್ತ ನೀಡಿ ಪೋಷಿಸಿದವರು ನನ್ನ ಸೋದರತ್ತೆ. ನನ್ನ ಇಂದಿನ ಸ್ಥಿತಿಗೆ ಅವರೇ ಕಾರಣ.

ಮೈಸೂರಿನ ಮಂಡಿಪೇಟೆಯ ಸರ್ಕಾರಿ ಗಂಡುಮಕ್ಕಳ ಶಾಲೆಯಿಂದ ಆರಂಭವಾದ ನನ್ನ ಶಿಕ್ಷಣವು ಯುವರಾಜ ಕಾಲೇಜಿನ ಇಂಟರ್‌ಮೀಡಿಯೇಟ್ ಪರೀಕ್ಷೆಯವರೆಗೂ ಸರಾಗವಾಗಿಯೇ ಸಾಗಿತು.

ಆದರೆ ವಿಧಿ ನನ್ನ ಓದನ್ನು ಪೂರ್ತಿಗೊಳಿಸಲು ಅವಕಾಶ ನೀಡಲಿಲ್ಲ. ನನ್ನ ಬಾಳಿನಾಸರೆಯಾಗಿದ್ದ ಸೋದರತ್ತೆಯೂ ನನ್ನನ್ನು ಬಿಟ್ಟು ಅಗಲಿದಾಗ– ನನಗೆ ದಿಕ್ಕೇ ತೋಚದಂತಾಯಿತು. ಇನ್ನೊಂದೆಡೆ ೧೯೪೨ ರ ಸ್ವಾತಂತ್ರ್ಯ ಸಂಗ್ರಾಮದ ಕರೆಗೆ ನಾನು ಓಗೊಟ್ಟೆ. ಸರ್ವಶ್ರೀ ಎಂ. ವಿ. ಕೃಷ್ಣಪ್ಪ, ಶಾರದಾ ಪ್ರಸಾದ್, ಹೆನ್ರಿ ದೇವದಾಸ್ ಮೊದಲಾದ ಸಹಪಾಠಿಗಳ ಪ್ರಚೋದನೆಗೆ ಒಳ

ಗಾದ- ಇದರ ಫಲಶ್ರುತಿ: ಓದಿಗೆ ಪೂರ್ತಿ ವಿರಾಮ.

ಅರ್ಧಕ್ಕೇ ನಿಂತ ವಿದ್ಯಾಭ್ಯಾಸ, ಆಶ್ರಯ ನೀಡಿದ ಸೋದರತ್ತೆಯ ಅಕಾಲ ಮೃತ್ಯು ಇವುಗಳಿಂದ ಉದ್ವಿಗ್ನನಾಗಿ ಉದರ ನಿರ್ವಹಣೆಗಾಗಿ ಕೆಲಸದ ಅನ್ವೇಷಣೆ ನಡೆಸಿದಾಗಲೇ ಶ್ರೀ ವಾಮನರಾಯರ ಪರಿಚಯವಾದದ್ದು.

ನನ್ನ 'ನಿರ್ಭಾಗ್ಯ ಜೀವನ'ದ ಪ್ರತೀಕವೆಂಬಂತೆ 'ನಿರ್ಭಾಗ್ಯ ಭಾರತಿ' ಎಂಬ ನಾಟಕದಲ್ಲಿ ಹುಡುಗನ ಪಾತ್ರವನ್ನು ನಿರ್ವಹಿಸಬೇಕಾಯಿತು. ಸಾಲದ್ದಕ್ಕೆ ಈ ಒಂಟಿ ಜೀವಿಗೆ ಸಂಸಾರದ ಗಂಟು ಹಾಕಲಾಯಿತು. ೧೯೪೩ ರಲ್ಲಿ ನಿರುದ್ಯೋಗಿಯಾಗಿದ್ದಾಗಲೇ ನಾನು ಶಾರದಾಳ ಕೈ ಹಿಡಿದದ್ದು.

ಪುಣ್ಯಕ್ಕೆ ೧೯೪೪ ರಲ್ಲಿ ಆಹಾರ ಇಲಾಖೆಯಲ್ಲಿ ನೌಕರಿ ಸಿಕ್ಕಿತು. ಇದೇ ಹೊತ್ತಿಗೆ ಶ್ರೀ ವಾಮನರಾಯರೂ ಅಧ್ಯಾಪಕ ವೃತ್ತಿಯಿಂದ ಆಕಾಶವಾಣಿಗೆ ಸೇರಿದ್ದರು. ಆಗ ನನಗೆ ಮತ್ತೊಂದು ಪುಟ್ಟ ಬಂದಂತಾಯಿತು. ರಂಗಭೂಮಿ-ಆಕಾಶವಾಣಿ ಎರಡರಲ್ಲೂ ನನಗೆ ಒಳ್ಳೆಯ ಅವಕಾಶ ಸಿಕ್ಕಿತು.

ಮುಂದೆ ಶ್ರೀ ವಾಮನರಾವ್ ಅವರಿಗೆ ದೆಹಲಿಗೆ ವರ್ಗವಾಯಿತು. ಆದರೂ ನಾನು ಹವ್ಯಾಸಿ ನಾಟಕಗಳಲ್ಲಿ ಅಭಿನಯಿಸುವುದು ನಿಲ್ಲಲಿಲ್ಲ. ನಾನು ಚಿತ್ರರಂಗ ಸೇರಲು ಅವಕಾಶ ದೊರೆತದ್ದೂ ಇದೇ ಸಮಯ. ಅದೂ ತೀರ ಅನಿರೀಕ್ಷಿತವಾಗಿ.

೧೯೫೪ ರ ಒಂದು ದಿನ. ಶಾರದಾ ವಿಲಾಸ್ ಕಾಲೇಜಿನ ಡ್ರಿಲ್ ಟೀಚರೊಬ್ಬರು ಕಾಲವಾದರು. ಪಾಪ ಅವರದು ತುಂಬು ಸಂಸಾರ. ಅವರ ನಿಧನದಿಂದ ಕುಟುಂಬದ ಪರಿಸ್ಥಿತಿ ಶೋಚನೀಯವಾಯಿತು.

ಆ ಕುಟುಂಬಕ್ಕೆ ಏನಾದರೂ ನೆರವು ನೀಡಲು ನಮಗೆ ಆಸೆಯಾಯಿತು. ಶ್ರೀ ಶಾರದಾ ಪ್ರಸಾದ್ ಅವರ ಸಹೋದರ ಶ್ರೀ ಎಚ್. ವೈ. ರಾಜಗೋಪಾಲ್ ಅವರು ಸಹಾಯಾರ್ಥ ನಾಟಕ ಪ್ರದರ್ಶನವೊಂದನ್ನು ನೀಡಲು ನಿರ್ಧರಿಸಿದರು.

ಸರಿ ೧೯೫೪ ರ ಏಪ್ರಿಲ್ ತಿಂಗಳಲ್ಲಿ ಮೈಸೂರಿನ ಟೌನ್‌ಹಾಲಿನಲ್ಲಿ ನಾವು ಶ್ರೀ ಪರ್ವತವಾಣಿ ಅವರ 'ವಾರ್ಷಿಕೋತ್ಸವ' ಎಂಬ ನಾಟಕವನ್ನು ಪ್ರದರ್ಶಿಸಿದೆವು. ಅದರಲ್ಲಿ ನಾನು ನಿರ್ವಹಿಸಿದ್ದು ಬ್ಯಾಂಕ್ ಅಕೌಂಟೆಂಟ್ ರಂಗಣ್ಣನ ಪಾತ್ರ.

ಆಗ ನಾನಿನ್ನೂ ಸರ್ಕಾರಿ ನೌಕರಿಯಲ್ಲಿದ್ದೆ. ನಾಟಕದ ಮರುದಿನ ನಾನು ಆಫೀಸಿನಲ್ಲಿದ್ದಾಗ "ಚಿತ್ರ ನಿರ್ದೇಶಕ ಶ್ರೀ ಕೆ. ಸುಬ್ರಹ್ಮಣ್ಯಂ ಬರಲು ಹೇಳಿದ್ದಾರೆ" ಎಂದು ತುರ್ತಾದ ಕರೆ ಬಂದಿತು.

ಆಶ್ಚರ್ಯದಿಂದಲೇ ನಾನವರನ್ನು ಹೋಗಿ ಭೇಟಿಯಾದೆ. ಹಿಂದಿನ ದಿನ ಅವರು ನಾಟಕವನ್ನು ವೀಕ್ಷಿಸಿದ್ದರಂತೆ. ನನ್ನ ಅಭಿನಯದ ಬಗ್ಗೆ ಮೆಚ್ಚಿಗೆ ಸೂಚಿಸಿ "ನಮ್ಮ 'ಸ್ತ್ರೀರತ್ನ' ಚಿತ್ರದಲ್ಲಿ ನಿಮಗೊಂದು ಪಾತ್ರ ನೀಡಲು ನಿರ್ಧರಿಸಿದ್ದೇವೆ. ಒಪ್ಪಿಗೆಯೆ?" ಎಂದರು.

ಸರಿ, ಅನಿರೀಕ್ಷಿತ ಆಹ್ವಾನವನ್ನು ನಾನು ಸ್ವೀಕರಿಸಿದೆ. ಸುಬ್ರಹ್ಮಣ್ಯಂ ಆಯ್ಕೆ ಮಾಡಿದ ಈ ಹೊಸ ನಟನಿಗೆ ಶ್ರೀ ಅ. ನ. ಕೃಷ್ಣರಾಯರು ಹಾಗೂ 'ಸ್ತ್ರೀರತ್ನ' ಚಿತ್ರದ ನಿರ್ಮಾಪಕರಾದ ಪ್ರೀಮಿಯರ್ ಸ್ಟುಡಿಯೊ ಮಾಲಿಕ ಶ್ರೀ ಬಸವರಾಜಯ್ಯನವರು ಅಸ್ತು ಎಂದರು.

ನಾನು ಚಿತ್ರರಂಗ ಪ್ರವೇಶಿಸಿದ್ದು ಹೀಗೆ. ನನ್ನ ಪ್ರಥಮ ಚಿತ್ರದಲ್ಲೇ ನಡೆದ ಸ್ವಾರಸ್ಯಕರ ಪ್ರಸಂಗವೊಂದು ನನಗಿಲ್ಲಿ ನೆನಪಾಗುತ್ತದೆ.

ಯಾವ ಸನ್ನಿವೇಶದಲ್ಲೂ ಕ್ಯಾಮರಾ ಎದುರಿಸುವದು ನನಗೆ ತೊಂದರೆ ಎನಿಸದಿದ್ದರೂ ಒಂದು ದೃಶ್ಯದಲ್ಲಿ ಮಾತ್ರ ನಾನು ಬೆವತು ಬಿಟ್ಟೆ.



ಆಸಕ್ತರ ಶುಭ ಸಂದೇಶ

ಚಿತ್ರದ ನಾಯಕಿ ಸಂಧ್ಯಾ, ಆ ಚಿತ್ರದಲ್ಲಿ ನನ್ನ ಹೆಂಡತಿಯ ಪಾತ್ರ ವಹಿಸಿದ್ದರು. ನಾನು ಸಂಧ್ಯಾ ಅವರ ಜೊತೆ ಪತಿ-ಪತ್ನಿಯರಂತೆ ತೀರ ಅನ್ಯೋನ್ಯವಾಗಿ ಅಭಿನಯಿಸುವ ಪ್ರಸಂಗ ಬಂದಿತು. ನಾನು ಹೆಂಡತಿಯ ಮೈ ಮುಟ್ಟಬೇಕಾದ ಸನ್ನಿವೇಶ. 'ಫ್ರೀಯಾಗಿ ಅಭಿನಯಿಸು; ಆಕೆ ನಿನ್ನ ಹೆಂಡತಿ' ಎಂದು ನಿರ್ದೇಶಕರು ಎಷ್ಟು ಹೇಳಿದರೂ ನನಗೆ ಧೈರ್ಯವಾಗಲಿಲ್ಲ.

ಮೊದಲ ಬಾರಿ ಪರಸ್ತ್ರೀ ಒಬ್ಬಳನ್ನು ಮುಟ್ಟುತ್ತಿದ್ದೇನಲ್ಲ ಎಂಬ ಅಳುಕು ನನಗೆ. ನಂತರ ರಷ್ಯ್ ನೋಡಿದವರೆಲ್ಲ ಆ ದೃಶ್ಯದಲ್ಲಿ ನಾನು ಚೆನ್ನಾಗಿ ಅಭಿನಯಿಸಿಲ್ಲ ಎಂದು ಷರಾ ಹಾಕಿದರು.

'ಸ್ತ್ರೀರತ್ನ' ಚಿತ್ರದಲ್ಲಿ ನನ್ನ ನಾಯಕನ ಪಾತ್ರವನ್ನು ಮೆಚ್ಚಿದ ಶಂಕರಸಿಂಗರು ತಾವು ತಯಾರಿಸುತ್ತಿದ್ದ 'ಶಿವಶರಣೆ ನಂಬಿಯಕ್ಕ' ಚಿತ್ರದಲ್ಲಿ ಅವಕಾಶ ನೀಡಿದರು. ನಂತರ 'ಕಚದೇವಯಾನಿ' 'ಚಿಂತಾಮಣಿ' ಚಿತ್ರಗಳಲ್ಲಿ ಅಭಿನಯಿಸಿದೆ.

ಹತ್ತು ವರ್ಷಗಳ ಸರ್ಕಾರಿ ನೌಕರಿಯಿಂದ ಜಿಗುಪ್ಸೆಗೊಂಡಿದ್ದ ನನ್ನ ಮನಸ್ಸು ಬಣ್ಣದ ಬದುಕಿನಲ್ಲೇ ಜೀವನವನ್ನು ರೂಪಿಸಿಕೊಳ್ಳಲು ಪ್ರೇರೇಪಿಸಿತು. ೧೯೫೫ ರಲ್ಲಿ ನೌಕರಿಗೆ ಶರಣೆಂದೆ.

ಕೆಲಸಕ್ಕೆ ರಾಜೀನಾಮೆ ನೀಡುವಾಗ ನಾನು ಯಾರ ಅಭಿಪ್ರಾಯ, ಸಲಹೆಗಳನ್ನೂ ಕೇಳಲಿಲ್ಲ. ನನ್ನ ಆತುರದ ಕೆಲಸಕ್ಕಾಗಿ ಸ್ನೇಹಿತರು ಹಾಗೂ ಮನೆಯ ಜನರ ನಾನಾ ಪ್ರಶ್ನೆಗಳನ್ನು ನಾನು ಎದುರಿಸಬೇಕಾಯಿತು.

ಯಾರು ಏನೇ ಅಂದರೂ ನನಗೆ ಮಾತ್ರ ಒಂದಿಲ್ಲೊಂದು ದಿನ ಒಳ್ಳೆಯ ಅವಕಾಶ ಸಿಕ್ಕೀತು ಎಂಬ ಭರವಸೆ ಇದ್ದಿತು. ಅಂಥ ಸುಸಂಧಿಯನ್ನು ನಾನು ಎದುರು ನೋಡುತ್ತ ಕುಳಿತೆ. ಆದರೆ ಬದುಕು ನಾನು ತಿಳಿದಷ್ಟು ಸುಲಭವಾಗಿರಲಿಲ್ಲ. ೧೯೫೫ ರಿಂದ ಒಂದೂವರೆ ವರ್ಷಕಾಲ ನನಗೆ ಯಾವ ನಿರ್ಮಾಪಕರಿಂದಲೂ ಕರೆ ಬರಲಿಲ್ಲ.

'ಕಚದೇವಯಾನಿ' ಚಿತ್ರದ ಶೂಟಿಂಗಿಗಾಗಿ ಮದ್ರಾಸಿಗೆ ಹೋದಾಗ ಎ. ವಿ. ಎಂ. ನವರು 'ಭೂಕೈಲಾಸ' ಚಿತ್ರದಲ್ಲಿ ನನಗೆ ಅವಕಾಶ ನೀಡಿದರು. ಆಗ ನಾನು ಮದ್ರಾಸಿನಲ್ಲೇ ವಾಸವಾಗಲು ನಿರ್ಧರಿಸಿದೆ. ಮನೆಯ ಜನರನ್ನೆಲ್ಲ ಮೈಸೂರಿನಲ್ಲೇ ಇಟ್ಟಿದ್ದೆ.

ಕೆಲಸಕ್ಕೆ ರಾಜಿನಾಮೆ. ಜೊತೆಗೇ ಎರಡು ಕಡೆ ಸಂಸಾರ ಸಾಗಿಸುವ ಹೊಣೆ. ಮದ್ರಾಸಗೆ ಕಾಲಿಟ್ಟರೂ ಪರಿಸ್ಥಿತಿ ಸುಧಾರಿಸಲಿಲ್ಲ. ಆಸೆ-ನಿರಾಸೆಯ ಮಧ್ಯೆ ತುಯ್ದಾಡುತ್ತ ಆ ಮೂರು ವರ್ಷಗಳನ್ನು ಹೇಗೋ ನೂಕಿದೆ.

ಅವು ನನ್ನ ಜೀವನದ ದುರ್ಭರ ದಿನಗಳು. ಎಷ್ಟೋ ದಿನಗಳನ್ನು ಊಟಕ್ಕಿಲ್ಲದೆ ಕಳೆದೆ. ಏಳು ಪೈಸೆಗಳಲ್ಲಿ ಎರಡು ದಿನಗಳನ್ನು ನಾನಾಗ ನೂಕಿದ್ದುಂಟು. ಕೆಲವೊಮ್ಮೆ ಒಂದೇ ಒಂದು ಕಪ್ಪು ಟೀಯಲ್ಲಿ ನಾನು ಇಡೀ ದಿನದ ಹಸಿವನ್ನು ಹಿಂಗಿಸಿಕೊಂಡೆ. ಬಸ್ಸಿಗೆ ಕಾಸಿಲ್ಲದೆ ಹತ್ತಾರು ಮೈಲಿ ಸಂಚಾರವನ್ನು ಕಾಲುನಡಿಗೆಯಲ್ಲೇ ಪೂರೈಸಬೇಕಾದ ಪ್ರಸಂಗಗಳೂ ಬಂದುದುಂಟು. ದಿನೇ ದಿನೇ ಪರಿಸ್ಥಿತಿ ಬಿಗಡಾಯಿಸುತ್ತ ಹೋಯಿತು.

ಇದೇ ಹೊತ್ತಿಗೆ ನನ್ನ ಮೂರು ವರ್ಷದ ಮಗ ಕಾಯಿಲೆ ಬಿದ್ದ. ಅವನಿಗೆ ಔಷಧ ಕೊಡಿಸಲೂ ನನ್ನ ಬಳಿ ಹಣವಿರಲಿಲ್ಲ. ಹೀಗಾಗಿ ಚಂದ್ರಶೇಖರ್ ನಮ್ಮಿಂದ ಅಗಲಿಹೋದ. ಅವನ ಸಾವು ದಾವಾಗ್ನಿಗೆ ಬಿಸಿ ತುಪ್ಪವನ್ನು ಹೊಯ್ದಂತಾಯಿತು.

ಆದರೆ ನಾನು ಎದೆಗುಂದಲಿಲ್ಲ. ಬೀಸುಗಾಳಿಯನ್ನೆಲ್ಲ ಎದುರಿಸಿದೆ. ಮಾನಸಿಕ ಯಾತನೆಯನ್ನೆಲ್ಲ ಧೈರ್ಯದಿಂದ ಸಹಿಸಿದೆ. ಕೊನೆಗೂ ನನ್ನ ಆಸೆ ಫಲಿಸಿತು. ೧೯೬೦ ರ ವಿಜಯದಶಮಿಯ ದಿನ. ಅಂದು ಶ್ರೀ ಪಂತುಲು

ಅವರು ತಾವು ತಯಾರಿಸುತ್ತಿದ್ದ 'ಕಿತ್ತೂರು ಚೆನ್ನಮ್ಮ' ಚಿತ್ರದಲ್ಲಿ ರಾಜಗುರು ಪಾತ್ರವನ್ನು ನಿರ್ವಹಿಸಲು ಆಹ್ವಾನಿಸಿದರು. ಅಂದಿನಿಂದ ನನ್ನ ಅದೃಷ್ಟ ಖುಲಾಯಿಸಿತು. ನಾನಾ ನಿರ್ಮಾಪಕರಿಂದ ನನಗೆ ಕರೆ ಬಂದಿತು. ಇದಕ್ಕೆ ಏನು ಕಾರಣವೊ ನಾನರಿಯೆ. ಅಂತೂ ನನ್ನ ಆತ್ಮವಿಶ್ವಾಸ ಗೆದ್ದಿತು.

೧೯೬೦ ರಿಂದೀಚೆಗೆ ಒಂಭತ್ತು ವರ್ಷಗಳಲ್ಲಿ ನಾನು ೯೨ ಚಿತ್ರಗಳಲ್ಲಿ ನಟಿಸಿರುವೆ. ೧೯೬೯ ಡಿಸೆಂಬರ್ ೩೧ ರ ವರೆಗೆ ನನ್ನ ೧೦೭ ಚಿತ್ರಗಳು ತೆರೆ ಕಂಡಿವೆ. ಅದೇ ವರ್ಷ ತೆರೆಕಂಡ 'ಅದೇ ಹೃದಯ ಅದೇ ಮಮತೆ' ನನ್ನ ನೂರನೆಯ ಚಿತ್ರ.

ಆದರೆ ಇವು ಯಾವ ಚಿತ್ರಗಳಲ್ಲೂ ನನಗೆ ಪೂರ್ತಿ ತೃಪ್ತಿ ಸಿಕ್ಕಿಲ್ಲ. ಅಲ್ಪಸ್ವಲ್ಪ ತೃಪ್ತಿ ನೀಡಿದ ಚಿತ್ರಗಳೆಂದರೆ –ಕರುಣೆಯೇ ಕುಟುಂಬದ ಕಣ್ಣು, ಗಾಳಿಗೋಪುರ, ಜೇನುಗೂಡು, ರಾಮಾಂಜನೇಯ ಯುದ್ಧ, ಮಿಸ್. ಲೀಲಾವತಿ, ಸುಬ್ಬಾಶಾಸ್ತ್ರಿ, ಒಂದೇ ಬಳ್ಳಿಯ ಹೂಗಳು, ಬೆಳ್ಳಿಮೋಡ, ಪುರಂದರದಾಸರು, ಭಾಗ್ಯದೇವತೆ, ಸರ್ವಮಂಗಳಾ, ಮಧುರ ಮಿಲನ, ನಮ್ಮ ಮಕ್ಕಳು, ಕಲ್ಪವೃಕ್ಷ, ಉಯ್ಯಾಲೆ ಹಾಗೂ ಗೃಹಲಕ್ಷ್ಮಿ.

ನಾನು ಅಭಿನಯಿಸಿದ ಚಿತ್ರಗಳಲ್ಲಿ 'ನಮ್ಮ ಮಕ್ಕಳು' ರಜತೋತ್ಸವ ಆಚರಿಸಿತು. ಒಂದೇ ಬಳ್ಳಿಯ ಹೂಗಳು, ಜೇನುಗೂಡು, ಕಿತ್ತೂರು ಚೆನ್ನಮ್ಮ, ಸತ್ಯ ಹರಿಶ್ಚಂದ್ರ, ಅಣ್ಣ–ತಂಗಿ ಹಾಗೂ ಸತೀಶಕ್ತಿ ಶತದಿನೋತ್ಸವವನ್ನು ಕಂಡವು.

ಅಭಿನಯಕ್ಕಾಗಿ ನನಗೆ ಮೊದಲ ಪ್ರಶಸ್ತಿ ಸಿಕ್ಕಿದ್ದು 'ಕರುಣೆಯೇ ಕುಟುಂಬದ ಕಣ್ಣು' ಚಿತ್ರದಲ್ಲಿ. ಅನಂತರ ದೊರೆತ ಪ್ರಶಸ್ತಿಗಳ ವಿವರವನ್ನು ನಾನಿಲ್ಲಿ ಹೇಳಲಾರೆ. ಒಟ್ಟು ೧೩ ಚಿತ್ರಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಪ್ರಶಸ್ತಿ ಸಿಕ್ಕಿತೆಂದು ಮಾತ್ರ ನನಗೆ ಗೊತ್ತಿದೆ.

ವ್ಯಕ್ತಿಕವಾಗಿ ಪ್ರಶಸ್ತಿ ತೆಗೆದುಕೊಳ್ಳುವುದಕ್ಕೂ ಆ ಬಗ್ಗೆ ಹೇಳುವುದಕ್ಕೂ ನನಗೆ ಆಸಕ್ತಿ ಇಲ್ಲ. ಅದೆಲ್ಲ ಜನರ ಸಂತೋಷಕ್ಕಾಗಿ ಮಾಡುವ ಕೆಲಸ. ಕಲಾವಿದನ ಮನಸ್ಸನ್ನು ಸಾಮಾನ್ಯವಾಗಿ ಚಿತ್ರದ ಯಶಸ್ಸಿನ ಮೇಲಿಂದ ಅಳೆಯಲಾಗುತ್ತಿದೆ. ಆದರೆ ಗಲ್ಲಾಪೆಟ್ಟಿಗೆಯಲ್ಲಿ ಕುಸಿದುಹೋದ ಚಿತ್ರವೂ ಅಭಿನಯದ ದೃಷ್ಟಿಯಿಂದ ಯಶಸ್ವಿಯಾಗಿರಬಹುದಲ್ಲ!

ಚಿತ್ರೀಕರಣದಲ್ಲಿ ಪಾಲ್ಗೊಳ್ಳುವದೊಂದು ಸಾಹಸದ ಕೆಲಸ. ಇಂಥ ಅನೇಕ ಪ್ರಸಂಗಗಳಲ್ಲಿ ನಾನು ಸಾವಿನ ದವಡೆಯಿಂದ ನುಣುಚಿಕೊಂಡಿರುವೆ. 'ಚಿಂತಾಮಣಿ' ಚಿತ್ರದಲ್ಲಿ ಚಾಮುಂಡಿ ಬೆಟ್ಟದ ಮೇಲೆ ಹದಿನೈದಡಿ ಎತ್ತರದ ಬಂಡೆಗಲ್ಲಿನ ಮೇಲಿಂದ ನಾನು ಜಿಗಿಯಬೇಕಿತ್ತು. ಕೆಳಗೆ ದಪ್ಪ ಜಮಖಾನೆಯನ್ನು ಅದಕ್ಕಾಗಿ ಹಿಡಿದಿದ್ದರು. ನಾನು ಹಿಗ್ಗಿನಿಂದ ಬಂಡೆ ಹತ್ತಿದೆ. ಆದರೆ ನಿರ್ಮಾಪಕರು ಮೊದಲು ಅಲ್ಲಿಂದ ರಿಹರ್ಸಲ್‌ಗಾಗಿ ಜಿಗಿಯಲು ಲೈಟ್‌ಬಾಯ್ ಒಬ್ಬನನ್ನು ಕಳಿಸಿದರು. ಆತ ಜಿಗಿದ. ಜಮಖಾನೆ ಹರಿದು ಬಂಡೆಗಲ್ಲಿನ ಮೇಲೆ ಕುಪ್ಪಳಿಸಿದ. ಬಲವಾದ ಪೆಟ್ಟು ಬಿದ್ದು, ರಕ್ತ ಬಸಿಯತೊಡಗಿತು. ೧೦ - ೧೨ ದಿವಸ ಕಾಲ ಆತ ಆಸ್ಪತ್ರೆಯಲ್ಲಿದ್ದ. ಆ ಚೋಟುದ್ದ ಹುಡುಗನಿಗೇ ಈ ಗತಿಯಾದರೆ ನನ್ನಂಥವನ ಸ್ಥಿತಿ ಏನಾಗುತ್ತಿತ್ತೊ! ಅಂತೂ ದೇವರು ಈ ರೀತಿ ನನಗೆ ಮುನ್ನೆಚ್ಚರಿಕೆ ನೀಡಿದ್ದಕ್ಕೆ ನಾನು ವಂದಿಸಿದೆ.

ಆದರೆ ಈ ಪ್ರಸಂಗವನ್ನು ಮರೆತು 'ವಿಧಿವಿಲಾಸ' ಚಿತ್ರದಲ್ಲಿ ಪಾಂಡವಪುರದ ಬಳಿ ಹೆರೋಡ್ ಬೆಟ್ಟದ ಎತ್ತರದ ಸ್ಥಳದಿಂದ ಕೆಳಗೆ ಜಿಗಿದಾಗ ಎಡಗಾಲ ಎಲುಬು ಮುರಿದು ಎರಡು ತಿಂಗಳು ಹಾಸಿಗೆ ಹಿಡಿದೆ.

'ಒಂದೇ ಬಳ್ಳಿಯ ಹೂಗಳು' ಚಿತ್ರದ ಶೂಟಿಂಗ್ ನಡೆದಾಗ, ನಾನು ಅಂದಿನ ಅಭಿನಯದ ಬಗ್ಗೆ ಚಿಂತನೆ ಮಾಡುತ್ತ ಕುರ್ಚಿಯೊಂದರ ಮೇಲೆ ಕುಳಿತಿದ್ದೆ. ಹಠಾತ್ತಾಗಿ ಏನೊ ಸದ್ದು. ಪಕ್ಕದಲ್ಲಿನ ಭವ್ಯ ಸೆಟ್ಟೊಂದು ನನ್ನೆಡೆ ಬೀಳುತ್ತಿರುವಂತೆ ಕಂಡಿತು. ತಕ್ಷಣ ಕಾಲಿಗೆ ಬುದ್ಧಿ ಹೇಳಿದೆ. ಅಲ್ಲಿಂದ ಕಾಲ್ತೆಗೆದ ಮರುಕ್ಷಣವೇ ಪೂರ್ತಿ ಸೆಟ್ಟು ನೆಲಕ್ಕೆ ಅಪ್ಪಳಿಸಿತು. ಅಲ್ಲೇ ಇದ್ದರೆ ನಾನು ಪೂರ್ತಿ ಜಜ್ಜಿಹೋಗುತ್ತಿದ್ದೆನೊ ಏನೊ.

ಇಂದಿನ ನನ್ನ ಸ್ಥಾನ ಹಾಗೂ ಯಶಸ್ಸು ಪೂರ್ತಿ ಸ್ವಾರ್ಜಿತವಲ್ಲ. ಛಾಯಾಗ್ರಾಹಕರು, ನಿರ್ದೇಶಕರು, ನಿರ್ಮಾಪಕರು, ಮೇಕಪ್ ಮಾಡುವವರು, ಪತ್ರಕರ್ತರು ಹಾಗೂ ನನ್ನ ಚಿತ್ರ ನೋಡುವ ಜನತೆ ಇವರೆಲ್ಲರಿಂದಲೂ ನನಗೆ ಮಾರ್ಗದರ್ಶನ ಸಿಕ್ಕಿದೆ.



ಟ್ರಾಫಿಗಳೊಂದಿಗೆ

ಕನ್ನಡ ಜನತೆಯ ಹೃದಯದಲ್ಲಿ ಚಿರಸ್ಥಾಯಿಯಾಗಿ ನಿಲ್ಲಬಲ್ಲ ಪಾತ್ರ ನಿರ್ವಹಿಸಿ ಅನಂತರ ನಿವೃತ್ತನಾಗಬೇಕು ಎಂಬುದು ನನ್ನ ಈಗಿನ ಹಂಬಲ.

ಬೇರೆ ಭಾಷೆಗಳಿಂದಲೂ ನನಗೆ ಕರೆ ಬಂದಿದೆ. ನಾನು ಅಭಿನಯಿಸಿದ ಚಿತ್ರವೊಂದನ್ನು ನಿರ್ಮಾಪಕರು ಹಿಂದಿಯಲ್ಲಿ ತಯಾರಿಸಬೇಕೆಂದಿದ್ದು ಮೀನಾಕುಮಾರಿ ಆ ಚಿತ್ರದ ನಾಯಕಿ. ಹಿಂದೀ ಆವೃತ್ತಿಯಲ್ಲೂ ನಾನು ಅಭಿನಯಿಸಬೇಕೆಂದು ನಿರ್ಮಾಪಕರು ಕೇಳುತ್ತಿದ್ದಾರೆ. ಆದರೆ ನಾವು ಮಾತನಾಡುವ ಭಾಷೆ ಹೊಸದಾಗಿದ್ದರೆ, ಪಾತ್ರದಲ್ಲಿ ಪೂರ್ತಿ ಜೀವ ತುಂಬುವದು ಸಾಧ್ಯವಿಲ್ಲ ಎಂಬುದು ನನ್ನ ಅಚಲ ನಂಬಿಕೆ. ಕೆ. ಎಸ್. ಗೋಪಾಲಕೃಷ್ಣ ಅವರ ತಮಿಳು ಚಿತ್ರದಲ್ಲಿ ನಟಿಸಲು ನಿರಾಕರಿಸಿದ್ದಕ್ಕೂ ನನ್ನ ಈ ಭಾವನೆಯೇ ಕಾರಣ.

ಭಾಷೆ ತಿಳಿಯದೆ, ಗಿಣಿಪಾಠದಂತೆ ಸಂಭಾಷಣೆ ಹೇಳಿದರೆ ಖಂಡಿತ ನೈಜತೆ ಬರುವದು ಸಾಧ್ಯವಿಲ್ಲ. ಕಾರಣ ಬೇರೆ ಭಾಷೆಗಳಲ್ಲಿ ಅಭಿನಯಿಸುವುದು ಹಣದ ದೃಷ್ಟಿಯಿಂದ ಎಷ್ಟೇ ಲಾಭಕರವಾಗಿದ್ದರೂ ನಾನು ಒಪ್ಪುವದಿಲ್ಲ. ಒಂದು ವೇಳೆ ಅಂಥ ಪ್ರಸಂಗ ಬಂದರೆ ಆ ಭಾಷೆಯ ಮೇಲೆ ಪೂರ್ತಿ ಪ್ರಭುತ್ವವನ್ನು ಸಂಪಾದಿಸಿಕೊಂಡೇ ಅಭಿನಯಿಸುವೆ. ★★



ತರುಣಜನಾಂಗದ ಪ್ರತಿನಿಧಿಯಾಗಿ ಚಿತ್ರರಂಗದಲ್ಲಿ ಶೋಭಿಸುವ ಜಿತೇಂದ್ರ

# ಜಿತೇಂದ್ರ-ತನ್ನನ್ನು ತಾನೇ ಕಂಡಂತೆ

ಸಂದರ್ಶನ : ನಮ್ಮ ಮುಂಬಯಿ ಪ್ರತಿನಿಧಿಯಿಂದ

ಇಂದಿನ ತರುಣ ಜನಾಂಗದ ದೊಡ್ಡ ಪ್ರತಿನಿಧಿ ಜಿತೇಂದ್ರ. ಶಾಂತಾರಾಮರ ಆಶೀರ್ವಾದದಿಂದ ಚಿತ್ರರಂಗಕ್ಕೆ ಬಂದ ಜಿತೇಂದ್ರ ಈಗಾಗಲೇ ತನ್ನದೇ ಆದ ವಿಶಿಷ್ಟ ಶೈಲಿಯ ನಟನೆಯನ್ನು ರೂಪಿಸಿಕೊಂಡಿದ್ದಾನೆ. ಕೆಲವರ ದೃಷ್ಟಿಯಲ್ಲಿ ಅವನದು 'ಗಂಡು ನಟನೆ'. ಕೆಲವರಿಗೆ ಅವನು 'ಪ್ರೇಮ ದೇವತೆ.' ಒಮ್ಮೆ ಅವನೊಂದಿಗೆ ನಟಿಸಿದ ನಾಯಕಿಯೊಬ್ಬಳು – ಆಕೆಗೆ ಅವನಿಗಿಂತ ವಯಸ್ಸು ಹೆಚ್ಚಾಗಿತ್ತು – ಅವನನ್ನು 'ಕಾಮದೇವ' ಎಂದು ಸಂಬೋಧಿಸಿದ್ದಳು. ಜಿತೇಂದ್ರನಿಗೆ ಆಗ ನಿಜವಾಗಿಯೂ ರೇಗಿತ್ತು. ಅವನದು ಬರೇ 'ಹುಡುಗು ಬುದ್ಧಿ' ಎನ್ನದವರೂ ಇಲ್ಲ. ನಿಜಜೀವನದಲ್ಲಿ ರವಿ ಕಪೂರ್ ಎಂಬ ಹೆಸರಿನಿಂದ ಕರೆಯಲ್ಪಡುವ ಜಿತೇಂದ್ರನನ್ನು ಚಿತ್ರರಂಗದಲ್ಲಿ 'ಜೆಟ್ ಏಜ್ ಸ್ಟಾರ್' ಎಂದು ಕರೆಯುತ್ತಾರೆ. ಆದರೆ ತನ್ನ ಅಭಿನಯದ ಬಗ್ಗೆ ಜಿತೇಂದ್ರನೇ ಏನು ಹೇಳುತ್ತಾನೆ? ಓದಿ:

"ಪಾತ್ರಕ್ಕೆ ತಕ್ಕ ನನ್ನ ನಟನೆ. ದಿಗ್ದರ್ಶಕರು ಹೇಳಿದಂತೆ ನಾನು ಕೇಳುತ್ತೇನೆ. ಲೇಖಕರು ನನ್ನನ್ನು ಕಲ್ಪಿಸಿದಂತೆ ನಾನು ನಟಿಸುತ್ತೇನೆ........ ನಾನೊಬ್ಬ ನಟ. ಸಮಕಾಲೀನ ಜೀವನವನ್ನು ನನ್ನ ನಟನೆಯಲ್ಲಿ ಪ್ರತಿಬಿಂಬಿಸದಿದ್ದರೆ ನಾನು ಯಶಸ್ವಿಯಾಗಲಾರೆ ಎಂದು ನನಗೆ ಚೆನ್ನಾಗಿ ಗೊತ್ತು. ಎಂದೇ ನಾನು ಆಧುನಿಕ ತರುಣ ಜನಾಂಗದ ಭಾವನೆಗಳನ್ನೇ ಚಿತ್ರರಂಗದಲ್ಲಿ ತೋರಿಸಲು ಪ್ರಯತ್ನಿಸುವೆ. ಆದರೆ ನಿಜವಾಗಿಯೂ ಹೇಳಬೇಕೆಂದರೆ ಇಂದಿನ ತರುಣ ಜನಾಂಗ, ಚಿತ್ರದಲ್ಲಿ ನಾವು ತೋರಿಸುವುದಕ್ಕಿಂತಲೂ ಬಹು ಪ್ರಗತಿ ಹೊಂದಿದೆ."

ಮಾತನಾಡುವಾಗ ಜಿತೇಂದ್ರನ ಮುಖದಲ್ಲಿ ತುಂಟತನ ಕುಣಿಯುತ್ತಿರುತ್ತದೆ. ಚಿಕ್ಕತನದಿಂದಲೂ ಅಷ್ಟೇ. ಜಿತೇಂದ್ರ ತುಂಬ ತುಂಟ ಎಂದು ಹೆಸರುವಾಸಿಯಾಗಿದ್ದ. ಶಾಲಾಕಾಲೇಜುಗಳಲ್ಲೂ ಮತ್ತೆ ಅದೇ ಪದವಿ ದೊರೆತಿತ್ತು. ಅವನಿಗೆ. ಸಿದ್ಧಾರ್ಥ ಕಾಲೇಜಿನ ಕ್ರಿಕೆಟ್‌ಪಟುವಾಗಿದ್ದ ಜಿತೇಂದ್ರ ಆಗಲೇ ಯೌವನದ ಸಂಕೇತವಾಗಿದ್ದ.

ಹಿಂದಿ ಚಿತ್ರರಂಗದ ಎಲ್ಲ ಜನಪ್ರಿಯ ನಟಿಯರೊಂದಿಗೆ – ಶರ್ಮಿಳಾ, ನಂದಾ, ರಾಜಶ್ರೀ, ಲೀನಾ ಚಂದಾವರ್‌ಕರ್, ಸಾಯಿರಾ ಬಾನು, ಮಾಲಾ ಸಿನ್ಹ, ಮಮ್ತಾಜ್, ನೂತನ್, ಬಂಗಾಳದ ಅಪರ್ಣಾ ದಾಸ್‌ಗುಪ್ತಾ, ಬಬಿತಾ, ಕಾಂಚನಾ, ಶಾರದಾ ಇವರೊಂದಿಗೆ ನಟಿಸಿದ ಅವನು ಕಾಮದೇವನೇ ಸರಿ.

"ನನ್ನ ಚಿಕ್ಕಪ್ಪ ಶಾಂತಾರಾಮರ ಚಿತ್ರಗಳಿಗೆ ಆಭರಣಗಳನ್ನು ಒದಗಿಸುತ್ತಾರೆ. ಅವರೊಂದಿಗೆ ನಾನೂ ಆಗಾಗ ರಾಜ್‌ಕಮಲ್ ಸ್ಟುಡಿಯೋಗೆ ಹೋಗುತ್ತಿದ್ದ. ಒಮ್ಮೆ ಷೂಟಿಂಗ್ ನೋಡಬೇಕೆಂದು ಮನಸ್ಸಾಯಿತು. ಚಿಕ್ಕಪ್ಪ ಅದನ್ನು ಶಾಂತಾರಾಮ್‌ಗೆ ಹೇಳಿದರು. ಭಾರಿ ಕಟ್ಟುನಿಟ್ಟಿನ ಶಾಂತಾರಾಮ್ ಹಾಗೆ ಸಿಕ್ಕವರನ್ನು ಷೂಟಿಂಗ್ ಕಾಲಕ್ಕೆ ಒಳಬಿಡುವುದಿಲ್ಲ. ಆದುದರಿಂದ ಷೂಟಿಂಗ್‌ನಲ್ಲಿ ಪಾಲ್ಗೊಂಡರೆ ಷೂಟಿಂಗ್ ನೋಡಿದಂತೆ, ಮಾತ್ರವಲ್ಲ ಅನುಭವವೂ ಆಗುತ್ತದೆ ಎಂದರವರು. ಅನಪೇಕ್ಷಿತವಾಗಿ ನಿಧಿ ಒದಗಿಬಂದಿತ್ತು ನನಗೆ. 'ಸೆಹರಾ'ದಲ್ಲಿ ನಾನು ಬಂದುದು ಹಾಗೆ. ನಿಜ. ಅದು ನನ್ನ ಪ್ರಥಮ ಪ್ರಯತ್ನ. ನನ್ನ ತಾಯಿಗೇ ನನ್ನನ್ನು ಆ ಚಿತ್ರದಲ್ಲಿ ಹುಡುಕುವುದು ಕಷ್ಟವಾಯಿತು. ಆದರೆ ಮುಂದಿನ ನನ್ನ ಹದಿನೈದು – ಇಪ್ಪತ್ತು ಚಿತ್ರಗಳಲ್ಲಿ ನಡೆದುಬಂದ ದಾರಿಯಲ್ಲಿ ಚಿತ್ರಜಗತ್ತಿನಲ್ಲಿ ನಾನು ಹೊಸ ಹಾದಿಯನ್ನೇ ನಿರ್ಮಿಸಿದೆ. ಭಾರತೀಯ ತರುಣನನ್ನು ಸಮರ್ಥ ರೀತಿಯಲ್ಲಿ ತೋರಿಸಲು ದೇವ್ ಆನಂದನ ಬಳಿಕ ಯಾರೂ ಇರಲಿಲ್ಲವೆಂಬ ಕೊರತೆಯನ್ನು ನಾನು ತುಂಬಿಸಿದೆ........ ನನ್ನ ನಟನೆಯ ನಿಜವಾದ ಕತೆ ಆರಂಭವಾದುದು 'ಗೀತ ಗಾಯಾ ಪತ್ಥರೋನೆ'ಯಿಂದಲೇ."

ಕನ್ನಡಿಗ ಕೆ. ಎ. ನಾರಾಯಣ್ ಬರೆದ ಕತೆಯನ್ನು ಹೊಂದಿ ಶಾಂತಾರಾಮ್ ರಚಿಸಿದ ಈ ಚಿತ್ರ ಹಿಂದಿಯಲ್ಲಿ ಚಿಕ್ಕದೊಂದು ದಾಖಲೆಯನ್ನೇ ನಿರ್ಮಿಸಿತ್ತು.

"ನನ್ನ ಪ್ರತಿ ಚಿತ್ರವೂ ಒಂದು ಪ್ರೇಮ ಪ್ರಕರಣವೇ ಎನ್ನಬೇಕು. ಏಕೆಂದರೆ ನನ್ನ ಅಭಿನಯದ ರೀತಿಯೇ ಹಾಗೆ. ತರುಣ ಜನಾಂಗಕ್ಕೆ ಸ್ಫೂರ್ತಿ ಕೊಡುವುದೇ ನನ್ನ ಅಭಿನಯದ ಉದ್ದೇಶ. ನಾವು ತರುಣರಿರುವಾಗ ಅದೇ ಹುಮ್ಮಸ್ಸಿನಿಂದ ನಟಿಸಬೇಕು. ಮುಂದೆಂದೂ ಆ ಅವಕಾಶ ಮತ್ತೆ ದೊರೆಯದು. ನನ್ನ ಪ್ರಣಯದ ನಟನೆಯನ್ನು ಕೆಲವರು ಟೀಕಿಸಿದುದಿದೆ. ಅದರಿಂದ ನಾನೇನೂ ವಿಚಲಿತನಾಗಿಲ್ಲ. ಏಕೆಂದರೆ ನಾನು ಇಂದಿನ ಜೀವನದಲ್ಲಿ ಕಾಣುವುದನ್ನೇ ಕಲಾವಿದನಾಗಿ ತೋರಿಸುತ್ತಿದ್ದೇನೆ ಎಂಬ ಆತ್ಮತೃಪ್ತಿ ನನಗಿದೆ."

ಮುಂದೆ ಬೇರೆ ಬೇರೆ ಚಿತ್ರಗಳಲ್ಲಿ ತನ್ನ ಅಭಿನಯದ ಕುರಿತು ಜಿತೇಂದ್ರ ವಿವರಿಸಿದ:

"ದಿಗ್ದರ್ಶಕ – ನಿರ್ಮಾತೃ ಶಾಂತಾರಾಮರ ಆಶೀರ್ವಾದದಿಂದ ನಾನು ಚಿತ್ರರಂಗಕ್ಕೆ ಬಂದೆ. ನನ್ನ ನಟನೆಯನ್ನು ಅವರು ಮೆಚ್ಚಿದ್ದಾರೆ.

೧೯೨ ನೆಯ ಪುಟಕ್ಕೆ



ಆಶಾ ಪರೀಖಳೊಂದಿಗೆ

## ನಿರ್ಮಾಪಕ, ನಿರ್ದೇಶಕ, ನಟ

# ವಾದಿರಾಜ

ಸಂದರ್ಶನ :

**ಜಿ. ಎಸ್. ಭಟ್ಟ**



ನಿಸರ್ಗದ ಹಿನ್ನೆಲೆಯಲ್ಲಿ

ಯಾವುದೇ ಭಾಷೆಯಲ್ಲಿ ಒಳ್ಳೆಯ ಕಥೆಗಳಿದ್ದರೂ ಅದನ್ನು ಆರಿಸಿಕೊಂಡು ಉತ್ತಮ ಚಿತ್ರಗಳನ್ನು ತಯಾರಿಸಬೇಕು. ಕಥೆಗೆ ಭಾಷೆಯ ಬೇಲಿ ಹಾಕಬಾರದು. ನಾವು ತಮಿಳುಕಥೆಗಳನ್ನೇ ಆರಿಸಿಕೊಂಡು ಚಿತ್ರ ತಯಾರಿಸುತ್ತಿರುವೆವು ಎಂದು ಒಂದು ಟೀಕೆಯಿದೆ. ನನಗೆ ತಮಿಳು ಕಥೆಯ ಮೋಹವಿಲ್ಲ. ಹಲವು ವರ್ಷಗಳಿಂದ ತಮಿಳುನಾಡಿನಲ್ಲಿ ಇರುವುದರಿಂದ ತಮಿಳಿನ ಕೆಲವು ಸನ್ನಿವೇಶಗಳನ್ನು ಮೆಚ್ಚಬಹುದು. 'ನಂದಾದೀಪ' ಚಿತ್ರವನ್ನು ಗುಜರಾಥಿಯಲ್ಲಿ ತಯಾರಿಸಿದರು. ಕನ್ನಡದ 'ಹಂಸಗೀತ' ಹಿಂದಿಯಲ್ಲಿ 'ಬಸಂತ ಬಹಾರ್' ಆಯಿತು. ಚಿತ್ರ ತಯಾರಿಸುವಾಗ ಕಥೆಗೆ ಭಾಷೆಯ ಬೇಲಿ ಹಾಕುವುದರಿಂದ ಉತ್ತಮ ಚಿತ್ರಗಳು ಬರಲಾರವು". ಎಂದು ನಟ ವಾದಿರಾಜ ಹೇಳುತ್ತಾರೆ. ಅವರು ಕನ್ನಡ ಚಿತ್ರರಂಗಕ್ಕೆ ಅನೇಕ ಯಶಸ್ವೀ ಚಿತ್ರಗಳನ್ನು ನೀಡಿದ್ದಾರೆ. ಅವರು ನಿರ್ಮಿಸಿದ 'ನಂದಾದೀಪ', 'ನವಜೀವನ' ಚಿತ್ರಗಳಿಗೆ ರಾಷ್ಟ್ರಪತಿ ಪ್ರಶಸ್ತಿ ಬಂತು. ಕಳೆದವರ್ಷ ಬಿಡುಗಡೆಯಾದ 'ನಮ್ಮ ಮಕ್ಕಳು' ಕನ್ನಡ ಚಿತ್ರರಂಗದಲ್ಲಿ ಹೊಸ ದಾಖಲೆಯನ್ನೇ ಸ್ಥಾಪಿಸಿತು. ಇದೀಗ 'ನಮ್ಮ ಮಕ್ಕಳು' ಚಿತ್ರದ ಹಿಂದೀ ಅವತರಣಿಕೆಯೂ ಸಿದ್ಧವಾಗಿದೆ. ಈ ಚಿತ್ರಕ್ಕೆ ಮೈಸೂರು ಸರ್ಕಾರದ ಪ್ರಶಸ್ತಿಯೂ ದೊರೆತಿದೆ. ಇದೀಗ ತಮ್ಮ ನೂತನ ಚಿತ್ರ 'ಸೀತಾ'ವನ್ನು ಶ್ರೀ ವಾದಿರಾಜ ಮುಗಿಸಿದ್ದಾರೆ. ಪ್ರೀಮಿಯರ್ ಸ್ಟುಡಿಯೋದಲ್ಲಿ ಬಿಡುವಿನ ವೇಳೆಯಲ್ಲಿ ನಾನು ವಾದಿರಾಜರನ್ನು ಸಂದರ್ಶಿಸಿದೆ. ಆಗಲೇ ಅವರು ತಮ್ಮ ನೂತನ ಚಿತ್ರ 'ಶಾಂತಿ'ಗಾಗಿ ಹೊಳವು ಹಾಕುತ್ತಿದ್ದರು. ಅವರ ಏಕಾಗ್ರತೆಯನ್ನು ಮುರಿದು ನಾನು ಮಾತಿಗಾರಂಭಿಸಿದೆ. ತಾವು ಚಿತ್ರರಂಗವನ್ನು ಪ್ರವೇಶಿಸಿದ್ದು ಆಕಸ್ಮಿಕ ಎಂದವರು ಹೇಳಿದರು. "ಮೊದಲು ತಮಿಳು ನಾಟಕಗಳಲ್ಲಿ ಅಭಿನಯಿಸುತ್ತಿದ್ದೆ. ನಾನು 'ವೈರ ಮಾಲೈ' ಎಂಬ ತಮಿಳು ನಾಟಕವೊಂದರಲ್ಲಿ ನಾಯಕನ ಸಹೋದರನ ಪಾತ್ರ ವಹಿಸಿದ್ದೆ. ಅದು ತುಂಬ ಜನಮೆಚ್ಚುಗೆ ಗಳಿಸಿತು. ಅದನ್ನು ಚಿತ್ರ ಮಾಡುವಾಗ ನಿರ್ಮಾಪಕರು ನನ್ನನ್ನೇ ಆಯ್ದುಕೊಂಡರು."

ಸ್ಥಿರ ನಿರೀಕ್ಷಣೆ



"ಹಾಗಿದ್ದರೆ ತಮಿಳು ನಾಟಕವೇ ನೀವು ಚಿತ್ರ ಪ್ರವೇಶಿಸುವಂತೆ ಮಾಡಿತು ?"

"ಹೌದು, ತಮಿಳು ನಾಟಕದಿಂದಲೇ ನಾನು ಚಿತ್ರರಂಗ ಪ್ರವೇಶಿಸುವಂತಾಯಿತು."

ಶ್ರೀ ವಾದಿರಾಜರು ಜನಿಸಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಬಳಿ ಇರುವ ಪಣಿಯಾಡಿ ಗ್ರಾಮದಲ್ಲಿ. ತಂದೆ ಎಸ್. ವಿ. ಪಣಿಯಾಡಿ ವ್ಯಾಪಾರಿಯಾಗಿದ್ದರು. ಪ್ರಾಥಮಿಕ ಶಾಲೆಯಲ್ಲಿದ್ದಾಗಿನಿಂದಲೇ ಬಾಲಕ ವಾದಿರಾಜರಿಗೆ ನಾಟಕದ ಗೀಳು. ನಾಟಕರಂಗವನ್ನು ಆಗಲೇ ಪ್ರವೇಶಿಸುವಂತೆ ಮಾಡಿದ ಹೊನ್ನಯ್ಯ ಶೆಟ್ಟರು ಇದಕ್ಕೆ ನಿಮಿತ್ತ ಮಾತ್ರ. ತಂದೆಯವರಿಗಾದರೂ ರಂಗಭೂಮಿಯೆಂದರೆ ವಿಶೇಷ ಆಸಕ್ತಿ. ಉಡುಪಿ ಬೋರ್ಡ್ ಹೈಸ್ಕೂಲಿನಲ್ಲಿ

ವಾದಿರಾಜ ಓದಿದ್ದು ನಾಲ್ಕನೆಯ ಫಾರಂ ವರೆಗೆ. ಮುಂದೆ ಅಭ್ಯಾಸ ಮಾಡಿದ್ದರೆ ಅವರು ಬಹುಶಃ ವಿಜ್ಞಾನಿಯಾಗುತ್ತಿದ್ದರು. ಆದರೆ ಪರಿಸ್ಥಿತಿಯ ಒತ್ತಡದಿಂದ ಮಾತ್ರವೇ ತಾವು ಚಿತ್ರರಂಗ ಪ್ರವೇಶಿಸಬೇಕಾಯಿತೆಂದು ಹೇಳುತ್ತಾರೆ. ವಾದಿರಾಜ ನಾಲ್ಕನೆಯ ಫಾರಂ ಓದಿ ಮುಗಿಸಿದಾಗ ಅವರ ಕುಟುಂಬವೇ ಮದುರೈಗೆ ವಲಸೆ ಹೋಯಿತು. ಅಲ್ಲಿ ವಾದಿರಾಜ ಹಿಂದಿ ರಾಷ್ಟ್ರಭಾಷಾ ಪರೀಕ್ಷೆಯಲ್ಲಿ ದಕ್ಷಿಣ ಭಾರತಕ್ಕೇ ಪ್ರಪ್ರಥಮರಾಗಿ ಉತ್ತೀರ್ಣರಾದರು. ಈ ವೇಳೆಗಾಗಲೇ ಅವರ ಸಹೋದರಿ ಹರಿಣಿ ಕನ್ನಡ ಚಿತ್ರರಂಗ ಪ್ರವೇಶಿಸಿದ್ದರು.

ಮದುರೈಯಿಂದ ವಾದಿರಾಜ ಮದರಾಸಿಗೆ ಬಂದರು. ಕಲಾವಿಲಾಸಿ ನಾಟ್ಯಸಂಘದ ನಾಟಕಗಳಲ್ಲಿ ಆಗಾಗ ಅಭಿನಯಿಸುತ್ತಿದ್ದರು. ಜೊತೆಗೆ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯಲ್ಲಿ ಗುಮಾಸ್ತನ ಕೆಲಸ. ಹಿಂದೀ ಚೆನ್ನಾಗಿ ಬರುತ್ತಿದ್ದುದರಿಂದ ಅವರು ಮುಂಬಯಿ ಚಿತ್ರರಂಗ ಪ್ರವೇಶಿಸಲು ಪ್ರಯತ್ನಿಸಿದರು. ಆದರೆ ಅದರಲ್ಲಿ ಯಶಸ್ಸು ದೊರೆಯದಿರಲು ಪುನಃ ಮದರಾಸಿಗೇ ಬಂದರು. ಕಲಾವಿಲಾಸಿ ಸಂಘದ ನಾಟಕಗಳೇ ಅವರಿಗೆ ಚಿತ್ರರಂಗ ಪ್ರವೇಶಿಸಲು ಅನುವು ಮಾಡಿಕೊಟ್ಟವು. ತಮಿಳು ನಾಟಕಗಳನ್ನು ಅಭಿನಯಿಸಲು ಅವರು ಸ್ನೇಹಿತರೊಂದಿಗೆ ಸೇರಿ ಐ. ಎನ್. ಎ. ಥಿಯೇಟರ್ ಸ್ಥಾಪಿಸಿದರು. ಮೊದಲಿನಿಂದಲೂ ಅವರದು ಪ್ರಯೋಗಶೀಲ ಪ್ರವೃತ್ತಿ. ಅವರು ಅನೇಕ ತಮಿಳು ಪ್ರಾಯೋಗಿಕ ನಾಟಕಗಳನ್ನು ಆಡಿದರು. ಅವರು ಅಭಿನಯಿಸಿದ ಪ್ರಥಮ ಕನ್ನಡ ಚಿತ್ರ 'ಕೋಕಿಲವಾಣಿ'. ಅನಂತರ ಅವರು 'ಶ್ರೀಕೃಷ್ಣಗಾರುಡಿ','ಧರ್ಮವಿಜಯ', 'ನಂದಾದೀಪ', 'ನವಜೀವನ', 'ನಾಂದಿ', 'ಆನಂದ ಬಾಷ್ಪ', 'ಪ್ರೇಮಕ್ಕೂ ಪರ್ಮಿಟ್ಟೇ?', 'ನಮ್ಮ ಮಕ್ಕಳು' ಮೊದಲಾದ ಕನ್ನಡಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಅವರು ಅಭಿನಯಿಸಿದ 'ಅಳಿಯ – ಗೆಳೆಯ', 'ಸೀತಾ' ಸದ್ಯವೇ ಬಿಡುಗಡೆಯಾಗಲಿವೆ. ಅವರು ನಿರ್ಮಿಸಿದ ಚಿತ್ರಗಳೆಲ್ಲ ಸತ್ವಪೂರ್ಣ ಕಥೆಗಳನ್ನು ಹೊಂದಿವೆ. ಅವರು ತಮ್ಮ ಸ್ವಂತ ಚಿತ್ರ ತಯಾರಿಕೆ ಸಂಸ್ಥೆಗೆ 'ವಿಜಯ ಭಾರತಿ' ಎಂದು ಹೆಸರಿಟ್ಟಿದ್ದಾರೆ. ಸಹೋದರ ಜವಹರರ ಜೊತೆ ಸೇರಿ ಶ್ರೀ ಭಾರತಿ ಚಿತ್ರ ಹೆಸರಿನಲ್ಲಿ ಅವರು 'ನಂದಾದೀಪ' ಚಿತ್ರ ನಿರ್ಮಿಸಿದರು. ಕಿವುಡು ಮತ್ತು ಮೂಕರ ಕಥೆಯುಳ್ಳ 'ನಾಂದಿ' ಒಂದು ಅಪೂರ್ವ ಪ್ರಯೋಗಶೀಲ ಚಿತ್ರ.

ಇದೀಗ ನಿರ್ದೇಶಕರೂ ಆಗಿರುವ ಅವರು ನಿರ್ಮಾಪಕನ ಹೊಣೆಗಾರಿಕೆ ಏನೆಂಬುದನ್ನು ವಿವರಿಸಿದರು.

"ಹಲವು ಕಷ್ಟನಷ್ಟಗಳನ್ನು ಎದುರಿಸುವ ಎದೆಗಾರಿಕೆ ಚಿತ್ರನಿರ್ಮಾಪಕನಿಗೆ ಬೇಕು. ಮುಖ್ಯವಾಗಿ ತಮ್ಮ ಚಿತ್ರನಿರ್ಮಾಣದ ಮೂಲಕ ಸಮಾಜಕ್ಕೆ ಒಂದು ನೀತಿಪಾಠ, ಸೇವೆ ದೊರೆಯಬೇಕು ಎಂಬುದರ ಅರಿವು ಅವರಿಗಿರಬೇಕು. ಚಿತ್ರ ಪ್ರಬಲ ಮಾಧ್ಯಮವಾದ್ದರಿಂದ ಚಿತ್ರರಂಗ ಜನರಿಗೆ ಒಳ್ಳೆಯದನ್ನು ಮಾಡಬೇಕು. ಹಣಸಂಪಾದನೆಯೊಂದಿಗೆ ಜನರಲ್ಲಿ ಒಳ್ಳೆಯ ಭಾವನೆಗಳು ಮೂಡುವಂತೆ ಮಾಡಬೇಕು. ಅಂಥ ಚಿತ್ರಗಳ ನಿರ್ಮಾಣ ಹೆಚ್ಚಾಗಬೇಕು. ಜನರನ್ನು ವಾಮಮಾರ್ಗಕ್ಕೆ ಎಳೆಯಬಾರದು."

ನಮ್ಮ ಪ್ರೇಕ್ಷಕರ ಒಲವಿಗೆ ತಕ್ಕಂಥ ಚಿತ್ರಗಳು ಈಗ ತಯಾರಾಗುತ್ತಿವೆ ಎಂದು ಅವರು ಹೇಳುತ್ತಾರೆ.

ಸತ್ಯಜಿತ್ ರಾಯರು ನಿರ್ಮಿಸುವಂಥ ಪ್ರಯೋಗಶೀಲ ಚಿತ್ರಗಳು ಕನ್ನಡದಲ್ಲಿ ತಯಾರಾಗುತ್ತಿಲ್ಲ ಎಂಬ ನನ್ನ ವಾದವನ್ನು ಅವರು ಒಪ್ಪಲಿಲ್ಲ. "ಇದೀಗ ಬಿಡುಗಡೆಯಾದ 'ಸಂಸ್ಕಾರ'ವನ್ನು ವಾಸ್ತವತೆಯ ಆಧಾರದ ಮೇಲೆಯೆ ತಯಾರಿಸಲಾಗಿದೆ. 'ಸಂಸ್ಕಾರ'ದ ಕಥೆಯೊಂದನ್ನು ಬಿಟ್ಟರೆ ನನಗೆ ಅದರ ತಂತ್ರ ತುಂಬ ಮೆಚ್ಚುಗೆಯಾಯಿತು. ಇದೀಗ ಲಕ್ಷ್ಮೀ – ನಾರಾಯಣರು ನಿರ್ದೇಶಿಸಿದ 'ಮುಕ್ತಿ' ಪ್ರಯೋಗಶೀಲ ಚಿತ್ರ. ಸತ್ಯಜಿತ್ ರಾಯರಂಥ ನಿರ್ಮಾಪಕರು ನಮ್ಮಲ್ಲೂ ಇದ್ದಾರೆ. ಆದರೆ ಅವರಿಗೆ ಸೂಕ್ತ ಅವಕಾಶ ದೊರೆತಿಲ್ಲ."



ದೃಶ್ಯವೊಂದರ ಚಿತ್ರೀಕರಣ

ಚಿತ್ರರಂಗದಲ್ಲಿಯ ವ್ಯಕ್ತಿಪೂಜೆಯ ಬಗ್ಗೆ ಪ್ರಶ್ನಿಸಿದಾಗ ಅವರು, "ಇನ್ನೊಬ್ಬರ ಗೌರವಕ್ಕೆ ಕುಂದು ಬರದಂತೇ ಯಾರೊಬ್ಬ ವ್ಯಕ್ತಿಯನ್ನು ಬೇಕಷ್ಟು ಗೌರವಿಸಬಹುದು. ಒಬ್ಬ ವ್ಯಕ್ತಿಯನ್ನು ಪೂಜ್ಯಭಾವನೆಯಿಂದ ಕಾಣುವುದೆಂದರೆ ಉಳಿದವರನ್ನು ಹೀಗಳೆಯಬಾರದಷ್ಟೆ." ಎಂದರು.

ಸರಕಾರ ಸಹಾಯಧನ ನಿಲ್ಲಿಸುವುದನ್ನು ವಾದಿರಾಜ ವಿರೋಧಿಸುತ್ತಾರೆ. "ಸಹಾಯಧನ ಬಂದ ಅನಂತರ ಕನ್ನಡ ಚಿತ್ರರಂಗಕ್ಕೆ ಹೊಸ ಹುರುಪು ಬಂದಿದೆ. ನಿರ್ಮಾಪಕರು ಮೈಸೂರಿಗೆ ಬಂದಿದ್ದಾರೆ. ಕೆಲವು ಕಳಪೆ ಚಿತ್ರಗಳು ಬಂದರೂ ಕನ್ನಡ ಕಲಾವಿದರು ಕನ್ನಡ ನೆಲದಲ್ಲಿ ನೆಲೆನಿಲ್ಲಲು ಇದು ಅನುವು ಮಾಡಿಕೊಟ್ಟಿವೆ, ಎಂಬುದೇನೂ ಸಣ್ಣಮಾತಲ್ಲ. ಕಳಪೆ ಚಿತ್ರಗಳಿಗೆ ಜನರೇ ದಂಡನೆ ವಿಧಿಸುತ್ತಾರೆ. ಸಹಾಯಧನ ಜನರಿಂದ ಜನರಿಗೇ ಬರುವುದು. ಇದರಿಂದಾಗಿ ಕನ್ನಡ ಚಿತ್ರೋದ್ಯಮ ಬೆಳೆಯಲು ಸಾಧ್ಯವಾಗಿದೆ. ಮೈಸೂರು ರಾಜ್ಯದಲ್ಲೇ ೪೦ – ೫೦ ಕನ್ನಡ ಚಿತ್ರಗಳು ತಯಾರಾಗುವ ವರೆಗೂ, ಚಿತ್ರೋದ್ಯಮ ಭದ್ರವಾಗಿ ಈ ನಾಡಿನಲ್ಲಿ ಬೇರೂರುವ ವರೆಗೂ ಸಹಾಯಧನ ಮುಂದುವರಿಯಬೇಕು. ಕೇವಲ ಇಷ್ಟೇ ಹಣದಿಂದಲೇ ಚಿತ್ರನಿರ್ಮಾಪಕ ಬದುಕುವುದಿಲ್ಲ. ಜನತೆಗೆ, ಸರಕಾರಕ್ಕೆ ಮೋಸ ಮಾಡುವುದಾದರೆ ಅಂಥ ನಿರ್ಮಾಪಕ ಹೆಚ್ಚು ಕಾಲ ಉದ್ದಿಮೆಯಲ್ಲಿ ಬದುಕಲಾರ. ಚಿತ್ರೋದ್ಯಮವೂ ಒಂದು ವ್ಯಾಪಾರ. ವರ್ಷದಲ್ಲಿ ೪೦ ಚಿತ್ರ ತಯಾರಾದರೆ ಹತ್ತಾದರೂ ಒಳ್ಳೆಯ ಚಿತ್ರಗಳು ಬರುತ್ತವೆ. ಯಾವ ಚಿತ್ರ ಉತ್ತಮ, ಯಾವುದು ಕಳಪೆ ಎನ್ನುವುದನ್ನು ನಿರ್ಣಯಿಸುವವರು ಜನರು. ಸಹಾಯಧನ ನೀಡುವ ಮುನ್ನ ಒಂದು ಮಂಡಳಿ ರಚಿಸಿ ಬೇಕಾ

ದರೆ ಗುಣ ನಿಯಂತ್ರಣ ಮಾಡಬಹುದಾಗಿದೆ. ಆದರೆ ಇದು ಲಂಚಕ್ಕೆ ಮಾರ್ಗ ಮಾಡಿಕೊಡುವುದರಿಂದ ಈಗಿರುವುದನ್ನೇ ಮುಂದುವರಿಸುವುದು ಹಿತಕರ."

ಕಡಿಮೆ ಪಕ್ಷ ವರ್ಷದಲ್ಲಿ ಆರು ತಿಂಗಳಾದರೂ ಕನ್ನಡಚಿತ್ರಗಳನ್ನು ರಾಜ್ಯದಲ್ಲಿಯ ಚಿತ್ರಮಂದಿರಗಳು ಪ್ರದರ್ಶಿಸುವಂತೆ ಶಾಸನವನ್ನು ತರಬೇಕೆಂದು ಅವರು ಹೇಳುತ್ತಾರೆ. "ಕನ್ನಡಚಿತ್ರಕ್ಕೆ ಅವಕಾಶ ಕೊಡುವುದಿಲ್ಲ ಎಂಬ ಪ್ರದರ್ಶಕರ ಧೋರಣೆ ಬದಲಾಗಬೇಕು" ಎಂಬ ಅಭಿಪ್ರಾಯ ಹೊಂದಿದ ಅವರು "ಕನ್ನಡಚಿತ್ರಗಳು ಗುಣಮಟ್ಟದಲ್ಲಿ ಯಾವ ಭಾರತೀಯ ಭಾಷೆಗಳಿಗೂ ಕಮ್ಮಿಯಿಲ್ಲ," ಎಂದು ಕನ್ನಡ ಚಿತ್ರಗಳ ಬಗ್ಗೆ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ.

ಚಿತ್ರಗಳಲ್ಲಿ ಚಾಲಾಕಿನ ಹುಡುಗನ ಪಾತ್ರದಲ್ಲಿ ಜನಮನವನ್ನು ಸೂರೆಗೊಂಡ ವಾದಿರಾಜರಿಗೆ ಹಿಂದೀ ಚಿತ್ರರಂಗದ ರಾಜ ಕಪೂರ ಅಚ್ಚುಮೆಚ್ಚು. ರಾಜ ಕಪೂರನು ಅಭಿನಯಿಸಿದ 'ಜಿಸ್ ದೇಶಮೇ ಗಂಗಾ ಬಹತಿ ಹೈ' ಚಿತ್ರ ಅವರಿಗೆ ತುಂಬ ಹಿಡಿಸಿತಂತೆ. "ರಾಜ ಕಪೂರ ನಿರ್ಮಿಸುವ ಅನೇಕ ಚಿತ್ರಗಳಲ್ಲಿ ಆತ ನಮ್ಮ ಕೆಲವು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಬೀರುವುದರಿಂದ ಆತನ ಚಿತ್ರಗಳನ್ನು ನಾನು ಮೆಚ್ಚುತ್ತೇನೆ" ಎನ್ನುತ್ತಾರವರು. ವಾದಿರಾಜ ಯಾವ ಭಾಷೆಯಲ್ಲಿ ಉತ್ತಮ ಚಿತ್ರಗಳು ಬಂದರೂ ನೋಡುತ್ತಾರೆ. "ಚಿತ್ರಗಳನ್ನು ನೋಡುವುದು, ನಾಟಕವನ್ನು ನೋಡುವುದು, ಉತ್ತಮ ಸಂಗೀತ ಕೇಳುವುದು ನನ್ನ ಹವ್ಯಾಸ" ,ಎಂದವರು ಮುಗುಳ್ನಗುತ್ತ ಹೇಳಿದರು.

"ಕನ್ನಡ ಚಿತ್ರೋದ್ಯಮ ಬೆಳೆಯುತ್ತಿರುವುದರಿಂದ ಮೈಸೂರಿನಲ್ಲಿ ಒಂದು ಚಿತ್ರನಗರದ, ತರಬೇತಿ ಕೇಂದ್ರದ ನಿರ್ಮಾಣವಾಗಬೇಕು. ಚಿತ್ರನಗರ ನಿರ್ಮಾಣವಾದರೆ ಚಿತ್ರ ತಯಾರಿಕೆಯಲ್ಲಿ ಸಾವಿರಾರು ರೂಪಾಯಿ ಉಳಿಸಬಹುದು," ಎಂಬುದು ಅವರ ಖಚಿತ ಅಭಿಪ್ರಾಯ.

★★

## ಜಿತೇಂದ್ರ ತನ್ನನ್ನು ತಾನೇ ಕಂಡಂತೆ

( ೧೮೯ ನೆಯ ಪುಟದಿಂದ )

ಎಂದೇ 'ಬೂಂದ್ ಜೋ ಬನಗಯಿ ಮೋತಿ' ಯಲ್ಲೂ ಮತ್ತೆ ನನಗೆ ಪಾತ್ರ ಕೊಟ್ಟರು. ಅದರಲ್ಲಿ ನನ್ನೊಂದಿಗೆ ಮಮ್ತಾಜ್ ನಟಿಸಿದ್ದಳು. ಇಂದಿಗೂ ಪ್ರಣಯದ ಅಭಿನಯವೆಂದರೆ ನಾನು ನಿದ್ದೆಯಿಂದ ಏಳುತ್ತೇನೆ. ಅಂಥ ಪಾತ್ರಗಳನ್ನೇ ಹೆಚ್ಚಿನ ಎಲ್ಲ ಚಿತ್ರಗಳಲ್ಲೂ ನಾನು ಆರಿಸಿದುದು. ನೂತನಳೊಂದಿಗೆ ನಟಿಸಿದ 'ಸುನರೆ ಬಾಲಮ್', ಮಾಲಾ ಸಿನ್ಹಳೊಂದಿಗೆ ಆಡಿದ 'ಮೇರೆ ಹುಜೂರ್', ನಂದಾ ಒಟ್ಟಿಗೆ 'ಧರ್ತಿ ಕಹೇ ಪುಕಾರ್‌ಕೆ', 'ಬಡಿ ದೀದಿ' ಮತ್ತು 'ಪರಿವಾರ್', ರಾಜಶ್ರೀಯೊಂದಿಗೆ 'ಸುಹಾಗ್ ರಾತ್' ಮತ್ತು 'ಗುನಾ ಸೊಂಕೆ ದೇವತಾ', ಸಾಯಿರಾ ಬಾನು ಒಂದಿಗೆ, 'ವಾದಾ', ಬಬಿತಾಳೊಂದಿಗೆ ಭಾರತದ ಪ್ರಥಮ ಜಲಾಂತರ್ಗತ ಚಿತ್ರ 'ಅನ್‌ಮೋಲ್ ಮೋತಿ', 'ಜೀನೇ ಕಿ ರಾಹ್', 'ವಿಶ್ವಾಸ್' ಮತ್ತು ಲೀನಾ ಚಂದಾವರ್‌ಕರ್‌ಳೊಂದಿಗೆ ಆಡಿದ 'ಜವಾಬ್' ಮತ್ತು 'ಹಮ್ ಜೋಲಿ' ಹಾಗೂ ಹೆಸರಿಡದ ಆರೇಳು ಚಿತ್ರಗಳಲ್ಲೆಲ್ಲ ನಾನು ತರುಣರ ಪ್ರತಿಬಿಂಬವಾಗಲು ಪ್ರಯತ್ನಿಸಿದ್ದೇನೆ. ಕೆಲವೊಮ್ಮೆ ಆ ಪಾತ್ರಕ್ಕೆ ಅವಶ್ಯವಿದ್ದಂತೆ ನನ್ನ ತಾರುಣ್ಯದ 'ತಂಟೆ'ಗಳನ್ನು ಕಡಿಮೆಗೊಳಿಸಿದ್ದೇನೆ. ನನ್ನ ಅಭಿನಯದಿಂದ ಏನಾದರೂ ನಾನು ಸಾಧಿಸಿದ್ದರೆ ಅದು ತಾರುಣ್ಯದ ಸಂಕೇತವಾಗಿ ಚಿತ್ರರಂಗದಲ್ಲಿ ರೂಪುಗೊಂಡುದು. ನನ್ನ ಯಶಸ್ಸಿನ ರಹಸ್ಯವೂ ಇದೇ."



ದೀಪಾವಳಿಯ ಸಡಗರ

# 'ನಾನು-ನನ್ನ ಪಾತ್ರಗಳು'

—ಕಲ್ಪನಾ

"ನಾನು ಹಾಗು ನನ್ನ ಪಾತ್ರಗಳು" ಈ ಕುರಿತು ಲೇಖನ ಬರೆಯಲು "ಕರ್ಮವೀರ"ದ ಸಂಪಾದಕರು ಕೇಳಿದಾಗ ನನಗಾದ ಆನಂದ ಅಷ್ಟಿಷ್ಟಲ್ಲ.

ಆದರೆ ಬರೆಯಲು ಕುಳಿತಾಗ ಏನು ಬರೆಯಲಿ ಎಂಬ ಸಮಸ್ಯೆ. ಈಗಾಗಲೇ 'ನಾನು' ಅರ್ಥಾತ್ ನನ್ನ ಬಗ್ಗೆ ಸಾಕಷ್ಟು ಜನಜನಿತವಾಗಿರುವುದರಿಂದ ವಾಚಕರಿಗೆ ಏನು ತಿಳಿಸಬೇಕು ಎಂಬ ಪ್ರಶ್ನೆ ನನಗೆದುರಾಗಿದೆ.

ನನ್ನ ಬಗ್ಗೆ ಓದುಗರಿಗೆ ಮರೆಮಾಚದೆ ತಿಳಿಸುವ ಸ್ವಭಾವ ನನ್ನದು. ಈ ವಿಷಯದಲ್ಲಿ ಅಳುಕು, ಅಂಜಿಕೆ ನನಗಿಲ್ಲ.

ತೆರೆಯ ಮೇಲೆ ನಾನು ಮೊದಲು ಬೆಳಕಿಗೆ ಬಂದುದು ಇಂದಿನ ಚಿತ್ರರಂಗದ ಸುವಿಖ್ಯಾತ ನಟ, ನಿರ್ಮಾಪಕ ಹಾಗೂ ನಿರ್ದೇಶಕರಾದ ಶ್ರೀ ಬಿ. ಆರ್. ಪಂತುಲು ಅವರಿಂದ. ಕನ್ನಡ ಚಲನಚಿತ್ರ ಪ್ರಪಂಚದ "ಮಿನುಗು ತಾರೆ" ಎನಿಸಲು ಅವರೇ ಕಾರಣ ಎಂದು ಹೇಳಲು ನನಗೆ ಅಭಿಮಾನ.

ನನ್ನ ವಿದ್ಯಾಭ್ಯಾಸವು ಮಂಗಳೂರಿನ ಸೇಂಟ್ ಆಗ್ನೆಸ್ ಕಾನ್ವೆಂಟಿನಲ್ಲಿ ಪೂರ್ತಿಗೊಂಡ ಮೇಲೆ ಚಲನಚಿತ್ರಗಳಲ್ಲಿ ಅಭಿನಯಿಸಬೇಕೆಂಬ ಹಂಬಲವು ಚಿಗುರಿತು. ಆಗ ತಾನೇ ಪಿ. ಯು. ಸಿ. ಅಧ್ಯಯನ ಮುಗಿಸಿದ ನಾನು ಶ್ರೀ ಪಂತುಲು ಅವರಿಗೆ ನನ್ನ ಆಕಾಂಕ್ಷೆಯನ್ನು ತಿಳಿಸಿ ಪತ್ರ ಬರೆದೆ. ಜೊತೆಗೆ ನನ್ನ ಭಾವಚಿತ್ರವೊಂದನ್ನೂ ಕಳಿಸಿದ್ದೆ. ಬಹುಶಃ ಅದೃಷ್ಟದೇವತೆ ನನಗೆ ಒಲಿದುಬಂದಿರಬೇಕು. ತಕ್ಷಣ ಮದರಾಸಿಗೆ ಬರುವಂತೆ ತಿಳಿಸಿ ಶ್ರೀ ಪಂತುಲು ಅವರು ಪತ್ರವೊಂದನ್ನು ಬರೆದರು. ಸ್ಕ್ರೀನ್ ಟೆಸ್ಟ್‌ನಲ್ಲಿ ನಾನು ಉತ್ತೀರ್ಣಳಾದೆ. ಸರಿ ಕೂಡಲೆ ಚಿತ್ರವೊಂದರಲ್ಲಿ ಪ್ರಮುಖ ಪಾತ್ರ ನೀಡಿ ಶ್ರೀ ಪಂತುಲು ನನ್ನ ಸಿನಿಮ ಜೀವನಕ್ಕೆ ಶ್ರೀಕಾರ ಹಾಕಿದರು.

ಶ್ರೀ ಪಂತುಲು ತಯಾರಿಸುತ್ತಿದ್ದ "ಸಾಕುಮಗಳು" ಚಿತ್ರದ ನಾಯಕಿಯ ಪಾತ್ರಕ್ಕೆ ನನ್ನನ್ನು ಆಯ್ಕೆಮಾಡಿದರು. ಅದು ನನ್ನ ಸುದೈವ. ಯಾಕೆಂದರೆ ಅಂದಿನಿಂದ ಇಂದಿನವರೆಗೆ ವಿಶಾಲವಾಗಿ ಬೆಳೆಯುತ್ತಿರುವ ಕನ್ನಡ ಚಲನಚಿತ್ರ ಪ್ರಪಂಚದಲ್ಲಿ ಸಾಕುಮಗಳಾಗಿಯೇ ಉಳಿದುಕೊಂಡು ಅಭಿನಯಿಸುತ್ತಾ ಬಂದಿದ್ದೇನೆ. ಅಷ್ಟೇ ಅಲ್ಲ ಕನ್ನಡಾಭಿಮಾನಿಗಳು ಕನ್ನಡ ಚಿತ್ರರಂಗದ "ಮಿನುಗು ತಾರೆ" ಎಂದು ಅಭಿಮಾನದಿಂದ ಗೌರವಿಸಿ ನನಗೊಂದು ಸ್ಥಾನ ನೀಡಿದ್ದಾರೆ.

"ಸಾಕುಮಗಳು" ಚಿತ್ರದಲ್ಲಿ ನಾನು ಪಾತ್ರ ವಹಿಸಿದಾಗ ನನಗೆ ಹದಿನೆಂಟು ವರ್ಷ ಪ್ರಾಯ. ಭವಿಷ್ಯದ ಬಗ್ಗೆ ಸಾಮಾನ್ಯವಾಗಿ ಆ ವಯಸ್ಸಿನ ಯುವತಿಯರಿಗೆ ಇರುವಂತೆಯೆ ನನಗೂ ನೂರೆಂಟು ಕನಸುಗಳು.

ಆದರೆ ಪ್ರಥಮ ಚಿತ್ರದ ನಂತರ ನಾನು ಕಟ್ಟಿದ್ದ ಸುಂದರ ಸ್ವಪ್ನಸೌಧವು ಕುಸಿದು ಬಿದ್ದಿತು. ಪ್ರಪಂಚವು ನಾನು ತಿಳಿದಷ್ಟು ಸುಂದರವಲ್ಲ; ಜನರು ನಾನು ತಿಳಿದಷ್ಟು ಸರಳರಲ್ಲ ಎಂಬ ಕಟು ಸತ್ಯದ ಅನುಭವವಾಯಿತು.

ಆದರೆ ನಾನು ಅಳುಕಲಿಲ್ಲ. ತನ್ನ ದುಡಿಮೆಯಲ್ಲಿ ಸ್ವಯಂ ಶ್ರದ್ಧೆ, ವಾತ್ಸಲ್ಯ, ನಿಷ್ಠೆ ಇದ್ದರೆ ಯಾರೂ ಸುಂದರ ಭವಿಷ್ಯವನ್ನು ರೂಪಿಸಿಕೊಳ್ಳಬಹುದು ಎಂಬ ಆತ್ಮವಿಶ್ವಾಸದೊಂದಿಗೆ ಚಿತ್ರರಂಗದಲ್ಲೇ ನೆಲೆಸುವ ಸಂಕಲ್ಪ ತೊಟ್ಟೆ. ಇಂದಿನ ಯಶಸ್ಸು, ಅಂದಿನ ಆ ದೃಢ ನಿರ್ಧಾರದ ಫಲ ಎಂದು ನನ್ನ ಭಾವನೆ.

ಈ ವರೆಗೆ ನಾನು ಅಭಿನಯಿಸಿರುವ ಎಲ್ಲ ಕನ್ನಡ ಚಿತ್ರಗಳು ಒಂದಲ್ಲ ಒಂದು ರೀತಿ



ಅಲಂಕರಣ

ಯಿಂದ ಜನರ ಮೆಚ್ಚುಗೆ ಪಡೆದು ಯಶಸ್ವಿಯಾಗಿರುವುದೇ ಇದಕ್ಕೆ ಸಾಕ್ಷಿ.

ಇನ್ನು ಬರೀ ಗಂಭೀರ ಪಾತ್ರಗಳನ್ನೇ ಏಕೆ ನೀವು ಅಪೇಕ್ಷಿಸುತ್ತೀರಿ? ಎಂದು ಕೆಲವರ ಪ್ರಶ್ನೆ. ಜನರ ಮೆಚ್ಚುಗೆ ಪಡೆದ ಪಾತ್ರ ವಹಿಸುವುದು ನನ್ನ ಕರ್ತವ್ಯ ಎಂದು ನಾನು ತಿಳಿದಿರುವುದೇ ಇಂಥ ಪಾತ್ರಗಳಿಗೆ ನಾನು ಪ್ರಾಶಸ್ತ್ಯ ನೀಡುವುದರ ಕಾರಣ.

ಹಾಗೆ ಅನೇಕ ಚಿತ್ರಗಳಲ್ಲಿ ವಿಭಿನ್ನ ಪಾತ್ರಗಳನ್ನೂ ನಾನು ನಿರ್ವಹಿಸಿರುವೆ. "ಕಪ್ಪು ಬಿಳುಪು" ಚಿತ್ರದ ನನ್ನ ಎರಡೂ ಪಾತ್ರಗಳು ವಿಭಿನ್ನ ಶೈಲಿಯವು. ಆ ಚಿತ್ರದ ಒಂದು ಪಾತ್ರವು ಎಲ್ಲರಿಗೂ ಹಿಡಿಸಿತೊ ಇಲ್ಲವೊ ನಾನರಿಯೆ. ನನಗಂತೂ ಒಂದು ವಿಧದಲ್ಲಿ ಆ ಪಾತ್ರಗಳು ಮೆಚ್ಚುಗೆಯಾಗಿವೆ. ಆ ಪಾತ್ರಗಳಲ್ಲಿನ ವೈವಿಧ್ಯದ ದೃಷ್ಟಿಯಿಂದ ನಾನು ಈ ಮಾತು ಬರೆಯುತ್ತಿದ್ದೇನೆ.

ಉತ್ತಮ ಕಲಾವಿದೆ ಎಂದು ಎನಿಸಿಕೊಳ್ಳಲು ಒಂದೇ ಬಗೆಯ ಪಾತ್ರ ಸಾಲದು. ಹಾಗೆನ್ನಿಸಿ ಕೊಳ್ಳಬೇಕಾದರೆ "ಅಪ್ಪ ನೆಟ್ಟ ಆಲದ ಮರಕ್ಕೆ ಜೋತುಬೀಳುವುದು" ಎಂಬ ಗಾದೆಯಂತೆ ಒಂದೇ ರೀತಿಯ ಪಾತ್ರಗಳನ್ನು ನಿರ್ವಹಿಸುವುದು ಸರಿಯಲ್ಲ.

ಇದುವರೆಗೆ ನಾನು ಅಭಿನಯಿಸಿರುವ ಕನ್ನಡ ಚಿತ್ರಗಳಲ್ಲಿ ತೃಪ್ತಿ ತಂದಿರುವ ಪಾತ್ರಗಳು ಒಂದಲ್ಲ ಹಲವಾರು. ಬೆಳ್ಳಿಮೋಡ, ಸರ್ವ–ಮಂಗಳ, ಹಣ್ಣೆಲೆ ಚಿಗುರಿದಾಗ, ಕಪ್ಪು ಬಿಳುಪು, ಮಣ್ಣಿನ ಮಗ, ಗೆಜ್ಜೆಪೂಜೆ, ಉಯ್ಯಾಲೆ, ಕರುಳಿನ ಕರೆ ಈ ಚಿತ್ರಗಳು ಕಲಾವಿದೆಯಾಗಿ ನಾನು ಕನ್ನಡ ಚಲನಚಿತ್ರ ಪ್ರಪಂಚದಲ್ಲಿ ಕಾಲಿಟ್ಟದ್ದಕ್ಕೆ ಮನಸ್ಸಿಗೆ ತೃಪ್ತಿ ನೀಡಿವೆ.

ಉತ್ತಮ ಚಿತ್ರ ಎನಿಸಿಕೊಂಡವುಗಳು ನೂರು ದಿನ ನಡೆದರೆ ಅದೇ ನನ್ನ ಜೀವನದ ಅವಿಸ್ಮರಣೀಯ ದಿನ.

ಸುದೈವದಿಂದ ಕನ್ನಡ ಚಿತ್ರರಂಗದಲ್ಲಿ ನಾನಿಂದು ಒಳ್ಳೆಯ ಸ್ಥಾನವನ್ನೇ ಪಡೆದಿರುವೆ. ಹೀಗಿರುವಾಗ ಇತರ ಭಾಷೆಯ ಚಿತ್ರಗಳಲ್ಲಿ ನಾನೇಕೆ ಅಭಿನಯಿಸುವುದಿಲ್ಲ ಎಂಬುದನ್ನೂ ಸ್ವಲ್ಪ ವಿವರಿಸಿ ಹೇಳಬೇಕೆಂಬ ಬಯಕೆ ನನಗೆ. ಸುಂದರ ಹಾಗೂ ಸಂತೋಷದ ಜೀವನ ನಡೆಸಲು ತಕ್ಕಷ್ಟು ಹಣವು ನನಗೆ ಕನ್ನಡ ಚಲನಚಿತ್ರಗಳಲ್ಲಿ ಸಿಗುತ್ತಿದೆ. ಜೊತೆಗೇ ಕನ್ನಡಚಿತ್ರಗಳನ್ನು ಅಭಿಮಾನದಿಂದ ನೋಡುವ ಜನರ ಸಂಖ್ಯೆ ಸಹ ಏರುತ್ತಿದೆ. ಇಷ್ಟೆಲ್ಲಾ ಪ್ರೋತ್ಸಾಹ ಪಡೆದ ನನಗೆ ಜೀವನದಲ್ಲಿ ಯಾವುದಕ್ಕೂ ಕಡಿಮೆಯಾಗಿಲ್ಲ. ಹೀಗಿರುವಾಗ ಬೇರೆ ಭಾಷೆ ಚಿತ್ರಗಳಲ್ಲಿ ಅಭಿನಯಿಸುವ ಕಾರಣವೇ ಇಲ್ಲ ಎಂದು ನನ್ನ ಭಾವನೆ.

ಫೋಟೊ :

ಶ್ರೀ ಬಿ. ಕೇಸರಸಿಂಗ್

ಇತರ ಭಾಷೆಯ ಚಿತ್ರಗಳಲ್ಲಿ ನನಗೆ ಅವಕಾಶ ಸಿಕ್ಕಿಲ್ಲ ಎಂದಲ್ಲ; ಅನೇಕ ಸಲ ಆಹ್ವಾನಗಳು ಬಂದಿವೆ. ಬೆಳ್ಳಿಮೋಡ, ಕಪ್ಪು ಬಿಳುಪು, ಗೆಜ್ಜೆಪೂಜೆ ಮುಂತಾದ ಚಿತ್ರಗಳನ್ನು ಇತರೆ ಭಾಷೆಗಳಲ್ಲಿ ತಯಾರಿಸ ಹೊರಟ ನಿರ್ಮಾಪಕರು, ನಿರ್ದೇಶಕರು ಮೊದಲು ನನ್ನನ್ನೇ ಆಹ್ವಾನಿಸಿದರು. ಕನ್ನಡದ ಮೇಲಿನ ಅಪಾರ ಅಭಿಮಾನವು ನನ್ನನ್ನು ಈ ಕೆಲಸಕ್ಕೆ ಒಪ್ಪಿಸಲಿಲ್ಲ. ಬೇರೆ ಭಾಷೆಯ ಚಿತ್ರಗಳಲ್ಲಿ ಮುಂದೆಯೂ ಅಭಿನಯಿಸಬಾರದೆಂಬುದು ನನ್ನ ನಿರ್ಧಾರ.

ಆದರೆ ಇತರೆ ಭಾಷೆಯ ಚಿತ್ರಗಳಲ್ಲಿ ಬೇರೆ ಸಹಕಲಾವಿದರು ಪಾತ್ರವಹಿಸಿದರೆ ನನ್ನದೇನೂ ದೂಷಣೆ ಇಲ್ಲ. ಕನ್ನಡ ಚಿತ್ರರಂಗ ಬಿಟ್ಟು ಬೇರೆ ಚಿತ್ರರಂಗಕ್ಕೆ ಹೋಗಬೇಕೆಂದರೆ ಹೆಚ್ಚಿನ ಹಣದ ಆಸೆ ಅಥವಾ ಅಂತಾರಾಷ್ಟ್ರೀಯ ಖ್ಯಾತಿಯ ಚಪಲ ಈ ಎರಡು ಉದ್ದೇಶಗಳ ಸಾಧನೆಗಾಗಿ ಕಾಲಿಡಬೇಕು.

ಇದು ನನಗೆ ಹಿಡಿಸದು. ಅಲ್ಲಿ ಸಿಗುವ ಪಾತ್ರಗಳು ನನಗೆ ಕನ್ನಡ ಚಿತ್ರಪ್ರಪಂಚದಲ್ಲಿಯೇ ಸಿಕ್ಕಿರುವಾಗ ನಾನೇಕೆ ಬೇರೆ ಭಾಷಾ ಚಿತ್ರರಂಗಕ್ಕೆ ಧಾವಿಸಲಿ? ನನ್ನನ್ನೊಮ್ಮೆ

ಕಾದಂಬರಿಯೋದು ಒಂದು ಆಸಕ್ತಿ



ಚಿತ್ರಪ್ರೇಮಿಗಳ ಕರೆ

ತೆಲುಗು ಚಿತ್ರಪ್ರಪಂಚದ ಖ್ಯಾತ ನಟ ಶ್ರೀ ಅಕ್ಕಿನೇನಿ ನಾಗೇಶ್ವರರಾವ್ ತಾವು ತಯಾರಿಸಲಿದ್ದ ತೆಲುಗು ಚಿತ್ರವೊಂದರಲ್ಲಿ ಪ್ರಮುಖ ಪಾತ್ರ ವಹಿಸಲು ಆಹ್ವಾನಿಸಿದ್ದರು. ಅದು ನನ್ನ ಜೀವನದ ಒಂದು ಸಂತೋಷದ ಗಳಿಗೆ ಎನಿಸಿದರೂ ಅನಿವಾರ್ಯವಾಗಿ ಆ ಆಹ್ವಾನವನ್ನು ನಿರಾಕರಿಸಿದೆ.

ಇನ್ನು ಪಾಶ್ಚಾತ್ಯದ್ಯಂತ ಹರಡಿರುವ ಚುಂಬನ ಹಾಗೂ ನಗ್ನತೆಯ ಬಹಿರಂಗ ಪ್ರದರ್ಶನದ ವಿಷಯ. ಈ ಸ್ವೇಚ್ಛಾ ಪ್ರದರ್ಶನವು ಚಿತ್ರರಂಗಕ್ಕೆ ಬರಲು ಖಂಡಿತ ನಾನು ಒಪ್ಪಲಾರೆ. ಖೋಸ್ಲಾ ಸಮಿತಿಯ ಈ ಶಿಫಾರ್ಸುಗಳನ್ನು/ನಾನು ತೀವ್ರವಾಗಿ ಖಂಡಿಸುತ್ತೇನೆ. ಚಿತ್ರಗಳಲ್ಲಿ ಚುಂಬನ, ನಗ್ನತೆ ಇರಬೇಕು ಎಂಬುವವರು ಮೊದಲು ತಮ್ಮ ಹೆಂಡತಿ ಮಕ್ಕಳಿಂದ ಅಂಥ ಪ್ರದರ್ಶನ ಮಾಡಿಸಲಿ! ಆಗ ನಾವೂ ಮಾಡುತ್ತೇವೆ.

ಇಂದು ಅರೆಬೆತ್ತಲೆ ಕುಣಿತ, ಅಸಹ್ಯ ಹಾಗೂ ದ್ವಂದ್ವಾರ್ಥದ ಸಂಭಾಷಣೆಗಳಿರುವ ಚಿತ್ರಗಳು ಹೆಚ್ಚಾಗುತ್ತಿದ್ದು ಅವುಗಳಿಂದ ಸದಾ ನಾನು ದೂರವಿರುತ್ತೇನೆ. ತಮ್ಮ ತಮ್ಮ ಪಾತ್ರಗಳಿಗೆ ತಕ್ಕಂತೆ ವೇಷ-ಭೂಷಣ ಧರಿಸುವ ಕಲಾವಿದರು ಇಂದು ಕೈ ಬೆರಳೆಣಿಕೆಯಷ್ಟು. ಖೋಸ್ಲಾ ಸಮಿತಿ ಶಿಫಾರ್ಸಿಗಿಂತ ಒಂದು ಹೆಜ್ಜೆ ಮುಂದೆಯೇ ಹೋಗುವ ಚಪಲವು ಅನೇಕ ಕಲಾವಿದರಿಗೆ ಇದೆ. ತುಂಡು ಲಂಗ, ಸಾಧ್ಯವಾದರೆ ಇನ್ನೂ ಹೆಚ್ಚು ಅಂಗಾಂಗ ಪ್ರದರ್ಶನ ಮಾಡುವ 'ಫ್ಯಾಶನ್' ಶೋಧನೆಯಲ್ಲಿದ್ದಾರೆ, ಈ ಜನ.

ಕನ್ನಡ ಚಿತ್ರರಂಗದ ಇಂದಿನ ಪರಿಸ್ಥಿತಿ ನನ್ನ ದೃಷ್ಟಿಯಲ್ಲಿ ಅಷ್ಟೇನೂ ಕೆಟ್ಟದ್ದಾಗಿಲ್ಲ. ಒಳ್ಳೆಯ ಚಿತ್ರಗಳು ಆಗಾಗ ಬರುತ್ತಲೇ ಇವೆ. ಆದರೆ ಅವುಗಳ ಹಿಂದೆಯೇ ಕೆಟ್ಟ ಕನ್ನಡ ಚಿತ್ರಗಳ ಪ್ರದರ್ಶನವೂ ಹೆಚ್ಚಾಗುತ್ತಿದೆ. ಹೀಗಾಗಿ ಹಿಂದೆ ನಾವು ಕನ್ನಡದಲ್ಲಿ ಒಳ್ಳೆಯ ಚಿತ್ರಗಳನ್ನು ನೋಡಿದ್ದು ಬರೀ ಕನಸೆ? ಎಂದು ತಲೆ ಕೆದರಿಕೊಳ್ಳುವ ದುಃಸ್ಥಿತಿ ಇಂದು ಒದಗಿದೆ.

ರಾಜ್ಯದಲ್ಲಿ ತಯಾರಿಸಿದ ಉತ್ತಮ ಕನ್ನಡ ಚಿತ್ರಗಳಿಗೆ ಸರ್ಕಾರ ಸಹಾಯಧನ ನೀಡುತ್ತಿರುವುದರಿಂದ ಕನ್ನಡ ಚಲನಚಿತ್ರಗಳ ತಯಾರಿಕೆ ಹೆಚ್ಚಿದೆ ಎಂಬುದರಲ್ಲಿ ಸಂಶಯವಿಲ್ಲ. ಅಷ್ಟೇ ಅಲ್ಲ ಇದನ್ನು ದುರುಪಯೋಗಪಡಿಸಿಕೊಂಡು ಕೆಟ್ಟ ಚಿತ್ರಗಳನ್ನು ತಯಾರಿಸುವವರೂ ಇಲ್ಲದಿಲ್ಲ. ಇದರಿಂದ ಉತ್ತಮ ಚಿತ್ರಗಳ ತಯಾರಿಕೆಗೇ ಕಳಂಕ; ಅಪವಾದ.

ಜೊತೆಗೆ ಕನ್ನಡಕಲಾವಿದರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಸರ್ಕಾರವು ಬಹುಮಾನಗಳನ್ನೂ ನೀಡುತ್ತದೆ.

ಈಗ ನನ್ನದೊಂದು ಸಲಹೆ. ಕನ್ನಡ ಚಿತ್ರಗಳಿಗೆ ಸಹಾಯಧನ ನೀಡುವುದನ್ನು ಸರ್ಕಾರವು ನಿಲ್ಲಿಸುವುದೆಂಬ ವದಂತಿಯು ದಟ್ಟವಾಗಿ ಹಬ್ಬಿದೆ. ತಕ್ಷಣ ಇದನ್ನು ಸ್ಥಗಿತಗೊಳಿಸಿದರೆ ಕನ್ನಡ ಚಿತ್ರರಂಗಕ್ಕೆ ಭಾರಿ ಕೊಡಲಿಪೆಟ್ಟು ಬೀಳುವುದೆಂದು ನನ್ನ ಭಾವನೆ. ಇದರಿಂದ ಕೆಟ್ಟ ಚಿತ್ರಗಳ ತಯಾರಿಕೆಯನ್ನೇನೂ ನಿಲ್ಲಿಸಿದಂತಾಗುವುದಿಲ್ಲ. ಒಂದು ವೇಳೆ ಸರ್ಕಾರ ಮುಂದೆ ಸಹಾಯಧನ ನಿಲ್ಲಿಸುವ ಪಕ್ಷದಲ್ಲಿ ಕಲಾವಿದರಿಗೆ ತಾಂತ್ರಿಕಜ್ಞರಿಗೆ ಕೊಡುತ್ತಿರುವ ಬಹುಮಾನದ ಹಣದಂತೆ ಉತ್ತಮ ಚಿತ್ರಗಳಿಗೂ ನೀಡಬೇಕೆಂಬುದೇ ನನ್ನ ಸಲಹೆ.

ಸಾಕು ಇನ್ನು ನಾನು ಹೇಳಿದಷ್ಟೂ ಲೇಖನ ಬೆಳೆಯುತ್ತಾ ಹೋದೀತು. ಅದರಿಂದ ಓದುವ ನಿಮಗೇ ಬೇಸರ. ನನ್ನ ಅಂದಿನ ಕನಸುಗಳು ಇಂದು ನನಸಾಗಿವೆ. ಇನ್ನು ಚಿತ್ರರಂಗದ ಈ ಜೀವನ ಸಾಕೆಂದು ನನ್ನ ಆಶಯ. ಈ ಬಗ್ಗೆ ಚಿತ್ರರಂಗದಿಂದ ನಿವೃತ್ತಳಾಗುತ್ತೇನೆಂದೂ ಹಲವು ಬಾರಿ ಪತ್ರಿಕೆಗಳಲ್ಲಿ ಸುದ್ದಿಗಳು ಪ್ರಕಟವಾಗಿವೆ. ಆದರೆ ಚಿತ್ರರಂಗದಿಂದ ವಿಶ್ರಮಿಸಬೇಕೆಂಬ ನನ್ನ ಈ ಇಚ್ಛೆಯು ಯಾವಾಗ ಹೇಗೆ ಈಡೇರುವುದೆಂಬುದನ್ನು ಮಾತ್ರ ನಾನು ತಿಳಿಯೆ. ಅದೆಲ್ಲ ದೈವಸಂಕಲ್ಪ. ನಿವೃತ್ತಳಾಗುವ ಮೊದಲು ನನ್ನೆಲ್ಲ ಅಭಿಮಾನಿಗಳಿಗೆ ತಿಳಿಸಿ ನಂತರ ಚಿತ್ರರಂಗದಿಂದ ದೂರ ಸರಿಯುತ್ತೇನೆ. ಅನಂತರದ ನನ್ನ ಮುಂದಿನ ಜೀವನವನ್ನು ತುಂಬಾ ಸರಳವಾಗಿ ಕಳೆಯುವ ನಿರ್ಧಾರ ನನ್ನದು.

ದೂರ ಬೆಟ್ಟದಲ್ಲಿ ಪುಟ್ಟ ಮನೆ ಇರಬೇಕು.
ಮನೆಯ ಸುತ್ತ ಹೂವುರಾಶಿ ಹಾಕಿರಬೇಕು.
ತಂಗಾಳಿ ಜೋಗುಳದ ಹಾಡಲೇಬೇಕು.
ಬಂಗಾರದ ಬಾಳೇ ಅದು ನನಗಿರಬೇಕು,
ನಾವು ನಗುತಿರಬೇಕು.

ಇದೇ ನನ್ನ ಮುಂದಿನ ಗೃಹಿಣೀ ಜೀವನದ ಯೋಜನೆ. ಹೆಚ್ಚಿಗೆ ಇನ್ನೇನು ಹೇಳಲಿ?

ನಿಮಗೆಲ್ಲ ದೀಪಾವಳಿಯ ಹೃತ್ಪೂರ್ವಕ ಶುಭಾಶಯಗಳು. ನಿಮ್ಮೆಲ್ಲರ ಆಶೀರ್ವಾದವು ಸದಾ ನನ್ನ ಬೆನ್ನೆಲುಬಾಗಿರಲಿ. ★★



ಲೀನಾ ಚಂದಾವರಕರ್ ಫೋಟೋ : ಶಕ್ತಿ ಆರ್ಟ್ ಸ್ಟೂಡಿಯೊ, ಹುಬ್ಬಳ್ಳಿ

# 'ಪ್ರತಿಯೊಂದರಲ್ಲಿ ಹೊಸ ಪ್ರಯೋಗ ಮಾಡುತ್ತಿರುತ್ತೇನೆ'

**—ಲೀನಾ ಚಂದಾವರಕರ್**

ಯುನೈಟೆಡ್ ಪ್ರೊಡ್ಯೂಸರ್ಸ್ ಟ್ಯಾಲೆಂಟ್ ಆ್ಯಂಡ್ ಟೆಸ್ಟ್‌ನಲ್ಲಿ ಪಾಸಾದರೂ "ನೀನಿನ್ನೂ ಮಗು. ಚಲಚ್ಚಿತ್ರದಲ್ಲಿ ಇಷ್ಟು ಬೇಗ ನಟಿಸುವುದು ಬೇಡ. ಎರಡು ವರ್ಷ ಹೋಗಲಿ" ಎಂದು ಹಿಂದೆ ಕಳಿಸಿದ ಧಾರವಾಡದ ಸಾರಸ್ವತ ಕನ್ಯೆ ಲೀನಾ ಇಂದು ಉದಯೋನ್ಮುಖ ತಾರೆಯರಲ್ಲಿ ಪ್ರಮುಖಳು. ಮೊದಲ ಚಿತ್ರ "ಮನ್ ಕಾ ಮೀತ್"–ಬಿಡುಗಡೆಯಾಗುವ ಮುನ್ನವೇ ಒಂದು ಡಜನ್ ಚಿತ್ರಗಳಿಗೆ ಕರಾರು ಹಾಕಿದ ಲೀನಾ ತನ್ನ ಅಭಿನಯದ ಬಗ್ಗೆ ತಾನೇ ಹೇಳುವುದನ್ನು ಕೇಳುವುದೂ ಒಂದು ಮೋಜು.

"ನನ್ನ ಅಭಿನಯದ ಬಗ್ಗೆ ನಾನು ಹೇಳುವುದೇನು? ಹಿರಿಯ ಕಲಾವಿದರು, ಚಿತ್ರ ನಿರ್ಮಾಪಕರು, ಪತ್ರಿಕಾಕರ್ತರು ಹೇಳಬೇಕು." ಎಂದೇ ಅವಳು ಆರಂಭಿಸಿದಳು. ಅವಳ ಕಣ್ಣುಗಳು ಕುಣಿಯುತ್ತಿದ್ದವು. ಅವಳ ಮುಖ ತುಂಬ ಮುಗ್ಧ. ಬಾಲ್ಯದ ಎಸಳು ಇನ್ನೂ ಮಾಯವಾಗಿಲ್ಲ.

"ಹಾಗಲ್ಲ. ನಟಿಸುವಾಗಿನ ನಿಮ್ಮ ಅನುಭವಗಳೇನು? ಅಭಿನಯ ಒಂದು ವಿಶಿಷ್ಟ ಕಲೆ. ಅದಕ್ಕೆ ತನ್ನದೇ ಆದ ಒಂದು ಶೈಲಿ ಆ ವ್ಯಕ್ತಿಯಿಂದ ರೂಪುಗೊಳ್ಳುತ್ತದೆ. ಆ ದೃಷ್ಟಿಯಿಂದ ನಿಮ್ಮ ಸ್ವಾನುಭವವನ್ನೇ ಹೇಳಿರಿ" ಎಂದೆ.

ಲೀನಾ ಒಮ್ಮೆ ಯೋಚನಾಪರಳಾದಳು.

"೧೯೬೯ರಲ್ಲಿ ಬಿಡುಗಡೆಯಾದ ನನ್ನ ಮೊದಲ ಚಿತ್ರ 'ಮನ್ ಕಾ ಮೀತ್' ನನ್ನ ಜೀವನದಲ್ಲಿ ಹೊಸ ಅಧ್ಯಾಯವೊಂದನ್ನೇ ತೆರೆಯಿತು. ಬಹುಶಃ ಅಜಂತಾ ಆರ್ಟ್ಸ್ ಆಶ್ರಯದಲ್ಲಿ ನಾನು ಕಲಿತುದನ್ನೆಲ್ಲ ತೋರಿಸಲು ಇಲ್ಲಿ ನನಗೆ ಅವಕಾಶವಿರಲಿಲ್ಲ. ಅದು ಮೊದಲ ಚಿತ್ರ. ನಾನು ನಿರ್ದಿಷ್ಟ ಚೌಕಟ್ಟಿನಲ್ಲಿರಬೇಕಿತ್ತು. ಅದು ಮೊದಲ ಅನುಭವ. ಫಲಿತಾಂಶ ಗೊತ್ತಾಗದೆ ನನಗೇ ಆತ್ಮವಿಶ್ವಾಸ ಹೇಗೆ ಹುಟ್ಟಬೇಕು? ಆದರೂ ನಾನು ಧ...ನ ಹೆಜ್ಜೆ ಇಟ್ಟೆ."

"ಈ ಚಿತ್ರದಲ್ಲಿ ನಿಮ್ಮ ಅಭಿನಯ ನೋಡಿದ ಬಳಿಕ ತಾನೇ ಉಳಿದ ನಿರ್ಮಾಪಕರು ನಿಮ್ಮೊಂದಿಗೆ ಕರಾರು ಮಾಡಿಕೊಂಡುದು?"

"ನಿಜ. ರಫ್ ಪ್ರಿಂಟ್‌ಗಳನ್ನು ನೋಡಿಯೇ ಅವರೂ ಮುಂದಾದರು. ೧೯೭೦ರಲ್ಲಿ ಬಿಡುಗಡೆಯಾದ 'ಜವಾಬ್', 'ಹಮ್‌ಜೋಲಿ'ಗಳು ನನ್ನ ಅಭಿನಯಕ್ಕೆ ಹೊಸ ಅರ್ಥ ಕೊಟ್ಟವು. ಬಹುಶಃ ಬಿಡುಗಡೆಯಾದ ನನ್ನ ಚಿತ್ರಗಳಲ್ಲಿ 'ಜವಾಬ್'ನಲ್ಲಿ ನನ್ನ ಅಭಿನಯ ನನಗೆ ತುಂಬ ತೃಪ್ತಿ–ಸಮಾಧಾನ ತಂದುಕೊಟ್ಟಿತು ಎನ್ನಬಹುದು. ಅದರಲ್ಲಿ ನನಗೆ ದೊರಕಿದ ಪಾತ್ರವೂ ಅಂಥದ್ದೇ. ಜಮೀನುದಾರನ ಶೋಕಿನ ಮಗಳಾಗಿ ನಾನು ಅದರಲ್ಲಿ ನಟಿಸಿದ್ದೇನಷ್ಟೆ. ಅದರಲ್ಲಿ ಬರುವ ಜೀವನದ ವಿರುದ್ಧ ಪ್ರವಾಹಗಳ ಕಥಾನಕ ನನ್ನ ಅಭಿನಯಕ್ಕೆ ತುಂಬ ಅವಕಾಶ ನೀಡಿತು. ದೊಡ್ಡ ವಂಶದಲ್ಲಿ ಐಶ್ವರ್ಯ – ವೈಭವಗಳ ನಡುವೆ ಬೆಳೆದ ಸುಂದರ ಕನ್ಯೆಯೊಬ್ಬಳು ಮಾನವೀಯ ಪರಿಸ್ಥಿತಿಗಳನ್ನು ಹೇಗೆ ಎದುರಿಸುತ್ತಾಳೆ ಎಂಬುದು ನನ್ನ ಅಭಿನಯಕ್ಕೆ ನೀಡಿದ ಆಹ್ವಾನವಾಗಿತ್ತು. ನಾನು ಅದನ್ನು ಎದುರಿಸಿದೆ. ನಿಜ ಜೀವನದಲ್ಲಿ ನಾನು ಐಶ್ವರ್ಯವಂತ – ಶೋಕಿನವಳು ಅಲ್ಲ, ತೀರ ಬಡವಳೂ ಅಲ್ಲ. ಎಂದೇ ಆ ಪಾತ್ರ ಹೊಸ ಭಾವನೆಗಳಲ್ಲಿ ನನ್ನ ಮನಸ್ಸನ್ನು ಹರಿದಾಡಿಸಲು ತುಂಬ ಅವಕಾಶ ಮಾಡಿಕೊಟ್ಟಿತು."



"ನಿಮ್ಮ ಅಭಿನಯಕ್ಕೆ ನಿಮ್ಮೊಂದಿಗೆ ನಟಿಸುವವರ ಪ್ರತಿಕ್ರಿಯೆ ಏನು?"

"ಸರಿಯಾಗಿ ಕೇಳಿದಿರಿ. ಅಭಿನಯವೆಂಬುದು ಬಹು ಸಾಂಕ್ರಾಮಿಕ. ಒಬ್ಬರ ಅಭಿನಯದಿಂದ ಇನ್ನೊಬ್ಬರು ಸ್ಫೂರ್ತಿಗೊಳ್ಳುತ್ತಾರೆ. ಏಕೆಂದರೆ ಚಿತ್ರರಂಗ ಕೇವಲ ಓರ್ವ ವ್ಯಕ್ತಿಯ ಸುತ್ತ ಹೆಣೆದಿಲ್ಲ. ವ್ಯಕ್ತಿ ಅದಕ್ಕೆ ಕೇವಲ ಪೂರಕ. ನನ್ನೊಬ್ಬಳ ಅಭಿನಯದಿಂದ ಚಿತ್ರವೊಂದು ಭಾರಿ ಯಶಸ್ವಿಯಾಗಬಹುದು ಇಲ್ಲವೆ ಇನ್ನೊಬ್ಬನ ಅಭಿನಯದಿಂದ ಅದು ಸೋಲಬಹುದು ಎನ್ನುವುದು ತಪ್ಪು. ಚಿತ್ರಕಲೆ ಒಂದು ಸಾಮೂಹಿಕ ಚಟುವಟಿಕೆ. ಚಿತ್ರಕತೆ ಬರೆಯುವವರು, ನಟರು, ಛಾಯಾಗ್ರಾಹಕರು, ದಿಗ್ದರ್ಶಕರು ಎಲ್ಲರೂ ಇದರಲ್ಲಿ ಜವಾಬ್ದಾರರು."

"ನಿಮ್ಮ ಅಭಿನಯದಿಂದ ನೀವು ಕಂಡುಕೊಂಡ ವೈಶಿಷ್ಟ್ಯವೇನು?"

"ನನ್ನ ಅಭಿನಯದಲ್ಲಿ ನಾನು ತರುಣ ಜನಾಂಗವನ್ನು ಪ್ರತಿನಿಧೀಕರಿಸಿದ್ದೇನೆ. ವಯಸ್ಸಿಗೂ – ಅಭಿನಯಕ್ಕೂ ಬಹಳ ಸಂಬಂಧ ಕಲ್ಪಿಸುತ್ತಾರೆ. ಕೆಲವರು ಮುದುಕಿಯರಾದ ಎಷ್ಟೋ ತಾರೆಯರು ಈಗ ಕಾಲೇಜು ಕನ್ಯೆಯರ ಪಾತ್ರವಾಡುವುದಿಲ್ಲವೆ? ಕಾಲೇಜು ಕನ್ಯೆಯಂತೆ ಕಾಣುವ ನಾನು ಪ್ರೌಢೆಯೊಬ್ಬಳ ಪಾತ್ರವಾಡಿದರೆ ಅದು ಅಸಂಬದ್ಧವಾಗಿ ಕಾಣಲಾರದು. 'ಮೆಹಬೂಬ್ ಕಿ ಮೆಹಂದಿ'ಯಲ್ಲಿ ನನಗೆ ಅಂಥ ಪಾತ್ರವೊಂದಿದೆ. "ಚಿನ್‌ಗಾರಿ"ಯಲ್ಲಿಯೂ ನನ್ನ ಪಾತ್ರ ತರುಣ ಜನಾಂಗದ ಪ್ರತಿಬಿಂಬವೇ. "ಹಮ್ ಜೋಲಿ"ಯನ್ನು ನೀವು ನೋಡಿರಬೇಕಲ್ಲ – ಇಬ್ಬಗೆಯ ಪಾತ್ರಗಳನ್ನೂ ನಾನು ಆಡಬಲ್ಲೆ. ಈಗ ತಯಾರಾಗುತ್ತಿರುವ "ನಗೀನಾ", "ಮಾಲಿಕ್"ಗಳಲ್ಲೂ ಪ್ರತ್ಯೇಕ ರೀತಿಯ ಅಭಿನಯವೇ ಕೊಡಲು ನಾನು ಪ್ರಯತ್ನಿಸುತ್ತಿದ್ದೇನೆ. ಹೆಸರಿಡದ ಇನ್ನೂ ಸುಮಾರು ಹತ್ತು ಚಿತ್ರಗಳಲ್ಲಿ ನಾನು ಅಭಿನಯಿಸುತ್ತೇನೆ. ಪ್ರತಿಯೊಂದರಲ್ಲೂ ನಾನು ಹೊಸ ಪ್ರಯೋಗ ಮಾಡುತ್ತಿರುತ್ತೇನೆ. ಏಕೆಂದರೆ ಪ್ರತಿಯೊಂದೂ ಹೊಸ ಅನುಭವವಾಗಬೇಕು; ನನಗೆ – ನೋಡುವವರಿಗೆ. ಆಗಲೇ ಅದು ಕಲಾಕೃತಿಯೆನಿಸುತ್ತದೆ."

★★

'ಸಲಾಮ್ – ಏ ಇರಾಣ' ಚಿತ್ರದ ಷೂಟಿಂಗ್‌ಗಾಗಿ ವಹೀದಾ ಹೊರಡುತ್ತಿದ್ದಂತೆ ಇರಾಣದಲ್ಲಿ ಭೂಕಂಪವಾದ ಸುದ್ದಿ ಬಂದಿತು. ಅಲ್ಲಿ ನೂರಾರು ಮಂದಿ ಸತ್ತಿದ್ದರು. ಅಂಥ ಸಂದಿಗ್ಧದಲ್ಲಿ ಹೋಗಲೋ ಬೇಡವೋ ಎಂದು ಆಕೆಯ ನಿರ್ಮಾಪಕ, ಕನ್ನಡಿಗ ಬಿ. ರಾಧಾಕೃಷ್ಣರಾವ್ ಮೊದಲಾಗಿ ಎಲ್ಲರೂ ಯೋಚನೆಯಲ್ಲಿರುವಾಗ 'ಕರ್ಮವೀರ' ಪ್ರತಿನಿಧಿ ವಹೀದಾಳನ್ನು ಭೇಟಿಯಾದುದು. ಬಂದಿರುವ ವಿಚಾರ 'ಕರ್ಮವೀರ' ದೀಪಾವಳಿ ಸಂಚಿಕೆಗಾಗಿ ವಿಶೇಷ ಲೇಖನ ಎಂದು ಹೇಳಿದ್ದ. ವಿಷಯ ಕೇಳಿ ವಹೀದಾಳ ಮುಖ ಅರಳಿತು.

"ಒಳ್ಳೆಯ ವಿಚಾರವನ್ನೇ ಹಿಡಿದುಕೊಂಡು ಬಂದಿದ್ದೀರಿ ನೀವು. ನನ್ನ ಅಭಿನಯ ನಾನೇ ಕಂಡಂತೆ! ಭಾರೀ ಆತ್ಮವಿಮರ್ಶೆಯೇ ಆಯಿತಲ್ಲ ಇದು?" ಎಂದಳು ನಗುತ್ತ.

"ಜನರೆಲ್ಲ ಚಲಚ್ಚಿತ್ರದ ಹೊರಗಿನ ಸೌಂದರ್ಯವನ್ನೇ ನೋಡಿ ಬೆರಗುಗೊಳ್ಳುತ್ತಾರೆ. ಸ್ವಲ್ಪ ಒಳಗಿನ ಪರಿಚಯವೂ ಆಗಲಿ ಎಂಬ ಪ್ರಯತ್ನ........"

"ಭೇಷ್. ನಟನೆ, ನಾಟ್ಯಗಳ ಬಗ್ಗೆ ಮಾತನಾಡುವುದೆಂದರೆ ನನಗೂ ಸಂತೋಷ."

"ಈ ವಿಷಯವನ್ನು ಆರಿಸಿದ ಶ್ರೇಯಸ್ಸು ನಮ್ಮ ಸಂಪಾದಕರದು. ಯಾವಾಗಲೂ ಬೇರೆಯವರೇ ನಿಮ್ಮ ಬಗ್ಗೆ ಮಾತನಾಡುತ್ತಾರಲ್ಲ. ನಮ್ಮ ಪ್ರಜಾಪ್ರಭುತ್ವದ ಸಂಪ್ರದಾಯದಂತೆ ನಿಮಗೂ ಮಾತನಾಡುವ ಸಮಾನ ಹಕ್ಕು, ಅವಕಾಶಗಳಿರಬೇಕು ತಾನೆ?"

ಒಮ್ಮೆ ಸೀರೆ–ಸೆರಗು ಸರಿಮಾಡಿಕೊಂಡು ವಹೀದಾ ಪ್ರಶ್ನೆಗೆ ಉತ್ತರ ಕೊಡಲು ಸಿದ್ಧಳಾಗಿ ಕೂತಳು. ನಾನೆಂದೆ–

"ನೀವೇ ಆರಂಭ ಮಾಡಿ. ಪ್ರಶ್ನೋತ್ತರಗಳ ಸಂದರ್ಶನ ಹಿಂದೊಮ್ಮೆ ಆಗಿದೆಯಲ್ಲ. ಈಗ ನಿಮ್ಮ ನಟನೆಯ ಬಗೆಗೆ ನಿಮಗೆ ಏನನ್ನಿಸಿದೆ, ಅದಕ್ಕೆ ನಿಮ್ಮ ಪ್ರತಿಕ್ರಿಯೆ ಏನು, ಅದನ್ನು ಅರಳಿಸಿಕೊಳ್ಳಲು ನಿಮಗೆ ಅವಕಾಶ ಹೇಗಾಯಿತು ಎಂದು ಹೇಳುತ್ತಾ ಹೋಗಿ."

ನಗುತ್ತಿದ್ದ ವಹೀದಾಳ ಮುಖ ಈಗ ಗಂಭೀರವಾಯಿತು. ಅಂತರ್ಮುಖಿಯಾದಂತೆ ಆಕೆ ಹೆಬ್ಬೆಟ್ಟಿನಿಂದ ನೆಲ ಗೀರುತ್ತ ಯೋಚಿಸಲಾರಂಭಿಸಿದಳು. ಅನಂತರ ಸುಸ್ಪಷ್ಟ ಹಿಂದಿಯಲ್ಲಿ ಹೇಳಲಾರಂಭಿಸಿದಳು:

"ಪ್ರತಿಯೊಬ್ಬನಲ್ಲೂ ಕಲೆಯ ಅಂಶ ಇದ್ದೇ ಇರುತ್ತದೆ. ಅವರವರ ಸಂಸ್ಕಾರ, ಪರಿಸರಗಳಿಗನುಸಾರವಾಗಿ ಅದು ಹೆಚ್ಚುಕಡಿಮೆಯಿರಬಹುದು. ಕೆಲವರಿಗೆ ಅದನ್ನು ಬೆಳಸಿಕೊಳ್ಳಲು ಅವಕಾಶ ಸಿಗುತ್ತದೆ, ಕೆಲವರು ಸಿಕ್ಕರೂ ಅಲಕ್ಷಿಸುತ್ತಾರೆ. ಅವಕಾಶ, ಪ್ರಯತ್ನ, ಪ್ರೋತ್ಸಾಹ ಇವೆಲ್ಲವೂ ಎಲ್ಲರಿಗೂ ದೊರೆಯುವುದು ಅಪೂರ್ವವೇ........ ಅಂಥ ಭಾಗ್ಯ ನನಗೆ ಒದಗಿತು......."

ಹಾಗೆನ್ನುತ್ತಿದ್ದಂತೆ ವಹೀದಾಳ ಮುಖದಲ್ಲಿ ನೆರಳು ಕವಿಯಿತು. ತಾರಾಪಟ್ಟಕ್ಕೆ ಏರುವ ಮೊದಲಿನ ದಿನಗಳು ಬಹುಶಃ ಅವಳಿಗೆ ನೆನಪಿಗೆ ಬಂದಿರಬೇಕು ಎಂದೆನಿಸಿತು. ಒಂದು ನಿಮಿಷ ತಡೆದು ಆಕೆ ಮತ್ತೆ ಹೇಳಿದಳು:

"ಬಹುಶಃ ಗುರುದತ್‌ಜಿಯವರು ನನ್ನನ್ನು ಹೈದರಾಬಾದಿನಲ್ಲಿ ಭೆಟ್ಟಿಯಾಗಿರದಿದ್ದರೆ ನಾನೂ ವನಪುಷ್ಪದಂತೆ ತಮಿಳು – ತೆಲುಗು ಚೌಕಟ್ಟಿನಲ್ಲೇ ಬಾಡಿಹೋಗುತ್ತಿದ್ದೆನೇನೊ. ಗುರುದತ್ ನನ್ನನ್ನು ಕಾಣುವ ಮೊದಲು ನನ್ನಲ್ಲಿ ಅಷ್ಟು ಪ್ರತಿಭೆಯಿದೆ ಎಂದು ನನ್ನ ಅರಿವಿಗೇ ಬಂದಿರಲಿಲ್ಲ. ನರ್ತಕಿ ಎಂದು ಆಗಲೇ ನಾನು ತಕ್ಕಮಟ್ಟಿಗೆ ಹೆಸರು ಮಾಡಿದ್ದೆನೇನೊ ನಿಜ. ಆದರೆ ನಾನು ಚೆನ್ನಾಗಿ ಭಾವನಾತ್ಮಕವಾಗಿ ನಟಿಸಬಲ್ಲೆ ಎಂದು ನನಗೇ ತಿಳಿದಿರಲಿಲ್ಲ. ನನ್ನಲ್ಲಿದ್ದ ಈ ಚೈತನ್ಯಕ್ಕೆ ಚಿಗುರನ್ನು ಕೊಟ್ಟವರು ಗುರುದತ್ ಅವರು.."



# 'ನಾನು ಎಂಬುದು ಮರೆತಾಗ ಅಭಿನಯ ತೃಪ್ತಿ ನೀಡುತ್ತದೆ'

—ವಹೀದಾ ರೆಹಮಾನ

ದಿ. ಗುರುದತ್‌ರನ್ನು ನೆನೆಯುವಾಗ ಆಕೆಯ ಕಣ್ಣಲ್ಲಿ ಅದೇನೊ ಹೊಳಪು. ಕ್ಷಣ ಮಾತ್ರದಲ್ಲಿ ಆಕೆ ಮಂಕುಕವಿದಂತಾದಳು. ಬಹುಶಃ ಗುರುದತ್ ವಿಚಾರವಾಗಿ ಇನ್ನೂ ಮಾತನಾಡುತ್ತ ಹೋದರೆ ಆಕೆಯ ಕಣ್ಣಲ್ಲಿ ನೀರು ಬರುತ್ತಿತ್ತೇನೊ!

"ನನ್ನ ಅಭಿನಯಕ್ಕೆ ಮೆರುಗು ಬಂದುದು ಅವರ 'ಪ್ಯಾಸಾ', 'ಕಾಗಜ್ ಕೆ ಫೂಲ್', 'ಸಾಹಿಬ್ ಬೀಬಿ ಔರ್ ಗುಲಾಮ್' ಮತ್ತು 'ಚೌದವಿ ಕಾ ಚಾಂದ್' ಚಿತ್ರಗಳ ತಯಾರಿಯಲ್ಲಿ. ಗುರುದತ್ ದಿಗ್ದರ್ಶನದೊಂದಿಗೆ ನನ್ನ ಅಭಿನಯಚಾತುರ್ಯ ಹೊಸ ಮುಖವನ್ನೇ ಕಂಡಿತು. ಹ್ಞ, ಒಂದು ಮಾತು. ಈ ಎಲ್ಲ ಹಿನ್ನೆಲೆಯನ್ನು ನಾನು ಹೇಳುವುದೂ ಕಲಾವಿದಳಾಗಿ. ಬಾಕ್ಸ ಆಫೀಸ್ ಭವಿಷ್ಯ ಹೇಳುವವಳಲ್ಲ ನಾನು" ತನ್ನನ್ನೇ ತಿದ್ದಿಕೊಳ್ಳುವಂತಿತ್ತು ಅವಳ ಧ್ವನಿ.

"ನನ್ನ ಮಟ್ಟಿಗಂತೂ ಬಾಕ್ಸ ಆಫೀಸು ಚಿತ್ರದ ಅಥವಾ ಅದರ ಕಲಾವಿದರ ಅಭಿನಯ, ಕಲಾವಂತಿಕೆಗಳ ಮಾನದಂಡವಲ್ಲ" ಎಂದೆ ನಾನು.

"ಹಾಗಾದರೆ ಸರಿ. ನನ್ನ ಅಭಿನಯವನ್ನು ನಾನು ಹೊಗಳಿಕೊಳ್ಳುತ್ತಿಲ್ಲ. ಆಗಾಗ ನಾನು ಆ ವಿಚಾರ ಆತ್ಮವಿಮರ್ಶೆ ಮಾಡಿಕೊಂಡಿದ್ದೇನೆ. ಗುರುದತ್, ಸುಬ್ಬರಾವ್, ದಿಲೀಪ್ ಕುಮಾರ್, ರಾಜ್ ಕಪೂರ್, ಸುನೀಲ್ ದತ್ ಮೊದಲಾದವರೊಂದಿಗೆ ಚರ್ಚಿಸಿದ್ದೇನೆ. ನನ್ನನ್ನೇ ನಾನು ಅರಿಯಲು ಪ್ರಯತ್ನಿಸಿದ್ದೇನೆ. ಎಂದೇ ಪ್ರತಿಯೊಂದು ಚಿತ್ರವೂ ನನಗೆ ಒಂದೊಂದು ಹೊಸ ಪ್ರಯೋಗವೇ ಆಗುತ್ತಲಿದೆ. ನನಗೆ ಬೇಕಾದುದೂ ಅದುವೆ. ಮೇಲಾಗಿ ನನ್ನ ನೃತ್ಯದ ಹಿನ್ನೆಲೆಯಿಂದ – ನೃತ್ಯ, ಮುದ್ರೆ, ರಸ, ಭಾವನೆಗಳ ಅಡಿಗಟ್ಟು ಚೆನ್ನಾಗಿದ್ದುದರಿಂದ ಪ್ರತಿಯೊಂದು ಪಾತ್ರವನ್ನೂ ನಾನು ಅನುಭವಿಸಿದ್ದೇನೆ........ ಇತ್ತೀಚೆಗೆ ಬಿಡುಗಡೆಯಾದ ನನ್ನ ಚಿತ್ರ 'ದರ್ಪಣ್' ಕೂಡ ಇದಕ್ಕೆ ಒಳ್ಳೆಯದೊಂದು ಉದಾಹರಣೆ."

"ಅದು ನಿಮ್ಮ ಅತ್ಯುತ್ತಮ ಚಿತ್ರವೆ?" ಬಳಿಯಲ್ಲಿದ್ದ ಮಿತ್ರರೊಬ್ಬರು ಪ್ರಶ್ನಿಸಿದರು.

ಅವರ ಪ್ರಶ್ನೆ ಕೇಳಿ ವಹೀದಾಗೆ ವಿಪರೀತ ನಗೆ ಬಂತು. ತಡೆದುಕೊಳ್ಳುತ್ತ ಅವಳೆಂದಳು—

"ಶ್ರೇಷ್ಠ ಚಿತ್ರ, ಶ್ರೇಷ್ಠ ಕೃತಿ – ಇವೆಲ್ಲ ಆದರ್ಶಗಳು ಮಾತ್ರ. ಅದು ಊಹನೆಯ ಪರಾಕಾಷ್ಠೆ. ವಾಸ್ತವವಾಗಿ ಜೀವನದಲ್ಲಿ ನಾವು ಈ ಆದರ್ಶದ ಅತಿ ನಿಕಟಕ್ಕೆ ಹೋಗಬಹುದಷ್ಟೆ. ಆ ಶ್ರೇಷ್ಠ ಮಾತ್ರ ಮತ್ತೂ ಆದರ್ಶಪೂರ್ಣವಾಗಿ ಅಲ್ಲೇ ಉಳಿಯುತ್ತದೆ ಅಷ್ಟೆ." ಹಾಗೆಂದು ಬಾಯ್ತುಂಬಾ ನಕ್ಕು ಮುಂದುವರಿಸಿದಳು ವಹೀದಾ–

"ದಿಗ್ದರ್ಶಕ ಸುಬ್ಬರಾವ್ ಅವರು ಮೂಲ ಮಲಯಾಳಿ ಚಿತ್ರ 'ಅಗ್ನಿ ಪುತ್ರಿ'ಯ ಕತೆ ಹೇಳಿದಾಗಲೇ ನಾನು ಆಕರ್ಷಿತಳಾಗಿದ್ದೆ. ಅದನ್ನು ನಾನು ನೋಡಬೇಕೆಂದು ಅವರ ಅಪೇಕ್ಷೆಯಾಗಿತ್ತು. ಆದರೆ ಅದನ್ನು ನೋಡಿ ಅದರ ನಾಯಕಿಯ ಅಭಿನಯವನ್ನು ನಾನೆಲ್ಲಾದರೂ ಅನುಕರಿಸಬಹುದೇನೋ ಎಂಬ ಭೀತಿಯಿಂದ ಅದನ್ನು ನಾನು ನೋಡುವ ಗೋಜಿಗೇ ಹೋಗಲಿಲ್ಲ. ಸುಬ್ಬರಾವ್ ಅವರು 'ದರ್ಪಣ್'ದ ಚಿತ್ರಕತೆಯನ್ನು ಓದುತ್ತಿದ್ದಂತೆ ನನಗೆ ರೋಮಾಂಚನವಾಯಿತು. ಗುರುದತ್‌ಜೀಯವರ 'ಪ್ಯಾಸಾ'ದ ಬಳಿಕ ನನ್ನ ನಟನಾ ಸಾಮರ್ಥ್ಯಕ್ಕೆ ಇಲ್ಲಿ ಬಹಳ ಅವಕಾಶವಿದೆ ಎಂದು ನನಗೆ ಸ್ಪಷ್ಟವಾಯಿತು."

ವಹೀದಾಳ ಮುಖ ಊರಗಲವಾಯಿತು. ಆಕೆ ಭಾರೀ ಉತ್ಸಾಹದಿಂದ ಈಗ ವರ್ಣಿಸಲಾರಂಭಿಸಿದಳು.

"ಪತಿತೆಯಾದವಳೊಬ್ಬಳ ಭಾವನೆ ಹೇಗಿರಬಹುದು? ಸಮಾಜವನ್ನು ಆಕೆ ಹೇಗೆ ಕಾಣುತ್ತಾಳೆ? ಅದರಲ್ಲೂ ಆಕೆಗೆ ಆಶ್ರಯ ದೊರಕಿದಾಗ ಅವಳ ಮನೋಸ್ಥಿತಿ ಹೇಗಾಗುತ್ತದೆ? ಈ ಎಲ್ಲ ಅನುಭವಗಳು ನನಗೆ 'ದರ್ಪಣ್'ದಲ್ಲಿ ದೊರೆತುವು. ನಟಿಸುತ್ತ ಹೋದಂತೆ ನಾನೇ 'ಆಕೆ'ಯಾದೆ ಎಂಬ ಅಂಶ ನನ್ನ ಅರಿವಿಲ್ಲದಂತೆ ನನಗೆ ಆಯಿತು. ನನ್ನ ಭಾವನೆಗಳನ್ನು ಆಗ ನಾನು ಅರಿಯಲಾರದೆ ಸುಬ್ಬರಾಯರೊಡನೆ ಹೇಳುತ್ತಿದ್ದೆ. ಅವರನ್ನೂ ಒಬ್ಬ ಮನೋವಿಜ್ಞಾನಿ ಎನ್ನಬೇಕು. ಆ ಪಾತ್ರವನ್ನು ನನ್ನನ್ನು – ಇಬ್ಬರನ್ನೂ ಅವರು ಚೆನ್ನಾಗಿ ಬಲ್ಲವರು. ಇವೆರಡನ್ನೂ ನನ್ನಲ್ಲಿ ಏಕೀಭವಿಸುವ ಅದ್ಭುತ ಕೆಲಸ ಮಾಡಿದ್ದಾರೆ ಅವರು. ಇಂಥ ಅನುಭವ ನನಗೆ ಪ್ರತಿಯೊಂದು ಚಿತ್ರದಲ್ಲೂ ದೊರೆತಿದೆ. ಪ್ರತಿ ನಟ, ದಿಗ್ದರ್ಶಕರಿಂದಲೂ ನಾನು ಕಲಿಯುತ್ತಿದ್ದೇನೆ. 'ಗೈಡ್', 'ನೀಲಕಮಲ್', 'ರಾಮ್ ಔರ್ ಶ್ಯಾಮ್', 'ತೀಸ್ರೀ ಕಸಂ', 'ಆದ್ಮಿ', ಇದೀಗ ನಡೆಯುತ್ತಿರುವ 'ರೇಷ್ಮಾ ಔರ್ ಶೇರಾ' ಇವುಗಳಲ್ಲಿ ನನ್ನ ನಟನಾ ಅನುಭವ ಬೆಳೆಯುತ್ತಿದೆ. ಕೆಲವೊಮ್ಮೆ ಇದನ್ನು ಅರಗಿಸಿಕೊಳ್ಳುವುದೇ ಕಷ್ಟವಾಗುತ್ತದೆ. ಎಂದೇ ಹೆಚ್ಚಿನ ಚಿತ್ರಗಳಲ್ಲಿ ನಾನು ಕೆಲಸ ವಹಿಸಿಕೊಳ್ಳುವುದಿಲ್ಲ. ಹೀಗೆ ಮಾಡಿದರೆ ಅಜೀರ್ಣವಾಗುತ್ತದೆ ನೋಡಿ."

ನಾವೆಲ್ಲ ಖೊಳ್ಳನೆ ನಕ್ಕೆವು. ವಹೀದಾಗೆ ಸ್ವಲ್ಪ ನಾಚಿಕೆಯಾಯಿತೇನೋ. ಅನಂತರ ಆಕೆ ಇರಾಣದಲ್ಲಿ ತನ್ನ ನಟನೆಯ ಕುರಿತಾಗಿಯೂ ಹೇಳಿದಳು.

"ರೇಷ್ಮಾ ಔರ್ ಶೇರಾ'ದಲ್ಲಿ ರಾಜಸ್ಥಾನದ ಮರುಭೂಮಿಯಲ್ಲಿ ಸುನೀಲ್ ದತ್‌ರೊಂದಿಗೆ ನಟಿಸಿದ ಅನುಭವವೇ ಬೇರೆ. ಇರಾಣದ 'ಸಲಾಮ್–ಏ–ಇರಾಣ'ದ ಫಾರ್ಡೀನರೊಂದಿಗೆ ನಟಿಸಿದ ರೀತಿಯೇ ಬೇರೆ. ಎರಡೂ ಪ್ರತ್ಯೇಕ ಅನುಭವಗಳೇ. ಆದರೆ ಇವುಗಳಲ್ಲಿ ನನ್ನನ್ನು ನಾನು ಕಾಣಲಿಲ್ಲ. ಬಹುಶಃ ನಾನು ಎಂಬುದು ಮರೆತಾಗಲೇ – ಆ ಪಾತ್ರದಲ್ಲಿ ವಿಲೀನಳಾದಾಗಲೇ ನನ್ನ ಅಭಿನಯ ನನಗೆ ಅಪೂರ್ವ ತೃಪ್ತಿ ಕೊಡುತ್ತದೆ. ಜ್ಞಾನಿಗಳು ಹೇಳಿದ 'ಆತ್ಮಸಾಕ್ಷಾತ್ಕಾರ' ಇದುವೇ ಏನೊ!" ಎಂದು ತಾನು ಹೇಳುವುದು ಮುಗಿಯಿತು ಎಂಬಂತೆ ನಮ್ಮನ್ನೇ ನೋಡಿ ಮುಗುಳ್ನಕ್ಕಳು ವಹೀದಾ. ★★





# ನಿಸರ್ಗಲಕ್ಷ್ಮಿ

ಶ್ರೀನಿವಾಸ ಉಡುಪ

## ೧

ಅಡಿಕೆ ಕೊಯ್ಲಿನ ಸಿದ್ಧತೆಯಲ್ಲಿದ್ದಾಗಲೆಲ್ಲ ಕೃಷ್ಣನಿಗೆ ಅನುಭವವಾಗುತ್ತಿತ್ತು, 'ಬೇಗ ಅಡಿಕೆ ಕೊಯ್ಲು ಮುಗಿದರೆ... ಇದರ ರಗಳೆ ತಪ್ಪಿದರೆ...'

'ಅಡಿಕೆ ಕೊಯ್ಲು ಮುಕ್ತಾಯವಾದ ಬೆಳಿಗ್ಗೆ ಮಲಗಿದರೆ ಎರಡು ದಿನ ಯಾವ ಕೆಲಸಕ್ಕೂ ಏಳಲೇ ಬಾರದು. ತಂದೆ ತಾಯಿ. ಊರಿನವರು ನನ್ನ ಕೆಲಸದಲ್ಲಿ ತಪ್ಪು ಹುಡುಕಲೇಬಾರದು. 'ಅಡಿಕೆ ಕೊಯ್ಲಿನ ಸಮಯದಲ್ಲೂ ಇವನು ಇಷ್ಟೊತ್ತಿನ ವರೆಗೆ ಮಲಗಿಯೇ ಇದ್ದಾನಲ್ಲ' ಎಂಬ ಗೆಳೆಯರ ಹಾಸ್ಯದ ಮಾತುಗಳು ಇರಲೇಬಾರದು. ಇಷ್ಟೊಂದು ಅಪಾದನೆ ಇಲ್ಲದೇ ಇದ್ದರೆ ತಾನು ಸುಖವಾಗಿ ಕಾಲ ಹರಣ ಮಾಡಬಹುದು...'

ಹುಡುಗನಿದ್ದಾಗ ಅವನಿಗೆ ಅಡಿಕೆಯ ಕೊಯ್ಲಿನ ಸಮಯವೆಂದೊಡನೆ ಉತ್ಸಾಹ ಬರುತ್ತಿತ್ತು. 'ತಾನು ಹಿರಿಯರೆಲ್ಲರಿಗಿಂತಲೂ ಒಂದು ಕೋಗ





ಆ ನೆನಪು ಅವನು ಮಾಡಿಕೊಂಡಾಗ ಏನಾದರೂ ತಾನೊಂದು ಹೂವಿನ ತೋಟ ಮಾಡಬೇಕೆನ್ನಿಸಿತು. ಎದುರಿಗಿದ್ದ ಚಿಮಣಿ ದೀಪದ ಬೆಳಕು ಕಡಿಮೆಯಾಗಿ ಎಣ್ಣೆ ತೀರಿದ್ದರಿಂದ ನಂದಿತು.

ಹಾಸಿಗೆ ಬಿಡಿಸಿ ಕತ್ತಲೆಯಲ್ಲೇ ಅಭ್ಯಾಸ ಬಲದಿಂದ ಹೊದಿಕೆಯನ್ನು ಎದೆಯವರೆಗೆ ಎಳೆದುಕೊಂಡು ಮಲಗಿದ ಕೃಷ್ಣ.

ಮಲಗಿದ ಮೇಲೆ ಅವನು ಅಂದುಕೊಂಡ: ಇನ್ನು ಮೇಲೆ ಮುಂಚೆಗಡೆಯೇ ಮಲಗಬೇಕು. ತಣ್ಣನೆ ಗಾಳಿ ಬೀಸುತ್ತೆ. ಮನಸ್ಸಾದರೆ ಬಳ್ಳಿಗಳು ಇದ್ದರೆ ಹಸಿರಾದ ಗುಡ್ಡಗಳ ಪ್ರಕೃತಿ ಸವಿಯಬೇಕು. ಹೀಗೆ ತಿಂಗಳುಗಟ್ಟಲೆ ದೀಪ ಆರಿಸಿ ಅವನು ಮಲಗಿದಾಗಲೆಲ್ಲಾ ಯೋಚಿಸುತ್ತಲೇ ಬಂದಿದ್ದ.

ನಾಳೆ ಬದಲಾಯಿಸಿದರಾಯಿತು ಎಂದು ತನ್ನ ಸಮಸ್ಯೆಗೆ ತಾನೇ ಉತ್ತರ ಕೊಟ್ಟುಕೊಂಡ. ಆ ಯೋಚನೆ ತಳ್ಳುತ್ತಿದ್ದುದೇ ಆಗಿತ್ತು.

ಆಗ ಕೃಷ್ಣನಿಗೆ ಇನ್ನು ಯೋಚನೆ ಮಾಡುವಂತಹದ್ದೇನೂ ಇರಲಿಲ್ಲ. ಆದ್ದರಿಂದ ನಿದ್ರೆ ಬೇಗ ಬರಬಹುದು ಎಂದೆನಿಸಿತು. ಚಳಿಯಾಗುತ್ತಿತ್ತು. ಕೈಗೆ ಸಿಕ್ಕುವಷ್ಟು ಹತ್ತಿರದಲ್ಲಿದ್ದ ಹಳ್ಳಿ ಮನೆ ಹಳೇ ಕಾಲದ ಒಂದೇ ಹಲಗೆ ಕಿಟಕಿ ಬಾಗಿಲು ತೆರೆದ. ಗಾಳಿ ಜೋರಾಗಿ ಬೀಸಿದಾಗ ಅವನಿಗೆ ಆಯಾಸದಲ್ಲೂ ಉಲ್ಲಾಸವಾಯಿತು. ಉಟ್ಟಿದ್ದ ಪಂಚೆ, ಸೊಂಟದಲ್ಲಿ ಸಿಕ್ಕಿದ್ದರಿಂದ ಅವನಿಗೆ ತೊಂದರೆ ಆಗಿ ಅದನ್ನು ಬಿಚ್ಚಿದ. ಕೈಗಳು ಪಟ್ಟಾದ ತಲೆಕೂದಲುಗಳ ಮೇಲೆ ಓಡಾಡಿದವು.

ಅವನ ಕೋಣೆಯ ಕೆಳಗೇನೇ ಇತ್ತು, ತಂದೆ-ತಾಯಿ ಮಲಗುತ್ತಿದ್ದ ಕೋಣೆ. ತಂದೆ ತಾಯಿಗೆ ಅವನೊಬ್ಬನೇ ಮಗ. ತನ್ನ ತಂದೆ ತನ್ನನ್ನು ಭಾರಿ ಓದಿಸಬೇಕೆಂದಿದ್ದರು. ತಾಯಿಗೂ ಅದೇ ಆಸೆ ಇತ್ತು. ಆದರೆ ಪ್ರೌಢಶಾಲೆಯವರೆಗೆ ಓದಿ ಮನೆಗೆ ಬಂದಿದ್ದ. ಕೃಷಿಗಾರನಾಗಿ ಭೂತಾಯಿ ಸೇವೆ ಅಭ್ಯಾಸ ಮಾಡಬೇಕೆಂದು ಅವನ ಹೆಬ್ಬಯಕೆ ಆಗಿತ್ತು. ತನಗಾಗಿ ಎಷ್ಟೊಂದು ಕಷ್ಟಪಟ್ಟಿದ್ದರು ತನ್ನ ತಾಯಿ. ತಾನು ಬೆಳೆದರೆ ಓದಿ ವಿದ್ಯಾವಂತನಾದರೆ ಅಮಲ್ದಾರನೇ, ತಾನಾದನೆಂದು ಅವರು ಅಭಿಲಾಷೆಪಟ್ಟಿದ್ದರು. ಪಕ್ಕದ ಮನೆಯವರಿಗೂ ತನ್ನ ಪ್ರಸಂಗದಲ್ಲಿ ಎಷ್ಟೊಂದು ಅಭಿಲಾಷೆ ಇತ್ತು. ಎಷ್ಟೊಂದು ಆಸೆ ಪಟ್ಟಿದ್ದರು.

ಆ ಮನೆಗೆ ಆ ತೋಟಕ್ಕೆ ಆ ಊರಿಗೆ ಅಷ್ಟೊಂದು

ಹೆಚ್ಚಿನ ಹುಟ್ಟಿಗೆ ಪ್ರೌಢ ಶಾಲಾ ಶಿಕ್ಷಣ ಹೊಂದಿದ ಹಸೆಂದರೆ ಕೃಷ್ಣ. ತಂದೆ-ತಾಯಿಗಳಿಗೆ ಅವನನ್ನು ಬಿಟ್ಟರೆ ಬೇರೆ ಮಕ್ಕಳೇ ಇರಲಿಲ್ಲ ಕೃಷ್ಣನ ತಂದೆಗೆ ಮಕ್ಕಳಾಗಬೇಕೆಂಬ ಆಸೆ ಇಲ್ಲದಿದ್ದರೂ ಅವನ ತಾಯಿಗೆ ಒಂದು ಹೆಣ್ಣಾಗಿದ್ದರೆ "ಕನ್ಯಾದಾನ"ದ ಪುಣ್ಯ ಬರುತ್ತಿತ್ತು. ಅದು ಮಾತ್ರ ತಮ್ಮ ಹಣೆಯಲ್ಲಿ ಬರೆದಿಲ್ಲವಲ್ಲ ಎಂದು ವ್ಯಥೆಯಾಗಿತ್ತು. ಆದರೂ ಕೃಷ್ಣ ಒಬ್ಬ ತಮ್ಮ ಭಾಗ್ಯದ ಕುರುಹು ಎಂದೇ ತಿಳಿದಿದ್ದರು ಆ ತಂದೆ, ತಾಯಿಗಳು. ಆದ್ದರಿಂದ ಕೃಷ್ಣ ಮುದ್ದಿನಲ್ಲೇ ಆ ಮನೆ ತುಂಬಿದ್ದನು.

ಕೃಷ್ಣನಿಗೆ ಆಸೆ ಇದ್ದುದು ಇಷ್ಟೇ. ತಾನು ಅವರಂತೆ ಕಷ್ಟಪಟ್ಟು, ಇದ್ದ ತೋಟ ಹೆಚ್ಚಿಸಬೇಕು. ತನ್ನ ಕೃಷಿ ಬೇರೆಯವರಿಗೆ ಮಾರ್ಗದರ್ಶಕವಾಗಬೇಕು. ನನ್ನ ವಿದ್ಯಾಭ್ಯಾಸದ ರಜಾದಲ್ಲಿ ಊರಿಗೆ ತಾನು ಬಂದಾಗ ತಾನು ಚಡ್ಡಿ ಹಾಕಿ, ನಗರದ ಸಂತೆಗಾಗಿ ವೀಳ್ಯದೆಲೆ ಕೊಯ್ಯಲು ತಂದೆಯ ಜೊತೆಗೆ ಹೋಗುವಾಗ ತಾಯಿ 'ಬೇಡ. ಓದಿಕೋ' ಎಂದು ಎಷ್ಟೋ ಒಂದು ಸಲ ಒತ್ತಾಯಿಸಿದ್ದರು.

ಕೃಷ್ಣನಿಗೆ ಒಂದೊಂದು ಸಾರಿ ತಾನು ತುಂಬಾ ಓದಿಬಿಡಬೇಕು ದೊಡ್ಡ ಅಧಿಕಾರಿ ಆಗಬೇಕು ಎನ್ನಿಸುತ್ತಿತ್ತು. ತನ್ನ ಊರಿನ ತನಿಖೆಗೆ ದೊಡ್ಡ ಅಧಿಕಾರಿಗಳು ಬಂದಾಗ ಅದೇ ಆಸೆ ತಂದೆ ತಾಯಿಗಳಿಗೂ ಎಂದು ಅವನಿಗೆ ತಿಳಿದಿತ್ತು. ಆದರೆ ತಂದೆ ಆಗಲಿ ತಾಯಿಯಾಗಲಿ ಅವನ ಇಷ್ಟಕ್ಕೆ ವಿರೋಧವಾಗಿ ನಡೆಯುವವರಲ್ಲ.

ಕೃಷ್ಣ ನಿದ್ರೆ ಬರದೇ ಮಗ್ಗುಲಾದ. ತೋಟದಲ್ಲಿ ಅಡಿಕೆ ಹಾಳೆಗಳು ಸೋಗೆಗಳೊಂದಿಗೆ ಬೀಳುವ ಶಬ್ದ ಕೇಳಿಸುತ್ತಿತ್ತು.

ತಾಯಿಯವರ ಗೊರಕೆ ಕೂಡ ನಿಶ್ಶಬ್ದದಲ್ಲಿ ಅವನಿಗೆ ಕೇಳಿಬಂತು. ಯಾವ ಯೋಚನೆ ಇಲ್ಲದಿದ್ದರೆ ತಾನು ಹೀಗೆ ನಿದ್ದೆ ಮಾಡಿ ಗೊರಕೆ ಹೊಡೆಯಬಹುದು ಆದರೆ ಅದು ತನ್ನ ಕೈಲಾಗದ ಮಾತು. ಯೋಚಿಸಿದ್ದನ್ನೇ ಯೋಚಿಸುತ್ತಿದ್ದ ಎಷ್ಟೋ ಸಾರಿ.

ಗೆಳೆಯ ಪಟ್ಟಾಭಿಯ ಸಹಕಾರ ದೊರೆದರೆ ಹಸಿಯಾದ ಗುಡ್ಡದ ಕೆಳಗಿರುವ ಕೋಗುಪೂರ್ತಿ ಫಲವತ್ತಾದ ಅಡಿಕೆ ತೋಟವನ್ನಾಗಿ ಮಾಡಬಹುದು. ಆದರೆ ಅವನಿಗೆ ತಪ್ಪಿಷ್ಟು ಕೃಷಿಯಲ್ಲಿ ಆಸಕ್ತಿಯಿಲ್ಲ. ಆದರೆ ಅವನು ಮುಂದೆ ಓದಿ ಪದವೀಧರನಾಗಬಹುದೆಂದಿದ್ದ. ಅದೂ ಮಾಡಲಿಲ್ಲ. ಅವನ ತಂದೆ ಅವನಿಗೆ ಎಷ್ಟೋ ಹೇಳಿದ್ದರು. ಆದರೆ ಸುಮ್ಮನೆ ಕುಳಿತೇ ಪಟ್ಟಾಭಿ ಕಾಲ ಕಳೆಯುತ್ತಿದ್ದ. ಪಟ್ಟಾಭಿ ತಂದೆ ಕೃಷ್ಣನಿಗೆ ಹೇಳಿದ್ದರು

"ನೀನಾದರೂ ಪಟ್ಟಾಭಿಗೆ ಬುದ್ಧಿ ಹೇಳೋ ನಿನ್ನ ಜೊತೆಗೆ ಅವನಿಗೂ ಅಡಿಕೆ ತೋಟದ ಕೃಷಿ ಪರಿಚಯ ಮಾಡಿಕೊಡು. ಮತ್ತಾವ ಉದ್ಯೋಗವೂ ಈ ಕಾಲದಲ್ಲಿ ಪ್ರಯೋಜನವಿಲ್ಲ."

ಪಟ್ಟಾಭಿ ಹತ್ತಿರ ಅಷ್ಟನ್ನು ಹೇಳಲು ಅವರಿಗೆ ಆಗಿರಲಿಲ್ಲ.

ಕೃಷ್ಣನ ಜೊತೆಗೆ ಹರಟೆ ಹೊಡೆಯಲು ಪಟ್ಟಾಭಿ ಬರುತ್ತಿದ್ದ. ಕೃಷಿ ವಿಷಯ ಎತ್ತಿದನೆಂದರೆ ಸಾಕು ಆ ಕ್ಷಣ ಅಲ್ಲಿ ಅವನೊಂದಿಗೆ ಇರದೇ ಕಾಂಗಡಿ ಅಂಗಡಿ ಬೀದಿಗೆ ಹೋಗುತ್ತಿದ್ದ. ಅದನ್ನು ಅವರ ತಂದೆಗೆ ಹೇಳಿದಾಗ ಅವರೇನೂ ಹೇಳಲಿಲ್ಲ ಮುಂದೆ ಅದೊಂದು ವಿಷಯ ಗೆಳೆಯನಿಗೆ ಹೇಳಲೇ ಇಲ್ಲ ಕೃಷ್ಣ.

ಅವನು ಒಳ್ಳೆಯವನೇ ಆದರೂ ಕೆಲಸ ಮಾಡುವುದೆಂದರೆ ಅವನಿಗೆ ಆಗುತ್ತಿರಲಿಲ್ಲ. ಇದರಿಂದ ತಾಯಿಗೂ ಮಗನಿಗೂ ಎಷ್ಟೋ ಸಾರಿ ಜಗಳವಾಗುತ್ತಿತ್ತು. ಮನತನದ ಮರ್ಯಾದೆ ಕಾಪಾಡಲೆಂದು ಅವನು ಮೌನವಾಗಿಯೇ ಇದ್ದುಬಿಡುತ್ತಿದ್ದ. ಕೋಪಗೊಂಡ ಅವನ ತಾಯಿ ತಮ್ಮಲ್ಲಿಯೇ ಅವನ ವಿಚಾರವನ್ನು ಯೋಚಿಸಿ ಕೊನೆಗೆ ಸಮಾಧಾನ ಮಾಡಿಕೊಳ್ಳುತ್ತಿದ್ದರು.

ಒಮ್ಮೆ ತಾಯಿಗೆ ಪಟ್ಟಾಭಿ ಎದುರು ಮಾತನಾಡಿದ್ದ. ಇದರಿಂದ ಅವರಿಗೆ ಬೇಸರವಾಗಿ ಅವತ್ತು ಅನ್ನ, ನೀರೂ ಬಿಟ್ಟು ಸಿಟ್ಟು ಮಾಡಿಕೊಂಡು ಕುಳಿತಿದ್ದರು. ಕೊನೆಗೆ ತಂದೆ ಹೊಸನಗರದಿಂದ ಬಂದ ಮೇಲೆ ಹೆಂಡತಿಗೆ ಸಮಾಧಾನ ಮಾಡಿದರು. ಜೊತೆಗೆ ಮಗನಿಗೆ ಎರಡು ಮಾತು ಹೇಳಿದರು

"ನಿರುದ್ಯೋಗಿಯಾಗಿ ಯಾಕೆ ನನ್ನ ಕೋಪ ಹೊಯ್ದುಕೊಳ್ಳುತ್ತೀಯಾ?"

ಕೋಪಗೊಂಡು ಪಟ್ಟಾಭಿ ಹೇಳಿದ್ದ.

"ಹಾಗಾದರೆ ನಾನು ಮನೆಬಿಟ್ಟು ದೇಶಾಂತರ ಓಡಿ ಹೋಗಿ ಬಿಡ್ಲೆ?"

"ನನಗೆ ಮಗನೇ ಹುಟ್ಟಲಿಲ್ಲ ಅಂದ್ಕೋತೀನಿ. ಇಂತಹ ಮಗ ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ."

ಅಷ್ಟು ಹೊತ್ತಿಗೆ ಸರಿಯಾಗಿ ಕೃಷ್ಣ ಅಲ್ಲಿಗೆ ಹೋಗಿದ್ದ. ತಂದೆ ಮಕ್ಕಳ ಜಗಳ ನಿಲ್ಲಿಸಲು ಮುಂದಾಗಿದ್ದ. ಅಲ್ಲಿಗೆ ಅವರ ಜಗಳ ನಿಂತಿತ್ತು. ಮತ್ತೊಂದು ನೆನಪು ಕೃಷ್ಣನಿಗೆ ತಿಂಗಳಿನಲ್ಲಿ ಹಲವು ಬಾರಿಯಾದರೂ ಆಗುತ್ತಿತ್ತು.

'ಪಟ್ಟಾಭಿಯ ಯಾವುದೋ ಗ್ರಹಚಾರದ ಶಮನಕ್ಕಾಗಿ ಮಾಡಿದ ಶಾಂತಿ ದಿನ. ಆ ಮನೆಯಲ್ಲಿ ಅವನಿಗೆ ಮಾಡುವ ಸಂಭ್ರಮ. ಅವನಿಗೆ ಉಪಚಾರ ತಂದೆ ತಾಯಿಗಳ ಅನುರಾಗದ ಮಾತು ಹೊಸ ಪೆಜಾಮ ಜುಬ್ಬ ಕೂಡ ಸಂಪ್ರದಾಯಸ್ಥರಾದ ಅವನ ತಂದೆ-ಮಗನ ಮೇಲಿನ ಪ್ರೇಮದಿಂದ ಹೊಲಿಸಿಕೊಟ್ಟದ್ದು. ಪಟ್ಟಾಭಿ ಹಾಕಿಕೊಂಡು ಸಂತೋಷಪಟ್ಟ ದಿನ ... ... ...

ಪಟ್ಟಾಭಿಯ ಜೊತೆಗೆ ಕೃಷ್ಣನಿಗೂ ಒಂದು ಉಡುಗೊರೆ ತಂದಿತ್ತು. ಪಟ್ಟಾಭಿಯೇ ಹೇಳಿ ತಂದೆಯ ಕೈಯಲ್ಲಿ ಶಿವಮೊಗ್ಗೆಯಿಂದ ತರಿಸಿದ್ದ. ಕಾರಂತರ ಐದು ಕಾದಂಬರಿಗಳನ್ನು ಕೃಷ್ಣನಿಗೆ ಉಡುಗೊರೆಯಾಗಿ ಕೊಟ್ಟ. ಅದನ್ನು ತಗೆದುಕೊಂಡು ಕೃಷ್ಣ ಪಟ್ಟಾಭಿ ತಂದೆ ಗೋಪಾಲರಾಯರಿಗೆ ಹೇಳಿದ ಮಾತು:

"ನಿಮ್ಮ ಹೃದಯ ಅಮೃತದಂತೆ ರಾಯರೆ.'

ಮಗನನ್ನು ತನ್ನ ಮಗನೇ ಅಲ್ಲ ಹುಟ್ಟಲೇ ಇಲ್ಲವೆಂದು ಹೇಳಿದ ತಂದೆ ಪಟ್ಟಾಭಿಯ ಗ್ರಹ-ಚಾರಕ್ಕೆ ಹೆದರಿ ಶಾಂತಿಗಾಗಿ ಇಷ್ಟೊಂದು ಹಣ ಖರ್ಚು ಮಾಡಿದ್ದು ಕಂಡು ಅವನಿಗೆ ನಗುಬಂದಿತ್ತು. ಕರುಳು ಒಂದೇಯೆಂದು ಅನುಭವವಾಗಿತ್ತು.

"ಹೀಗೇ ನಗುತ್ತಾ ಇರಬೇಕು ರಾಯರೆ."

"ನಿನ್ನ ಬಾಯಿ ಹೇಳಿಕೆ ಸತ್ಯವಾಗಲಿ"

ಪಟ್ಟಾಭಿಯು ಕರೆದಿದ್ದರಿಂದ ಹೋಳಿಗೆ ಮುಗಿಸಿ, ಕಾಫಿ ತರುವುದರೊಳಗಾಗಿ ಅವನೊಟ್ಟಿಗೆ ತೋಟಕ್ಕೆ ಹೋಗಿದ್ದ ಕೃಷ್ಣ.

ಒಳಗಿನಿಂದ ಕಾಫಿ ತಂದ ಸೀತಮ್ಮ ಕೃಷ್ಣನನು ಕಾಣದೇ ಅಲ್ಲೇ ಇದ್ದ ಗೋಪಾಲರಾಯರಿಗೆ ತೋಟ-ದಿಂದ ಅವನನ್ನು ಕರೆಯಲು ತಿಳಿಸಿದಳು. ತೋಟದಲ್ಲಿ ಹರಟೆ ಹೊಡೆಯುತ್ತಿದ್ದ ಅವರನ್ನು ಕರೆದು ಬಂದರು. ನಂತರ ಅವರು ಇಬ್ಬರೂ ನಕ್ಕು ಕಾಫಿ ಮುಗಿಸಿದರು.

"ಪಟ್ಟಾಭಿ ನೀನು ಸ್ವತಂತ್ರವಾಗಿ ಯಾವುದಾದರೂ ಒಂದು ಕೆಲಸ ಪ್ರಾರಂಭಿಸು. ಇದರಿಂದ ನಿನಗೆ ಕೆಲಸದ ಅನುಭವವು ಚೆನ್ನಾಗಿ ಆಗುತ್ತದೆ."

"ನೀ ಇರೋತನಕ ನನಗೆ ಯಾಕೆ ಬೇರೆ ಕೆಲಸ ಅಪ್ಪ?"

ಕೃಷ್ಣ ತಟ್ಟನೇ ತಂದೆಯ ಮಾತಿಗೆ ಪ್ರತ್ಯುತ್ತರ ಕೊಟ್ಟ ಪಟ್ಟಾಭಿಯ ಮುಖ ನೋಡಿದ.

"ನೀನು ಯಾವುದಾದರೂ ಉದ್ಯೋಗ ಮಾಡ ಬಾರದೆ?' ಮತ್ತಗೆ ಗೋಪಾಲರಾಯರು ಹೇಳಿದ್ದರು.

ತಂದೆ ಹೇಳಿದ್ದು ಯಾವಾಗಲೂ ಹಾಡೋ ಹಾಡೇ ಎಂದು ಪಟ್ಟಾಭಿಗೆ ಅನ್ನಿಸಿದ್ದರೂ ತಾನು ನಿರುದ್ಯೋಗಿ ಎನ್ನುವುದನ್ನು ಎತ್ತಿ ತೋರಿಸಿದ್ದರು. ಅದೂ ಗೆಳೆಯ ಕೃಷ್ಣನ ಎದುರಿಗೆ ಊರಿನವರು ಯಾರಾದೂ ಮನೆಗೆ ಬಂದರೆ ಬೇರೆ ಊರಿನಿಂದ ನೆಂಟರು ಬಂದರೆ ಎಷ್ಟೋ ಸಾರಿ ಮಗನೆದುರು ತಂದೆ ದೂರಿದ್ದುಂಟು. ಇದರಿಂದ ಪಟ್ಟಾಭಿ ಬಹಳ ಬೇಸರ ಮಾಡಿಕೊಂಡು ಒಂದೆರಡು ದಿನ ಊಟ ಬಿಟ್ಟು ತೋಟದ ಬಾಳೆಯಮರದಡಿಯಲ್ಲಿ ನೆರಳಿನಲ್ಲಿ ಕಾಲ ಕಳೆದದ್ದುಂಟು.

ಆಗ ಗೋಪಾಲರಾಯರೋ ಸೀತಮ್ಮನವರೋ ಮಗನಿಗೆ ಹೊಗಳಿ, ಅವನನ್ನು ಮುದ್ದಾಡಿ ಮನೆಗೆ ಕರೆದಿದ್ದುಂಟು. ಒಂದು ಮಾತು:

'ಈ ಬುದ್ಧಿ ನಿನಗೆ ಯಾಕೆ ಬಂತೋ ದೇವರೇ?'

ಆ ಮೇಲೆ ಪಟ್ಟಾಭಿಗೆ ಮನ ನೋಯುವಂಥ ಮಾತುಗಳನ್ನು ಅವರು ಆಡಲೇ ಇಲ್ಲ.

ಆ ಮೇಲೆ ತಿಂಗಳಿಗೊಮ್ಮೆ ವಿಳ್ಯದೆಲೆ ಕಾಲದಲ್ಲೋ ಬಾಳೇಕಾಯಿ ಬೆಳೆದ ಕಾಲದಲ್ಲೋ ಕೊಯ್ದು ಸಂತರೆ ತೆಗೆದುಕೊಂಡು ಹೋಗಿ ನಗರ ಹೊಸನಗರದಲ್ಲಿ ಮಾರಿ ಸಿಕ್ಕ ಹಣ ತಂದೆಯ



ಕೈಯಲ್ಲಿ ಕೊಟ್ಟಾಗ, ತಂದೆಯ ಮೆಚ್ಚುಗೆಯ ಮಾತುಗಳು ಪಟ್ಟಾಭಿಗೆ ದೊರಕಿತ್ತು. ಈ ವಿಚಾರವನ್ನು ಕೃಷ್ಣ ವೀಕ್ಷಿಸಿದಾಗ ಪಟ್ಟಾಭಿಗೆ ಮೆಚ್ಚುಕೆ ನುಡಿ ಆಡಿದ್ದ.

ಕೃಷ್ಣ ಕಣ್ಣು ಮುಚ್ಚಿದ್ದನ್ನು ನಿದ್ರೆ ಬಾರದಿದ್ದರಿಂದ ತೆರೆದ

ಏನು ಮಾಡಿದರೂ ನಿದ್ರೆಯೇ ಅವನಿಗೆ ಬರಲಿಲ್ಲ ಹಾಸಿಗೆ ಬೇಸರವೆನಿಸಿ ನೆಲದ ಮೇಲೆ ಮಲಗಿದ. ಅದೂ ಬೇಸರವಾಗಿ ಪುನಃ ಹಾಸಿಗೆಗೆ ಬಂದು ಮಲಗಿದ.

ಅವನಿಗೆ ಎಷ್ಟು ಹಣ ಬೇಕಾದರೂ ತಂದೆ ಪೆಟ್ಟಿಗೆಯಿಂದ ತೆಗೆದು ಧಾರಾಳವಾಗಿ ಖರ್ಚು ಮಾಡಬಹುದಿತ್ತು. ಮಗ ಓದು ನಿಲ್ಲಿಸಿ ಮನೆಗೆ ಬಂದ ಮೇಲೆ ಕೃಷ್ಣನ ತಂದೆ ವಿಘ್ನೇಶ್ವರಯ್ಯ ಹಣದ ಪೆಟ್ಟಿಗೆಗೆ ಬೀಗ ಹಾಕುತ್ತಿರಲಿಲ್ಲ.

ವಿಘ್ನೇಶ್ವರಯ್ಯ ತಿಳಿದಿದ್ದರೂ ತಮ್ಮ ಮಗ ಎಂದೂ ದುಂದು ವೆಚ್ಚ ಮಾಡಲಾರ ಎನಿಸಿದ್ದರೂ ಅಡಿಕೆ ತೋಟದ ಕೃಷಿ ಹಾಗೂ ಮನೆತನದ ಮಟ್ಟಕ್ಕೆ ಹಣ ಖರ್ಚು ಮಾಡವವನು. ಆದ್ದರಿಂದಲೇ ಅವರು ಮನೆತನದ ಹೊರೆಯನ್ನು ಒಂದೊಂದಾಗಿ ಕಡಿದುಕೊಳ್ಳಲು ಪ್ರಾರಂಭಿಸಿದ್ದರು. ತಂದೆಯ ಪಾಲನ್ನ ಮಗ ವಹಿಸಿಕೊಂಡು ಸರಿಯಾಗಿ ನಡೆಸುತ್ತಿದ್ದಾನಲ್ಲವೆಂದು ಕೃಷ್ಣನ ತಾಯಿ ಶಾರದಮ್ಮನವರು ಸಮಾಧಾನಗೊಂಡಿದ್ದರು

ಊರಿನವರು ಕೃಷ್ಣನ ಕೆಲಸಗಳನ್ನು ಮೆಚ್ಚಿದರೂ ಕೆಲವು ಉತ್ತಮ ಸಲಹೆಯನ್ನು ಕೊಟ್ಟಿದ್ದರು.

ಮನೆಗೋಸ್ಕರ ಕೃಷ್ಣ ಹೊಸನಗರದಿಂದ ತರುತ್ತಿದ್ದ ಸಾಮಾನುಗಳು ಅಷ್ಟೇ ಹೆಚ್ಚಿನದು, ಕಾಫಿ ಬೀಜ ಕೊಬರಿ ಎಣ್ಣೆ ಇತ್ಯಾದಿಗಳು. ತನಗಾಗಿ ಒಂದು ಹಾಸಿಗೆ ರತ್ನಗಂಬಳಿ ಮಾತ್ರ ತಂದಿದ್ದ. ಸ್ಟೀಲು



ಲೋಟ, ತಟ್ಟೆ, ಗಾಜಿನ ಕೆಲವು ಪಾತ್ರೆಗಳು ತಂದು ನಾಗರಿಕತೆ ತನ್ನ ಮನೆಗೂ ಇದೆ ಎನಿಸಿದ್ದ

- ವರ್ಷದಲ್ಲಿ ಮಳೆಗಾಲ ಪ್ರಾರಂಭವಾಗುವ ಮೊದಲು ಮೂರು ನಾಲ್ಕು ಜೊತೆ ಕಂಬಳಿಗಳು: ತಾಯಿಗಾಗಿ ಒಂದು ಜಿಂಕೆ ಗುರ್ತಿನ ಛತ್ರಿ.

ತಾಯಿ ಮನೆಗೆ ಏನಾದರೂ ಸಾಮಾನು ಬೇಕೆಂದಾಗ ತಂದೆಗೆ ಇಷ್ಟವಿಲ್ಲದಿದ್ದರೂ ಕೃಷ್ಣ ಸ್ವತಃ ಎಲೆ ಮಾರಿದ ಹಣದಲ್ಲಿ ತರುತ್ತಿದ್ದ

ಮನರಂಜನೆಗಾಗಿ ಆ ಮನೆಗೆ ಖರ್ಚೇ ಇರಲಿಲ್ಲ

ಕೃಷ್ಣನ ಹತ್ತಿರದ ಸಂಬಂಧದ ಒಬ್ಬರ ಮಗಳದ್ದೊಂದು ಕತೆ:

ಕೃಷ್ಣ ಹೊಸನಗರಕ್ಕೆ ಓದಲು ಹೋದ ಮೇಲೆ ಶಾರದಮ್ಮ ತಮಗೆ ಬೇಸರವೆಂದು, ತಮ್ಮ ತಂಗಿ ಮಗಳು ವಿನೋದಳನ್ನು ಅರಳ-ಸುರಳಿಯಿಂದ ಕರೆಸಿಕೊಂಡಿದ್ದರು. ಐದಾರು ವರ್ಷದ ಆ ಹುಡುಗಿ ಅಲ್ಲೇ ಬೆಳೆದುಬಂದಿದ್ದಳು. ಆರು ವರ್ಷದ ವಿನೋದಳು, ಕೃಷ್ಣ ತನ್ನ ವಿದ್ಯಾಭ್ಯಾಸವನ್ನು ಮುಕ್ತಾಯ ಮಾಡಿ ಮನೆಗೆ ಬಂದಾಗ ಹದಿನಾರು ವರ್ಷದವಳಾಗಿದ್ದಳು

ಕೃಷ್ಣನಿಗೆ ಇನ್ನೂ ಪ್ರಾಯದ ಕಾಲ. ವಿನೋದಳು ಸನಿಯದ ಪ್ರಾಥಮಿಕ ಶಾಲೆ ಮುಗಿಸಿದ್ದರೂ ಮನೆ ಕೆಲಸಗಳನ್ನೆಲ್ಲಾ ಚೆನ್ನಾಗಿ ಕಲಿತಿದ್ದಳು.

ಇಂಗ್ಲೀಷ್ ಪಾಠ ಅವಳಿಗೆ ಪ್ರಾರಂಭಿಸಿದವನು ಕೃಷ್ಣ

'ವಿನೋದ ಒಂಬತ್ತನೆ ಪಾಠದ ಸ್ಪೆಲಿಂಗ್ ಗಟ್ಟಿ ಮಾಡಿದ್ದೀಯಾ?"

"ವಿನೋದ" "ಲೈಯನ್ ಎಂಡ್ ದಿ ರ‍್ಯಾಟ್" ಪಾಠವನ್ನು ಪೂರ್ತಿ ಬರೆದು ತೋರ್‍ಸು?"

"ವಿನೋದ ಇಲ್ಲೇ ರೂಂ ನಲ್ಲಿ ಓದ್ಕೊ?"

"ವಿನೋದ ಇಂಗ್ಲೀಷ್‌ನಲ್ಲೇ ಶ್ರದ್ಧೆ ಇಡಬೇಕು?" ಇಂತಹವೇ ಹಲವು ಪ್ರಶ್ನೆ; ಮುಂದಗಮನೆ ಅವಳು. ನಾಚಿಕೆ ಜೊತೆಗೆ ಸೇರಿದ್ದದ್ದರಿಂದ, ಮತ್ತರೆ ಕೃಷ್ಣ ಹೇಳಿದ್ದರಿಂದ ಅವಷ್ಟನ್ನೂ ಒಪ್ಪಿಸುತ್ತಿದ್ದಳು.

"ಆಗಲಿ ಕಿಟ್ಟು" ಎಂದಿದ್ದೇ ಹೆಚ್ಚು. ವಿನೋದಳು ದಿವಸವೂ ಅವಳು. ಕೃಷ್ಣನ ಉಪದೇಶದಿಂದ ಚೆನ್ನಾಗಿ ಇಂಗ್ಲೀಷ್ ಓದಲು ಬರೆಯಲು ಕಲಿತಳು.

ಅರಳ ಸುರಳಿಯಲ್ಲಿ ಅಣ್ಣನೊಡನೆ ಇದ್ದ ಸಲಿಗೆಗಿಂತ ಕೃಷ್ಣನಲ್ಲಿ ಅವಳಿಗೆ ಸಲಿಗೆ ಜಾಸ್ತಿ.

ಶಾರದಮ್ಮ ಇದನ್ನೆಲ್ಲಾ ಕಂಡು ಒಂದು ದಿನ ಹೇಳಿದ್ದರು:

"ವಿನೋದ ಬೆಳೆದವಳು ನೀನು, ಕೃಷ್ಣನ ಜೊತೆಗೆ ಹಾಗೆಲ್ಲ ಮೈಮುಟ್ಟಿ ಮಾತನಾಡಬಾರದು"

ಬಾಗಿಲಿನ ಹತ್ತಿರ ನಿಂತಿದ್ದ. ಈ ಮಾತುಗಳನ್ನು ಕೇಳಿಸಿಕೊಂಡಿದ್ದ ಕೃಷ್ಣ 'ತಾಯಿಯ ಬುದ್ಧಿ' ಕಂಡು, ಸ್ವಲ್ಪ ಬೇಸರಿಸಿದ್ದ. ಜೊತೆಗೆ ಸಿಟ್ಟೂ ಬಂದಿತ್ತು. ತಾಯಿಗೆ ಸರಿಯಾಗಿ ಹೇಳಲು ಬಯಸಿದ್ದರೆ ತಾಯಿಗೂ ಕೂಡ ಅವಳ ಮೇಲೆ ಅನುಮಾನ. ಹಾರೇ ಕಾಳ್ಗೆ ತಂದುಕೊಂಡು ಚದ್ದಿಗೆ ಹೋಗಿದ್ದ.

ಚಡ್ಡಿಗೆ ಬದಲಾಗಿ ಪೈಜಾಮ ಪಂಚೆ ಕೊಟ್ಟು ಬೆಳೆದ ಕೃಷ್ಣ ಬೇಕೆಂತಲೇ ವಿನೋದಳೊಡನೆ ಹೆಚ್ಚು ಕಾಲ ಏಕಾಂತದಲ್ಲಿ ಬೆರೆಯಲು ಪ್ರಾರಂಭಿಸಿದ. ಏನೋ ಹೊಸ ಆಸೆ ಅವರಲ್ಲಿ ಮೂಡಿತ್ತು. ವಿನೋದಳು ಮೊದಲಿನಂತೆ ಕೃಷ್ಣನ ಮೈಮುಟ್ಟಿ ಮಾತನಾಡಲು ನಾಚಿಕೆ ಪಡುತ್ತಿದ್ದಳು. ಆದರೆ ಅವಳ ಸದಾ ನಗುಮುಖ ಕೃಷ್ಣನಿಗೆ ಉತ್ತೇಜನ ಕೊಡುತ್ತಿತ್ತು.

ಒಂದು ಮಧ್ಯಾನ್ಹ ಕೃಷ್ಣನ ತಂದೆ-ತಾಯಿ ಇಬ್ಬರೂ ಮಲಗಿದರು. ಕೃಷ್ಣ ವಿನೋದಳಿಗೆ ತೋಟಕ್ಕೆ ಬರಲು ತಿಳಿಸಿ ಹೊರಟ. ವಿನೋದ ಸ್ವಲ್ಪ ಹೊತ್ತು ಅತ್ತ ಇತ್ತ ನೋಡಿ ಮೆಲ್ಲನೇ ತೋಟಕ್ಕೆ ಇಳಿದಳು. ಅವಳು ಕೃಷ್ಣನನ್ನು ಸಂಧಿಸಿದ್ದು-ತೋಟದ ಕೊನೆಯಲ್ಲಿದ್ದ ಮರೆಯಲ್ಲಿ

ಎಚ್ಚರವಾದ ವಿಶ್ವೇಶ್ವರಯ್ಯ-ಮನೆಯಲ್ಲಿ ಎಲ್ಲೂ ಕೃಷ್ಣನನ್ನೂ ವಿನೋದಳನ್ನೂ ಕಾಣದೆ ಅನುಮಾನದಿಂದ ಅವರನ್ನು ಕರೆದೂ ಇದ್ದರು. ಹೆಂಡತಿಯನ್ನೂ

ಎಚ್ಚರಿಸಿ ಈ ಸಮಾಚಾರ ಹೇಳಿದರು. ಅವರನ್ನು ಹುಡುಕುತ್ತಾ ಇವರೂ ತೋಟ ಎಲ್ಲಾ ತಿರುಗಿದರು. ಆದರೆ ಕೃಷ್ಣ ಆಗಲಿ ವಿನೋದಳಾಗಲಿ ಅಲ್ಲೆಲ್ಲೂ ಕಾಣಲಿಲ್ಲ. ಹಾಗಾದರೆ ತಮ್ಮದು ತಪ್ಪು ಅಭಿಪ್ರಾಯವಾಗಿರ ಬೇಕೆಂದು ಎಣಿಸಿ ಅವರು ಹಿಂತಿರುಗಿ ಮನೆಗೆ ಬಂದರು.

ವಿನೋದಳು ಅಂಗಳದಲ್ಲಿ ಬಿದ್ದ ಕಸಗಳನ್ನು ಗುಡಿಸುತ್ತಿದ್ದಳು.

"ಕೃಷ್ಣ ಎಲ್ಲಿ?" ತೋಟದಿಂದ ಬಂದ ವಿಘ್ನೇಶ್ವ ರಯ್ಯ ಕೇಳಿದ್ದ ಮೊದಲು ಮಾತು ಅದೇ ಆಗಿತ್ತು.

ವಿನೋದಳಿಗೆ ಹೆದರಿಕೆ ಅವಮಾನ ಎರಡೂ ಆಗಿ ಸ್ವಲ್ಪ ಹೆದರಿದಳು.

"ನನಗೆ ಗೊತ್ತಿಲ್ಲ ಮಾವ."

"ನಾನು ಮಲಗುವಾಗ ಇದ್ದ: ಈಗ ಇಲ್ಲ ನಿನಗೆ ಗೊತ್ತಿರಬಹುದೇನೋ ಅಂತ ಕೇಳಿದೆ" ಅಂದರು ಅವರು

'ಸದ್ಯ ಇಷ್ಟೇನೆ? ಇನ್ನೇನೂ ಆಗಲಿಲ್ಲವಲ್ಲ' ಅಂತ ಮನಸ್ಸಿನಲ್ಲೇ ವಿನೋದ ಹೇಳಿಕೊಂಡಳು

ಅದೇ ದಿನ ಸಂಜೆ ವಿಘ್ನೇಶ್ವರಯ್ಯ ಹೆಂಡತಿ ಜೊತೆ ಮಾತನಾಡಿ ವಿನೋದಳನ್ನು ಅರಳ ಸುರ ಳಿಗೆ ಕರೆದುಕೊಂಡು ಹೊರಟರು.

"ಅದೇನು ಅಪ್ಪ ವಿನೋದೆಯನ್ನು ಕಳಿಸಿ ಎಂದು ಹೇಳಿ ತಂದ ಜನ ಅರಳಸುರಳಿಯಿಂದ ಬಂದಿ ದೆಯೇ ?" ಬೇಸರದಿಂದ ಕೇಳಿದ ಕೃಷ್ಣ.

"ಇನ್ನೆಷ್ಟು ದಿನ ಅವಳು ನಮ್ಮ ಮನೆಯಲ್ಲಿ ಇರಲು ಸಾಧ್ಯ ಕೃಷ್ಣ?" ತಂದೆ ಹೇಳಿದರು

"ನಾನೇ ಹೇಳಿದೆ ಅವಳನ್ನು ಕರೆದುಕೊಂಡು ಹೋಗಲು. ಮದುವೆ ಆಗೋ ಹುಡುಗಿ ಹೀಗೆಲ್ಲ ಬೇರೆಯವರ ಮನೇಲಿ ಇರಬಾರದು ಕೃಷ್ಣ" ಒಳಗಿ ನಿಂದ ಹೊರಬಂದು ಶಾರದಮ್ಮನವರು ಹೇಳಿದರು.

ವಿನೋದಳನ್ನು ಬೇಕಂತಲೇ ನನ್ನಿಂದ ತಪ್ಪಿ ಸುತ್ತಿದ್ದಾರೆ. ತಂದೆ ತಾಯಿಗಳು ಎಂದು ಕೃಷ್ಣ ತಿಳಿದುಕೊಂಡ.

"ಏನು ಬೇಕಾದರೂ ಮಾಡಿ ಅಪ್ಪಾ. ಆದರೆ ಅವಳಿಗೆ ಇಂಗ್ಲಿಷ್ ಇನ್ನೂ ಕೆಲವು ದಿನ ಕಲಿ ಸೋಣ ಅಂತಿದ್ದೆ. ಅಷ್ಟೇನು ಅವಸರ ಇತ್ತು, ವಿನೋದ ಸ್ವಲ್ಪ ದಿನ ಇದ್ದರೆ ಆಗದೇ ಅಪ್ಪಾ ?" ಬಹಳ ಸಂಕೋಚದಿಂದ ಹೇಳಿದ್ದ ಕೃಷ್ಣ.

ಆದರೆ ಅವನ ತಂದೆ ಅವನ ಮಾತಿಗೆ ಬೆಲೆ ಕೊಡದೆ ವಿನೋದಳನ್ನು ಅಂದೇ ಕರೆದೊಯ್ದರು

ವಿನೋದಳು ಹೊರಟು ಹೋಗುವಾಗ ಕೃಷ್ಣ ನನ್ನ ನೋಡಿ ಕಣ್ಣೀರಿಟ್ಟಳು.

ಅಮೇಲೆ ಕೃಷ್ಣ ಒಂದೆರಡು ಸಾರಿ ಅರಳಸುರ ಳಿಗೆ ಹೋಗಿದ್ದರೂ ವಿನೋದಳನ್ನು ಕಾಣಲೇ ಆಗಲಿಲ್ಲ

ವಿನೋದಳ ನೆನಪು ಆದೊಡನೆಯೇ ಅವನಿಗೆ ಮಲಗಿದಲ್ಲಿಯೇ ಆನಂದವಾಗಿ ಅವಳ ತೆರೆದ ಕಣ್ಣು ಮುಚ್ಚಿದವು. ಹಾಗೇ ಯೋಚಿಸಿದ ತಾನು ವಿನೋದಳಿಗೆ ಪಾಠ ಹೇಳಿ ಕೊಡುವಾಗ ಹೋಗ ಳಿದ

ನಿಂಬಳಿಯ ಬುದ್ಧಿವಂತೆ, ಜೊತೆಗೆ ತಕ್ಕ ರೂಪೂ ಇದೆನಗಿದೆ.?

"ಬೇಗ ಹೇಳಿ ಕೊಟ್ಟಿದ್ದನ್ನು ಕಲಿತು ಬಿಡುತ್ತಿಯಾ"

ವಿನೋದ ನಾಚಿಕೆಯಿಂದ ಮುಗುಳು ನಗೆ ತಂದು ಕೊಂಡು ಕೃಷ್ಣನ ಕಡೆಗೆ ನೋಡುತ್ತಿದ್ದಳು

"ನಿನಗೆ ಸೀರೆನೇ ಚೆನ್ನಾಗಿ ಒಪ್ಪುತ್ತೆ, ತಂದೆಗೆ ಹೇಳಿ ಒಂದು ಸೀರೆ ತಂದು ಕೊಡ್ಲೆ ? ಲಂಗ ಬೇಡ ನನ್ನ ವಿನೋದ "

ಒಳಗಿನಿಂದ ಆಗ ತಾನೇ ಬಂದ ವಿಘ್ನೇಶ್ವರಯ್ಯ ಅದನ್ನು ಕೇಳಿದ್ದರು. "ಪಾಠ ಹೇಳುವುದು ಇದೇ ಏನೇನೋ ಕೃಷ್ಣ ?"

ವಿನೋದ ಪಾಠದ ಪುಸ್ತಕ ಅಲ್ಲೇ ಬಿಟ್ಟು ಹೆದರಿ ಅಡಿಗೆ ಮನೆ ಸೇರಿದ್ದಳು.

ತುಂಬಿದ ಬಿಳಿಯ ಮೈ, ಒಳ್ಳೆ ಚಂದೊಳ್ಳಿ ಹಳ್ಳಿ ಚೆಲುವೆಯಾಗಿದ್ದಳು ವಿನೋದ

—ಅವಳ ಬರೀ ದಪ್ಪ ದುಂಡು ಕೈಗಳೇ ಯಾರನ್ನು ಬೇಕಾದರೂ ಸೆಳೆಯುತ್ತಿದ್ದುವು

"ಈ ಹೆಣ್ಣು ಯಾರಿಗೆ ಸೇರಬೇಕೋ, ನಾನೇ ಮದುವೆಯಾಗಬಹುದು ಬೇಕಾದರೆ. ತಂದೆ ತಾಯಿ ಖಂಡಿತ ಒಪ್ಪಲಾರರು. ವಿನೋದಳ ಮನೆಯವರು ಬಡವರು ತಮ್ಮ ಅಂತಸ್ತಿಗೆ ತಕ್ಕವರಲ್ಲ ಎಂದು ."

ಎಷ್ಟೇ ಅನುಕೂಲವಿದ್ದರೂ ಹಿರಿಯರು ಪ್ರೇಮ ಕೂಡಿ ಬಂದ ಗಂಡು ಹೆಣ್ಣುಗಳ ಒಂದುಗೂಡಿ ಸೊಲ್ಲ.

ಪ್ರೌಢಶಾಲೆಯಲ್ಲಿ ಓದುವಾಗ ಶಿವಮೊಗ್ಗೆಯಂತಹ ಸಣ್ಣ ಊರಾದರೂ ಅವನೊಟ್ಟಿಗೆ ನಾಲ್ಕೈದು ಸುಂದರ ಹುಡುಗಿಯರು ಓದುತ್ತಿದ್ದರು. ಎಲ್ಲೋ ದಿನದಲ್ಲಿ ಒಂದೆರಡು ಸಲ ಕೃಷ್ಣನನ್ನ ಅವರೇ ಯಾವುದೋ ನೆಪ ಮಾಡಿಕೊಂಡು ಮಾತನಾಡಿಸ ತ್ತಿದ್ದರು. ಒಂದು ಸಾರಿ ಆಗ ತಾನೇ ಹನಿಯದಿಂದ ಬಂದ ಅವನ ತಂದೆ ವಿಘ್ನೇಶ್ವರಯ್ಯ ಆ ನೋಟ ನೋಡಿ ಹೇಳಿದ್ದರು.

"ಹಾಗೆಲ್ಲ ಹೆಣ್ಣು ಹುಡುಗಿಯರ ಹತ್ತಿರ ಮಾತನಾಡಬಾರದು. ನೀವು ವಯಸ್ಸಿಗೆ ಬಂದ ವರು ಕೃಷ್ಣ "

ಅವರು ಅಷ್ಟೊಂದು ಬೇಸರಿಸಿರಲಿಲ್ಲ.

"ಇಲ್ಲ ಅಪ್ಪ: ಅವರೇ ಯಾವಾಗಲಾದರೂ ಶಾಲೆಗೆ ಬರದಿದ್ದರೆ 'ನೋಟ್ಸ್' ಕೇಳುತಾರೆ. ಕೊಡುತ್ತೇನೆ ಅಪ್ಪ "

ವಿನೋದ ಅವರೆಲ್ಲರನ್ನೂ ಹಿಂದೆ ಹಾಕುವಷ್ಟು ಚೆಲುವೆ. ಆದರೆ ಅವಳು ಹೊರಟು ಹೋದಳು.

ಇನ್ನೊಮ್ಮೆ ಅರಳಸುರಳಿಗೆ ಹೋಗಿ ಒಂದು ರಾತ್ರಿ ಉಳಿಯುವಂತೆ ಸಂಜೆಗೆ ಹೋಗಬೇಕು. ಆಗ ಹೇಗಾದರೂ ವಿನೋದಳನ್ನು ಸಂಧಿಸಿ ತನ್ನ ಆಸೆ ತೀರಿಸಿಕೊಳ್ಳಬೇಕು.

ಅಮೇಲೆ ಅವನು ಏನೇನು ಯೋಚಿಸಿದನೋ ಇಲ್ಲ ಕಾರಣ ಕಣ್ಣು ಮುಚ್ಚಿದ ಕೃಷ್ಣನಿಗೆ ಗೊತ್ತಿಲ್ಲದಂತೆ ನಿದ್ರೆ ಬಂದಿತ್ತು.

೨

ಮಧ್ಯರಾತ್ರಿಯಲ್ಲಿ ಒಮ್ಮೆ ಆತನಿಗೆ ಎಚ್ಚರ ವಾಗಿತ್ತು. ಆಗ ಹೊರಬಿದ್ದು ಬಂದು ಅಕ್ಕಿಯ



ಮೂಟೆಯ ಮೇಲೆ ಮಲಗಿದ್ದ ನಾಯಿಯನ್ನು ಹೊಡೆದೋಡಿಸಿದ್ದ. ಆ ನಂತರ ಅವನಿಗೆ ನಿದ್ರೆ ಬಹಳ ಜೋರಾಗಿ ಬಂದಿತ್ತು

ಕೊನೆಗೂ ಮುಗಿಯಿತು ಅಡಿಕೆಯ ಕೊಯ್ಲು. ಅಡಿಕೆ ಕೊಯ್ಲಿನ ಕೊನೆಯ ದಿನಗಳಲ್ಲಿ ಕೃಷ್ಣನಿಗೆ ಕೊಯ್ತಕ್ಕಾಗಿ ಜನಗಳನ್ನು ಒದಗಿಸುವುದು, ಕೊಯ್ದ ಅಡಿಕೆಯ ಕೊನೆಗಳನ್ನೆಲ್ಲ ಸುಲಿಯುವುದು ( ಅರ್ಥ ಅವನೇ ಸುಲಿದಿದ್ದ ) ಅದನ್ನು ಬೇಯಿಸಿ ಚಪ್ಪರದ ಮೇಲೆ ಒಣಗಿಸುವುದು ಅವುಗಳಿಂದ ಅವನು ಬಹಳವಾಗಿ ಬಳಲಿದ್ದ. ಆ ಸಂದರ್ಭದಲ್ಲೇ 'ವನಗದ್ದೆ'ಗೆ ( ತನ್ನೂರಿಗೆ ಬಹು ಸಮೀಪ ) ವಿನೋದ ಬಂದುಹೋಗಬೇಕೆ. ಕೃಷ್ಣನಿಗೆ ಹಗಲೂ ರಾತ್ರಿ ಅಡಿಕೆ ಕೊಯ್ಲಿನ ಬಳಲಿಕೆ. ಅದನೆ ವನಗದ್ದೆಗೆ ಹೋಗುವಂತಹ ಯಾವ ನೆಪವೂ ಸಿಗ ಲಿಲ್ಲ. ಅದ್ದರಿಂದ ಕೊನೆಗೆ ಅವನಿಗೆ ಅದರಿಂದ ಬಹಳ ಬೇಸರವಾಗಿತ್ತು

ಗೋಪಾಲರಾಯರು. ವಿಘ್ನೇಶ್ವರಯ್ಯನವರ ಹತ್ತಿರ ಒಮ್ಮೆ ಹೇಳಿದ್ದರು:

"ಕೃಷ್ಣ ಇದೇ ರೀತಿ ಅಡಿಕೆ ಸುಲಿದರೆ ಬಹಳ ದಿನ ಕಾಯಿಲೆ ಬೀಳದೆ ಉಳಿಯೋದಿಲ್ಲ."

ಅದಕ್ಕೆ ವಿಘ್ನೇಶ್ವರಯ್ಯ ಹೇಳಿದ್ದರು.

"ಈಗ ಅಡಿಕೆ ಸುಲಿಯೋರೆ ಸಿಕ್ಕೊಲ್ಲ. ಅಪ್ಪಾಪ ಸರಕಾರ ಅಡಿಕೆಗೆ ಧಾರಣೆ ಜಾಸ್ತಿ ಮಾಡಿದ್ರೂ. ಪಟೇಲಿದ್ದ ಮುಷ್ಕರ ನಮ್ಮ ಹಳ್ಳಿ ಅಡಿಕೆ ಸುಲಿಯುವ ಹಸಲರಿಗೂ ದಾಟ ಆ ಚಾಳಿ ಬಂದು ಬಿಟ್ಟಿದೆ ನೋಡಿ."

ಕೃಷ್ಣ ಇದನ್ನು ಉಪ್ಪರಿಗೆಯಲ್ಲಿ ಅಡಿಕೆ ಆರಿಸ್ತಾ ಇದ್ದವನು ಕೇಳಿದ್ದ ಅವನಿಗೆ ಅನಿಸಿತ್ತು, ನರ ಮನೆ ಗೋಪಾಲರಾಯರಿಗಾದರೂ ನನ್ನ ಮೇಲ ಅಭಿಮಾನವಿದೆಯಲ್ಲ. ಅವರಿಗೆ ಮಗಳಿದ್ದಿದ್ದರೆ ಆ ಮಾತೇ ಬೇರೆ ( ಅವರ ಮಗ ಪಟ್ಟಾಭಿ ತನ್ನ ಗೆಳೆಯ ಎಂದು ಈ ಮಾತು ಹೇಳಿರಬೇಕು ) ಪಾಪ ಅವರ ಮನೆ ಅಡಿಕೆ ಸುಲಿತವೆಲ್ಲ ಒಳಕಟ್ಟೆ, ಹಸಿ ಕದ್ದೇ. ಖರ್ಚು ವಿಪರೀತ:

ಮೊಸರು ಹಾಲು ತುಪ್ಪ ಕೆಲವು ತಿಂಡಿಗಳು ಬೇಡವೆಂದರೂ ಒರ್ದಿಸಿದ್ದರು ಶಾರದಮ್ಮನವರು ಕಾಫಿಯೂ ಹತ್ತೇಳು ಸಾರಿ ರಾತ್ರಿ ಮಾಡಿ ಚಳೀಲಿ ಅಡಿಕೆ ಸುಲಿಯುತ್ತ ಕುಳಿತ ಮಗ ಕೃಷ್ಣನಿಗೆ ಇತ್ತಿದ್ದರು ಊಟ ಮಾತ್ರ ಅವನು ಜಾಸ್ತಿ ಮಾಡದಿದ್ದರೆ ಬೈಯತ್ತ ಜಾಸ್ತಿ ಉಣ್ಣುವಂತೆ ಮಾಡಿದರು ಎಲ್ಲೋ ಅಪರೂಪಕ್ಕೆ ಕೃಷ್ಣ ತಾಯಿಗೆ ಹೇಳಿ ಟೀ ಮಾಡಿಸಿ ಕುಡಿಯುತ್ತಿದ್ದ, ಅಡಿಕೆ ಸುಲಿಯುವಾಗ ಬರುವ ನಿದ್ರೆಯನ್ನು ಓಡಿಸುವ ಸಲುವಾ

ಅಡಿಕೆ ಕೊಯ್ಲಿಗೆಂದು ಕೃಷ್ಣನು ಒಬ್ಬ ಪ್ರತ್ಯೇಕ ಘಟ್ಟದ ಆಳು ನೇಮಿಸಿಕೊಂಡಿದ್ದ. ಅವನೇ ಬೆಳಿಗ್ಗೆ ಸಂಜೆ ಸುಲಿದ ಕೊನೆ ಮೆಟ್ಟುಗಳನ್ನು ಹಾಗೂ ಅಡಿಕೆ ಸಿಪ್ಪೆಗಳನ್ನು ಗೊತ್ತುಪಡಿಸಿದ ಸ್ಥಳಕ್ಕೆ ಸಾಗಿಸುವುದು ಕೆಲಸವಿಲ್ಲದಿದ್ದ ದಿನಗಳು, ಆಳನ್ನು ಪಟ್ಟಾಭಿಯ ಮನೆಗೆ ಕಳುಹಿಸುತ್ತಿದ್ದ. ಕೃಷ್ಣ (ಅವರು ಬಡವರೆಂದು ಅಲ್ಲ, ಸ್ವಲ್ಪ ಸಹಾಯ ತನ್ನಿಂದ ಆಗಲಿ ಎಂದು ಆಳುಬಂದಾಗಕೃಷ್ಣನೇ ಕಳಿಸಿದ್ದೆಂದು ಅಲ್ಲೇ ಆಲೋಚಿಸುತ್ತಾ ಕುಳಿತಿದ್ದ ಪಟ್ಟಾಭಿಗೆ ಗೊತ್ತಾದರೂ ಗೊತ್ತಿಲ್ಲದವನಂತೆ ಕುಳಿತಿದ್ದ. ಕೃಷ್ಣನನ್ನು ಕರೆದು ಅಭಿನಂದನೆಯನ್ನೂ ಸಲ್ಲಿಸಲಿಲ್ಲ. ಅಡಿಕೆ ಕೊಯ್ಲಿನಲ್ಲಿಯೂ ಆತ ಸೋಮಾರಿಯಾಗಿಯೇ ಕಾಲ ಕಳೆದನು

ಮೂರನೆಯ ದಿವಸ ಮಾತ್ರ ಕೃಷ್ಣ ಅಡಿಕೆ ಸುಲಿಯುತ್ತಿದ್ದಲ್ಲೇ ಬಂದು ಕುಳಿತ. ಪಟ್ಟಾಭಿ ಹರಟೆ ಪ್ರಾರಂಭಿಸಿದ.

ಶಾಸ್ತ್ರಕ್ಕೆ ಸುಮ್ಮನೆ ಒಂದೆರಡು ಅಡಿಕೆ ಸುಲಿದು ತಕ್ಷಣ ಎದ್ದುಬಿಡುತ್ತಿದ್ದ ಅವನು ಜೊತೆಯಲ್ಲಿ ಕೃಷ್ಣನನ್ನೂ ಎಬ್ಬಿಸಲು ಪ್ರಯತ್ನ ಹಲವು ಬಾರ್ ಮಾಡುತ್ತಿದ್ದ.

ಕೆಲಸ ಜಾಸ್ತಿ ಎಂದು ಬಂದವರೆದುರಿಗೆ ಹೇಳುತ್ತಲೇ ಇರಲಿಲ್ಲ ಕೃಷ್ಣ. ಬೆಳಿಗ್ಗೆ ಸಂಜೆ ಮಾತ್ರ ಸ್ವಲ್ಪ ತಿರುಗಾಡಿ ಬರುವುದೇ ಅವನ ವಿರಾಮವಾಗಿತ್ತು ಕೆಲಸದ ಕಾಲದಲ್ಲಿ ಅವನು ಉಡುಪಿನ ಕಡೆಗೆ ಅಷ್ಟೊಂದು ಪ್ರಾಧಾನ್ಯ ಕೊಡುತ್ತಿರಲಿಲ್ಲ ಒಂದು ಪಂಚೆ, ಒಂದು ಶರ್ಟು, ಇಷ್ಟರಲ್ಲೇ ಅವನ ಉಡುಪು ಮುಗಿದು ಹೋಗುತ್ತಿತ್ತು.

ಪಟ್ಟಾಭಿಗೆ ಹಾಗಲ್ಲ ಕೂತು ತಿನ್ನುತ್ತಿದ್ದರೂ ಪೈಜಾಮ. ಬುಷ್‌ಷರ್ಟು ದಿನಾಲೂ ಒಗೆದು ಕೊಡಬೇಕಾಗಿತ್ತು ಅವರ ತಾಯಿ ತಲೆಗೆ ಸುವಾಸನೆ ಎಣ್ಣೆ ಮುಖಕ್ಕೆ ಸ್ನೋ ತಪ್ಪಲೇಬಾರದು ಕೆಲಸದ ಪ್ರಯತ್ನವೇ ಅವನಿಗೆ ಬರದಿದ್ದರೂ ಚೆನ್ನಾಗಿ ಶೃಂಗಾರ ಮಾಡಿಕೊಂಡು, ಹನಿಯ ಕಾರಗಡಿ ಒಳಕಟ್ಟೆ, ಹೆದ್ದಿ. ಸಂಪೆಮನೆ ನೆಲ್ಲುಂಡೆ ಹೀಗೆ ಸುತ್ತಲಿನ ಹತ್ತಾರು ಊರು ಸುತ್ತಿ ಅಲ್ಲಿಯ ಜನಗಳ ಹತ್ತಿರ ಹರಟೆ ಹೊಡೆದು ಇದ್ದದ್ದು ಇಲ್ಲದ್ದು ಸುದ್ದಿ ಹರಡಿ ಬರುತ್ತಿದ್ದ. ತಂದೆ, ತಾಯಿಗಳು ಏನ ಮಾಡುವಂತಿರದೇ ಸುಮ್ಮನಾಗಿ ಬಿಡುತ್ತಿದ್ದರು

"ಹೀಗೆಲ್ಲ ಊರೂರು ಸುತ್ತಬಾರ್ದು ಪಟ್ಟಾಭಿ

"ಮನೇಲಿ ಕೂತು ಏನು ಮಾಡಬೇಕಾಗಿ ಕೃಷ್ಣಾ ?"

"ಮನೆ ಕೆಲಸ ಮಾಡು. ಇಲ್ಲ ತೋಟದ ಕಡೆ ನಿಗಾ ಇಡು" ತೋಟವನ್ನು ಎಂದು ನಂಬಿದವನಲ್ಲ ಪಟ್ಟಾಭಿ ದಿನ ಊರು ಸುತ್ತಿ ಕೂತು ಒಂದೇ ಕಡೆ ಅವನಿಗೆ ಕೆಲಸ ಮಾಡಲು ಆಗುತ್ತಿರಲಿಲ್ಲ.

ಒಂದೆರಡು ದಿನ ಎಲ್ಲೂ ಸುತ್ತದೇ. ತೋಟದ ಕಡೆಗೆ ಹೋಗಿ ಕೆಲಸ ಮಾಡುತ್ತಿದ್ದ ಆಳುಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ. ಕೃಷ್ಣ ಅದನ್ನು ಕಂಡು ಸಂತೋಷ ಪಟ್ಟಿದ್ದು ಉಂಟು.

"ತೋಟದ ಕಪ್ಪು ಸರಿಯಾಗಿ ಆಳುಗಳು ಕಡಿದಿಲ್ಲ ಅಪ್ಪಾ"

ಇದನ್ನು ಕೇಳಿದ ಅವನ ತಂದೆ ಸಂತೋಷದಿಂದ ಹೇಳುತ್ತಿದ್ದರು

"ನೀನು ಹೇಳಿ ಹೇಗೆ ಕಡಿಸಬೇಕೋ ಹಾಗೆ ಕಡಿಸು ಪಟ್ಟಾಭಿ" ಮೊದಲು ತೋಟದ ಕೆಲಸಕ್ಕೆ ಪಟ್ಟಾಭಿ ಹೊರಟಾಗ ಕೃಷ್ಣ ಅವನನ್ನು ನೋಡಿ ಸಂತೋಷಗೊಂಡ.

ಕಪ್ಪುಪಟ್ಟಿದ್ದು ಪಟ್ಟಾಭಿ ಜೀವನದಲ್ಲಿ ಅದೇ ಮೊದಲನೆಯದಾಗಿತ್ತು. ಆಳುಗಳೊಂದಿಗೆ ಗುದ್ದಲಿ ಹಿಡಿದು ಅವನು ಅಡಿಕೆ ತೋಟದ ಕಪ್ಪನ್ನು ಅಗೆದನು. ಪಕ್ಕದ ತೋಟದಲ್ಲಿ ಎಲೆಯನ್ನು ಕೊಯ್ಯುತ್ತಿದ್ದ ಕೃಷ್ಣ ಅವನ ಕೆಲಸವನ್ನು ನೋಡಿದನು.

ಒಂದು ಗಳಿಗೆ ಇಬ್ಬರ ದೃಷ್ಟಿಯೂ. ಒಂದಾದವು ಇಬ್ಬರಿಗೂ ಆನಂದವಾಯಿತು ಪಟ್ಟಾಭಿಯ ಸಾಮರ್ಥ್ಯವನ್ನು ಕಂಡು ಕೃಷ್ಣ ದಂಗುಬಡಿದನು.

ಎಲೆ ಕೊಯ್ದು ಕೃಷ್ಣ ಮನೆಗೆ ಬಂದಾಗ ಆ ಸಮಾಚಾರ ತಾಯಿಗೆ ಹೇಳಿದನು

ಅಪ್ಪೆ ಮಾವಿನಕಾಯಿ ಉಪ್ಪಿನ ಕಾಯಿಗೋಸ್ಕರ ಕೊಯ್ಯಲು ಕೃಷ್ಣ ಕಣಿವೆ ಬಾಗಿಲು ಕಾಡಿಗೆ ಹೋಗಿದ್ದ. ಸಾರದ ಮನೆ ಪಾರ್ವತಿ ವನಗದ್ದೆಯಿಂದ ಹನಿಯಕ್ಕೆ ಬರುತ್ತಿದ್ದಳು. ಕಾಡಿನ ಮಧ್ಯದಲ್ಲಿ ಕೃಷ್ಣನನ್ನು ಸಂಧಿಸಿದಳು ಆ ಪರಿಚಯವೇ ಅವರನ್ನು ಆತ್ಮೀಯತೆಯ ಕಡೆಗೆ ಸೆಳೆದಿತ್ತು. ಇಬ್ಬರಲ್ಲಿ ಪ್ರೇಮದ ಬುಗ್ಗೆ ಚಿಮ್ಮಿತ್ತು ಹಿಂದೊಮ್ಮೆ ಸಾರದ ಮನೆಯಲ್ಲಿ ಗಣಪತಿ ಹೋಮ ಆ ಮನೆಯವರು ವರ್ಷದಲ್ಲೆ ಒಂದು ದಿನ ಇಂತಹ ಸಮಾರಂಭ ಮಾಡಿ ಊರಿನವರಿಗೆಲ್ಲಾ ಊಟ ಹಾಕುವುದಾಗಿತ್ತು. ಎಲ್ಲರೂ ಒತ್ತಾಯವಿಲ್ಲದಿದ್ದರೂ ಊಟಕ್ಕೆ ಹೋಗಿಯೇ ಹೋಗುತ್ತಿದ್ದರು ಕೃಷ್ಣನ ಮೇಲೆ ಆ ಮನೆಯವರಿಗೆ ಬಹಳ ಮಮತೆ ಕೃಷ್ಣ ಮಾತ್ರ ಎಲ್ಲರಂತೆ ಊಟದ ಹೊತ್ತಿಗೇ ಮಾತ್ರ ಹೋಗುತ್ತಿರಲಿಲ್ಲ. ಬೆಳಿಗ್ಗೆಯಿಂದ ಹೋಗಿ ಅಲ್ಲೇ ಕೆಲಸ ಮಾಡುತ್ತಿದ್ದ. ಅವನ ಜೊತೆಗೆ ಹೆಂಡತಿಯಂತೆ ಓಡಿಯಾಡಿ ಎಲ್ಲಾ ಕೆಲಸದಲ್ಲಿಯೂ ಭಾಗಿಯಾಗುತ್ತಿದ್ದಳು ಪಾರ್ವತಿ ಒಮ್ಮೆ ಅಕ್ಕಿ ಡಬ್ಬ ನಾಗೊಂದಿಗೆಯಿಂದ ಇಳಿಸುವಾಗ ಒಬ್ಬರ ಮೈ ಒಬ್ಬರಿಗೆ ತಾಗುತ್ತಿತ್ತು ಮೈಯಲ್ಲಿ ವಿದ್ಯುತ್ ಸಂಚರಿಸುತ್ತಿತ್ತು ಇಬ್ಬರೂ ನಗುವಿನಲ್ಲಿ ಅದನ್ನು ಮರೆಯುತ್ತಿದ್ದರು

ಬಚ್ಚಲ ಹಂಡೆಗೆ ನೀರು ತುಂಬಿಸುತ್ತಿದ್ದಳು ಪಾರ್ವತಿ. ಊಟ ಮಾಡಿದವರಿಗೆ ಕೈ ತೊಳೆಯಲು. ಬಂದ ಊರಿನವರೆಲ್ಲರೂ ಊಟಕ್ಕೆ ಕುಳಿತಿದ್ದರು. ಮನೆಯವರು ನೆಂಟರು ಬಿಡದೇ ಇದ್ದ ಬೀಗದವರು. ಮೊದಲನೇ ಪಂಕ್ತಿ ಊಟಕ್ಕೆ ಕುಳಿತವರಿಗೆ ಬಡಿಸುತ್ತಿದ್ದರು ಕೃಷ್ಣ ಸಹ ಬಡಿಸುವುದರಲ್ಲಿ ಒಲು ಚುರುಕು. ಬಡಿಸುತ್ತಿದ್ದ ಕೃಷ್ಣ ಕೈ ತೊಳೆಯಲು ಬಚ್ಚಲಿಗೆ ಹೋದ, ಯಾರೂ ಇಲ್ಲದ ಏಕಾಂತ. ಪಾರ್




ತಿಯೊಬ್ಬಳೇ ಇದ್ದಳು. ನೀರನ್ನು ಪಾತ್ರೆಗಳಿಗೆ ಇವ್ವಾ ತುಂಬುತ್ತಿದಳು

"ಕೈಗೆ ಸ್ವಲ್ಪ ನೀರು ಸುರಿ ಪಾರ್ವತಿ."

"ಆಗಲಿ ಕೃಷ್ಣ."

ಅನಂತರ ಅವಳು ಬಗ್ಗಿ ಮುಖ ತಗ್ಗಿಸಿ ಕೃಷ್ಣನ ಕೈಗೆ ನೀರು ಸುರಿದಳು, ತನ್ನ ಮುಖದ ಹತ್ತಿರ ಪಾರ್ವತಿಯ ಮುಖ ಇದ್ದದರಿಂದ ಕೈ ತೊಳೆಯುತ್ತಿದ್ದ ಕೃಷ್ಣನಿಗೆ ಆಕರ್ಷಿತವಾಗಿ ಒಮ್ಮಿಂದೊಮ್ಮೆ ಪಾರ್ವತಿಯನ್ನು ಸರ್ರನೆ ಎಳೆದು ಮುಖ ವನ್ನು ಮುದ್ದಿಟ್ಟ. ಪಾರ್ವತಿಗೆ [illegible] ಕ್ಕರೂ ಅವನಿಂದ ಬಿಡಿಸಿಕೊಂಡು ನಾಚಿಕೆಯಿಂದ ಬಾವಿಯ ಕಡೆ ಓಡಿದಳು.

ಆ ನಂತರ ಅವರಿಬ್ಬರೂ ಸಂಧಿಸಿದ್ದು ಎರಡು ವರ್ಷಗಳ ನಂತರ ಕೊಡಗಿನಲ್ಲಿ. [illegible]ರ್ಜನ ಪ್ರದೇಶದಲ್ಲಿ

ವಿನೋದದ ಪ್ರಣಯ ಮುಕ್ತಾಯವಾದ ಮೇಲೆ ಕೃಷ್ಣನ [illegible] ಪಾರ್ವತಿಯ ಕಡೆಗೆ ವಾಲಿತ್ತು.

[illegible] ದೇವಸ್ಥಾನಕ್ಕೆ [illegible] ಬರುವಾಗ ಬೆಳೆದ ಪಾರ್ವತಿ ನಾರದ ಮನೆಯ ದು-ರಿ[illegible] ರಸ್ತೆ [illegible] ಮೇಲೆ ಒಲೆ ಬೂದಿ [illegible] ತಲೆ [illegible] ಕೆಳಗೆ ತೋಟದ ಕಡೆಗೆ [illegible] ವಳ್ಳದಲ್ಲಿ [illegible] ಇರುತ್ತಿದ್ದುದು [illegible] ಸಂತೋಷವಾಗುತ್ತಿತ್ತು.

ಪಾರ್ವತಿ ಕಪ್ಪಾಗಿದ್ದರೂ ಬೆಳೆದಿದ್ದಾಂದ ಬನ್ನಾ-

ರಿಯೇ ತೋರುತ್ತಿದ್ದಳು. ಹೋಗುತ್ತಿರುವ [illegible] ದಲ್ಲಿ ಮೂಗೊಂದೇ ಅವಳ ರೂಪದ [illegible] -ತ್ತಿತ್ತು. ನಾರದ ಮನೆ ಸಂಪ್ರದಾಯಸ್ಥರ ಮನೆಯಾಗಿತ್ತು. ಆ ಊರಲ್ಲೇ ನಾಗರೀಕತೆ ಉತ್ತುಂಗ ಮುಟ್ಟಿದಲ್ಲಿದ್ದ ಕಾಲದಲ್ಲೂ ನಾರದ ಮನೆಯಲ್ಲಿ ಹಳೆ ಸಂಪ್ರದಾಯವೇ ಉಳಿದಿತ್ತು, ಅಳಿದಿರಲಿಲ್ಲ.

ಆದರೂ ಪಾರ್ವತಿಯು ರೂಪ ಚೆನ್ನಾಗಿಯೇ ಕೃಷ್ಣನಿಗೆ ತೋರಿತ್ತು.

ಇಬ್ಬರ ದೃಷ್ಟಿಯೂ ಒಂದಾಗುತ್ತಿತ್ತು.

"ಶಾರದಮ್ಮನವರು ಒಳಗಿದ್ದಾರೆಯೇ" ಕೃಷ್ಣ ಕೇಳುತ್ತಿದ್ದ.

"ವಿಘ್ನೇಶ್ವರಯ್ಯ ಹೊಸ ನಗರಕ್ಕೆ ಹೋಗುತ್ತಾರೆಯೇ?" ಪಾರ್ವತಿ ಕೇಳುತ್ತಿದ್ದಳು.

"ನಿಮ್ಮನೆ ಕೌಲಿ ಕರು ಹಾಕಿತೇ?"

"ಅಡಿಕೆ ಈ ವರ್ಷ ಎಷ್ಟಾಯಿತು?"

"ನೀವು ಆರೋಗ್ಯವಾ?"

"ದೋಳಿಮನೆ ಮಾವ ಸತ್ತು ಹೋದರಂತೆ?"

"ಸಂಪೆಮನೆ ವೈದಿಕಕ್ಕೆ ಹೋಗ್ತೀರಾ?"

"ಕೇಶವ ಮನೆಯಲ್ಲಿ ಚಂಡಿಕಾ ಹೋಮ ನಿಮ್ಮನೇಲಿ ಯಾರು ಹೋಗುತ್ತಾರೆ?"

ಅವರಿಬ್ಬರಲ್ಲಿ ಈ ರೀತಿ ಸಂಭಾಷಣೆಗಳು ಎಷ್ಟೋ ದಿನ ಸಾಗುತ್ತಿತ್ತು.

ಕೃಷ್ಣನ ಉಡಿಗೆ, ಮಾತು, ನಡತೆ, ಎಲ್ಲಾ ಪಾರ್ವತಿಯನ್ನು ಸೆಳೆದಿದ್ದುವು. ಒಳ್ಳೆ ಕಷ್ಟಜೀವಿ ಕೃಷ್ಣ, ಈ ಅಭಿಪ್ರಾಯ ಪಾರ್ವತಿಯಲ್ಲಿತ್ತು. ಕಾಡಿವಲ್ಲಿ ನೋಡಿದಾಗ ಎಷ್ಟೋ ಆಸೆಗಳು ಒಮ್ಮೆಲೇ ಉಂಟಾದುವು. ಆದರೆ ಅಷ್ಟೇ ಭೀತಿಯಾಗಿ ಸ್ತ್ರೀ ಸಹಜ ಸಂಕೋಚದಿಂದ ಅವಳ ಮುಖ ಕೆಂಪಾಯಿತು.

ಕೃಷ್ಣ ಅವಳ ಸಮೀಪ ಬಂದು ಅವಳ ಕೈಮುಟ್ಟಿ ಹೇಳಿದ "ಪಾರ್ವತಿ ಇದು ನಿನ್ನ ಬೆಳವಣಿಗೆಯ ಸಂಕೇತ" ಪಾರ್ವತಿಯು ಏನೂ ಹೇಳದೆಯೇ ನಕ್ಕಳು.

"ಯಾಕೆ ನಗುತ್ತೀಯಾ?" ಪಾರ್ವತಿಯನ್ನು ಕುರಿತು ಕೃಷ್ಣ ಹೇಳಿದ.

ಕಾಳಿಂಗ ಸರ್ಪ ಒಂದು ಧರೆಯ ಮೇಲೆ ಹೋಗುತ್ತಿದ್ದುದನ್ನು ಪಾರ್ವತಿ ಕೃಷ್ಣನಿಗೆ ತೋರಿಸಿದಳು. ಕೃಷ್ಣ ಕೂಡಲೆ ಅವಳನ್ನು ಎಳೆದು ಸ್ವಲ್ಪ ದೂರ ಬಂದ. ಪಾರ್ವತಿ ಹೆದರಿ ಕೃಷ್ಣನ ಮೈಗೆ ಒರಗಿಬಿಟ್ಟಳು. ಅವಳನ್ನು ಕಣಿವೆ ಬಾಗಿಲು ದಾಟುವ ವರೆಗೆ ಕಳಿಸಿ ಕೃಷ್ಣ ತನ್ನ ಕೆಲಸಕ್ಕೆ ಹೋದ

ಕೆಲವು ದಿನಗಳಲ್ಲಿ ಶ್ರೀನಿವಾಸ ಕೃಷ್ಣನ ಪ್ರಣಯ ಪತ್ತೆ ಮಾಡಿಕೊಂಡು ಹೇಳಿದ

"ಕೃಷ್ಣ ನೀನು ಪಾರ್ವತಿಯನ್ನು ಯಾಕೆ ಮದುವೆ ಮಾಡ್ಕೋಬಾರದು?"

ಪಟ್ಟಾಭಿ ಹೇಳಿದ.

"ಪಾರ್ವತಿಯನ್ನು ಇವನಿಗೇಕೆ ಕೊಡುತ್ತಾರೋ? ಅವಳನ್ನು [illegible] ಓದುತ್ತಿರುವ ಅವಳ ಸೋದರ ಅಳಿಯನಿಗೆ ಕೊಡಲು [illegible] ಮಾಡಿದ್ದಾರೆ ಅಡಿಗಳು"

ಕೃಷ್ಣನಿಗೆ ಅದು ಗೊತ್ತಿರಲಿಲ್ಲ. ಪಟ್ಟಾಭಿ ಆ ಸುದ್ದಿಯನ್ನು ಹೇಳಿದ ಮೇಲೆ ಪಾರ್ವತಿಯು ನಕ-

ಚೆನ್ನೇ ಮರೆಯಬೇಕು ಅದಕ್ಕಾಗಿ ತಾನು ಪ್ರಯತ್ನಿಸಬೇಕು ಎಂದುಕೊಂಡ.

ಪಟ್ಟಾಭಿ ಕೃಷ್ಣನ ಮುಖ ನೋಡಿದಾಗ ಅರಳಿದ್ದ ಕೃಷ್ಣನ ಮುಖ ಬಾಡಿತ್ತು.

ಶ್ರೀನಿವಾಸ ಪಟ್ಟಾಭಿಯ ಮುಖ ನೋಡಿ ನಕ್ಕು ಹೇಳಿದ:

"ಕೃಷ್ಣನಿಗೆ 'ಪ್ರೇಮ ವಿವಾಹದ ಯೋಗ' ಒದಗದೇ ಇಲ್ಲ, ಪಾಪ ಹೀಗಾಗಬಾರದು, ಇದೇ ನನ್ನ ಮುಂದಿನ ಕಾದಂಬರಿ ವಸ್ತು".

ಉತ್ಸಾಹದ ಧ್ವನಿಯಲ್ಲಿ ಪಟ್ಟಾಭಿ ಕೇಳಿದನು.

"ನಿನ್ನ ಕಾದಂಬರಿ ಹೆಸರು ಹೇಗೆ ಇಡ್ತಿಯಪ್ಪಾ?"

"ಪಾರ್ವತಿ-ಕೃಷ್ಣ" ತಟ್ಟನೆ ಡೈರಿ ತೆಗೆದು ಅದರಲ್ಲಿ ಬರೆದು ಹೇಳಿದ ಶ್ರೀನಿವಾಸ.

"ಹೋಗೋ ಮಹರಾಯ, ನನಗೆ ಈಗ ಆಗಿರೋ ದುಃಖವೇ ಸಾಕು, ಇದ್ದ ಹೆಸರನ್ನು ಬದಲಾಯಿಸದೇ ಕಾದಂಬರಿ ಬರೆದರೆ ಮುಗಿದೇ ಹೋಯ್ತು, ನನ್ನ ಮರ್ಯಾದೆ ಮಾನ ಎಲ್ಲಾ ಕಳೆದಂತೆ. ಹೋಗಲಿ ಮದುವೆಯಾಗಿ ಗಂಡನೊಂದಿಗೆ ಸಂಸಾರ ಮಾಡುವ ಪಾರ್ವತಿಯ ಬಾಳಿಗೂ ವಿರಹ ವಿಷವಾಗುತ್ತೆ. ಅದೊಂದು ಉಪಕಾರ ಮಾಡಬೇಡ."

"ಆ ಮೇಲೆ ಇಬ್ಬರೂ ಊರಿನಲ್ಲಿ ತಲೆಯೆತ್ತಿ ತಿರುಗಾಡುವಂತಿಲ್ಲ ಶ್ರೀನಿವಾಸ್" ಪಟ್ಟಾಭಿ ಹೇಳಿದ.

ಕೃಷ್ಣನ ಕನಸಿನ ರಾಣಿಯಾಗಿ ಉಳಿಯುವ ಪಾರ್ವತಿ ಹಾಗೂ ಅವರ ಪ್ರಣಯ ಸಂಬಂಧ ಕುತೂಹಲದಿಂದ ಅಭ್ಯಾಸ ಮಾಡಿದ ಶ್ರೀನಿವಾಸನಿಗೆ ಒಂದು ಕಾದಂಬರಿ ಅದರ ಮೇಲೆ ಬರೆದು ಬಿಡಬೇಕೆನ್ನಿಸಿತ್ತು ಆದರೆ 'ತಲೆಬರಹ ಈಗ ಬದಲಾಯಿಸಬೇಕಾಯಿತು.

ಕೃಷ್ಣನನ್ನು ಕಂಡಾಗಲೆಲ್ಲ ಪಾರ್ವತಿ ಅವನನ್ನು ಪ್ರೇಮದಲೆ ಕಾಣುತ್ತಿದ್ದಳು. ಅವಳ ಒಂದೇ ಸಮನೆ ನೋಡುವ ಕಣ್ಣುಗಳ ಜ್ಯೋತಿ ಅವನಿಗೆ ಪ್ರಣಯದ ಹಸಿವನ್ನು ಉಂಟು ಮಾಡಿದ್ದವು. ಪಾರ್ವತಿ ತನ್ನ ಮದುವೆಯಾಗಲು ಬಯಸಿರಬೇಕು. ತಾವು ಎಲ್ಲಿಗಾದರೂ ಓಡಿ ಹೋಗೋಣ ಎಂದಿದ್ದರೆ ಸಾರದ ಮನೆ ಅಡಿಗಳನ್ನು ಎಲ್ಲಾ ಬಿಟ್ಟು ಪಾರ್ವತಿ ತನ್ನ ಹಿಂದೆ ಬರುತ್ತಿದ್ದಳೋ ಏನೋ ? ಅದೊಂದು ಸುದೈವ: ಅಂತಹ ಹೆಣ್ಣು ಸಿಕ್ಕಬೇಕಾದರೂ ಪುಣ್ಯ ಪಡೆದಿರಬೇಕು.

ಕೃಷ್ಣ ಒಂದೆರಡು ದಿವಸ ಸಾರದ ಮನೆಗೆ ಹೆಚ್ಚಾಗಿಯೇ ಹೋದ, ಪಾರ್ವತಿ ಮದುವೆ ಸುದ್ದಿ ತನಗೆ ತಿಳಿಸಿ ತನ್ನ ದುಃಖ ತೋಡಿಕೊಳ್ಳಬಹುದೇನೋ ಎಂದು, ಆದರೆ ಪಾರ್ವತಿ ಅವನನ್ನು ಏಕಾಂತದಲ್ಲಿ ಸಂಧಿಸಲಾಗಲಿಲ್ಲ, ಎಲ್ಲರೆದುರಿಗೆ ಓಡಾಡುವಾಗ ಕೃಷ್ಣನನ್ನು ನೋಡಿದ್ದಳು. ವ್ಯಥೆ, ನಗು ಎರಡೂ ಇಲ್ಲದ ಒಂದು ತರಹ ಅವಳ ಮುಖ ಕಳೆ ಬೀರಿತ್ತು.

ಹೆಣ್ಣಾಗಿ ಹುಟ್ಟಿ ತಂದೆ ಮಾತು ಕೇಳದಿದ್ದರೆ ಹೇಗೆ? ಪಾರ್ವತಿ ಇಷ್ಟವಿಲ್ಲವಾದರೂ ಈ ಮದುವೆಗೆ ಒಪ್ಪಿರಬೇಕು. ಅಥವಾ ಹಳೇ ಸಂಪ್ರದಾಯದ ಅಡಿಗಳು ಅವಳನ್ನು ಕೇಳದೇ ಮದುವೆಯ ಸಿದ್ಧತೆಗಳನ್ನೂ ಮಾಡುತ್ತಿರಬೇಕು.

ಪಾರ್ವತಿಗೆ ಮದುವೆಯಾಗಿ - ಗಂಡನೊಡನೆ ಬಾಳ್ವೆ ನಡೆಸಲು ಪ್ರಾರಂಭಿಸಿದ ಮೇಲೆ ಕೃಷ್ಣ ಗಟ್ಟಿ ಮನಸ್ಸು ಮಾಡಿ ಅವಳ ಯೋಚನೆ ಬಿಟ್ಟನು. ಅವರ ಭೇಟಿ, ನಗು, ಪ್ರಣಯದ ಬೇಕು ಎಲ್ಲ ಕಪ್ಪಿಯಾದುವು.

ಆಗಾಗ್ಗೆ ಕಾರಗಾಡಿ ಗಣಪತಿ ದೇವಸ್ಥಾನಕ್ಕೆ, ಇಲ್ಲವೇ ಹೊಸನಗರದ ಸಂತೆಗೆ ಕೃಷ್ಣ ಹೋಗುತ್ತಿದ್ದಾಗ ಸಾರದ ಮನೆ ಹಳ್ಳದಲ್ಲಿ ಪಾರ್ವತಿ ಪಾತ್ರ ತೊಳೆಯುತ್ತಿದ್ದಾಗ, ಪಾರ್ವತಿಯೇ ಕೃಷ್ಣನನ್ನು ನೋಡಿ ಮಾತನಾಡಿಸಿದ್ದಳು. "ಏನು ಕೃಷ್ಣ, ಪೇಟೆಗೆ ಹೊರ್ಟಯೊ ?"

"ಹೌದು ಪಾರ್ವತಿ" ಅಷ್ಟೇ ಹೇಳಿ ಅವನು ಹಾಗೆಯೇ ಹೊರಟು ಹೋಗಿದ್ದ.

ಮುಂದೆ ಒಂದು ದಿನ ಪಾರ್ವತಿಗೆ ಪ್ರಸ್ತವಾಯಿತು. ಆದರ ಊಟಕ್ಕೆ ಎಂದಿನಂತೆ ಕೃಷ್ಣನ ಹಾಗೂ ಮನೆಗೆಲ್ಲ ಅಡಿಗಳು ಬಂದು ಆಹ್ವಾನಿಸಿದ್ದರು. ಪಾರ್ವತಿ ಮಾತ್ರ ಕೃಷ್ಣನನ್ನು ಹಿಂದಿನ ರಾತ್ರಿ ಮರುದಿನದ ಅವಳ ಕಾರ್ಯಕ್ರಮಕ್ಕೆ ಮೊಸರಿಗೆ ಹಾಲು ತಂದು ಕೊಡಲು ಬಂದಾಗ ಕೋಣೆಯಲ್ಲಿ ಸಂಧಿಸಿದ್ದಳು. ಜೊತೆಗೆ ಒಂದು ಮಾತು ಯೋಚಿಸಿ ಹೇಳಿದ್ದಳು.

"ಕೃಷ್ಣ ಕಳೆದಿದ್ದು ಮರೆತು ಬಿಡು"

ಕೃಷ್ಣ ಅವಳಿಂದ ಆ ಮಾತು ನಿರೀಕ್ಷಿಸಿರಲಿಲ್ಲ. ಆದರೆ ಅವಳೇ ಯೋಚಿಸಿ ಹೇಳಿದ್ದ ಮಾತು ಅದಾಗಿತ್ತು.

# ದಿವ್ಯ ಸುವಾಸನೆ

ಸೋನಾ ಗಂಧದ ಸಾಬೂನಿನ ಮೃದು ವಿಪುಲ ನೊರೆ,
ಮನಮೋಹಕ ಸುವಾಸನೆ, ನಿಮಗೆ ಕಂಗೊಳಿಸುವ ನವ
ತಾರುಣ್ಯದ ಹೊಂಬಣ್ಣವನ್ನು ಮತ್ತು ಅನಿರ್ವಚನೀಯ
ಆನಂದವನ್ನೀಯುವುದು.

ಶುದ್ಧ ಮೈಸೂರು ಗಂಧದ ತೈಲದಿಂದ ತಯಾರಿಸಲ್ಪಟ್ಟಿ
ಮತ್ತು ಅದರ ದಿವ್ಯ ಸುವಾಸನೆಗಾಗಿ, ನೀವು ಸದಾಕಾಲ
ಅದನ್ನೇ ಬಯಸುವಿರಿ.
ಸುವಾಸನೆಗಾಗಿ ಶುದ್ಧ ಮೈಸೂರು ಗಂಧದ ಎಣ್ಣೆಯನ್ನು
ಉಪಯೋಗಿಸಲಾಗಿದೆ.




ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್
ಮಂಗಳೂರು-1

SRO 707 Kan



ಹನಿಯಕ್ಕೆ ಬಹಳ ದೂರ ಕಾಶಿ, ತಂದೆಯ ಕಾಶಿ ಯಾತ್ರೆ ಸುಮಾರಾಗಿ ಒಂದೆರಡು ತಿಂಗಳು. ಬಹಳ ಕಾಲ ತಾನೊಬ್ಬನೇ ಮನೆಯಲ್ಲಿ ಕಾಲ ಕಳೆಯಬೇಕು. ತನ್ನ ಬೇಸರ ಏನು ಮಹಾ, ಜವಾಬ್ದಾರಿ ತನಗೆ ಹೊರಿಸುತ್ತಿರುವ ತಂದೆಯವರಿಗೆ ಬೇಸರ ತರುವುದು. ಅವರ ಮನಸ್ಸು ನೋಯಿಸುವಂತಹ ಕೆಲಸ ತಾನು ಮಾಡಲೇಬಾರದು. ತಂದೆ ಕಾಶಿಯಾತ್ರೆಗೆ ಹೋಗುವುದು ನ್ಯಾಯ. ತಾನು ಓದುತ್ತಿದ್ದಾಗ ತನಗಿದ್ದ ಮುಖ್ಯೋಪಾಧ್ಯಾಯರು ಕಾಶಿ ವಿಷಯದಲ್ಲಿ ಒಂದು ಘಂಟೆ ಉಪನ್ಯಾಸ ಕೊಟ್ಟಿದ್ದರು. ಅಲ್ಲಿರುವ ಗಗನ ಚುಂಬಿತ ದೇವಾಲಯಗಳು. ಅಗಲವಾಗಿ ವಿಶಾಲವಾಗಿ ಹರಿಯುತ್ತಿರುವ ಗಂಗಾನದಿ ಇತ್ಯಾದಿಗಳು. ತಂದೆ. ತಾಯಿ ಅದನ್ನು ನೋಡಲೇಬೇಕು. ತನ್ನ ಉಪಾಧ್ಯಾಯರ ವರ್ಣನೆ. ತಂದೆ. ತಾಯಿಗಳ ಬಾಯಿಂದ ಕೇಳಲೇಬೇಕು. ಅವುಗಳೆಲ್ಲ ಆ ಘಳಿಗೆಯಲ್ಲಿ ಕೃಷ್ಣ ಯೋಚಿಸಿಕೊಂಡು [illegible]ದನು

"ಯಾವಾಗ ಹೋಗೋದು?"

ವಿಶ್ವೇಶ್ವರಯ್ಯನವರು ಹೇಳಿದರು:

"ಮುಹೂರ್ತ ನೋಡಿಲ್ಲ ಕೃಷ್ಣ"

"ನಾಡಿದ್ದು ಮುಹೂರ್ತ ಚೆನ್ನಾಗಿದೆಯಲ್ಲ?"

ಒಳಗಿನಿಂದ ತಾಯಿ ಬಂದು ಹೇಳಿದರು

"ನಾಡಿದ್ದೇ ಹೊರಟರೆ ಸರಿ" ವಿಶ್ವೇಶ್ವರಯ್ಯ ಹೇಳಿದರು

"ನಾಳೆ ಒಂದೇ ದಿವಸ ಉಳಿಯಿತು" ಕೃಷ್ಣ ಯೋಚಿಸುತ್ತ ಹೇಳಿದನು

ತಾವಿಬ್ಬರೂ ಹೋಗುವುದರಿಂದ ಕೃಷ್ಣನಿಗೆ ತೊಂದರೆ ಆಗುತ್ತೆಂದು ಯೋಚಿಸಿ ಅವನ ತಾಯಿ ಹೇಳಿದರು:

"ನೀವೊಬ್ಬರೇ ಹೋಗಿಬನ್ನಿ ಮನೇಲಿ ಕೃಷ್ಣ ಒಬ್ಬನ್ನೇ ಬಿಟ್ಟು ಹೋಗೋದು ಸರಿಯಲ್ಲ ಎರಡು ತಿಂಗಳು ಅವನು [illegible] ಊಟ ಮಾಡ್ಕೋದು [illegible]ದ ಸಾಧ್ಯವಿಲ್ಲ"

ತಮ್ಮ ಜೊತೆಗೆ ಹೆಂಡತಿ ಬಾರದಿದ್ದರೆ ತಾವು ಕೈಕೊಂಡ ಯಾತ್ರೆ ಪುಣ್ಯ ಬರಲಾರದೆಂದು ವಿಶ್ವೇಶ್ವರಯ್ಯ ಹೇಳಿದರು!

"ನೀನು ಯಾತ್ರೆಗೆ ಬಾರದಿದ್ದರೆ ನಾನು ಹೋಗಿ ಏನು ಉಪಯೋಗ? ಕೃಷ್ಣ ಹೇಗೂ ಸುಧಾರಿಸ್ತಾನು."

"ಅವನ ಒಬ್ಬನ್ನೇ ಬಿಡೋದು ಸರಿಯೇ?"

ತನ್ನ ಕಷ್ಟ ಬೇಸರದ ಯೋಚನೆ ಬಿಟ್ಟು ತಂದೆ. ತಾಯಿಗಳನ್ನು ಯಾತ್ರೆಗೆ ಕಳಿಸಲು ನಿಶ್ಚಯಿಸಿದ ಕೃಷ್ಣ ಹೇಳಿದನು:

"ನಾನೇ ಮಾಡ್ಕೋತೀನಿ ಅಡಿಗೇನಾ"

ಅಡಿಗೆ ವಿಷಯ ಬಗೆಹರಿದಿದ್ದುದು ನೋಡಿ ವಿಶ್ವೇಶ್ವರಯ್ಯ ಹೇಳಿದರು:

"ನಿನಗೆ ಬೇಸರವಾದರೆ ನಾವು ಬರೋವರೆಗೂ ಪಟ್ಟಾಭಿ ಮನೆಯಲ್ಲೇ ಊಟ ಮಾಡು ಅವರಿಗೇನಾದರೂ ಕೊಟ್ಟರೆ ಸರಿ"

"ಅವೆಲ್ಲಾ ನಮ್ಮ ಮಗನಿಗೆ ಸರಿಯಾಗೋಲ್ಲ. ಹಾಗೆ ವಿನಾಕಾರಣ ಅವನು ಇನ್ನೊಬ್ಬರ ಮನೆಗೆ ಹೋಗಿ ಊಟ ಮಾಡೋನೇ ಅಲ್ಲ" ಕೃಷ್ಣನ ತಾಯಿಗೆ ಮಗ ಇನ್ನೊಬ್ಬರ ಮನೆಯಲ್ಲಿ ಊಟ ಮಾಡುವುದು ಬೇಡವೆನ್ನಿಸಿತು. ಆದ್ದರಿಂದ ಆ ಮಾತು ಹೇಳಿದರು.

"ಊಟದ ಚಿಂತೆ ನನಗೆ ಸೇರಿದ್ದು. ಅದರ ಯೋಚನೆ ನಿಮಗೆ ಬೇಡ" ಎಂದನು ಕೃಷ್ಣ.

ತಾಯಿಗೆ ಮಾತ್ರ ಮಗನೊಬ್ಬನನ್ನೇ ಮನೆಯಲ್ಲಿ ಬಿಟ್ಟು ಹೋಗಲು ಬೇಸರವಾಗಿತ್ತು. ಯಾತ್ರೆಗೆ ಹೋಗುವಾಗ ಸ್ವಾಭಾವಿಕವಾಗಿ ಆಗುವ ಸಂತೋಷ ಇರಲಿಲ್ಲ

ಒಂದೆರಡು ಬಾರಿ ಗಂಡನ ಹತ್ತಿರ ಹೇಳಿದ್ದರು. 'ಕೃಷ್ಣನಿಗೆ ಬೇಗ ಮದುವೆ ಮಾಡಿಬಿಡಬೇಕು, ಆಗ ನಮಗೆ ಈ ತಾಪತ್ರಯವೇ ಇರುವುದಿಲ್ಲ.'

"ಈಗೇನು ಅವಸರ"?

[illegible] ಇಲ್ಲ

ಮಾರನೆಯ ದಿವಸ ತಂದೆ ತಾಯಿಗಳನ್ನು ಯಾತ್ರೆಗೆ ಕಳಿಸಲು ಯಾರಿಗೆ ವರೆಗೆ ಅವರ ಜೊತೆಗೆ ಹೋತ್ತು ಕೃಷ್ಣ ಹೋಗಿ ಅವರನ್ನು ಬಸ್ಸು ಹತ್ತಿಸಿದ್ದ,

ತಂದೆ ತಾಯಿಗಳನ್ನು ಯಾತ್ರೆಗೆ ಕಳಿಸಿ ಬೇಸರ ಪಟ್ಟು ಕೃಷ್ಣ ಒಬ್ಬನೇ ಹಿಂತಿರುಗಿ [illegible] ಗದ್ದೆಯಲ್ಲಿ ನಡೆಯುತ್ತಿದ್ದನು

"ನಮಸ್ಕಾರ" ಹಿಂದಿನಿಂದ ಪುಸ್ತಕಗಳ [illegible] ಹಿಡಿದು ಬರುತ್ತಿರುವ ಶ್ರೀನಿವಾಸ ಹೇಳಿದ.

ಬೇಸರದಲ್ಲಿ ಗೆಳೆಯನ ಕೂಗು ಕೇಳಿ ಕೃಷ್ಣನಿಗೆ ಸಂತೋಷವಾಗಿ ಹಿಂತಿರುಗಿ ನೋಡಿದನು. ಶ್ರೀನಿವಾಸನ ಕೈಯಲ್ಲಿ "ಪಾರ್ವತಿ" ಸುಂದರ ಮುಖಚಿತ್ರದ ಹೊಸ ಕಾದಂಬರಿ ಇತ್ತು. ಬೇಸರದ ಮುಖ ಎಂದು ಕೃಷ್ಣನನ್ನು ನೋಡಿದ ಕೂಡಲೇ ಶ್ರೀನಿವಾಸನಿಗೆ ತಿಳಿಯಿತು:

ತಂದೆ ತಾಯಿಗಳನ್ನು ಅಗಲಿದ ಕೃಷ್ಣನ ಮುಖದ ಬೇಸರ ಶ್ರೀನಿವಾಸನಿಗೆ ಗೊತ್ತಾಯಿತು. ತಕ್ಷಣ ತನ್ನ ಕೈಲಿದ್ದ ಪುಸ್ತಕದಲ್ಲಿ ಒಂದನ್ನು ಕೃಷ್ಣನಿಗೆ ಕೊಟ್ಟು ಶ್ರೀನಿವಾಸ ಹೇಳಿದ:

"ನೋಡೋ ಕೃಷ್ಣ 'ಪಾರ್ವತಿ' ಕಾದಂಬರಿ ಇಷ್ಟೊಂದು ಬೇಗ ಅಚ್ಚಾಗುತ್ತೆ ಅಂದುಕೊಂಡಿರಲ್ಲ. ಎಷ್ಟೊಂದು ಚೆನ್ನಾಗಿ ಬಂದಿದೆ ನೋಡು"

"ಎಷ್ಟು ಬಂತೋ! ನಿನ್ನ ಕಥೆಯಿಂದ."

"ಒಂದು ಸಾವಿರ"

"ಎಷ್ಟು ಪ್ರತಿ ಅಚ್ಚು ಹಾಕಿಸಿದರು!"

"ಐದು ಸಾವಿರ."

"ಪತ್ರಿಕೆಗಳಿಗೆಲ್ಲಾ ಹೋದ ಹಾರಿಯಂತೆ ನೀನೆ ಕಳಿಸಬೇಕೇನು?"

"ಇಲ್ಲ ಎಲ್ಲಾ ಪ್ರಕಾಶಕರದ್ದೇ."

"ಈಗ ನೀನು ಹಿರಿಯ ಸಾಹಿತಿಗಳ ಪಟ್ಟಿಗೆ ಬರಿದೆ ಶ್ರೀನಿವಾಸ್"

"ಇನ್ನೂ ಇಲ್ಲ."

"ಅದೇನೋ ಸರಿ ಆದರೂ ನನಗೆ ಹೆದರಿಕೆ ಶ್ರೀನಿವಾಸ್"

ಸ್ವಲ್ಪ ಹೊತ್ತು ಸುಮ್ಮನೇ ಇದ್ದ ಶ್ರೀನಿವಾಸ್ ಕೃಷ್ಣನೊಡನೆ ಕಾರಂಗದಿ ತಗ್ಗು ಇಳಿಯುತ್ತಾ ಹೇಳಿದನು:

"ಹೋಗಲಿ ಮಲಗೋಕೆ ಬರ್ತೀನಿ ನಾನು."

"ನಿನಗೆ ತೊಂದರೆ ಆಗೋದಾದರೆ ಬೇಡ"

"ಹಾಗೇನಿಲ್ಲ. ಮನೇಲಿ ಗಲಾಟೆ ಹುಡುಗರದ್ದು. ಇಲ್ಲಿ ಬಂದರೆ ಹೊಸದು ಏನಾದರೂ ಬರಿಯಲಿಕ್ಕೆ ಸಹಾಯವಾಗುತ್ತೆ."

ಮಾತಿನ ಹಿಂದೆ ಆಸೆಯ ಮಾತುಗಳು ಮಮತೆಯ ಬೆಳಕು ಅವನ ಕಣ್ಣುಗಳಲ್ಲಿ ಮೂಡಿ ಬಂತು. ಅದನ್ನು ತಿಳಿದ ಕೃಷ್ಣ ಹೇಳಿದನು:

"ನಾನೇ ನಿನ್ನ ಕರೆಯಬೇಕೆಂದಿದ್ದೆ".

ಕೃಷ್ಣ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದ್ದ.

"ನಿಮ್ಮ ತಂದೆ-ತಾಯಿಗಳು ನನಗೆ ಹೇಳಿದ್ದ್ರಾಗೇನೇ."

ಕಾಶಿ ಯಾತ್ರೆಗೆ ಹೋದ ನಿರ್ಜೆ ಅಪ್ಪನಲ್ಲಿ ತನಗೆ ಗೊತ್ತಾದದನ್ನಾ ಆದರ ಜೊತೆಗೆ ಹೇಳಿದನು.

"ಎಷ್ಟು ದಿವಸಗಳು ಬೇಕಾಗಬಹುದು ನಿಮ್ಮ ತಂದೆ ತಾಯಿಗಳು ಕಾಶೀಯಾತ್ರೆ ಮುಗಿಸಿ ಬರುವುದಕ್ಕೆ ಕೃಷ್ಣಾ?"

"ಎರಡು ತಿಂಗಳಾಗಬಹುದು ಶ್ರೀನಿವಾಸ್" ದೇವಸ್ಥಾನ ನೋಡುತ್ತಾ ಹೇಳಿದನು

ಶ್ರೀನಿವಾಸನನ್ನು ಅಗಲಿ ಕೃಷ್ಣ ತನ್ನ ಮನೆಗೆ ಹೋದನು ಬೀಗತೆಗೆದು ಬೇಸರದಿಂದ ಬಣ ಗುಟ್ಟುತ್ತಿದ್ದ ಮನೆಯಲೆಲ್ಲಾ ಸುತ್ತಾಡಿ ಬಂದನು.

ಘಟ್ಟದ ಆಳು ಶೇಷು ಬಾಗಿಲಲ್ಲಿ ನಿಂತು ಪಡಿ ಅಕ್ಕಿ ಕೇಳಿದನು ಜೊತೆಗೆ ದಿವ ಕೇಳುತ್ತಿದ್ದ ಮಾತು:

"ಒಡೆಯಾ ನಾಳೇನೂ ಕೆಲಸಕ್ಕೆ ಬರಬೇಕಾ?"

ಕೃಷ್ಣ ಅವನಿಗೆ ಕೊಡುವ ಪಡಿ ಅಕ್ಕಿ ಕೊಡುತ್ತಾ ಹೇಳಿದನು:

"ಇನ್ನು ಹದಿನೈದು ದಿವಸ ತಪ್ಪದೇ ಅಡಿಕೆ ಸುಲಿ ನಡಕೇಬೇಕು ಶೇಷು."

"ಬರ್ತೀನಿ ಒಡೆಯ ಆದರೂ ಕೇಳೋದು ನನ್ನ ಅಭ್ಯಾಸ ಅವಧಿಗಿಂತಲೂ ಮೊದಲೇ ಕೆಲಸ ಪೂರೈಸಿ ಬಿಡೋಣ ನೀವು ಜೊತೆಗೆ ಇದ್ದರೆ. ಪಕ್ಕದ ತೋಟಾನೇ ಕಿತ್ತು ತಂದು ನಿಮ್ಮ ತೋಟದಲ್ಲಿ ನಟ್ಟೇನು.

ಅವನ ವಾತ್ಸಲ್ಯ ಕಂಡು, ಅವನು ತನ್ನ ಮೇಲೆ ಇಟ್ಟ ಭಕ್ತಿ ಕಂಡು ಕೃಷ್ಣ ಹೇಳಿದನು:

"ಶೇಷು ನೀನು ನನ್ನ ಜೊತೆರೆ ಕೆಲಸ ಮಾಡು ತ್ತೀಯಾ ಸರಿ, ನಿನ್ನಂತವರೇ. ಐವರು ನನಗೆ ಸಿಕ್ಕರೆ, ಸ್ಕೂಲ್ ಮನೆ ಹೋಗ ಅಡಿಕೆ ತೋಟ ಮಾಡಿಯೇನು?"

ಅವರ ಮಾತಿನ ನಡುವೆ ಪ್ರವೇಶಿಸಿದವನು ಪಟ್ಟಾಭಿ ಅವನು ಹೇಳಿದನು:

"ಮೊದಲು ದರಖಾಸ್ತಿನಲ್ಲಿ ನಿನ್ನ ಹೆಸರಿಗೆ ಮಾಡ್ಕೋ ಕೃಷ್ಣ."

"ಜನ ತರೋ ಭಾರ ನನಗೆ ಇರ್ಲಿ ಒಡೆಯ" ಶೇಷು ಆಸೆಯಿಂದ ಹೇಳಿದನು.

"ಅಪ್ಲಿಕೇಶನ್ ಕೊಟ್ಟಿದ್ದೀನಿ, ಅಮಲ್ದಾರರು ನಾಡಿದ್ದು ಜಾಗಾ ನೋಡೋಕೆ ಬರ್ತಾರೆ ಆಗ ಊರಿನವರು ಯಾರೂ ತಂಟೆ ಮಾಡದಿದ್ದರೆ ನನಗೆ ಆಗುತ್ತಾ ಪಟ್ಟಾಭಿ"

ಪಡಿಯಕ್ಕಿಯ ಜೊತೆಗೆ ಎಲೆ ಅಡಿಕೆ ತೆಗೆದು ಕೊಂಡು ಶೇಷ ಬಿಡಾರಕ್ಕೆ ಹೋದನು

ಕೃಷ್ಣನಿಗೆ ಪಟ್ಟಾಭಿ ಕೊಟ್ಟ ಸಲಹೆ ಹೀಗಿತ್ತು:

"ಅಮಲ್ದಾರರನ್ನು ನೋಡೋಕ ಮೊದಲು ಈ ಹೊಬ್ಳಿ ಶೇಕದಾರರನ್ನು ನೋಡಿ ವಿಷಯ ತಿಳಿಸು ಜಮೀನು ನಿನ್ನ ಹೆಸರಿಗೆ ಆಗದಿದ್ದರೆ ಆಗ ನೋಡು."

ಅವನು ಹೇಳಿದ ಮಾತು ಸತ್ಯವಾಗಿತ್ತು ಶೇಕದಾರರು ಹೊಗಳಿಕೆ ಮಾತು ಬಂದರೆ ಎಂತಹ ಕೆಲಸವನ್ನಾದರೂ ಮಾಡುತ್ತಿದ್ದರು ಊರಿನ ತರಲೆ ಅರ್ಜಿಗಳು ಅಮಲ್ದಾರರ ಕಣ್ಣಿಗೆ ಬೀಳದಂತೆ ಮಾಡುತ್ತಿದ್ದುದು ಶೇಕದಾರರಿಗೆ ಮಾಮೂಲು ಆಗಿತ್ತು.

ಕೃಷ್ಣ ಹೇಳಿದನು:

"ಅದು ಸರಿ ಪಟ್ಟಾಭಿ ಈ ಊರಿನ ಶೇಕದಾರರು ಯಾರು?"

"ಜೋಸೆಫ್."

"ಅವರಿಗೆ ಹೇಗೆ ಹೊಗಳೋದು?"

ಪಟ್ಟಾಭಿ ಸ್ವಲ್ಪ ಹೊತ್ತು ಯೋಚಿಸಿ ಹೇಳಿದನು:

"ನಾಳೆ ನಾನು ಅವರನ್ನು ಇಲ್ಲಿಗೆ ಕರೆತಂದು ಬರ್ತೀನಿ. ನೀನು ಯಥೇಚ್ಛವಾಗಿ ಸಿಹಿ ಊಟ ಹಾಕಿ ಹೊಗಳು ಮಾರಾಯಾ ಆಗ ನೋಡು ಹೇಗಿರುತ್ತೆ."

"ಅವರಿಗೆ ನಮ್ಮ ಊಟ ಹಿಡಿಸುತ್ತೇನೋ?"

"ಅವರಿಗೆ ಅದೇ ಬೇಕಾದದ್ದು ಕೃಷ್ಣ"

"ಕೊನೆಗೆ ಆ ಕೆಲಸ ಮಾಡಿ ಕೊಡದಿದ್ದರೆ ಹೇಗೆ ಪಟ್ಟಾಭಿ?"

"ಅವರು ಒಪ್ಪಿಕೊಂಡ ಮೇಲೆ ಆ ಜಾಗ ನಿನ್ನ ಹೆಸರಿಗೆ ಆಯಿತೆಂದು ತಿಳಿದುಕೋ ಕೃಷ್ಣ"

"ಹಾಗಾದರೆ ನೀನೂ ಸ್ವಲ್ಪ ಹೇಳು ಮಾರಾಯ ನಿನ್ನಿಂದಲೇ ಈ ಜಮೀನು ನನಗೆ ಸಿಗಬೇಕು ಪಟ್ಟಾಭಿ"

"ಆಗಲಿ ಕೃಷ್ಣಾ"

ಪಟ್ಟಾಭಿ ಕೃಷ್ಣನಿಗೆ ಹೇಳಿ ಹೊರಟು ಹೋದ. ಕೃಷ್ಣ ಒಲೆಯ ಮೇಲೆ ಅನ್ನಕ್ಕೆ ಇಟ್ಟ. ಹಾಗೆ ಬೇಕಾದ ಅಡಿಗೆ ಸಾಹಿತ್ಯಕ್ಕಾಗಿ ಅಮ್ಮ ಇಟ್ಟ ಹತ್ತು ಹದಿನೈದು ಡಪ್ಪ ಡಬ್ಬಗಳನ್ನು ಹುಡುಕಿದ ಅವನಿಗೆ ಬೇಕಾದ ಸಾಮಾನುಗಳು ಸಿಗದೇ ಬಹಳ ಬೇಸರ, ಜೊತೆಗೆ ಸಿಟ್ಟೂ ಬಂತು.

ಹೀಗೆ ವಿನೋದವಾಗಿದ್ದರೆ ಆ ಅಡಿಗೆಯ ರುಚಿಗೆ ಖಾರವೇ ಬೇಕಾಗಿರುತ್ತಿರಲಿಲ್ಲ.

ಕೃಷ್ಣ ಹಾಗೆಯೇ ಅಡಿಗೆ ಮಾಡಿಕೊಳ್ಳುತ್ತಿದ್ದಾಗ ವಿನೋದಗಳನ್ನು ನೆನಸಿಕೊಂಡ ಅರಿವಿಲ್ಲದೆಯೇ.

"ಕೃಷ್ಣ, ಏ ಕೃಷ್ಣ."

ಅಂಗಳದಲ್ಲಿ ನಿಂತು ಕಣಿವೆ ಬಾಗಿಲು ಶೇಷಭಟ್ಟ ಕೂಗುತ್ತಿದ್ದ. ಆತ ಕೃಷ್ಣನ ಪ್ರಾಥಮಿಕ ಶಾಲೆಯ ಶಾಲೆಯ ಸಹಪಾಠಿ.

ಗೆಳೆಯನ ಕೂಗು ಕೃಷ್ಣನಿಗೆ ಕೇಳಿಸಲಿಲ್ಲ. ಕಾರಣ ಅವನು ಅಡಿಗೆ ಸಾಹಿತ್ಯ ಹುಡುಕುತ್ತಿದ್ದಾಗ ಡಬ್ಬಿಗಳು ಒಂದಕ್ಕೊಂದು ತಾಗಿ ಶಬ್ದವಾಗುತ್ತಿದ್ದವು.

ಭದ್ರಾವತಿಯಲ್ಲಿ ಇಂಜನಿಯರಾಗಿ ಕೆಲಸ ಮಾಡುತ್ತಿದ್ದ ಶೇಷಭಟ್ಟ ಊರಿಗೆ ಹಿಂದಿನ ದಿನ ಬಂದಿದ್ದ. ತನ್ನ ಗೆಳೆಯರೆಲ್ಲರ ಭೇಟಿಗಾಗಿ ಹೊರಟ ಅವನು ಕೃಷ್ಣನನ್ನು ಮೊದಲು ಹುಡುಕಿಕೊಂಡು ಬಂದಿದ್ದ.

"ಕೃಷ್ಣ ಏ ಕೃಷ್ಣ"

ಶೇಷಭಟ್ಟನ ಕೂಗು ಕೇಳಿ ಕೃಷ್ಣ ಒಂದೇ ಉಸಿರಿಗೆ ಅಡಿಗೆ ಮನೆಯಿಂದ ಅಂಗಳಕ್ಕೆ ಓಡಿಬಂದ.

"ಬಾರೋ ಶೇಷ. ಬಹಳ ಅಪರೂಪ."

ಶ್ರೀನಿವಾಸನ ನಿರೀಕ್ಷೆ ಅವನು ಮಾಡುತ್ತಿದ್ದ. ಅವನ ಜೊತೆಗೆ ಇದ್ದಿದ್ದರೆ ಸಾಹಿತ್ಯ ವಿಷಯದಲ್ಲಿ ಸ್ವಲ್ಪ ಮಾತನಾಡಬಹುದಿತ್ತು. ಏಕಾಂತ ಇಲ್ಲದೇ ಬೇಸರ ಬರುತ್ತಿರಲಿಲ್ಲವೇನೋ? ಆದರೆ ತಾನು ನಿರೀಕ್ಷೆ ಮಾಡದೇ ಇದ್ದ ಗೆಳೆಯನ ಆಗಮನ ಕಂಡು ಕೃಷ್ಣ ಸಂತೋಷದಿಂದ ಉಬ್ಬಿ ಹೇಳಿದ.

ಕೃಷ್ಣನ ಕೈ ಮುಖ, ಮಸಿಯಾದದ್ದು ಶೇಷಭಟ್ಟ ನೋಡಿದ.

ಆದರಿಂದಲೇ ಅವನು ತಿಳಿದ. ಗೆಳೆಯನಿಗೆ ಅಡಿಗೆ ಕೆಲಸಬಿದ್ದಿದೆ ಎಂದು. ಅಂಗಳದಿಂದ ಛಾವಡಿಗೆ ಮೆಟ್ಟಲುಗಳ ಮೇಲೆ ಅವನು ಹತ್ತಿ ಬಂದು ಹೇಳಿದ

"ತಂದೆ—ತಾಯಿ ಊರಲ್ಲಿ ಇಲ್ಲವೇನೋ ಕೃಷ್ಣ"?

"ಇಲ್ಲ ಇವತ್ತು ಅವರು ಕಾಶೀಯಾತ್ರೆಗೆ ಹೋದರು ಶೇಷು. ಯಾವಾಗ ಬಂದೆ ಭದ್ರಾವತಿಯಿಂದ?"

"ನಿನ್ನೆ ಬಂದೆ."

"ಹೇಗಿದೆಯೊ ನಿನ್ನ ಇಂಜನಿಯರಿಂಗ್ ವರ್ಕ್ಸ್?"

"ಫ್ಯಾಕ್ಟರಿ ಲೈಫ್—ತುಂಬ ಸುಸ್ತು."

"ಯಾಕೋ ಕೈತುಂಬಾ ಸಂಬಳ ಬರುತ್ತಿಲ್ವೋ?"

"ಸಂಬಳಾನೂ ಸಾಕು, ನಿಗದಿಯಾದ ಕಾರ್ಖಾನೆಯಲ್ಲಿ ದುಡಿಯೋದೂ ಸಾಕು."

"ಅದೇ ಸುಖ ಅಲ್ಲವೇನೊ ಶೇಷು?"

"ನೋಡು ಕೃಷ್ಣಾ ಈ ಕಡೆಯಿಂದ ಯಾರಾದರೂ ನೆಂಟರು ಅಥವಾ ಗೆಳೆಯರು ಬರುತ್ತಿರುತ್ತಾರೆ; ಅವರ ಜೊತೆರೆ ಪೇಟೆಗೆ ಹೋಗಿ ಬರೋಣ. ಫ್ಯಾಕ್ಟರಿ ತೋರಿಸೋಣ ಅಂದರೆ ನಮಗೆ ಏನೇನೂ ಸ್ವಾತಂತ್ರ್ಯ ಇಲ್ಲ. ಆದ ಡ್ಯೂಟಿಯಲ್ಲಿರೋದಾಗುತ್ತೆ."

"ಹಾಗಾದರೆ ಸುಖವಿಲ್ಲಾ ಅನ್ನು."

"ಇಲ್ಲವೇ ಇಲ್ಲ. ರಜಾ ಅಂತೂ ಬಹಳ ಕಮ್ಮಿ. ಕೊನ್ನೆ ನನ್ನ ಆಪ್ತ ಗೆಳೆಯನ ಮದುವೆ ಶಿವಮೊಗ್ಗದಲ್ಲಿ ಆಯಿತು, ಆವನು ಬಹಳ ಒತ್ತಾಯಿಸಿ ಮದುವೆಗೆ ಕರೆದಿದ್ದ. ನಾನು ಹೋಗಲೇ ಬೇಕಾದ ಸ್ಥಳ. ಆದರೆ ರಜಾ ಸಿಗಲಿಲ್ಲ. ಆದರಿಂದ ಅವನಿಗೆ ಬೇಸರ."

"ಒಂದು ಲೆಖ್ಖದಲ್ಲಿ ನೀನು ವಿದ್ಯಾಭ್ಯಾಸಕ್ಕೆ ಹಾಕೋ ಹಣಾನೇ, ನಿಮ್ಮ ಮೂಲ ಗೇಣಿ ತೋಟ ನೆಲ್ಲುಂಡೆಲಿದ್ದದ್ದಕ್ಕೆ ಹಾಕಿದ್ದರೆ ಈಗ ಒಳ್ಳೇ ಫಸಲು ತೆಗೆದು ಸುಖವಾಗಿರಬಹುದಿತ್ತೋ ಏನೋ?"

"ಹೌದು ಕೃಷ್ಣ. ನಿನ್ನ ಕೆಲಸದ ಮುಂದೆ ನಮ್ಮ ಕೆಲಸ ಮಹಾದ್ದೇನೂ ಅಲ್ಲ. ನಿನ್ನ ಸ್ವತಂತ್ರದ ಕೆಲವೇ ಭಾಗ ಸ್ವತಂತ್ರವೂ ನಮಗೆ ಇಲ್ಲ. ಅಲ್ಲದೇ ತಿಂಗಳು ಸಂಬಳಾ ಬರೋ ಹೊತ್ತಿಗೆ ಹಣಕ್ಕಾಗಿ ಪೇಚಾಡ್ತಾ ಇರ್ತೀವಿ."

## ನಿನ್ನೆ-ಇಂದು



ನಿನ್ನೆ ಸಿಂಡಿಕೇಟು–ಇಂದು ಇಂಡಿಕೇಟು
ಹಳೆಯ ಬಟ್ಟೆಯು ತೆಗೆದು ಬದಲಿಸಿದ ಕೋಟು
ಉಪಮಂತ್ರಿ ಅಲ್ಲಿದ್ದ ಇಲ್ಲಾದ ಮಂತ್ರಿ
ಹೊರಟಿತು ಮೆರವಣಿಗೆ ಬಾಜಾಬಜಂತ್ರಿ

— ಎಂ. ಗೋವಿಂದ

"ಕೈ ತುಂಬಾ ಸಂಬಳ ಬರುತ್ತಲ್ವೋ. ಒಂದನೇ ತಾರೀಖು ದೇವರಿಗೆ ದೀಪ ಇಲ್ಲದೇ ಹೋದರೂ, ನಿಮ್ಮ ಸಂಬಳ ಮಾತ್ರ ತಪ್ಪೋದಿಲ್ಲವಲ್ಲಾ, ಶೇಷು?"

"ಹೌದು ಕೃಷ್ಣ, ಆದರೆ ಪ್ರತೀ ತಿಂಗಳೂ ಒಂದಲ್ಲಾ-ಒಂದು ಗಂಡಾಂತರ ಬಂದು. ಸಾಲ ಹೆಚ್ಚಾಗಿರುತ್ತೆ. ಅಂತೂ ಒಂದು ತಿಂಗಳ ಹಣ ಮಾತ್ರ ಮೂರನೇ ತಾರೀಖಿನೊಳಗೆ ಮುಗಿದೇಹೋಗಿರುತ್ತದೆ"

"ಅಂತಹದೇನು ಮಹಾ ಖರ್ಚು ಈಗ ನಿನಗೆ?"

"ಪಟ್ಟಣದ ಜೀವನ ಏನೇನು ಗೊತ್ತು? ಸಮುತ್ಸರ ಸಮಾರಂಭಗಳು, ನಾನು ಹೋಂಟಿಕ್ಕ ಕಾರ್ಖಾನೆ, ವರಾಹ, ಅಖಿಲ ಕರ್ನಾಟಕ ನಾಟಕ ಸಭೆ ಮುಂತಾದವುಗಳು. ಪಟ್ಟಣೇ ಕಾಲು ಸಂಬಳ ತಿಂದು ಬಿಡುತ್ತೆ. ಇನ್ನು ನೆಂಟರು, ಒರ್ಗೋಣ, ಹೋಗೋರು ಗೆಳೆಯರ ಆಗಮನ ಇತ್ಯಾದಿಗೆ ಅಂತೂ ಒಂದೊಂದು ತಿಂಗಳು ಸುಧಾರಿಸೋದು ಮಹಾ ಕಷ್ಟವಾಗುತ್ತೆ ಕೃಷ್ಣ."

"ಸರಕಾರಿ ನೌಕರೀವೇ ಅಷ್ಟು ಶೇಷು."

ಸರಕಾರಿ ನೌಕರಿಯಿಂದ ಶೇಷಭಟ್ಟ ಸಂಬಳ ಸಾಕಾಗದೇ ರಜಾ ಸಿಕ್ಕದೇ ಬಳಲಿದ್ದಾನೆ ಎಂದು ಕೃಷ್ಣನಿಗೆ ಗೊತ್ತಾಯಿತು. ಆದರೆ ಅದನ್ನು ತೋರಿಸಿಕೊಳ್ಳದೇ ಅನುತಾಪ ತೋರುತ್ತಾ ಹೇಳಿದ.

"ಕಷ್ಟ ಇದ್ರೆ ಬರೀ ಶೇಷ: ಹಣ ಕಳಿಸುತ್ತೇನೆ."

ಶೇಷಭಟ್ಟರ ಅಣ್ಣಂದಿರು ತುಂಬಾ ಬಡವರು. ಇದ್ದ ಅರ್ಧ ಎಕರೆ ಅಡಿಕೆ ತೋಟ ಸ್ವಂತದ್ದಲ್ಲವಾದರೂ ಮೂಲ ಗೇಣಿದೇ. ಇರೋ ನಾಲ್ಕೂ ಸಹೋದರರು ಅದರಲ್ಲೇ ಪಾಲಾಗಿ ಉಪ ಕಸುಬು ಮಾಡಿ ಕಷ್ಟದಿಂದ ಕಣಿವೆಬಾಗಿಲಿನಲ್ಲಿ ಜೀವನ ಸಾಗಿಸುತ್ತಿದ್ದರು ಅವರಿಗೆ ನೇ ಶೇಷಭಟ್ಟರು ಸಹಾಯ ಮಾಡಬೇಕಿತ್ತು ಆದ್ದರಿಂದ ಕೃಷ್ಣ ಹೃದಯ ತುಂಬಿ ಆ ಮಾತು ಹೇಳಿದ.

ಅವನಿಗೆ ಆ ತಿಂಗಳೂ ಸೊಸೈಟಿಯ ಸಾಲ ತೀರಿಸಲು ಹಣ ಕಮ್ಮಿಯಾಗಿ ಅದನ್ನು ಕೇಳಲು ಅಲ್ಲಿಗೆ ಬಂದಿದ್ದ. ಗೆಳೆಯನೆದುರು ಸಂಕೋಚವಾಗಿ ಸುಮ್ಮನಾಗಿದ್ದ. ಗೆಳೆಯನೇ ಕೇಳಿದ್ದರಿಂದ ಧೈರ್ಯ ತಂದುಕೊಂಡು ಕೇಳಿದ.

"ನೂರು ರೂಪಾಯಿ ಇದರೆ ಕೊಟ್ಟಿರು. ಬೋನಸ್ ಬಂದಕೂಡ್ಲೇ ಕಳಿಸುತ್ತೇನೆ."

ಹಣದ ತೊಂದರೆ ಗೆಳೆಯನಿಗೆ ಹೆಚ್ಚಾಗಿದ್ದುದರಿಂದಲೇ, ಸಹಿಸಲಾರದೆ ಬಾಯಿಬಿಟ್ಟು ಕೇಳಿದ್ದಾನೆ. ಹೇಗಿದ್ದರೂ ಸಿಕ್ಕಿದ ಕೂಡಲೆ ತಂದು ಕೊಡುತ್ತಾನೆ, ಕೃಷ್ಣ ಕೋಣೆಗೆ ಹೋಗಿ ಹಣತಂದು ಕೊಟ್ಟನು.

ಹಣವನ್ನು ತೆಗೆದುಕೊಂಡು ಶೇಷಭಟ್ಟನು ಕಣಿವೆ ಬಾಗಿಲಿಗೆ ಹೊರಡಲು ಎದ್ದ.

ಕೃಷ್ಣ ಅದನ್ನು ನೋಡಿ ಹೇಳಿದ:

"ಕಾಫಿಗೆ ಇಟ್ಟಿದ್ದೇನೆ, ಈಗ ಮಾಡಿಕೊಡುತ್ತೇನೆ ಕುಡಿದು ಹೋಗು ಶೇಷ."

"ಬೇಡ," ಎಂದು ಶೇಷಭಟ್ಟ ಹೇಳಿದರೂ ಗೆಳೆಯನ ಮಾತು ಕೇಳಲಾರದೆ, ಗೆಳೆಯನೊಡನೆ ಅಡಿಗೆ ಮನೆಗೆ ಹೋದ.

ಅಲ್ಲಿ ಅವನು ಒಲೆಗೆ ಬೆಂಕಿ ಒಟ್ಟಿದ್ದು ಆವನ ಹಿಂದೆಯೇ ಆರಿಹೋಗಿತ್ತು. ಪುನಃ ಸೀಮೆ ಎಣ್ಣೆ ಸುರಿದು, ಕಾಳೆಹಾಕಿ, ಬೆಂಕಿ ಉರಿಮಾಡಿದ. ಒಲೆ ಮೇಲೆ ನೀರಿಟ್ಟ. ನೀರು ಕುದಿಬಂದ ಮೇಲೆ ಕಾಫಿ ಹುಡಿಹಾಕಿ ಇಳಿಸಿದ. ಇಳಿಸುವಾಗ ಬಟ್ಟೆ ಉಪಯೋಗಿಸದಿದ್ದುದರಿಂದ ಕೈ ಸುಟ್ಟು, ಅರ್ಧ ಬಟ್ಟಲು ಕಾಫಿ ಚೆಲ್ಲಿತ್ತು. ಉಳಿದಿದ್ದಕ್ಕೆ ನೀರು ಬೆರೆಸಿ ಸೋಸಿ ಹನಿಯಲು ಇಟ್ಟ.

ಶೇಷಭಟ್ಟ ಗೆಳೆಯ ಕಷ್ಟಪಟ್ಟು ಮಾಡಿದ ಕಾಫಿ ಕುಡಿಯುತ್ತಾ ಹೇಳಿದನು.

"ಹೊತ್ತಾದರೂ ಕಾಫಿ ರುಚಿ ಕೆಡಲಿಲ್ಲ ಕೃಷ್ಣ. ಇಷ್ಟು ಚೆನ್ನಾಗಿ ಹೇಗಸರೂ ನನ್ನ ಮನೆ ಕಾಫಿ

ಕೋಯು ತಂದು, ಒಲೆಯ ಒಳಗಿದ್ದ ಕೆಂಡದಲ್ಲಿ ಇಟ್ಟ. ಅದು ಸುಡಲಿ ಎಂದು

ಶ್ರೀನಿವಾಸ ಇನ್ನೂ ಮದುವೆಯಾಗಿಲ್ಲ. ಒಂಟಿಯಾಗಿರುವ ಅವನಿಗೆ 'ಪ್ರಣಯ'ದ ಅರಿವು ಕಾಲ್ಪನಿಕ. ಅದರಲ್ಲೇ ಬರುವ ಅವನ ಕಾದಂಬರಿಗಳು ಎಷ್ಟೋಂದು ಪ್ರೇಮದ ಮಾತುಗಳು ಗಂಡು ಹೆಣ್ಣುಗಳ ಒಲವು, ಎಲ್ಲಾ ಬರೆಯುತ್ತಾನೆ. ಮದುವೆಯಾಗಿ ಹೆಂಡತಿ ಒಬ್ಬಳು ಅವನಿಗೆ ಜತೆಯಾದರೆ ಆಗ ಅವನ ಕಾದಂಬರಿ ಇನ್ನೂ ಚೆನ್ನಾಗಿ ಬರಬಹುದು. ಅವನ ತಂದೆ ತಾಯಿಗಳು ಇನ್ನು ಮಾಡದೆ ಯಾಕೆ ಹಾಗೆ ಉಳಿದಿದ್ದಾರೆ

ಕಾದಂಬರಿ ಬರೆಯುತ್ತಿದ್ದ ಶ್ರೀನಿವಾಸನ ಹಿಂಭಾಗದಲ್ಲಿ ಕೃಷ್ಣ ಬಂದು ನಿಂತು ಅವನು ಬರೆಯುತ್ತಿದ್ದ ಕಾದಂಬರಿಯನ್ನು ಓದಿದನು

ತನ್ನದೇ ಹಲವು ರೂಪಗಳಲ್ಲಿ ಕಲ್ಪಿಸಿ, ಅವನ ಕಾದಂಬರಿಯ ಕಥಾವಸ್ತು ಮಾಡಿಕೊಳ್ಳುತ್ತಿರುವ ಬಗ್ಗೆ ಅವನಿಗೆ ಆಶ್ಚರ್ಯವಾಯಿತು

ಕಾದಂಬರಿ ಬರೆಯುತ್ತಿದ್ದ ಶ್ರೀನಿವಾಸ ಕತ್ತೆತ್ತಿ ನೋಡಿದ. ಕೃಷ್ಣ ನಿಂತಿದ್ದ. ಅವನು ಬಂದ ಸದ್ದು ಬರುತ್ತಿತ್ತೋ ಏನೋ ತನ್ನೆದುರು ಗೆಳೆಯ ಇಲ್ಲದಿದ್ದರೂ ಹಿಂಬದಿ ನಿಂತು ತನ್ನ ಲೇಖನ ಓದುತ್ತಿದ್ದಾನಲ್ಲ ಎಂದು ಸಿಗರೇಟ್ ಒಂದನ್ನು ಹಚ್ಚಿ ಕೃಷ್ಣನಿಗೆ ತಾನು ಅದುವರೆಗೂ ಬರೆದಿದ್ದುದನ್ನು ಓದಿ ಹೇಳಿದನು.

ಅನ್ನದ ಪಾತ್ರೆ ಅಡಿಯ ಉರಿಯಿಂದ ನೀರೆಲ್ಲಾ ಹೀರಿದ್ದು ಅನ್ನ ಬೆಂದದ್ದನ್ನು ತೋರಿತು. ಕೃಷ್ಣ ಅನ್ನದ ತಪ್ಪಲೆ ಮೇಲೆ ಒಂದು ತಟ್ಟೆ ಮುಚ್ಚಿದ. ಆಗ ಕೈ ಅಕಸ್ಮಾತ್ ತಪ್ಪಲೆಗೆ ತಾಗಿ ಉರಿಯಿತು. ಕೆಳಗೆ ಇಟ್ಟ ವಸ್ತ್ರದ ಸಹಾಯದಿಂದ ಅನ್ನದ ತಪ್ಪಲೆ ಬೇರೆ ಒಲೆಗೆ ಇಟ್ಟ. ಅದನ್ನು ಬಿಸಿದ ಮುಂದೆ ಒಲೆಯಲ್ಲಿ ಸುಟ್ಟ ಬದನೇಕಾಯಿ ತೊಟ್ಟು. ಸಿಪ್ಪೆ ತೆಗೆದು ನುರಿದ ಹುಳಿ ಉಪ್ಪು ಖಾರ ಹಾಕಿ ಅದರ ನೀರುಗೊಜ್ಜು ಮಾಡಿದ. ಅದರ ಮೇಲೆ ಸೌಟನ್ನು ಉಪಯೋಗಿಸಿಕೊಂಡು ಒಗ್ಗರಣೆ ಕೊಟ್ಟ. ಡಟಿ ಮಾತ್ರ ತಾಯಿಯದು ಆಗಲಾರದೇನೋ? ಬದನೆಕಾಯಿ ಸಾಸಿವೆ ಎಂದು ಅವನು ಅದನು ಮಾಡಿದ ಮೇಲೆ ಯೋಚಿಸಿದ್ದನ

ಶ್ರೀನಿವಾಸನಿಗೆ ಹೊಟ್ಟೆಯಲ್ಲಿ ಹಸಿವು ಕಾಣಿಸಿಕೊಂಡದ್ದರಿಂದ ಬರೆಯುವುದನ್ನು ನಿಲ್ಲಿಸಿ ನಾಗೊಂದಿಗೆ ಮೇಲೆ ಜೋಡಿಸಿಟ್ಟ ಹಸಿ ಬಾಳೆ ಎಲೆ ತೆಗೆದು ಎರಡು ಹಾಕಿ ಅವರ ಮುಂದೆ ಕುಳಿತ

ಕೃಷ್ಣ ಶ್ರೀನಿವಾಸ ಎದುರು ಬದುರು ಕೂತರು. ಮಧ್ಯೆ ಅನ್ನ ಸಾಸಿವೆ ಮಜ್ಜಿಗೆ, ಉಪ್ಪು ಇನ್ನೂ ಮುಂತಾದ ಊಟದ ಸಾಹಿತ್ಯದ ಪಾತ್ರೆಗಳನ್ನು ಇಟ್ಟುಕೊಂಡು ಮಾತನಾಡುತ್ತಾ ಅವರೇ ಬಡಿಸಿಕೊಂಡು ಊಟ ಮಾಡಿದರು

"ಬೇಗ ಊಟ ಮುಗಿಸು ಬೆಳದಿಂಗಳು ಚೆನ್ನಾಗಿ ಬಿದ್ದಿದೆ. ನೆಲ್ಲುಂಡೆಗುಡ್ಡ ಹತ್ತಿ ಸ್ವಲ್ಪ ಕುಳಿತು ಹರಟೆ ಹೊಡೆದು ಬರೋಣ."

ಕೃಷ್ಣನಿಗೂ ಅದು ಬೇಕಾಗಿತ್ತು. ಒಲೆ ಮುಂದೆ ಕೂತು ಅಡಿಗೆ ಮಾಡುವಾಗ ಬೆಂಕಿ ಹೊಗೆ ಎರಡೂ ಅವನಿಗೆ ಬೇಸರ ಹುಟ್ಟು ಬರಿಸಿದ್ದವು. ಗುಡ್ಡದ ಮೇಲೆ ತಂಗಾಳಿ ಚೆನ್ನಾಗಿ ಬೀಸುವುದು. ತಾನು ಅಲ್ಲಿ ಕೂತರೆ ಚೆನ್ನಾಗಿ ಮೈ ತಣಗೆ ಮಾಡಿಕೊಳ್ಳಬಹುದು.

ಮಜ್ಜಿಗೆ ಅನ್ನ ಮುಗಿಯುತ್ತಾ ಬಂತು. ಕೃಷ್ಣನಿಗೆ ಬೇಕಿಲ್ಲವೆಂದರೂ ತಾನು ಅರ್ಧ ಗಂಟೆ ಬೇಕು. ಊಟ ಮಾಡಿದ ಮೇಲೆ ಬಾಳೆಎಲೆ ಎತ್ತಿ ಹೊರಗೆ ಬಿಸಾಡಬೇಕು; ಎಂಜಲು ಸಾರಿಸಬೇಕು. ಮುಸುರೆ ಮುಚ್ಚಡಬೇಕು. ಪಾತ್ರೆಗಳು ಸೇರಿಸಬೇಕು, ಮಜ್ಜಿಗೆಗೆ ಹೆಪ್ಪು ಹಾಕಬೇಕು.

ಗೆಳೆಯರಿಬ್ಬರೂ 'ರಾತ್ರಿಯ ಪ್ರಕೃತಿ ಸವಿಯಲು ಹೊರಟರು. ಇವರು ಸ್ವಂತದ ಮನೆ ಹಳ್ಳ ದಾಟುವಾಗ ಎಂಜಲು ಬಾಳೆಎಲೆ ಬಿಸಾಡಿ ವಾಪಸಾಗಿ ಬರುತ್ತಿದ್ದ ಪಾರ್ವತಿ ಎದುರು ಸಿಕ್ಕಿದಳು

"ಹೊಸನಗರಕ್ಕೆ ಸಿನೀಮಾಕ್ಕೆ ಹೊರಟಿರಾ ?"

"ಇಲ್ಲ ಪಾರ್ವತಿ, ನಮ್ಮ ಸಾಹಿತಿಗಳಿಗೆ ಸ್ಫೂರ್ತಿ ಬರೋಕೆ ನೆಲ್ಲುಂಡೆಗುಡ್ಡಕ್ಕೆ ಹೊರಟಿದ್ದೀವಿ."

ಹೇಳಿದ್ದು ಕೃಷ್ಣ.

"ನನಗೇನೋ ಸ್ಫೂರ್ತಿ ನಿಜ ಪಾರ್ವತಿ ನಿಮ್ಮ ಈ ಕೃಷ್ಣನಿಗೆ ಮಾತ್ರ ಏನೂ ಇದರ ಅಲೆ ಏನಿಲ್ಲೂ ಇಲ್ಲದೇ ಇಲ್ಲ ಪಾರ್ವತಿ."

ಶ್ರೀನಿವಾಸನ ಉತ್ತರ.



ಮನೆಗೆ ಹೊರಟಳು ಪಾರ್ವತಿ. ನಂತರ ಶ್ರೀನಿವಾಸ. ಕೃಷ್ಣ ಹೊರಟರು. ಮನೆಗೆ ಹೋದ ಪಾರ್ವತಿ ಪುನಃ ತನ್ನ ಹಿಂಬಾಲಿಸಿ ಬರಬಹುದೇನೊ? ಗಂಡ ಅವಳ ಬರವಿಗಾಗಿ ಹಾಸಿಗೆಯಲ್ಲಿ ಅವಳ ನಿರೀಕ್ಷೆ ಮಾಡುತ್ತಿರಬಹುದೇನೋ ? ಅಂತಹ ದಾಂಪತ್ಯವೋ ಅಲ್ಲೂ ಪಾರ್ವತಿ ನನ್ನ ನೆನಸಿಯಾಳೋ ? ಅವಳು ಬರಬಹುದು ತನ್ನ ಜೊತೆ ಇರಬಹುದು......

ಅವನು ಮೂರು, ನಾಲ್ಕು, ಬಾರಿ ಹಿಂತಿರುಗಿ ನೋಡಿದನು

ಆದರೆ ಯಾರೂ ಅವನನ್ನು ಹಿಂಬಾಲಿಸಿರಲಿಲ್ಲ ಕೊನೆಗೆ ಯಾವ ಪ್ರಾಣಿಗಳೂ ಬರುತ್ತಿರಲಿಲ್ಲ.

"ಛೇ"

ಅವನ ಹೃದಯದಿಂದ ಬೇಡವೆಂದರೂ ಹೊರಟ ವಿರಹದ ಮಾತು.

ಕೃಷ್ಣನ ಮನಸ್ಸು ಮುಂಚೇನೇ ಸಾಹಿತಿ ಶ್ರೀನಿವಾಸ ಕಲ್ಪಿಸಿದ್ದ. ಅಲ್ಲದೆ ಗೆಳೆಯನ ವರ್ತನೆ ನೋಡಿದ ಮೇಲೆ ಅವನ ಕಲ್ಪನೆ ನಿಜವಾಯಿತು, ಅವನು ಹಿಂದೆ, ಹಿಂದೆ ತಿರುಗಿ ನೋಡುವ ರೀತಿ, ಪಾರ್ವತಿ ಎದಿರಿಗೆ ಸಿಕ್ಕಾಗ ಅವಳನ್ನು ತಿನ್ನುವಂತೆ ತಲೆಯಿಂದ ಕಾಲಿನ ವರೆಗೆ ಕಣ್ಣು ಬಿಟ್ಟು ನೋಡಿದ ರೀತಿ......

"ಏನೋ ಕೃಷ್ಣ, ಅವಳ ಆಸೆ ಬಿಟ್ಟುಬಿಡು"

"ಹಾಗೇನಿಲ್ಲ, 'ಹೆಂಡತಿ' ಆದ ಅವಳ ಬಗ್ಗೆ ನಾನು ಯೋಚಿಸುತ್ತಿರುವುದು ತಪ್ಪು ಶ್ರೀನಿವಾಸ್"

"ಹೇಗೋ ಮರೆತುಬಿಡು. ಅವಳು ಮರೆತಂತೆ"

"ಹಾಗಾದರೆ 'ಮದ್ವೆ'ಯಾಗಲೇಬೇಕು"

"ಹಾಗಾದರೂ ಮಾಡೋ ಕೃಷ್ಣ".

ನೆಲ್ಲುಂಡೆಗುಡ್ಡ ಹತ್ತಿ ಆಗಿತ್ತು ಬೆಳ್ಳನೆ ಬೆಳದಿಂಗಳು ಜೊತೆಗೆ ತಂಗಾಳಿ ಇವರಿಗಾಗಿಯೇ ಕಾದಿತ್ತು.

ಗುಡ್ಡ ಹತ್ತಿ ಹಸಿರು ಹುಲ್ಲಿನ ಮೇಲೆ ಕುಳಿತುಕೊಳ್ಳುತ್ತಿದ್ದಂತೆಯೇ ಕೃಷ್ಣ ಹೇಳಿದ:

"ಶ್ರೀನಿವಾಸ್ ಪಾರ್ವತಿ, ಅಥವಾ ವಿನೋದಳನ್ನು ಮರೆಯಲು. ಸ್ಕೂಲ ಮನೆ. ಆ ಕೋಗಿನ್ನು ತೋಟ ಮಾಡಲು ಪ್ರಾರಂಭಿಸಿದರೆ ಮಾತ್ರ ಸಾಧ್ಯಕಣೋ"

ಸಂತೋಷದಿಂದ ಶ್ರೀನಿವಾಸ ಹೇಳಿದ.

"ಹಾಗಾದರೂ ಮಾಡೋ—ನಾಳೇನೇ ಹೊಸನಗರಕ್ಕೆ ಹೋಗಿ ಅದನ್ನು ನಿನ್ನ ಹೆಸರಿಗೆ ಮಾಡಿಕೊಂಡು ಬಂದುಬಿಡು. ಮಾಡದಿನಿಂದಲೇ ಕೆಲಸ ಪ್ರಾರಂಭಿಸುವಂತೆ."

"ಹೌದು ಶ್ರೀನಿವಾಸ್ ನನಗೆ ಅದೇ ಸಮಾಧಾನ ನೀಡುವ ಮಾರ್ಗ."

ಆ ಮೇಲೆ ಕೃಷ್ಣ, ಶ್ರೀನಿವಾಸ ಗುಡ್ಡದ ಮೇಲೆ ಕುಳಿತಿದ್ದು ಸ್ವಲ್ಪ ಹೊತ್ತು, ಮಾತ್ರ ನಿದ್ರೆ ಬರುವ ಸೂಚನೆ ಕಂಡಿದ್ದರಿಂದ ಮನೆಗೆ ಹೊರಟರು.

-೪-

ಕೃಷ್ಣನ ಮನಸ್ಸಿನಲ್ಲಿ ನೆಲಸಿದ್ದ ಪಾರ್ವತಿ ಪ್ರಣಯದ ಬೇಸರನ್ನು ಹೋಗಲಾಡಿಸುವಂಥ ಒಂದು ದಾರಿ, ಮೂರನೆಯ ದಿನ ಪಟ್ಟಾಭಿ ಶೇಕದಾರರನ್ನು ಕರೆದುಕೊಂಡು ಬಂದ ಮೇಲೆ ಬಂತು.

ಅದು ಕೃಷ್ಣನ ಹೆಸರಿಗೆ 'ಸ್ಕೂಲ್ ಮನೆ ಗುಡ್ಡದ ಹೋಗು ಸರ್ಕಾರದಿಂದ ಶೇಕದಾರರು ಮಂಜೂರು ಮಾಡಿದ್ದೇ ಆಗಿತ್ತು.

ಶೇಕುದಾರರು ಪಟ್ಟಾಭಿಯೊಡನೆ ಕೃಷ್ಣನ ಮನೆಗೆ ಬಂದಿದ್ದರು. ತಂದೆ ತಾಯಿಗಳು ಇದ್ದರೆ ನಡೆಯುವ ಉಪಚಾರವೇ ಕೃಷ್ಣ ಇದ್ದರೂ ನಡೆದಿತ್ತು. ಬಿಸಿಲಿನಲ್ಲಿ ಬಂದ ಅವರಿಗೆ ಮೊದಲು ನಿಂಬೆ ಹಣ್ಣಿನ ಪಾನಕ. ಆ ಮೇಲೆ ಬಿಸಿ ಉಪ್ಪಿಟ್ಟು. ಅದರ ಜತೆ ಕಾಫಿ. ಅವರಿಗೆ ಬೇಕಾದ ಪ್ಲೇಯರ್ಸ್ ಸಿಗರೇಟು.

ಶೇಕುದಾರರ ಮನಸ್ಸಿಗೆ ಸಂತೋಷವಾಗುವಷ್ಟು ಉಪಚಾರ. ಒಳ್ಳೆಯ ಗುಣದಿಂದ ಕೂಡಿದ ವ್ಯಕ್ತಿ ಕೃಷ್ಣ ಎಂದು ಶೇಕುದಾರ್ ಜೋಸೆಫರು ಭಾವಿಸಿದರು. ಜೊತೆಯಲ್ಲೇ ತಿನ್ನಲು ಇಟ್ಟುಕೊಂಡ ಒಳ್ಳೆ ಹಸ ಅಡಿಕೆ ಒಂದು ವೀಳೆ ಉಪ್ಪರಿಗೆಯಿಂದ ಕೃಷ್ಣ ತಂದುಕೊಟ್ಟ. ಘಟ್ಟದ ಆಳು ಶೇಷು ಒಡೆಯನಾದ ಕೃಷ್ಣನನ್ನು ಮೆಚ್ಚಿಸಲು ತೋಟದಲ್ಲಿ ಬೆಳೆದ ಚಿಗುರು ಒಂದು ಕಟ್ಟು ಅಂಬಾಡಿ ವೀಳ್ಯದೆಲೆ ತಂದ. ಅಡಿಕೆ ಒಂದೇ ಕೊಡಬಾರದೆಂಬ ಶಾಸ್ತ್ರದ ನೆಪದಲ್ಲಿ ಅದನ್ನು ಶೇಕದಾರರ ಚೀಲಕ್ಕೆ ಸೇರಿಸಿದ ಕೃಷ್ಣ.

"ಸ್ಕೂಲ್ ಮನೆ" ಗುಡ್ಡದ ಹೋಗು ತೋಟ ಮಾಡಲು ಸಾಧ್ಯವೇನ್ರಿ ಕೃಷ್ಣ?"

ಅವನ ಆತಿಥ್ಯದಿಂದ ಸಂತೋಷಗೊಂಡು ಜೋಸೆಫರು ಹೇಳಿದ್ದರು.

ಕೃಷ್ಣನಿಗೆ ಆ ಜಾಗ ಸಿಕ್ಕುವ ಭರವಸೆ ಆಯಿತೆಂದು ತಿಳಿದ, ಅವರ ಮಾತಿನಿಂದ ಪಟ್ಟಾಭಿ.

ಕೃಷ್ಣ ತುಂಬಾ ವಿನಯದಿಂದಲೇ ಮರುತ್ತಾ ಕೇಳಿದನು.

"ಖಂಡಿತಾ ಮಾಡಬಹುದು ಸಾರ್."

"ಬಹಳ ಕಷ್ಟಪಡಬೇಕಲ್ಲಾ ಕೃಷ್ಣಾ."

"ಹೌದು ಸರ್ ತುಂಬಾ ಖರ್ಚೂ ಬೀಳುತ್ತೆ."

"ಹೊಸ ತೋಟ ಎಲ್ಲಾದರೂ ಕೊಂಡುಕೊಳ್ಳಹುದಲ್ಲ" ಬಹಳ ಸುಲಭವಾಗಿ ಆ ಮಾತು ಹೇಳಿದ್ದರೂ ಅವನ ಮನೆ ಉಪಚಾರ, ಹೊಸದಾಗಿ ಜಾಗ ತೆಗೆದುಕೊಂಡು ತೋಟ ಮಾಡುವ ಯೋಚನೆ ಕಂಡು ಸಲಹೆ ಕೊಟ್ಟಿದ್ದರು ಶೇಕದಾರರು.

"ನಮಗೇನೂ ತೋಟ ಕಮ್ಮಿಯಾಗಿ ನಾವು ಇದನ್ನು ಮಾಡುತ್ತಿಲ್ಲ ಸಾರ್"

"ಹಾಗಾದರೆ ಯಾಕೆ ಇದು ನಿಮಗೆ ?"

"ಕೃಷ್ಣ ತುಂಬಾ ಕಷ್ಟಜೀವಿ ಜೋಸೆಫರೇ. ಅಲ್ಲದೆ ಒಳ್ಳೆ ಕೃಷಿಗಾರ. ಆದ್ದರಿಂದ ಕೃಷಿ ಪರೀಕ್ಷೆ ಕಟ್ಟಲು ಈ 'ಜಾಗ'ದ ಶಾಲೆಗೆ ಸೇರಬೇಕೆಂದಿದ್ದಾನೆ"

ಅದನ್ನು ಹೇಳಿದವನು ಪಟ್ಟಾಭಿ.

ಅದನ್ನು ಕೇಳಿ ಶೇಕದಾರರು ಹೇಳಿದರು.

"ಅಲ್ಲಿಗೆ ಹೋಗೋಣವೆ ?"

"ಹೂಂ".




to spread literacy, to spread knowledge, understanding, progress—by means of books, magazines, newspapers, by means of paper.

West Coast Paper produce writing, bond, manila, kraft, poster and printing paper— paper for India's many, growing needs.

**WEST COAST PAPER** Shreeniwas House, Waudby Road, Bombay 1

WISH YOU ALL A HAPPY DEEPAVALI

ಆದರಲ್ಲಿ ಸಿಕ್ಕಿದ ಬಿದಿರು ಕಡಿಪ್ಪು ಇದ್ದ...ಏಕೆ ಹಾಗಾಯಿತಿಗೇನೇ ಒಳ್ಳೆ ಬಲವಾದ ಬೇಲಿ ಕಟ್ಟಿಸಿದ. ಹೊಸನಗರದಿಂದ ತರಿಸಿದ ಮುಳ್ಳು ತಂತಿ ಅದಕ್ಕೆ ಸುತ್ತಿಸಿ ನಾಶವಾಗದ ಬೇಲಿ ಮಾಡಿದ.

ಕೃಷ್ಣನ ಕೆಲಸ ನೋಡಿ ಊರಿನವರೇ ಹೊಟ್ಟೆ ಕಿಚ್ಚು ಪಡುವಂತಾಯಿತು. ಅಷ್ಟೊಂದು ದುಡಿದಿದ್ದ ಕೆಲವೇ ದಿನದಲ್ಲಿ ಅವನ ದುಡಿಮೆಯು ಹನಿಯದಲ್ಲೇ ಮಾರ್ಗದರ್ಶನವಾಗಲು ಪ್ರಾರಂಭವಾಯಿತು.

ಪಟ್ಟಾಭಿಯಂತೂ ಕೃಷ್ಣನೊಡನೆ ಹರಟೆ ಹೊಡೆದು ಅವನ ದುಡಿಮೆಯಲ್ಲಿ ಶ್ರಮ ಮರೆಸಿ ಉತ್ಸಾಹ ತರುತ್ತಿದ್ದನು. ಅವನ ದೃಷ್ಟಿಯಲ್ಲಿ ಕೃಷ್ಣನ ಕೃಷಿಗೆ ಒಂದು ಪೂಜ್ಯಭಾವನೆ. ಕೃಷ್ಣನ ಹಾಗೆ ಕಷ್ಟಪಡುವ ಚೈತನ್ಯ ಅವನಿಗಿರಲಿಲ್ಲ. ಗೆಳೆಯನ ಬುದ್ಧಿ ಹಾಗೂ ಶ್ರಮ ನೋಡಿ ಪಟ್ಟಾಭಿಗೆ ಸಂತೋಷವಾಗಿತ್ತು. ಊಟಕ್ಕೂ ಕೂಡ ಅವನಿಗೆ ಮಾಡಿಕೊಳ್ಳಲು ಬಿಡದೇ ತನ್ನ ಮನೆಗೆ ಕರೆದುಕೊಂಡು ಹೋಗಿ ಹೆಚ್ಚು ವೇಳೆ ತೋಟದ ಕೆಲಸದಲ್ಲಿ ಕೃಷ್ಣನಿಗೆ ಬಿಡುವು ಮಾಡಿಕೊಡುತ್ತಿದ್ದನು ಪಟ್ಟಾಭಿ

ಕೃಷ್ಣನಿಗೆ ತನ್ನ ಕೆಲಸದಲ್ಲಿ ಆಗಾಗ್ಗೆ ಶ್ರೀನಿವಾಸನ ನೆನಪು ಆಗುತ್ತಿತ್ತು. ಅವನು ಎಲ್ಲಿಗೆ ಹೋದ ವೆಂಬುದೇ ಕೃಷ್ಣನಿಗೆ ಗೊತ್ತಾಗಲಿಲ್ಲ. ಆತ ಇದ್ದಿದ್ದರೆ 'ತನ್ನ ಕೃಷಿ' 'ಅದರ ದುಡಿಮೆ' ಮೇಲೆ ಪುಟಗಟ್ಟಲೇ ಕಾದಂಬರಿ ಬರೆಯುತ್ತಿದ್ದನೆಂದು ಕೃಷ್ಣ ಯೋಚಿಸಿದ್ದು ಬಹಳ. ಇದರ ಮಧ್ಯೆ ಅವನಿಗೆ ಪಾರ್ವತಿ. ವಿನೋದ ಇಬ್ಬರ ನೆನಪೂ ಬಂದು ಕೆಲಸದಲ್ಲಿ ಉದಾಸೀನ ಬರಿಸಿದ್ದುವು

ಇಪ್ಪತ್ತು ದಿವಸಗಳಲ್ಲಿಯೇ ಕೃಷ್ಣನ ಭೂಮಿ ಕಿಡುಗಳನ್ನು ಕಳೆದುಕೊಂಡು. 'ಹೊಸ ತೋಟ' ವಾಗಿ ಬಯಲಾಯಿತು. ಶೇಷ ಸ್ವಲ್ಪ ಸಾಹಸದಿಂದ ಕುಂದಾಪುರಕ್ಕೆ ಹೋಗಿ ಬ್ರಹ್ಮಾವರ ಕಡೆಯಿಂದ ಇಪ್ಪತ್ತೈದು ಜನ ಒಳ್ಳೆ ಕಷ್ಟದಿಂದ ದುಡಿಯುವ ಕೆಲಸದವರನ್ನು ಕರೆತಂದ

ತೋಟಕ್ಕೆ ಬೇಕಾದ ಬಾಳೇ ಸಸಿ. ಕೃಷ್ಣ ಶೇಷನನ್ನು ಕಳಿಸಿ ಸಂಪೇಮನೆ. ವನಗದ್ದೆಯಿಂದ ರಸಬಾಳೆ, ಕರುಬಾಳೆ ಪಾಟಬಾಳೆ ತರಿಸಿಕೊಂಡ

ಸಸಿಗೆ ಬೇಕಾದ ಏರಿ ಹೊಂಡ ಸಿದ್ಧವಾಗಲು ಎರಡು ಮೂರು ದಿವಸಗಳು ಬೇಕಾದುವು. ಅವರ ಕೆಲಸ ಹಗಲು ಬೆಳಂದಿಗಳ ರಾತ್ರಿ ಸಾಗಿತು. ನೆಲದಲ್ಲಿದ್ದ ಬೇರನ್ನು ಅಗೆದು ಅದನ್ನು ಬೇರೆ ಕಡೆಗೆ ಸಾಗಿಸಿದರು. ಹೆಂಟೆಗಳನ್ನು ಪುಡಿ ಮಾಡಿ ಏರಿ ಮಾಡಿದರು. ಹೊಂಡಗಳು ಅಗೆದು. ಬಾಳೆ ಸಸಿಗಳನ್ನು ತೋಟದ ಉದ್ದಕ್ಕೂ ಕೃಷ್ಣ ಆಳುಗಳನ್ನು ತೆಗೆದುಕೊಂಡು ನಡಿಸಿದನು.

ಬಾಳೆ ಸಸಿ ನಟ್ಟ ಮೇಲೆ. ಊರಲ್ಲಿ ಏಂತಾಗ, ಗುಡ್ಡದ ಮೇಲೆ ನಿಂತಾಗ ನೋಡಿದರೆ ತೋಟ ಎಷ್ಟೊಂದು ಚೆನ್ನಾಗಿದೆ ಅನ್ನುವಷ್ಟರ ಮಟ್ಟಿಗೆ ಬಾಳೆ ಸಸಿಗಳು ಗೆಲುವು ಉಂಟು ಮಾಡಿದವು

ಕೃಷ್ಣ 'ಸಾರದ ಮನೆ' ತೋಟದಲ್ಲಿ ಹಾಕಿದ ಏಲಕ್ಕಿ ಸಸಿಗಳನ್ನು ನೋಡಿ ಅದರ ಬೆಳವಣಿಗೆ ಬಗ್ಗೆ ಪಾರ್ವತಿ ಗಂಡನನ್ನು ಕೇಳಿದ

ಶೃಂಗೇರಿಯ ಸುತ್ತ ಮುತ್ತಲೂ ಏಲಕ್ಕಿ ಬೆಳೆಯುವುದು ನಾನು ಕಂಡಿದ್ದೇನೆ. ಇದರಿಂದ ಉತ್ಪತ್ತಿ ಹೆಚ್ಚಿದ್ದರೂ ಕೆಲಸ ಬಹಳ. ಅಲ್ಲದೆ ಅಡಿಕೆ ಮರಗಳ ಆಹಾರ ಇವು ನುಂಗಿಬಿಡುತ್ತವೆ. ಮನೆ ಖರ್ಚಿಗೆ ಇಷ್ಟು ಇರಲಿ ಎಂದು ನಾನು ಹಾಕಿದ್ದೇನೆ. ಕೃಷ್ಣ".

"ಹೊಸ ತೋಟದಲ್ಲಿ ಅಡಿಕೆ ಸಸಿಗಳನ್ನು ಹಾಕುವ ಮೊದಲು ಒಂದು ಬೆಳೆ ಏಲಕ್ಕಿಯದು ತೆಗೆದರೆ ಹೇಗೆ ಉಪಾಧ್ಯಾಯರೆ?"

"ನೀವು ಯೋಚಿಸಿದ್ದು ಲಾಭದ್ದೇ ಕೆಲಸ. ಏಲಕ್ಕಿ ಬೆಳೆ ಬೇಗ ಬರುತ್ತದೆ ಆದರೆ ಅದರ ವ್ಯವಸಾಯಕ್ಕೆ ಶೃಂಗೇರಿ ಕಡೆಯಿಂದ ಒಂದೆರಡು ಆಳುಗಳನ್ನು ಕರಸಿದರೆ ಒಳ್ಳೆಯದು ಕೃಷ್ಣ".

"ಏಲಕ್ಕಿ ಸಸಿಗಳಿಗೆ ಬೀಜ ಹೊಡೆಯುವುದು?"

"ಅದೂ ಕೂಡ ಆ ಕಡೆಯಿಂದಲೇ ತರಿಸಿಕೊಳ್ಳಬೇಕು.

"ನಿಮಗೆ ಆ ಕಡೆ ಪರಿಚಯ ಜಾಸ್ತಿ. ಯಾರಿಗಾದರೂ ಕಾಗದ ಕೊಡುತ್ತೀರಾ? ನಾಳೆಯೇ ಏಲಕ್ಕಿ ಸಸಿ ಜನ ಕಳಿಸಿ ತರಿಸಿಬಿಡುತ್ತೇನೆ."

"ಅಂದಗಾರಿನ ನರಸಿಂಹ ಅಡಿಗಳಿಗೆ ನನ್ನ ಪರಿಚಯ ಉಂಟು. ಅವರಿಗೆ ಕಾಗದ ಕೊಡುತ್ತೇನೆ. ಅಲ್ಲಿಂದಲೆ

ತರಿಸಿಬಿಡ್. ಸಲ್ಪ ದುಬಾರಿ ಏಲಕ್ಕಿ ಸಸಿಗೆ ಗೆ ಆಗುತ್ತೋ ಏನೋ.

"ಹಣ ಜಾಸ್ತಿ ಆದರೆ ನನಗೆ ಹರಕೆ ಇಲ್ಲ ಕೆಲಸ ಬೇಗ ಆಗಬೇಕು"

"ಕೆಲಸದ ಆಳುಗಳಿಗೂ ಅವರಿಗೆ ಒರೆದು ಕೊಡುತ್ತೇನ ಒಂದು ತಿಂಗಳು ಅವರಿಂದ ನಿವ್ಮ ಆಳುಗಳಿಗೆ 'ಟ್ರೈನಿಂಗ್' ಕೊಟ್ಟು ಬೇಕಾದರ ಅವರನ್ನು ವಾಪಸು ಕಳಿಸಿದರಾಯಿತು."

"ಹಾಗೇ ಮಾಡಿ"

"ನೀವು ತುಂಬಾ ಅಸಾಧ್ಯರಪ್ಪ".

"ಹಾಗೇನಿಲ್ಲ"

ಕೃಷ್ಣ ಶೇಶನನ್ನು ಆಂಡಗಾರಿಗೆ ಕಳಿಸಿ ನಾನೂರು ಏಲಕ್ಕಿ ಸಸಿಗಳನ್ನು. ಒಂದೆರಡು ಒಕ್ಕಲನ್ನು ಕರಸಿದ, ಹಾಗೇ ಶೇಷು ಕರಕೊಂಡು ಬಂದವರಲ್ಲಿ ಸುಬ್ಬ ಮತ್ತು ನಾರಾಯಣ, ಅವರಿಬ್ಬರೇ ಭಾವನೆಂಟ ಹೆಂಗಸರು ಯಾರೂ ಇಲ್ಲ. ಇದ್ದವರು ಸತ್ತಿದ್ದರು ಅವರಿಂದಲೇ ಅವರಿಗೆ ಅಲ್ಲಿ ತುಂಬಾ ದುಃಖವಾಗುತ್ತಿತ್ತು. ಒಳ್ಳೇ ಕಷ್ಟಜೀವಿಗಳು. ಅವರಿಗೆ ಶಾಂತಿ ಹನಿಯದಲ್ಲಾದರೂ ಸಿಗಲಿ ಎಂದು ನರಸಿಂಹ ಅಡಿಗಳು ಶೇಷನಿಗೆ ಹೇಳಿಯೇ ಕಳಿಸಿದ್ದರು.

ಸುಬ್ಬ ಮತ್ತು ನಾರಾಯಣ ಶೇಷನ ಬಿಡಾರದಲ್ಲೇ ಊಟ ಮಾಡುವುದು. ಶೇಷನಿಗೂ ಒಂದು ಬಲ ಬಂತು. ಗಂಡ, ಹೆಂಡತಿ ಇಬ್ಬರೇ ಇದ್ದ ಅವರ ಬಿಡಾರ, ಈಗ ನಾಲ್ವರಿಂದ ತುಂಬಿದೆ. ಕೃಷ್ಣ ಮಾಡಿದ ತೋಟ ಕಂಡು ಸುಬ್ಬ ಹೇಳಿದ

"ಈ ನೆಲದಲ್ಲಿ ನಮ್ಮೂರಿಗಿಂತ ಏಲಕ್ಕಿ ಬೆಳೆಯು ಚೆನ್ನಾಗಿ ಆಗುತ್ತದೆ. ಎರಡೂ ಕಡೆ ಗಡ್ಡಗಳ ನೆರಳು ಮಳೆಗಾಲದಲ್ಲಿ ಹರಿದು ಬರುವ ಒಳಜಲ ಎರಡು ಏಲಕ್ಕಿ ಬೆಳೆಗೆ ಸಾಕು. ಆದರೆ ಈ ವರ್ಷವೇ ಗಡ್ಡದಲ್ಲಿ ಆದ ಈ ತೋಟದಲ್ಲಿ ಏಲಕ್ಕೀದು ಒಳ್ಳೆ ಫಸಲು ಬರುತ್ತೆ ಎಂದು ನಾನು ಹೇಳಲಾರೆ?"

"ಸುಬ್ಬ, ನೀನು ಹೇಳಿದ ವಿಚಾರ ನನಗೆ ಗೊತ್ತು. ಇಲ್ಲಿ ನಾವು ಏನು ಬೆಳೆದರೂ ಬೇರೆ ಕಡೆ ಬೆಳೆದಷ್ಟು ಬೆಳೆಯಲು ಸಾಧ್ಯವಿಲ್ಲ ಇನ್ನೂ ಮಣ್ಣು ಹದ ಕೂಡಿಲ್ಲ. ಕೆಸರು ಮಳೆಗಾಲಕ್ಕೆ ಆಗಬಹುದು. ನನ್ನ ಆಸೆ ಈ ಜಾಗ ಮುಂದಾದರೂ ಉತ್ತಮ ತೋಟ ಆಗಬೇಕೆಂದು"

'ಆಗಲಿ ಒಡೆಯ. ನೀವು ಧೈರ್ಯ ಕೊಟ್ಟರೆ ನಾವು ದುಡಿದೇವು. ಆದರೆ ಕಾಡುಮೃಗಗಳು ಬರದಂತ ಬೇಲಿ ಗಟ್ಟಿ ಇದೆಯೊ?"

"ಹೊರಗೆ ಸುತ್ತಲೂ ಒಂದು ಕಡೆ ಓಡಾಡುವಷ್ಟು ಸೇತುವೆ ತರ ಮಾಡಿ ದೊಡ್ಡ ಕಂದಕ ಮಾಡೋಣವಂತೆ ಮೊದಲಿಗೆ ಏಲಕ್ಕಿ ಸಸಿ ನಡೋಣ. ಕಷ್ಟಪಡುವವರು ನೀವು ಇದರಿಂದ ಲಾಭ ಬಂದರೆ ಅದರಲ್ಲಿ ನಿಮಗೂ ಪಾಲಿದೆ ಈಗ ನಿಮ್ಮ ಕಡೆ ಎಷ್ಟು ಕೊಡುತ್ತಾರೋ ನಮಗೆ ಗೊತ್ತಿಲ್ಲ. ನಮ್ಮ ಕಡೆ ಕೊಟ್ಟಷ್ಟು ಗುಡಾಳಿಗೆ ಎರಡು ರೂಪೈ ಕೊಡುತ್ತೇನೆ"

"ನಿಮ್ಮ ಹಣ ನೋಡಿ ನಾವು ಬಂದಿಲ್ಲ. ನಿಮ್ಮ ವಿಚಾರ ಶೇಶನಿಂದ ತಿಳಿದು ಬಂದಿದ್ದೇವೆ ನೀವು ನಮ್ಮ ಜೊತೆಗೆ ಇದ್ದರೆ ನಮ್ಮ ಹೊಟ್ಟೆ ಬಟ್ಟೆ ಎರಡನ್ನು ನೋಡಿಕೊಂಡರೆ ನಮ್ಮ ಮನೆದು ಅಂತ ದುಡಿದೇವು ಸ್ವಾಮಿ"

ಅವರ ಮಾತು ಕೇಳಿ ಕೃಷ್ಣನಿಗೆ ಸಂತೋಷದಿಂದ ಕಣ್ಣೀರು ಬಂತು.

ಸುಬ್ಬ, ನಾರಾಯಣ, ಶೇಷು ಮೂವರು. ಕೃಷ್ಣನ ಬೆಂಗಾವಲಾದರು. ಅವರೊಡನೆ ಸರಿ ಸಮವಾಗಿ ಕೃಷ್ಣನೂ ದುಡಿಯಲಾರಂಭಿಸಿದನು.

ಶೇಷನ ಹೆಂಡತಿ ಭದ್ರಿ ಮುಂಚೆ ಕೆಲಸಕ್ಕೆ ಹೋಗುತ್ತಿದ್ದಳು. ಸುಬ್ಬ ನಾರಾಯಣ ಬಂದ ಮೇಲೆ ಅವರಿಗೆ ಅಡಿಗೆಗಾಗಿ ಅವಳು ಮನೆಯಲ್ಲೇ ಉಳಿದಳು.



ಕೃಷ್ಣ ಆ ದುಬಾರಿ ಸಾಹುಕಾರನಿಂದ ಇಪ್ಪತ್ತು ಜನ ಕೆಲಸದವರಿಂದ 'ಹೊಸ ತೋಟದ' ಕೆಲಸ ಮಾಗಿಸಲು ಶ್ರಮಿಸಿದ. ಇದರಿಂದ ಹಾಳು ಕಾಡು ಗುಡ್ಡಕ್ಕೆ ತೋಟದ ರೂಪ ಬಂದಿತು.

ಅವರುಗಳಿಂದ ಏಲಕ್ಕಿ ವ್ಯವಸಾಯ ಬಿರುಸಿನಿಂದ ಸಾಗಿತು. ಸುಬ್ಬನ ಹೇಳಿಕೆಯಂತೆ, ಏಲಕ್ಕಿ ಜೊತೆಗೆ ಕೆಲವು ಕಡೆ, ಶುಂಠಿಗಳನ್ನು ನಡಸಿದ್ದನು. ಕೃಷ್ಣ ಶುಂಠಿಗೂ ಏಲಕ್ಕಿಗೂ, ಕೆಲವು ಅಂತರ ಬಿಟ್ಟು ನಡೆಸಿದ್ದನು. ಸುತ್ತಲೂ ಸ್ವಲ್ಪ ಆಳದ್ದೇ ಕಂದಕ ಮಾಡಿ ಕಂದಕದ ಸುತ್ತಲೂ ಮತ್ತೊಂದು ಮುಳ್ಳು ಬೇಲಿಯನ್ನು ಹಾಕಿಸಿದನು. ದನ, ಜನರು ಯಾರಾದರೂ ಕತ್ತಲೆ, ಮತ್ಯಾವಾಗಾದರೂ ದಾರಿ ತಪ್ಪಿ ತೋಟದ ಸುತ್ತಲೂ ಬಂದಾಗ ಕಂದಕದಲ್ಲಿ ಬೀಳದಂತೆ ಎರಡು ವಾರ ಬಿಡದೆ ಸತತವಾಗಿ ಕೆಲಸ ನಡೆಯಿತು.

ಕೆರೆ ಮೇಲಿದ್ದ ಕಾಡು ಕಡಿದು. ಕೆರೆನೀರನ್ನು ಶುದ್ಧ ಮಾಡಿ. ಎರಡೂ ಕಡೆ ಕೋಡು ಮಾಡಿ, ತೋಟಕ್ಕೆ ನೀರು ಬರುವಂತೆ ಮಾಡಿದರು. ಸುತ್ತ ಬೆಳೆದಿದ್ದ ಪೊದೆ, ಕಾಡುಗಳನ್ನು ಕಡಿದು ಒಯ್ಯಲು ಮಾಡಿದರು.

ತೋಟಕ್ಕೂ ಕೆರೆಗೂ ಮನುಷ್ಯರು ತಿರುಗಾಡಲು ಭಯ ಬರದಂತೆ ಮಾಡಿದರು; ತೋಟದ ಹತ್ತಿರ ವಕ್ಕಲು ಇರಲು ಕೃಷ್ಣ ಯೋಚಿಸಿಯೇ ಹೇಳಿದ. ರಾತ್ರಿ ಹಗಲೂ ಜನರಿದ್ದಾರೆ ತೋಟಕ್ಕೆ ಅಪಾಯವಿಲ್ಲ ತನಗೂ ಒಂದು ಲಾಭ, ತನ್ನ ಮನೆಗೂ ತೋಟ ದೂರ ಆದ್ದರಿಂದಲೇ ಈ ವಿಚಾರ ಸುಬ್ಬನಿಗೆ ಹೇಳಿದ ಕೃಷ್ಣ.

ಶೇಷು ನಾರಾಯಣ, ಸುಬ್ಬ ತೋಟದ ಹತ್ತಿರದಲ್ಲೇ ಬಿಡಾರ ಹೂಡಿ ವಾಸಿಸುವುದೆಂದು ತೀರ್ಮಾನಿಸಿದರು. ಬಿಡಾರಕ್ಕೆ ಬೇಕಾಗುವ ಮರ, ಅಡಿಕೆ ದಬ್ಬೆ ಸೋಗೆಗಳೆಲ್ಲ, ಕೃಷ್ಣ ತನ್ನ ತೋಟದಿಂದ ಒದಗಿಸಿದ. ಗುಡ್ಡದ ಬುಡವನ್ನು ಅಗೆದು ನೆಲ ಸರಿ ಸಮಾನ ಮಾಡಿದರು. ಆ ಮೇಲೆ ನೆಲ ಅಗೆದು ನೀರು ಸೇರಿಸಿ ನೆಲದ ಬುಡ ಹದ ಮಾಡಿದರು. ಒಂದೆರಡು ದಿವಸ ಬಿಟ್ಟ ಮೇಲೆ ನೆಲ ಗಟ್ಟಿಯಾಯಿತು. ಅಡಿಕೆ ಕಂಬಗಳನ್ನೇ ಗಟ್ಟಿಯಾಗಿ ಹುಗಿದರು. ಅಡಿಕೆ ದಬ್ಬೆಗಳನ್ನು ಮಾಡಿ ಗೋಡೆ, ಬಾಗಿಲು, ಕಿಡಕಿಗಳನ್ನು ನಿರ್ಮಿಸಿದರು. ಆ ಮೇಲೆ ಅಡಿಕೆ ಸೋಗೆಗಳನ್ನು ಹೊದ್ದಿಸಿ ಮಾಡು ಮಾಡಿದರು.

ಬಿಡಾರ ಆದ ಮೇಲೆ ಶೇಷನ ಪರಿವಾರ ಅಲ್ಲೇ ವಾಸ ಮಾಡಲು ಪ್ರಾರಂಭಿಸಿತು

ಆಕಾಶದಲ್ಲಿ ಮೋಡ ಕಪ್ಪುಯಾಗಿದ್ದು ಜಾಸ್ತಿಯಾಗಿ ಬೆಳೆದು ಸಂಚರಿಸತೊಡಗಿದವು. ಒಂದೆರಡು ಮಳೆ ಆಗಿ ಮಳೆಗಾಲದ ಪ್ರಾರಂಭ ಮಾಡಿದವು. ಕೃಷ್ಣ ಅಷ್ಟರಲ್ಲಿ ಏಲಕ್ಕಿ ಸಸಿಗಳನ್ನು ತನ್ನ ತೋಟದಲ್ಲಿ ನಡಿಸಿದ್ದನು ಮುಂದಿನ ವರುಷ ಅಡಿಕೆ ಸಸಿಗಳನ್ನು ತನ್ನ ಐದು ಎಕರೆ ಹೊಸ ತೋಟಕ್ಕೂ ಹಾಗೂ ತನ್ನ ತೋಟದ ಹಲವು ಭಾಗಗಳಲ್ಲಿ ಹಾಕಲಿಕ್ಕೂ 'ತೀರ್ಥಹಳ್ಳಿ' ಅಡಿಕೆ ಪರಿಶೋಧನೆ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದ ಗೆಳೆಯ ನರಸಿಂಹ ಮೂರ್ತಿಗೆ ಬರೆದು, ಒಳ್ಳೆಯ ಬೀಜದ ಅಡಿಕೆ ತರಿಸಿ ಸಸಿಗಾಗಿ ನಡಿಸಿದ.

ತನ್ನ ತೋಟದ ಮೇಲೆ ಇದ್ದ ಕೆರೆಯಲ್ಲಿ ನೀರು ಬಹಳವಿತ್ತು, ಕೆರೆ ಗಡ್ಡದ ಮೇಲೆ ಇದ್ದುದರಿಂದ ಊರೆಲ್ಲ ಅದರ ಕೆಳಗೆ ಇತ್ತು. ಹನಿಯಾದ ಊರಿನ

ಎಲ್ಲ ಮನೆಗಳೂ [illegible] ಇದ್ದವು. ಅದ್ದರಿಂದ ಕೃಷ್ಣ ಕಾಲುವೆ ತೆಗೆಸಿ ಊರಿನವರಿಗೆಲ್ಲಾ ಬಹಳ ಒಳ್ಳೆಯ ನೀರು ಬರುವಂತೆ 'ಪ್ಲಾಸ್ಟಿಕ್ ಪೈಪ' ತರಿಸಿ ಎಲ್ಲಾ ಮನೆಗಳಿಗೂ ಹಾಕಿ ನೀರಿನ ಸೌಕರ್ಯ ಉಂಟು ಮಾಡಿದ.

ಕೃಷ್ಣನ 'ಹೊಸ ಕೋಟೆ' ಒಂದು ವ್ಯವಸ್ಥೆಗೆ ಬಂದ ಮೇಲೆ ಒಂದು ದಿವಸ ಶ್ರೀನಿವಾಸ ಸಂತೋಷದ ಸುದ್ದಿ ಹೊತ್ತು ತಂದ.

" ಕೃಷ್ಣ ನಿನಗೊಂದು ಆನಂದದ ಸಮಾಚಾರ; ನನ್ನ ಮದುವೆ ನಿಶ್ಚಯವಾಗಿದೆ. ನಾಳೆ ಸೋಮವಾರಾನೆ. "

ಕೃಷ್ಣನಿಗೆ ನಂಬಲಾಗಲಿಲ್ಲ. ಅವನ ಮಾತು ಯಾವಾಗಲೂ ಕಲ್ಪನೆಗಳಾಗಿಯೇ ಇರುತ್ತಿದ್ದುವು.

"ಯಾರೊಡನೆ? "

" ಸಾಗರದಲ್ಲಿಯದೇ ಹೆಣ್ಣು. ಲಾಯರ್ ಕೃಷ್ಣಸ್ವಾಮಿಗಳ ಮಗಳು. ಹುಡುಗಿ ಹೆಸರು ರಾಧಾ. "

" ಅದೇನೋ ಒಂದು ಗೊತ್ತಿಲ್ಲದೆ ಇದ್ದಕ್ಕಿದ್ದ ಹಾಗೆ ಅವಳನ್ನು ಮದುವೆಗೆ ಒಪ್ಪಿಕೊಂಡು ಬಿಟ್ಟೆ ಶ್ರೀನಿವಾಸ್? "

" ಇನ್ನೇನು ನನಗೆ ಹುಚ್ಚಿದೆ ಅದೋಳೀನೇ ನಾನು ಮದುವೆ ಆಗೋದು. ತಂದೆ-ತಾಯಿ ಹೇಳೋ ಕುಂದಾಪುರದ ಕರಿ ಹೆಣ್ಣುಗಳ ಮದುವೆ ಆಗ್ಲೇನೊ ಕೃಷ್ಣ? "

" ಅವಳು ನಿನಗೆ ಮೆಚ್ಚುಗೆಯಾದದ್ದು ಹೇಗೋ? "

" ಸಾಗರದಲ್ಲಿ ನನ್ನ ಕಾದಂಬರಿ ಒಳ್ಳೆ ಕೆಲಸ ಮಾಡಿವೆ. ಎಷ್ಟೋ ಪ್ರಾಯದ ಹುಡುಗಿಯರು ನನ್ನ ಕಾದಂಬರಿ ಮೆಚ್ಚಿ ನನ್ನ ಆರಾಧಕರಾಗಿದ್ದಾರೆ."

" ಅದು ನಿನಗೆ ತಿಳಿದಿದ್ದುದು ಹೇಗೋ? "

" ಮೊನ್ನೆ ನನ್ನ ಭಾಷಣ 'ಪುರಭವನ'ದಲ್ಲಿ ಆದಾಗ "

' ರಾಧಾಳ ಪರಿಚಯ ಹೇಗಾಯಿತು? "

ಕೃಷ್ಣ ರಾಧಾಳ ರೂಪ ಯೋಚಿಸಿಕೊಂಡ. ಲಾಯರ್ ಮಗಳು. ನೈಲಾನ್ ಸೀರೆಗಳನ್ನು ಉಡಬಹುದು. ಪೇಟೆಯ ಜೀವನ; ಹೋಟೆಲು ವಿಪರೀತ. "ಸ್ನೋ ಪೌಡರ್" ಮೇಕಪ್. ಫ್ಯಾಷನ್ ಹುಡುಗಿ. ರೂಪವಿಲ್ಲದಿದ್ದರೂ, ನಾಗರಿಕತೆ. ಬದಲಾವಣೆಯ "ಮೇಕಪ್" ರೂಪದ ಮಹತ್ವನ್ನೇ ಕೊಟ್ಟ ಹುಡುಗರಿಗೆ ಅನುರಾಗ ಬರಿಸುತ್ತದೆ. ಪ್ರೇಮ ಜೀವನದಲ್ಲಿ ಮೊದಲನೇ ಪರಿಚಯ...

ಕೃಷ್ಣನಿಗೆ ಮನಸ್ಸು ಸಂತೋಷದಿಂದ ಉಬ್ಬಿತು. ಶ್ರೀನಿವಾಸ ಕೂಡ ತನ್ನಂತೆ ಪ್ರಣಯದ ಸಾಹಸದಲ್ಲಿ ಅವಳನ್ನು ಒಲಿಸಿಕೊಂಡಿರಬಹುದೇನೋ ?

ಕೃಷ್ಣ ಕೇಳಿದನು.

" ನಿನ್ನವಳ ವಿದ್ಯಾಭ್ಯಾಸ ಎಲ್ಲಿಯವರೆಗೆ ಆಗಿದೆ ಶ್ರೀನಿವಾಸ? "

" ಶಿವಮೊಗ್ಗಾದಲ್ಲಿ ಪ್ರಿ-ಯೂನಿವರ್ಸಿಟಿ ಓದುತ್ತಿದ್ದಾಳೆ. "

" ಅಡಿಗೆ ಕೆಲಸ ಬಾರದೇ ಇರಬೇಕು. "

"ಅವರ ನಾಲ್ವರು ಅಕ್ಕ-ತಂಗಿಯರಿಗಿಂತ ಅವಳು ಅಡಿಗೆ ವ್ಯವಸಾಯದಲ್ಲಿ ಜಾಸ್ತಿ ಪಳಗಿದ್ದಾಳೆ "

ಅದನ್ನು ಅವನು ನಂಬದಿದ್ದರೂ, ಗೆಳೆಯನಿಗೆ ದುಃಖವಾಗಬಾರದೆಂದು ಕೃಷ್ಣ ಹೇಳಿದನು.

" ಸತ್ಯವಾಗೀನಾ? "

ಕೃಷ್ಣನ ಯೋಚನೆ, ಊಹೆ ಎಲ್ಲಾ ತಲೆಕೆಳಗಾದ್ದನ್ನು ಕಂಡು ಶ್ರೀನಿವಾಸ ಮತ್ತೆ ಹೇಳಿದ:

" ಸ್ತ್ರೀಯರಲ್ಲೇ ನನ್ನ ಕಲ್ಪನೆಗೆ ತಕ್ಕ ಸ್ತ್ರೀ ಅವಳು. "

' ಇರಲಿ ಬಿಡು. '

ಕೃಷ್ಣ 'ಇರಲಿ ಬಿಡು' ಅಂದಿದ್ದರೂ ಅವನ ಮನಸ್ಸು ಶ್ರೀನಿವಾಸನ ದಾಂಪತ್ಯದ ಕಡೆಗೆ ಯೋಚಿಸುತ್ತಿತ್ತು. ಸಾಹಿತಿ ಸಂಸಾರ, ಬೇಕಾದ್ದು ಅನುಭವಿಸಬಹುದು. ತಾನು ಮದುವೆಗೆ ಹೋಗಬಹುದು, ಅರಳ ಸುರಳಿ ಕಡೆಯಿಂದಾಗಲಿ ಸಾಗರದಿಂದಾಗಲಿ ಮದುವೆ ಹೆಣ್ಣುಗಳು ಬಹಳ ಬರಬಹುದು ಒಮ್ಮೆ ವಿನೋದ. ಪಾರ್ವತಿ ಇಬ್ಬರೂ ಬರಬಹುದೋ ಏನೊ? ಒಳಕಟ್ಟೆ ಗೀತ ಕೂಡ ತೀರ್ಥಹಳ್ಳಿ ವಿದ್ಯಾಭ್ಯಾಸ ಮುಗಿದು ರಜಬಂದಿದೆ ಅವಳೂ ಬರಬಹುದು. ಅವಳು ಈಗ ಎಷ್ಟು ಬೆಳೆದಿದ್ದಾಳೋ? ಹೇಗೆ ಬದಲಾಗಿದ್ದಾಳೋ? ನಮ್ಮೂರಿನ ಹುಡುಗಿಯಾದರೂ ನಮ್ಮ ಹತ್ತಿರ ಮಾತನಾಡಲಿಕ್ಕೆ ಅವಳಿಗೆ ಜಂಭ ಬಿಡುತ್ತಿರಲಿಲ್ಲ.

" ಮದುವೆ ಎಲ್ಲಿ ಆಗುತ್ತೆ ಶ್ರೀನಿವಾಸ್? "

ಕೃಷ್ಣನು ಯೋಚನೆ ಮುಗಿದ ಮೇಲೆ, ಆ ಪ್ರಶ್ನೆ ಶ್ರೀನಿವಾಸನಿಗೆ ಕೇಳಿದ್ದನು.

"ಮದುವೆಯೇ? "

" ಹೌದು "

" ಸಾಗರದಲ್ಲಿ ಮದುವೆ ಮಾಡೋದು ಬಹಳ ಕಷ್ಟ- ಮೊದಲನೆಯದಾಗಿ ದೊಡ್ಡ ಮನೆ ಇಲ್ಲ, ಹಾಲು ಸಿಗೋದಿಲ್ಲ. ಅಡಿಗೆಭಟ್ಟರು ಪುರೋಹಿತರು ಇವರುಗಳನ್ನೆಲ್ಲ ಒಟ್ಟುಗೂಡಿಸುವುದು ಬಹಳ ಕಷ್ಟ."

ಆಗಲೇ ಮಾವನ ಮನೆ ಕಷ್ಟದಲ್ಲಿ ಭಾಗಿಯಾದಂತೆ ಹೊರಟ ಶ್ರೀನಿವಾಸನ ಮಾತು.

ಕೃಷ್ಣ ಆಗಲೇ ನಿರ್ಧರಿಸಿದ್ದನು.

" ಹಾಗಾದರೆ ಮದುವೆ ನಮ್ಮೂರಲ್ಲೇ ಆಗಲಿ."

ಶ್ರೀನಿವಾಸನಿಗೆ ಸಂತೋಷ- ತನ್ನೂರಲ್ಲೇ ಮದುವೆ ಆದರೆ ಕೃಷ್ಣ-ಪದ್ಮಾಭ ಪೂರ್ಣ ಸಹಕಾರ ತನಗೆ ಸಿಗುತ್ತೆ. ಸಾಗರಕ್ಕಿಂತ ಹಿಂಭಾಗದಿಂದ ಇಲ್ಲಿ ಮದುವೆ ನಡೆಸಬಹುದೆಂಬ ಭರವಸೆ.

" ಹೌದು. ಕೃಷ್ಣ ನಿನ್ನ ಸಹಕಾರ ಅತ್ಯಾವಶ್ಯಕ. "

ತನ್ನ ಸಹಕಾರ ಹನಿಯದಲ್ಲಿ ಸಾಗರದಲ್ಲಿ, ಇನ್ನೆಲ್ಲಿ ಆಗಿದ್ದರೂ ಶ್ರೀನಿವಾಸನಿಗೆ ಕಟ್ಟಿಟ್ಟದ್ದು.

" ಖಂಡಿತ ನಾಳೆಯಿಂದಲೇ, ನಿನ್ನ ಮದುವೆ ಮನೆಯ ಸಿದ್ಧತೆಗಳಿಗೆ ಸಹಾಯ ನಾನು ಪ್ರಾರಂಭಿಸುತ್ತೇನೆ. "

" ಹಾಗೇ ಮಾಡೋ ಮಾರಾಯ. "

" ಕಾದಂಬರಿ ಬರೆಯುವುದನ್ನು ಸದ್ಯಕ್ಕೆ ನಿಲ್ಲಿಸುತ್ತೀಯಾ ಶ್ರೀನಿವಾಸ? "

" ಇಲ್ಲ. ಮದುವೆ ಹೊತ್ತಿಗೆ ಒಂದು ಕಾದಂಬರಿ ಪೂರೈಸಬೇಕು. "

"ಅದು ನಿನ್ನವಳ ಪ್ರಥಮ ದರ್ಶನವಾದ ಬಗ್ಗೆ ಇರಬೇಕು. ಅಲ್ಲವೆ? " ಶ್ರೀನಿವಾಸ ತನ್ನವಳ ಪ್ರಥಮ ದರ್ಶನ ಅವಳು ತನ್ನ ಮನಸ್ಸನ್ನು ಒಲಿಸಿಕೊಂಡ ಬಗ್ಗೆ, ಅವಳ ಶೃಂಗಾರ, ಅವಳ ರೂಪ, ಜಲಪಾತದ ಬಿಳಿಯಂತೆ ಮೈಮೇಲೆ ತುಂಬು ಹೊದ್ದ ಸೆರಗು ಬಂಗಾರದ ಹೆಂಗಸರಂತೆ, ಬಾಚಿ ಹಾಕಿಕೊಂಡ ಎರಡು ಜಡೆ, ಗಂಡಸನ್ನೇ ಎಳೆದುಕೊಳ್ಳುವಂಥ ಎದೆಗೆ ಕೊಟ್ಟ ನೈಲಾನ್ ಕುಪ್ಪಸ [ ಅದರೂ ದಾವಣಿಯು ಅದರ ಮೇಲೆ ಹೊದ್ದಿದ್ದರೂ ಕುಪ್ಪುಸದಬಟ್ಟೆ ಕಾಣುವಷ್ಟು ತೆಳುವಾಗಿತ್ತು. ]

ಅವನು ಅದನ್ನು ಕೃಷ್ಣನಿಗೆ ಹೇಳಿಬಿಟ್ಟ.

ಅವನ ಆಸೆಯನ್ನು — ಸಂತೋಷವನ್ನು ಕಂಡು ಕೃಷ್ಣನಿಗೆ ಆನಂದವಾಗಿ ಹೇಳಿದನು. ಅವನನ್ನು



ಅವರಲ್ಲಿ ಒಬ್ಬಳು ಗೀತ, ಕೃಷ್ಣನನ್ನು ಕಂಡು ಅವನೊಡನೆ ಮಾತನಾಡಿಸಲು ಎದ್ದಳು. ಜೊತೆಯಲ್ಲಿದ್ದವರು ಅವಳನ್ನು ತಡೆದಾಗ ಅವರಿಗೆ ಸಮಾಧಾನ ಮಾಡಿ ಎದ್ದಳು.

ಕೃಷ್ಣನನ್ನು ಕಂಡು ಗೀತ ಹೇಳಿದಳು:

"ಯಾವಾಗ ಬಂದಿರಿ ?"

"ಈಗ ಬಂದೆವು."

"ನೀನು ಯಾವಾಗ ಒಳಕಟ್ಟೆಗೆ ಬಂದೆ?" ಕೇಳಿದನು ಕೃಷ್ಣ.

"ನಿನ್ನೆ ಬಂದೆ. ನೀವೇ ಶ್ರೀನಿವಾಸನ ಮದುವೆಯಲ್ಲಿ ಮುಖ್ಯಸ್ಥರು ಅಂದುಕೊಂಡಿದ್ದೆ. ಆದರೆ ಬಂದಮೇಲೆ ಬಹಳ ನಿರೀಕ್ಷೆ ಮಾಡಿದೆ, ನಿಮ್ಮ ಸುಳಿವೇ ನನಗೆ ಹತ್ತಲಿಲ್ಲ. ಈಗಲೂ ಅಷ್ಟೇ. ಅತಿಥಿಗಳಂತೆ ದೂರವಿದ್ದೀರಿ ಯಾಕೆ ಕೃಷ್ಣ ?"

"ಬರುವಾಗ ಸ್ವಲ್ಪ ತಡವಾಯಿತು ಗೀತಾ !" ಪಟ್ಟಾಭಿ ಹೇಳಿದ.

"ನಾನೇನೋ ಆಗಲೇ ಬಂದೆ. ಬರುವಾಗ ಕೃಷ್ಣ ಮಾಡಿದ ಹೊಸ ತೋಟ ನೋಡಿಕೊಂಡು ಬಂದೆ. ಎಷ್ಟೊಂದು ಅಸಾಧ್ಯರಪ್ಪ ನೀವು."

ಗೀತಾಳ ಮಾತು ಕೃಷ್ಣನಿಗೆ ಸಂತೋಷ ತಂದಿತು.

"ನಿಮ್ಮ ಜೊತೆಯ ಇದ್ದಾರಲ್ಲ ಆ ಹೊಸಬರು ಯಾರು ಗೀತ ?"

ಪಟ್ಟಾಭಿ ಮಾತುಗಾರನೆಂದು ತೋರಿಸಲು ಕೇಳಿದನು.

"ತೀರ್ಥಹಳ್ಳಿಯ ನನ್ನ ಶಾಲೆಯ ಸಹಪಾಠಿಗಳು."

"ರಜಾ ಮುಗಿಯುವವರೆಗೂ ಇರ್ತೀಯಾ ?" ಕೃಷ್ಣ ಗೀತಳನ್ನು ಕೇಳಿದನು.

"ಹೂಂ."

"ಬನ್ನಿ ತೋಟದ ಹತ್ತಿರವಾದರೂ ನಿಂತು ಮಾತನಾಡೋಣ, ಯಾರಾದರೂ ನೋಡಿದರೆ ಏನೆಂದುಕೊಂಡಾರು, ನನಗೂ ನಿಮ್ಮ ಹತ್ತಿರ ವ್ಯಾಸಂಗದ ವಿಷಯ ಕೇಳೋದು ಅಂದ್ರೆ ಸಂತೋಷ."
—ಕೃಷ್ಣ ಹೇಳಿದನು :

ಪಟ್ಟಾಭಿ ಅಂದನು: "ನಿಮ್ಮ ಗೆಳತಿಯರನ್ನು ಕರೆಯಿರಿ. ಅವರು ಬರಲಿ ಒಟ್ಟಿಗೆ ಮಾತನಾಡೋಣ. ಅವರಿಗೂ ಬೇಸರ, ಇಲ್ಲಿ ಗಲಾಟೆ."

ಗೀತಳಿಗೆ ಅದೇ ಬೇಕಾಗಿತ್ತು. ತಕ್ಷಣ ಗೆಳತಿಯರನ್ನು ಕರೆದು ಹೊರಟಳು. ಕೃಷ್ಣ-ಪಟ್ಟಾಭಿ ಅವರನ್ನು ಹಿಂಬಾಲಿಸಿದನು.

ಅಷ್ಟರಲ್ಲಿ ಶ್ರೀನಿವಾಸ ಕೃಷ್ಣ ಹೋಗುತ್ತಿರುವುದು ಕಂಡು ಲಗ್ನದ ಮಂಟಪದಿಂದಲೇ ಕೂಗಿ ಹೇಳಿದನು.

"ಕೃಷ್ಣಾ-ಪಟ್ಟಾಭಿ ಎಲ್ಲಿಗೂ ಹೋಗಬೇಡ್ರೋ. ಬಂದವರಿಗೆ ಪಾನಕ ಇತ್ಯಾದಿ ವಿಚಾರಿಸಿಕೊಳ್ಳಿ. ಇನ್ನೊಂದು ಅರ್ಧ ಗಂಟೆ ನಾನು ಬಂದುಬಿಡುತ್ತೇನೆ."

"ಆಗಲಿ ಶ್ರೀನಿವಾಸ್ ನಾವು ಎಲ್ಲೂ ಹೋಗೋಲ್ಲ. ಇಲ್ಲೇ ಇರುತ್ತೇವೆ." ಕೃಷ್ಣ ಹೋಗುತ್ತಾ ತಿರುಗಿ ಹೇಳಿದನು.

ಗೀತಳಿಗೆ ಎನ್ನಿಸಿತು, ಕೃಷ್ಣ ಎಲ್ಲಿ ಶ್ರೀನಿವಾಸನ ಹತ್ತಿರ ಹೋಗಿ ಕುಳಿತುಬಿಡುತ್ತಾನೋ ಎಂದು. ಆದ್ದರಿಂದಲೇ ಅವಳು ಪಟ್ಟಾಭಿ ಜೊತೆಗೆ ಬೇಗ ಬೇಗ ಹೋದಳು. ಸ್ವಲ್ಪ ಹೊತ್ತಿನ ಮೇಲೆ ಬಂದ ಕೃಷ್ಣನನ್ನು ಕಂಡು ಗೀತ ಹೇಳಿದಳು.

"ಇನ್ನು ಊಟಕ್ಕೆ ತುಂಬಾ ಹೊತ್ತಿದೆ. ಬಂದವರಿಗೆಲ್ಲಾ, ಕಾಫಿ-ಪಾನಕ ಕೊಡಲು ಕಣವೆಬಾಗಿಲಿನ ಅಡಿಗಳು ಇದ್ದಾರೆ. ಶ್ರೀನಿವಾಸನಿಗೆ ಬಿಡುಗಡೆ ಸಮಯವಿದೆ, ನೀವೇನೂ ಹೆದರಬೇಡಿ."

"ಆದರೂ ನಾವು ಅವನೆದುರು ಇದ್ದರೆ ಅವನಿಗೆ ಎಷ್ಟೋ ಧೈರ್ಯ ಬರುತ್ತೆ" ಪಟ್ಟಾಭಿ ದೆಳೆಯನನ್ನು ಬಿಡದೆ ಹೇಳಿದನು.

ಗೀತಳು ತನ್ನ ಸಹಪಾಠಿಗಳನ್ನು ತೀರ್ಥಹಳ್ಳಿ ಬಿಟ್ಟಾಗಲೇ ಮರೆತಿದ್ದಳು. ಕೃಷ್ಣನ ಮೇಲೆ ಆಕೆಗೆ ಮೊದಲಿನಿಂದಲೂ ಅಭಿಮಾನ. ಹುಡುಗಿತನ ಜಾರಿ, ಯೌವನ ಬೆಳೆದಮೇಲೆ ತನ್ನ ಅಭಿಮಾನ ಪ್ರೇಮವಾಯಿತೆಂದು ಗೀತಳಿಗೆ ಅನ್ನಿಸಿ, ತೀರ್ಥಹಳ್ಳಿಯಲ್ಲಿ ದಿನಗಳೆಲ್ಲ ಕೃಷ್ಣನ ಚಿತ್ರ ಕಲ್ಪಿಸಿಕೊಂಡು, ಅವನನ್ನು ನೆನಸುತ್ತಿದ್ದುದೇ ಬಹಳ.



ಇನ್ನೂ ಸ್ವಲ್ಪ ಉಪಚಾರ ಮಾಡೋಣವೆಂದು ಹೊರದ ಬಾಗಿಲಲ್ಲಿ ನಾಚಿಕೆಯಿಂದ ನಿಂತಿದ್ದ ರಾಧ ಹೇಳಿದಳು,

"ಬನ್ನಿ ಗೀತ, ನಿಮ್ಮ ಮಾತುಗಳೇ ನೀವು ತಿಂದ ಆಹಾರ ಜೀರ್ಣ ಮಾಡುತ್ತೆ. ಅಂತಹುದರಲ್ಲಿ ನಡೆದು ಬಂದಿದ್ದೀರಿ ಬೇರೆ ಬನ್ನಿ, ತಿಂಡಿ ಮುಗಿಸೋಣ. ರಾತ್ರಿ ಊಟ ಎಷ್ಟು ಹೊತ್ತಾಗಬಹುದೇನೊ !"

ಶ್ರೀನಿವಾಸನ ಮುಖ ನಗೆಯಿಂದ ತುಂಬಿತು. ಪಟ್ಟಾಭಿ-ಕೃಷ್ಣ ಆಶ್ಚರ್ಯಪಟ್ಟರು ಗೀತಳಿಗೆ, ರಾಧ ಅಷ್ಟು ಗಂಡನ ಎದಿರು ಮಾತನಾಡಿದ್ದು ಕಂಡು ಆನಂದವಾಯಿತು. ಅವಳು ಹೇಳಿದಳು.

"ನನಗೇನು ಉಪಚಾರ ಬೇಡ ಈ ಮನೆಗೆ ನೀವು ಹೊಸಬರು. ನಿಮಗೆ ಮದುವೆ ಉತ್ಸಾಹದಲ್ಲಿ ಊಟ ಸರಿಯಾಗಿ ಆಗಿರಲಿಕ್ಕಿಲ್ಲ, ತಿಂಡಿ ಬೇಕಾಗುತ್ತೆ. ನೀವು ಬನಿ ಈಗ ತಿಂಡಿಗೆ"

ಒಳಗಡೆ ತಿಂಡಿಗೆ ಬಾಳೆ ಎಲೆ ಹಾಕಿದ್ದುದನ್ನು ಕಂಡು ಕೃಷ್ಣ ಹೊರಟ.

ಎದಿರು ಸಾಲಿನಲ್ಲೇ ಗೀತ, ರಾಧ. ನಂತರ ಕಡೆ ಒಂದಿಷ್ಟರು ಹೆಂಗಸರು ಕುಳಿತರು, ಕೃಷ್ಣ ಗೀತಳನ್ನು ನೋಡುತ್ತಿದ್ದ. ಅವರ ನೋಟವನ್ನು ಕಂಡು ಪಟ್ಟಾಭಿ ಹೇಳಿದನು.

"ಕೃಷ್ಣ ತಿಂಡಿ ಇರೋದು ಎಲೆ ಮೇಲೆ, ನಾನು ಆಗಲೇ ಅರ್ಧ ಮುಗಿಸಿದ್ದಾಯಿತು.

"ನನಗೂ ಗೊತ್ತು, ತಿನ್ನುತ್ತೀವೆ ಈಗ."

ಗೀತ ಕತ್ತೆತ್ತಿ ನೋಡಿದಳು. ಕೃಷ್ಣ ತಿಂಡಿಯನ್ನು ಮುಟ್ಟಿಯೇ ಇರಲಿಲ್ಲ. ತನ್ನ ನೋಡುತ್ತಿರಬಹುದೆಂದು ಭಾವಿಸಿದಳು.

ಕೃಷ್ಣ ಕಾಫಿ ಕುಡಿದು ಎದ್ದ ಗೀತಳಿಗೆ ತುಂಬಾ ಆನಂದ ತಾನು ತನ್ನವರೆದುರಿನಲ್ಲೇ ಇಷ್ಟೊಂದು ಸೋಷಿಯಲ್ ಆಗಿ ಇದ್ದೀನಲ್ಲ ಎಂದು

ನಂತರ ಗೀತ-ರಾಧಾಳ ಕೋಣೆಗೆ ಹೋದಳು ಹರಡಿದ ಜಡೆ ಬಿಚ್ಚಿ, ಬಾಚಿ ಹೆಣೆದುಕೊಂಡಳು ರಾಧಳನ್ನು ಕೇಳಿ "ಸ್ನೋ" ಹಚ್ಚಿಕೊಂಡಳು

"ಬನ್ನಿ ಮುಂಚೆ ಕಡೆಗ ಹೋಗೋಣ" ಎಂದಳು ಗೀತ

"ಬಂದವರು ಏನಾದರೂ ತಿಳಿದಾರು ನನ್ನ ಗಂಡುಬೀರಿ ಎಂದು, ನೀವು ಹೋಗಿ ನಾ. ಬರೋಲ್ಲ ಅಂದಳು" ರಾಧ

ಸಲ್ಪ ಹೊತ್ತು ರಾಧಳಿಗೆ ಬೇಸರವಾಗಬಾರದೆಂದು ಸಾಗರದ ಸಮಾಚಾರ ಕೇಳಿದಳು ಗೀತ. ಅವಳಿಗೆ ಕೃಷ್ಣನ ಹತ್ತಿರ ಮಾತನಾಡಬೇಕು ಅವನ ಜತೆಯಲ್ಲಿ ತಿರುಗಬೇಕು. ರಾಧಳು ಸಿಕ್ಕಿದ್ದರಿಂದ ಅವಳಿಗೆ ಹಾಗೆ ಮಾಡಲು ಆಗಲಿಲ್ಲ.

"ನಾ ಸ್ವಲ್ಪ ಸುತ್ತಾಡಿ ಬರಲೇ ?"

"ನೀವು ಹೋಗಿ ನಾನು ಓದುತ್ತಾ ಇರುತ್ತೇನೆ ನನಗೇನು ಬೇಸರವಿಲ್ಲ ಬಿಡಿ."

ಒಳಗಿನಿಂದ ಬಂದ ಗೀತ ಕೃಷ್ಣನನ್ನು ಹುಡುಕಿದಳು ಕೃಷ್ಣ ಬೆಳಿಗ್ಗೆ ಬಂದ ಉಡುಗೊರೆಯ 'ಲಿಸ್ಟ್' ಮಾಡುತ್ತಿದ್ದ. ಯಾರ್ಯಾರು ಏನೇನು ಕೊಟ್ಟರು ಎಂದು ನೋಡುವ ಕುತೂಹಲ ಗೀತಳಿಗೆ.

"ಸಂಪೆ ಮನೆಯವರದ್ದು ಏನು ಉಡುಗೊರೆ ಕೃಷ್ಣ ?

"ಮೈಸೂರು ಸಿಲ್ಕ್ ಸೀರೆ. ಸ್ಟೀಲ್ ಪ್ಲೇಟು."

"ಉಡುಗೊರೆ ರಾಶಿಯಲ್ಲಿದ್ದ ಸೀರೆ ಹುಡುಕಿ ಗೀತಳ ಕೈಗೆ ಕೊಟ್ಟ. ಅದರ ಸೆರಗು ಬಿಚ್ಚಿ ತನ್ನ ಕೆಗೆ ಹೊದೆದು, ತನಗೆ ಒಪ್ಪುತ್ತೆ ಎಂದು ತಿಳಿದ ಮೇಲೆ ಕೃಷ್ಣನನ್ನು ಕೇಳಿದಳು.

"ಈ ಹಸಿರು ಮೈಸೂರು ಸಿಲ್ಕ್ ಸೀರೆ ನನಗೆ ಒಪ್ಪುತ್ತದೆಯೆ ?"

"ಖಂಡಿತಾ ಗೀತ, ಎಲೆಹಸಿರಿಗಿಂತ. ಅಚ್ಚ ಹಸಿರು ಸೀರೆ ಬಣ್ಣದ್ದು ನಿನಗೆ ಚೆನ್ನಾಗಿ ಒಪ್ಪುತ್ತೆ, ನಿಮ್ಮ ತಂದೆಗೆ ಹೇಳಿ ನೀನೂ ಒಂದು ತರಿಸಿಕೋ"

ಗೀತಳಿಗೆ ಹೌದೆನಿಸಿತು.

"ಖಂಡಿತಾ ನಾಳೆನೇ ಹಣ ಇಸಿದು ಕೊಡುತ್ತೇನೆ. ಸಂಪೆ ಮನೆಯವರನ್ನು ಕೇಳಿ ನೀನು ಇಂತಹದ್ದು ಒಂದು ಸೀರೆ ತಂದು ಕೊಡುತ್ತೀಯಾ ?"

"ನಿಮ್ಮ ತಂದೆ ನನಗೆ ಹೇಳಿದರೆ ತಂದು ಕೊಡುತ್ತೇನೆ. ಇಲ್ಲದಿದ್ದರೆ ಬೇರೆಯವರು ಅಪಾರ್ಥ ಕಲ್ಪಿಸಿಯಾರು ?"

"ಹಾಗೇ ಆಗಲಿ"

ಅಷ್ಟು ಹೇಳಿದ ಮೇಲೆ ಅವಳ ಮನಸ್ಸು ಸಮಾಧಾನಪಟ್ಟಿತು.

ಹೇಗಾದರೂ ಪ್ರತಿ ದಿವಸ ಕೃಷ್ಣ ನೆನಸುವಂತ ಕೆಲಸ ತಾನು ಮಾಡಬೇಕು ಗೀತಳಿಗೆ ಎಂಬಂದೆ ಮಾತೇ ನಿಂತು ಯೋಚನೆ ಪ್ರಾರಂಭವಾಯಿತು.

ಸ್ವಲ್ಪ ಹೊತ್ತು ಯೋಚಿಸಿದ ಬಳಿಕ ಅವಳು ಸಮಾಧಾನ ಪಟ್ಟದ್ದು ಹೀಗೆ. ಕೃಷ್ಣನ ಹೆಸರು ಹಾಕಿ ಒಂದು ಹಾಸಿಗೆ ದಿಂಬಿನ ಕವರು ಕಸೂತಿಯಲ್ಲಿ ಮಾಡಿ ಕೊಡಬೇಕು. ಅವನು ಮಲಗಿದಾಗಲೆಲ್ಲ ಅದನ್ನು ನೋಡಿ ನನ್ನ ನೆನಸುತ್ತಿರಬೇಕು ಬೇರೆಯವರಿಗೆ ತಿಳಿಯದಂತೆ ಅವನಿಗೆ ಮಾತ್ರ ತನ್ನ ನೆನಪು ಉಂಟಾಗಲು ಇದೇ ಸರಿಯಾದ ಉಡುಗೊರೆ

ಉಡುಗೊರೆ ಎಲ್ಲಾ ನೋಡಿದ್ದಾಯಿತು ಸಂಜೆಯಾಗುತ್ತಿದ್ದರಿಂದ ಪ್ರಥಮ ರಾತ್ರಿ ಶಾಸ್ತ್ರಕ್ಕೆ ಬರುವ ಗಂಡಸರು. ಹೆಂಗಸರು ಬರಲು ಪ್ರಾರಂಭಿಸಿದರು. ಚಪ್ಪರದಡಿಯಲ್ಲಿ ಹೋಮದ ಬೆಂಕಿ ಆರಿರಲಿಲ್ಲ ಇನ್ನೂ ಹೊಗೆಯಾಡುತ್ತಿತ್ತು. ನಗರ ಹೊಸನಗರದಿಂದ ಹತ್ತಾರು ಶ್ರೀಮಂತರು ಆಗಷ್ಟೇ ಬಂದರು. 'ಪ್ರಥಮ ರಾತ್ರಿ' ಪ್ರಾರಂಭದ ಸೂಚನೆಯಾಗಿ ಶ್ರೀನಿವಾಸ ರಾಧಾರಿಗೆ ಆರತಕ್ಷತೆ ಶಾಸ್ತ್ರ ಮಾಡಲು ಪ್ರಾರಂಭಿಸಿದರು ಓಡಾಡುತ್ತಿದ್ದ ಜನರೆಲ್ಲ ಒಂದು ಕಡೆ ಕುಳಿತರು ಕೃಷ್ಣ ಮಧ್ಯಾಹ್ನವೆಲ್ಲ ಜನರ ಕಾಲಿನಿಂದ ಚಪ್ಪರದಿಂದ ಉದುರಿದ. ಬಾಡಿದ ಮಲ್ಲಿಗೆ ಹೂವುಗಳಿಂದ ಕಸವಾದ ಎಲ್ಲ ಜಮಖಾನೆ ಕೊಡವಿ ಸರಿ ಮಾಡಿ ಹಾಸಿದ

ಹೆಂಗಸರೊಂದು ಕಡೆ ಹಾಸಿದ್ದ, ಜಮಖಾನಗಳ ಮೇಲೆ ಕುಳಿತರು. ಆರತಕ್ಷತೆಗೆ ಎಲ್ಲರಿಗೂ ಕಾಣುವಂತೆ ಒಂದು ಕಡೆ ಎರಡು ಕುರ್ಚಿಗಳನ್ನು ಇಟ್ಟು ಅದರ ಮೇಲೆ ಕಸೂತಿ ಹಾಕಿದ್ದ ಬಟ್ಟೆ ಹಾಸಿಡಲಾಗಿತ್ತು. ಮುಂದುಗಡೆ ಸ್ಟೂಲೊಂದನ್ನು ಇಟ್ಟು ಅದರ ಮೇಲೆ ಕಸೂತಿ ಹಾಕಿದ ಕರವಸ್ತ್ರ ಹಾಸಿತ್ತು. ಅದರ ಮೇಲೆ ಪನ್ನೀರು ಸೆಂಟು ಆರತಿ ತಟ್ಟೆ, ಊದುಬತ್ತಿ. ಸ್ವಲ್ಪ ಮಲ್ಲಿಗೆ ಹೂವು ಇತ್ಯಾದಿಗಳ ಸುವಾಸನೆ ಸುಗಂಧ ದ್ರವ್ಯಗಳನ್ನು ಜೋಡಿಸಿದ್ದನು ಕೃಷ್ಣ

ಪಟ್ಟಾಭಿ ತನ್ನ ಗೆಳೆಯರೊಂದಿಗೆ ಕ್ಯಾಮರ ಹಿಡಿದು ಫೋಟೋ ತೆಗೆದುಕೊಳ್ಳಲು 'ಫ್ಲಾಷ್' ಬಲ್ಬನಿಂದ ಸಿದ್ಧನಾಗಿದ್ದ.

ಅಷ್ಟರಲ್ಲಿ ಹೊರಗಡೆಯಿಂದ ಕಾರೊಂದು ಬಂದು ಅದರ ಪ್ರಕಾಶಮಾನವಾದ ದೀಪ ಮದುವೆ ಚಪ್ಪರದಲ್ಲಿ ಬಿತ್ತು. ಕೃಷ್ಣ ಬಂದವರನ್ನು ಸ್ವಾಗತಿಸಲು ಹೋದಾಗ ಅವನು ಆಶ್ಚರ್ಯಗೊಂಡ, ಶ್ರೀನಿವಾಸ ಹಸೆಮಣೆಯಿಂದ ಎದ್ದು. ಬಂದವರನ್ನು ಸ್ವಾಗತಿಸಿದನು

ಬೆಂಗಳೂರಿನಿಂದ ಪ್ರಖ್ಯಾತ ಸಾಹಿತಿಗಳಾದ. ಅ. ನ ಕೃಷ್ಣರಾಯರು, ಬೀChi ನರಸಿಂಹ ಮೂರ್ತಿ, ಸೂರ್ಯನಾರಾಯಣ ಚಡಗ ಶ್ರೀನಿವಾಸನ ಮೇಲಿದ್ದ ಮಮತೆಯಿಂದ, ಅವನ ಮದುವೆ ಆರತಕ್ಷತೆಗಾಗಿ ಬಂದಿದ್ದರು ಆ ಕಾರಿನಲ್ಲಿ. ಹಳ್ಳಿಯ ಜನವೆಲ್ಲ ಮೌನವಾಗಿ ಆನಂದದಿಂದ ರಾಯರನ್ನು ಸ್ವಾಗತಿಸಿದರು

ನಗುಮುಖ ಕಳೆಯಿಂದ ತುಂಬಿದ ರಾಯರು ನಗುತ್ತ ಎರಡು ಕೈ ಎತ್ತಿ ಎಲ್ಲರಿಗೂ ನಮಸ್ಕರಿಸಿದರು ನಂತರ ಕೇಳಿದರು.

"ಹೇಗೆ ನಡೆದಿದೆ ಶ್ರೀನಿವಾಸ ನಿನ್ನ ಮದುವೆ ?"

"ನಿಮ್ಮ ಆಶೀರ್ವಾದ ಸಾರ್."



ಶ್ರೀನಿವಾಸ ರಾಧಾ ಇಬ್ಬರೂ ತಮ್ಮ ಪರಿಚಯವನ್ನು ರಾಯರಿಗೆ ಹೇಳಿ, ಅವರ ಜೊತೆಗೆ ಬಂದ ಸಾಹಿತಿಗಳಿಗೂ ನಮಸ್ಕರಿಸಿದರು.

ಆಗ ಬೀChi ಒಂದು ಮಾತು ಹೇಳಿದ್ದು ಎಲ್ಲರಿಗೂ ನಗೆ ಬರಿಸಿತು.

"ನಿಮ್ಮ ಮದುವೆ ಯಶಸ್ವಿನಿಂದ ಸಾಗಲಿ. ನಿಮ್ಮ ಸಾಹಿತ್ಯವೂ ಬೇಗ ಬೆಳೆಯಲಿ. ಅದಕ್ಕೆ ಜಯ ದೊರಕಲಿ."

ಶ್ರೀನಿವಾಸ ತನವರೆಲ್ಲರನ್ನೂ ರಾಯರಿಗೂ, ಅವರ ಪರಿವಾರದವರಿಗೂ ಪರಿಚಯ ಮಾಡಿಕೊಟ್ಟ. ಕೃಷ್ಣ-ಪಟ್ಟಾಭಿಯರು ತನಗೆ ಮಾಡಿದ ಉಪಕಾರ ನೋಡಿ ಅವರೆಲ್ಲರಿಗೂ ಅವರಿಬ್ಬರ ಮೇಲೆ ಅಭಿಮಾನ ಮೂಡಿ ಬಂತು.

ಶ್ರೀನಿವಾಸನಿಗೆ ಒಂದು ಕೊರತೆ ಇತ್ತು. ತನ್ನ ಅಪ್ಪ ಶೆಳೆಯ ಸಾಗರರು ಮದುವೆಗೆ ಯಾಕೆ ಬರಲಿಲ್ಲವೆಂದು.

ಅಷ್ಟರಲ್ಲಿಯೇ, ಸಾಗರರು ಬಂದು ಶ್ರೀನಿವಾಸನಿಗೆ ವಂದನೆ ಮಾಡಿದರು. ಆಗ ಅವನ ಮನಸ್ಸಿನಲ್ಲಿದ್ದ ಕೊರತೆ ಹೋಗಿ ಆನಂದ ತಂದಿತು.

"ಏನು ಸಾಗರರೇ ವಿಧಾನವಾಗಿ ಬಿತ್ತೈಸಿತು ?" ಸಿಗರೇಟು ಸೇದುತ್ತಾ, ರಾಯರು, ಸಾಗರರನ್ನು ಕೇಳಿದರು.

"ತಾವು ಟ್ರೈನಿನಲ್ಲಿ ಬರುತ್ತೀರೆಂದು ಸಾಗರದಲ್ಲಿ ಕಾದೆ. ತಾವು ಕಾರಿನಲ್ಲೇ ಬಂದಿರಿ ಎಂದು ತಿಳಿದು ಇಲ್ಲಿಗೆ ಬಂದೆ" ಸಾಗರರು ವಿನಯದಿಂದ ಹೇಳಿದರು.

"ನಿಮಗೆ ಹೇಗೆ ಗೊತ್ತಾಯಿತು ?"

"ಶಿವಮೊಗ್ಗದಿಂದ ಭಟ್ಟರು ಬಂದರು. ಅವರು ಹೇಳಿದರು."

"ಭಟ್ಟರು ನನಗೆ ಸಿಕ್ಕಿದ್ದರು. ಅವರನ್ನು ಕರೆದೆ. ಅವರು ಯಾಕೋ ಬರಲಿಲ್ಲ. ಮುಖ್ಯವಾಗಿ ಅವರೇ ಇದ್ದು ನಮ್ಮನ್ನು ಸ್ವಾಗತಿಸಬೇಕಾಗಿತ್ತು. ಇಲ್ಲಿ ಯಾಕೆ ಹಾಗೆ ಮಾಡಿದರು ?" ರಾಯರು ಕೇಳಿದರು.

"ಅವರ ಅಧ್ಯಕ್ಷತೆಯಲ್ಲಿ ಕಾರ್ಗಲ್ಲಿನಲ್ಲಿ ಒಂದು ಸಭೆ ನಡೆಯುವುದಿದೆ. ಅವರು ಅದಕ್ಕೆ ತಪ್ಪಿಸಿಕೊಳ್ಳುವಂತಿಲ್ಲ. ಅವರ ಪರವಾಗಿ ನಾವೇ ಬಂದಿದ್ದೇವೆ ಸರ್" ಸಾಗರರು ಹೇಳಿದರು ಹಾಗೆ.

ಆರತಕ್ಷತೆ ಮೊದಲು ರಾಯರು ಒಂದೆರಡು ಮಾತನಾಡಬೇಕೆಂದು. ಮದುವೆಗೆ ಬಂದವರು ಒತ್ತಾಯಿಸಿದ್ದು ಕಂಡು ಶ್ರೀನಿವಾಸ ರಾಯರ ಹತ್ತಿರ ಬಂದು ಮೆಲ್ಲನೆ ಹೇಳಿದನು.

"ತಾವು ನಾಲ್ಕು ಮಾತನಾಡಬೇಕು."

"ಆಗಲಿ ಶ್ರೀನಿವಾಸ."

ಸ್ವಲ್ಪ ಹೊತ್ತಿನಲ್ಲಿಯೇ ಸಭೆ ಸಿದ್ಧವಾಯಿತು. ಕೃಷ್ಣ-ಪಟ್ಟಾಭಿ ಸಾಗರರನ್ನು ಕರೆದುಕೊಂಡು ಒಂದು ಕಾರ್ಯಕ್ರಮ ಸಿದ್ಧಪಡಿಸಿದರು.

ಗೀತಳು ಪ್ರಾರ್ಥನೆ ಮಾಡುವುದೆಂತಲೂ ಸಭೆಯ ಅಧ್ಯಕ್ಷತೆಯನ್ನು 'ಹಿರಣ್ಮಯ್ಯ ಮಿತ್ರ ಮಂಡಳಿ'ಯ ನರಸಿಂಹಮೂರ್ತಿಗಳು ವಹಿಸುವುದೆಂದು, ರಾಯರು ಕನ್ನಡದ ಬಗ್ಗೆ ಭಾಷಣ ಮಾಡುವುದೆಂದು, 'ಬೀChi'ಯವರಿಂದ ನಗೆ ಭಾಷಣ. ಸೂರ್ಯನಾರಾಯಣ ಚಡಗರಿಂದ ವಂದನಾರ್ಪಣೆ ಎಂದೂ ಇಷ್ಟು ಕಾರ್ಯಕ್ರಮ ಸಿದ್ಧಪಡಿಸಲಾಯಿತು.

ಗೀತಳ ಪ್ರಾರ್ಥನೆಯೊಂದಿಗೆ ಸಭೆ ಪ್ರಾರಂಭವಾಯಿತು. ನರಸಿಂಹಮೂರ್ತಿಗಳು, ರಾಯರು, ಬೀChi, ಚಡಗರು. ಅವಳ ಕಂಠ ಹಾಡಿನ ಉದ್ವೇಗವನ್ನವಿಟ್ಟು ಕೇಳಿ ತಲೆದೂಗಿದರು. ದೂರದಲ್ಲಿ ನಿಂತಿದ್ದ ಕೃಷ್ಣ ಮೈಮರೆತ, ದೇವಲೋಕದ ಸಭೆಯಲ್ಲಿ ತಾನಿದ್ದೇನೆ ಎಂಬ ಅರಿವು ಆಯಿತು. ನಂತರ ರಾಯರು ಕನ್ನಡ ನಾಡಿನ ಬಗ್ಗೆ ರಸವತ್ತಾಗಿ ಮಾತನಾಡಿದರು. 'ಬೀChi'ಯವರು ಭಾಷಣ ಮಾಡಿ ಜನರನ್ನು ನಗಿಸಿದರು.

ಆಮೇಲೆ ಅಧ್ಯಕ್ಷ ಭಾಷಣ ಮಾಡುತ್ತಾ ನರಸಿಂಹಮೂರ್ತಿಯವರು ಸಾಹಿತಿ ಶ್ರೀನಿವಾಸನನ್ನು ಆಧಾರವಾಗಿಟ್ಟುಕೊಂಡು ಮಾತನಾಡಿದರು.

ಸೂರ್ಯನಾರಾಯಣ ಚಡಗರು ಮಾತನಾಡಿ ಗೆಳೆಯ ಶ್ರೀನಿವಾಸರ ಅಭಿಮಾನ ಬರುವಂತೆ ಮಾಡಿ ಹಿರಿಯರಿಗೆ ವಂದನೆಗಳನ್ನು ಸಲ್ಲಿಸಿದರು. ಸಮಾರಂಭ ಮುಗಿದು. ಆರತಕ್ಷತೆ ಪ್ರಾರಂಭವಾದದ್ದನ್ನು ಕಂಡು ಕೃಷ್ಣ ಕೇಳಿದ:

"ಗೀತ ಹೇಗಿತ್ತು ಸಭೆ ?"

ಗೆಳೆಯನಿಂದ ಇಷ್ಟೊಂದು ಅವಕಾಶ ಸಿಕ್ಕಿದೆ ಎಂದು ಅವನು ಜಂಭದಿಂದ ಆ ಮಾತು ಕೇಳಿದ್ದ.

"ನನಗಂತೂ ಮೈಮರೆತು ಹೋಗಿತ್ತು ಕೃಷ್ಣ."

ನಿಜವಾಗಿಯೂ ಗೀತಳು ಸಾಹಿತಿಗಳ ಭಾಷಣದಿಂದ ಮೈಮರೆತಿದ್ದಳು. ಅಂತಹ ಸಾಹಿತಿಗಳೆದುರು. ತನ್ನ ಪ್ರಾರ್ಥನೆಗೆ ಅವಕಾಶ ಒದಗಿಸಿಕೊಟ್ಟ ಕೃಷ್ಣನ ಬಗ್ಗೆ ಅವಳಿಗೆ ಗೌರವ ಹುಟ್ಟಿತ್ತು. ಪ್ರಾರ್ಥನೆಗೆ ಹೆಸರನ್ನು ಶ್ರೀನಿವಾಸ ಕೇಳಿದ್ದಾಗ ಕೃಷ್ಣ ಗೀತಳ ಹೆಸರನ್ನು ಸೂಚಿಸಿದ.

ಆರತಿ ನಡೆಯುತ್ತಿದ್ದಾಗ ಶ್ರೀನಿವಾಸನಿಗೂ–ರಾಧಾಳಿಗೂ ಪುನಃ ಉಡುಗೊರೆ ಬರಲು ಪ್ರಾರಂಭ

ಹಾಯಿತು. ಅದನ್ನು ಪುರೋಹಿತರಿಗೆ ತಲುಪಿಸುವ ಕೆಲಸದಲ್ಲಿ ಗೀತಳೂ-ಕೃಷ್ಣನೂ ಸೇರಿಕೊಂಡಿದ್ದರು. ಬಣ್ಣದ ಕಾಗದಗಳು ಮುಚ್ಚಿದ ಪೆಟ್ಟಿಗೆಗಳನ್ನು ಸಾಹಿತಿಗಳು ಶ್ರೀನಿವಾಸನಿಗೆ ಉಡುಗೊರೆಯಾಗಿ ಕಳಿಸಿದ್ದರು.

ಉಡುಗೊರೆ ಮುಗಿದಮೇಲೆ ಸಾಹಿತಿಗಳಿಗೆ ಔತಣವಾಯಿತು. ಅವರು ಹೊರಟು ನಿಂತರು. ಶ್ರೀನಿವಾಸ ಅವರ ಪರಿವಾರ ರಾತ್ರಿ ಉಳಿಯಲು ಬಹಳ ಪ್ರಯತ್ನ ಪಟ್ಟರು.

ಅವರು ಹೊರಟು ಹೋದರು. ಕೃಷ್ಣ ಅವರನ್ನು ಶಿವಮೊಗ್ಗದ ವರೆಗೆ ಬಿಟ್ಟು ಬರಲು 'ಸಾಗರ'ರನ್ನು ಕಳಿಸಿದ್ದ

ಒಳ್ಳೆಯ ಪಂಚೆ ಉಟ್ಟಿದ್ದ ಯುವಕ ಒಬ್ಬ ಮಂಟಪ ಪ್ರವೇಶಿಸಿ ಒಳಗೆ ಬಂದ.

ಅವನನ್ನು ನೋಡಿ ಆನಂದದಿಂದ ಸ್ವಲ್ಪ ಗಟ್ಟಿಯಾಗಿಯೇ ಕೂಗಿ ಹೇಳಿದನು ಕೃಷ್ಣ:

"ಶೇಷ ಭಟ್ಟ."

ಕುಳ್ಳಗೆ ತೆಳ್ಳಗೆ ಇದ್ದ ಶೇಷಭಟ್ಟ ಎತ್ತರವಾಗಿ ದಪ್ಪನಾಗಿ ಬೆಳೆದಿದ್ದ. ಅವನನ್ನು ನೋಡಿ ಗೀತ ಆಶ್ಚರ್ಯಪಟ್ಟಳು.

ಅವಳು ಹೇಳಿದಳು. "ನಮ್ಮ ಕಣಿವೆ ಬಾಗಿಲಿನ ಶೇಷಭಟ್ಟ."

ಶೇಷಭಟ್ಟನು ಕೂಡ ಬೆಳೆದ ಗೀತಳನ್ನು ಗುರ್ತಿಸದೇ ಇದ್ದ. ಕೃಷ್ಣನ ಸಹಾಯದಿಂದ ಗುರ್ತಿಸಿ ಗೀತಳಿಗೆ ನಮಸ್ಕಾರ ಮಾಡಿ ಹೇಳಿದ. "ನಿಮ್ಮನ್ನು ನೋಡದೇ ಎಷ್ಟೋ ವರ್ಷಗಳಾಯಿತು." ಗೀತಳಿಗೂ ಅವನ ಹತ್ತಿರ ಮಾತನಾಡಲು ನಾಚಿಕೆಯಾಯಿತು. ಕಾರಣ ಅವರಿಬ್ಬರಿಗೆ ಮದುವೆ ಮಾಡಿ, ಗಂಡ ಹೆಂಡತಿಯರೆಂದು, ಬಾಲ್ಯದಲ್ಲಿ ಸ್ಕೂಲಿನಲ್ಲಿ ಒಂದು ದಿವಸ ಶ್ರೀನಿವಾಸ, ಕೃಷ್ಣ, ಪಟ್ಟಾಭಿ ಆಟವಾಡಿದ್ದರು.

"ಏನ್ರಿ ಮಾತೇ ಆಡೋಲ್ಲ. ಎಲ್ಲಿ ಓದುತ್ತಾ ಇದ್ದೀರಿ ಗೀತ ?" ಶೇಷಭಟ್ಟ ಗೀತಳನ್ನು ಕೇಳಿದ.

ಗೀತ ಉತ್ತರಿಸಿದಳು. "ನಾನೀಗ 'ತೀರ್ಥಹಳ್ಳಿ'ಯಲ್ಲಿ ಓದುತ್ತಿದ್ದೇನೆ. ಅಲ್ಲೇ ಗರ್ಲ್ಸ್ ಹಾಸ್ಟೆಲಿನಲ್ಲಿ ಇದ್ದೇನೆ. ರಜಾಕ್ಕೆ ಊರಿಗೆ ಬಂದಿದ್ದೆ. ಬಹಳ ವರ್ಷವಾಯಿತು. ಇಲ್ಲಿಗೆ ಬಂದಿರಲಿಲ್ಲ ನೀವೆಲ್ಲಿದ್ದೀರಿ ?"

ಶೇಷಭಟ್ಟ ಹೇಳುವುದಕ್ಕೆ ಮುಂಚೆ ಪಟ್ಟಾಭಿ ಹೇಳಿದನು. "ಅವರೀಗ ಭದ್ರಾವತಿಯಲ್ಲಿದ್ದಾರೆ. ಪೇಪರ ಫ್ಯಾಕ್ಟ್ರಿಯಲ್ಲಿ ಸಬ್ ಇಂಜನಿಯರ್. ಅವನ ಊರೇ ಭದ್ರಾವತಿಯಾಗಿದೆ ಗೀತ."

ಶೇಷಭಟ್ಟ ಪುನಃ ಹೇಳಿದನು.

"ಭದ್ರಾವತಿಯಲ್ಲಿ ಈಗ ಬಹಳ ಜೋರಾಗಿ ನಮ್ಮ ಕಾರ್ಖಾನೆ ಕೆಲಸ ನಡಿತಾ ಇದೆ. ಶ್ರೀನಿವಾಸನ ಲಗ್ನದ ಕರೆ ಓಲೆ ತಲುಪಿತು. ರಜಾ ಸಿಗಲಿಲ್ಲ; ಆದ್ದರಿಂದ ಮಧ್ಯಾಹ್ನ ಬರಲಾಗಲಿಲ್ಲ. ನಾಳೆ ಭಾನುವಾರ, ಇವತ್ತು ಬೆಳಿಗ್ಗೆ ನನ್ನ ಷಿಫ್ಟ ಮುಗಿಯಿತು. ಹೊರಟು ಬಂದೆ."

ಶೇಷಭಟ್ಟನ ಬರುವಿಕೆ ತಿಳಿದು ಶ್ರೀನಿವಾಸ ಒಳಗಿನಿಂದ ಅಲ್ಲಿಗೆ ಬಂದ.

"ಬಾಳೋ ನನಗೆ ನೀನು ಕಾರಣ ಎಷ್ಟು ಸೇರ ಹಾಗಿತ್ತು ಅಂತೀಯಾ ?"

"ನಿಮಗೆ ಲಗ್ನ ಆಯಿತೇ ?" ಮದುವೆ ಆಗಿರಬಹುದೆಂದು ತಿಳಿದು ಗೀತ ಆ ಪ್ರಶ್ನೆ ಕೇಳಿದಳು.

"ಇಲ್ಲ ಅವನಿಲ್ಲಿ ಮದುವೆ ಆಗ್ತಾನೆ. ಈ ಕಡೆ ಎಷ್ಟೋ ಜಾತಕ ಹೆಣ್ಣುಮಕ್ಕಳ ತಂದೆ ಒಯ್ದರು ಧಿಕ್ಕರಿಸಿ ಬಿಟ್ಟಿದ್ದಾನೆ" ಕೃಷ್ಣ ಹೇಳಿದನು.

"ಭದ್ರಾವತಿಯಲ್ಲೇ ಯಾರನ್ನಾದರೂ ಪ್ರೀತಿಸಿರಬಹುದೇನೊ, ಇನ್ನೇನು ಅವನದ್ದು ಮದುವೆ ಆಹ್ವಾನ ಬರುತ್ತೆ ಇಷ್ಟರಲ್ಲೇ ?" ಪಟ್ಟಾಭಿ ಶೇಷಭಟ್ಟನ ಬೆನ್ನು ತಟ್ಟಿ ಹೇಳಿದನು.

ಶೇಷಭಟ್ಟನಿಗೆ ವಾಸ್ತವಿಕವಾಗಿ ಹಾಗೆ ಅನಿಸಿತ್ತು. ಶಿವಮೊಗ್ಗಾಕ್ಕೆ ಹೋಗಿ ಓದುತ್ತಿದ್ದ ಪಕ್ಕದ ಮನೆ 'ಉಮಾದೇವಿ'ಯನ್ನು ಅತ ಪ್ರೀತಿಸಿದ್ದ. ದಿನ ಫ್ಯಾಕ್ಟ್ರಿಯಿಂದ ಮನೆಗೆ ಬರುವಾಗ ಅವಳು ಭದ್ರಾವತಿಯಿಂದ ಶಿವಮೊಗ್ಗಕ್ಕೆ ಕಾಲೇಜಿಗೆ ಹೋಗುತ್ತಿದ್ದಳು. ಮೊದಲು ಒಬ್ಬರನ್ನೊಬ್ಬರು ನೋಡಿ ನಗುತ್ತಿದ್ದರು. ಅದು ಮಾತಿನಲ್ಲಿ ಪ್ರಾರಂಭವಾಗಿ ಮದುವೆ ಮಾಡಿಕೊಳ್ಳುವುದರಲ್ಲಿ ನಿಂತಿತ್ತು.

ಆ ಮೇಲೆ ಅವನೇ ಹೇಳಿದನು.

"ನಾನು ಭದ್ರಾವತಿ ಹುಡುಗಿಯನ್ನೇ ಮಾಡಿಕೊಳ್ಳುವುದು. ನಿಮಗೆಲ್ಲ ತಿಳಿಸದೇ ಮಾಡಿಕೊಳ್ಳುವುದಿಲ್ಲ ಬಿಡು."

ಗೀತ ಒಳಗೆ ಹೋದ ಮೇಲೆ ಪಟ್ಟಾಭಿ ಶೇಷಭಟ್ಟನಿಗೆ ಹೇಳಿದನು,



"ಕೃಷ್ಣನಿಗೆ ಈಗ ಇನ್ನೊಂದು ಹೆಣ್ಣು ಪ್ರಣಯಕ್ಕೆ ಸಿಕ್ಕಿದೆ. ಅದೂ ಕೂಡ ಹಿಂದಿನವೆರಡರಂತೆ ಆಗುತ್ತೋ ಏನೋ ಭಟ್ಟ ?"

"ಯಾರು ಗೀತಳು ತಾನೇ. ಹಾಗಾಗಲಾರದು. ಖಂಡಿತಾ ಅವಳೊಡನೆ ಅವನಿಗೆ ಮದುವೆ ಆದರೆ ಸಾಕು ಮಾರಾಯ."

ಹಾಗಾದ್ರೆ ಕೃಷ್ಣನ 'ಹೊಸ ತೋಟಕ್ಕೆ' ಅವಳೇ ಒಡತಿ ಶ್ರೀಮಂತರ ಮನೆ ಹುಡುಗಿ. ಶ್ರೀಮಂತರ ಮನೆಗೆ ಸೇರೋದು ತಾನೇ ?"

"ಹಾಗಂದರೆ ಏನೂ ?"

"ಕೃಷ್ಣ ಹೊಸ ತೋಟ ಮಾಡಿದ್ದು ಕೇಳಲಿಲ್ಲವಾ ."

ಇಲ್ಲ ಆದರೆ ವಿಷಯ ಕೇಳಿದ್ದೇನೆ"

ಹಸಿರು ಮೈಸೂರು ಸಿಲ್ಕ್ ಸೀರೆ ಉಟ್ಟು, ಕೆಂಪು ರವಿಕೆ ತೊಟ್ಟುಕೊಂಡ ರಾಧಾಳೊಂದಿಗೆ ಸಾಂತಿ ಉಡುಪಿನಲ್ಲೇ ಶ್ರೀನಿವಾಸ ಬಂದು. ತನ್ನ ವಳಿಗೆ ಶೇಷಭಟ್ಟ, ಕೃಷ್ಣ ಪಟ್ಟಾಭಿಯ ಪರಿಚಯ ಮಾಡಿದ.

ಅವರೆಲ್ಲ ಊಟಕ್ಕೆ ಹೋದರು. ಊಟವಾದ ಮೇಲೆ ಶೇಷಭಟ್ಟ. ಒಂದು ಕನ್ನಡಿ ಪೆಟ್ಟಿಗೆ ಉಡುಗೊರೆಯಾಗಿ ಶ್ರೀನಿವಾಸನಿಗೆ ಸಲ್ಲಿಸಿದ.

ಗೆಳೆಯರೆಲ್ಲರೂ ರಾಧಾ ಶ್ರೀನಿವಾಸರ "ಸಮಾಗಮಕ್ಕೆ" ಅವನನ್ನು ಪ್ರಥಮ ರಾತ್ರಿ ಕಳೆಯಲು ಶೃಂಗರಿಸಿದ ಕೋಣೆಗೆ ಕಳಿಸಿದರು.

ಕೋಣೆ ಒಳಗೆ ಹೋದ ಮೇಲೆ ಶ್ರೀನಿವಾಸನಿಗೆ ವಿರಾಮವಾದರೂ. ರಾಧಾಳಿಗೆ ವಿಪರೀತ ಕೆಲಸ ಅವಳು ಕಾಯಿಕೊಟ್ಟು, ಆ ಊರಿನ ಹಿರಿಯ ಹೆಂಗಸರೊಬ್ಬರಿಗೆ ನಮಸ್ಕರಿಸುತ್ತಿದ್ದಳು. ಶ್ರೀನಿವಾಸ ಮಾತ್ರ ಯಾವದೋ ಆನಂದದಲ್ಲಿ ಹಾಸಿಗೆ ಮೇಲೆ ಕುಳಿತಿದ್ದ

ಆಗಲೂ ರಾಧಾಳಿಗೆ ಆ ಊರಿನ ಹೆಂಗಸರಿಂದ ಅನೇಕ ಕುಪ್ಪಸ ಖಣ ಇತ್ಯಾದಿಗಳು ಉಡುಗೊರೆಯಾಗಿ ಬಂದವು

ಪ್ಲಾಸ್ಟಿಕ್ ಪೇಪರಿನಲ್ಲಿ ಸುತ್ತಿದ್ದಿದ್ದನ್ನು ಕೊಡುತ್ತಾ ಗೀತ ಹೇಳಿದಳು:

"ರಾಧಾ ನಿನಗೆ ನನ್ನ ಉಡುಗೊರೆ ಇದೇನೇ ಕಣೆ"

"ಏನಿದು ?"

"ಬಿಚ್ಚಿ ನೋಡು."

ರಾಧಾಳು ಅದನ್ನು ಬಿಚ್ಚಿದಾಗ ಅವಳಿಗಿಷ್ಟವಾದ ನೈಲಾನ್ ದಾವಣಿ. ಗೀತಳ ಒಲವಿನ ಬಗ್ಗೆ ಅವಳಿಗೆ ತುಂಬಾ ಹಿಡಿಸಿತು.

ಗೀತಳ ಉಡುಗೊರೆ ಕಂಡು ಕೃಷ್ಣ ದೂರದಲ್ಲಿ ಗೆಳೆಯರಿಗೆ ಹೇಳಿದ:

"ನಮಗೆಲ್ಲ ತೋರಿಸದೇ ಈಗ ಉಡುಗೊರೆ ಮಾಡಿದ್ದಾಳೆ ಗೀತ ಫಾಟಿ ಹಳ್ಳಲೂ. ರಾಧಾ ದಾವಣಿ ಧರಿಸಲೆಂದು."

ಕೃಷ್ಣ ಎಲೆ ಅಡಿಕೆ ಹಾಕುತ್ತಾ ಅಲ್ಲೇ ಸುಸ್ತಾಗಿ ಕುಳಿತನು ಶೇಷಭಟ್ಟ ಜೇಬಿನಿಂದ ಸಿಗರೇಟು ತೆಗೆದಾಗ ಪಟ್ಟಾಭಿ ಕೃಷ್ಣ ಇಬ್ಬರೂ ಅದನ್ನು ಇಸಿದುಕೊಂಡು ಹಚ್ಚಿದರು

ಹೀಗೆ ವಿಜೃಂಭಣೆ ಸದಾವಕಾಶ ಸಿಕ್ಕಿದರೆ ಎಷ್ಟು ಬೇಕಾದರೂ ಕೆಲಸ ಮಾಡಿಯೇನು" ಎಂದ ಕೃಷ್ಣ

"ನನಗೂ ಹಾಗೇನೆ" ಎಂದು ಜತೆಗೂಡಿಸಿದ ಪಟ್ಟಾಭಿ. ಶೇಷಭಟ್ಟ ಸಿಗರೇಟು ಹೊಗೆ ಬಿಡುತ್ತಾ ಹೇಳಿದ:

"ಬೇರೆ ಯಾರ ಮದುವೆಯೂ ಇಷ್ಟೊಂದು ವಿಜೃಂಭಣೆಯಿಂದ ಆಗಲಾರದೋ ಏನೊ?'

ಅಷ್ಟರಲ್ಲಿ ಪಾರ್ವತಿ ಮನೆಗೆ ಹೊರಟು ಅಲ್ಲಿಗೆ ಬಂದಳು.

"ನಾನು ಮನೆಗೆ ಹೋಗ್ತೀನಿ ಗೀತಾ."

"ನೀನೊಬ್ಬಳೇ ಇಲ್ಲೇ ಮಲಗೇ ಪಾರ್ವತಿ"

ಗೀತಳ ಬೇಸರ ಕಂಡು ಕೃಷ್ಣ ಹೇಳಿದ:

"ಹಾಗೇ ಮಾಡು ಪಾರ್ವತಿ ನಾನು ನಿನ್ನ ಗಂಡನಿಗೆ ಬೇಕಾದರೆ ನಾಳೆ ಬೆಳಗ್ಗೆ ಸಮಾಧಾನ ಮಾಡುತ್ತೇನೆ

ಪಟ್ಟಾಭಿಗೆ ಅದು ಹೌದೆನಿಸಿತು. ಶೇಷಭಟ್ಟ ಮುಗುಳು ನಕ್ಕ

ಹೊರಟವಳು ವಾಪ್ಸು ಒಳಗೆ ಬರುತ್ತಾ, ಪಾರ್ವತಿ ಹೇಳಿದಳು,

"ಆಗಲಿ ನಿನ ಮಾತು ಮೀರೋಲ್ಲ ಕೃಷ್ಣ. ಇಲ್ಲೇ ಎಲ್ಲಾ ವ್ಯವಸ್ಥೆಗೊಳ್ಳುತ್ತೇನೆ."

"ಹಾಗೆ ಮಾಡು ಪಾರ್ವತಿ" ಗೀತ ಸಂತೋಷ ದಿಂದ ಹೇಳಿದಳು. ಗೀತ ಪಾರ್ವತಿ ಇಬ್ಬರೂ ತಟ್ಟೆಯಲ್ಲಿನ್ನ ಎಲೆ ಅಡಿಕೆ ಹಾಕಲು ಅವರ ಮಧ್ಯ ಹೋಗಿ ಕುಳಿತರು. ಕೃಷ್ಣನಿಗೆ ಯಾವುದೋ ಆಸೆ ಪಾರ್ವತಿ ನೋಡಿ ಗೀತಳಿಗೆ ಕೃಷ್ಣನನ್ನು ನೋಡಿ ಏನೋ ಆಸೆ ಮೂಡಿತು. ಸ್ವಲ್ಪ ಹೊತ್ತು ಮೌನ ಯಾರೂ ಮಾತನಾಡಲಿಲ್ಲ; ಅವರಿಬ್ಬರೂ ಎಲೆ ಅಡಿಕೆ ಹಾಕಿ ಮುಗಿಸಿದರು.

ಅವರ ಹರಟೆ ಪ್ರಾರಂಭವಾಯಿತು. ಅದರಲ್ಲಿ ಬೇರೆಯವರ ವಿಷಯವೇ ಇರಲಿಲ್ಲ.

"ನಿನ್ನ ತುಟಿ ತುಂಬಾ ಕೆಂಪಾಗಿದೆ ಕೃಷ್ಣ ಹೌದು ಅಲ್ಲವೋ ಪಟ್ಟಾಭಿ?" ಗೀತ ಕೇಳಿದಳು.

ಸಿಗರೇಟು ಹೊಗೆ ಬಿಡುತ್ತಾ, ಪಟ್ಟಾಭಿ ಹೇಳಿದನು. "ನೀವೆಲ್ಲರಿಗಿಂತ ಪಾರ್ವತಿ ತುಟಿ ಕೆಂಪಾಗಿದ್ದು ಜಾಸ್ತಿ. ಅದಕ್ಕೆ ಕಾರಣ ಗೊತ್ತೇ ನಿಮಗೆ?"

"ಗೊತ್ತಿಲ್ಲದೇ ಏನು ಅವಳಿಗೆ ಮದುವೆಯಾಗಿದೆ ಗಂಡನ ಕೈಯಲ್ಲಿ ಎಲೆ ತಿಂದಿದ್ದಾಳೆ" ಅದಕ್ಕೆ ಕೇಪ ಕೊಟ್ಟು ಹೇಳಿದನು.

ಮದುವೆ ಆಗದ ತನ್ನನ್ನೇ ಕುರಿತು ಅವರು ಹೇಳಿದ್ದೋ ಏನೋ. ಗೀತ ಯೋಚಿಸಿದಳು, ಆಗ ಅವಳಿಗೆ ದುಃಖವಾಯಿತು. ಎಲೆ ಅಡಿಕೆ ಸುದ್ದಿ ಮತ್ತೆ ಎತ್ತಲೇ ಇಲ್ಲ.

ಆ ಮೇಲೆ ಸ್ವಲ್ಪ ಹೊತ್ತು, ಮದುವೆ ಸುದ್ದಿ ಮೇಲೆ ಮಾತನಾಡಿದ ನಂತರ ಮಲಗಲೆದ್ದರು.

ಮಾರನೇ ದಿವಸ ಬೆಳಿಗ್ಗೆ ತಿಂಡಿ ಮುಗಿಸಿ ಗೀತ ಓಳಕಟ್ಟೆಗೆ ಹೋಗುವಾಗ ಕೃಷ್ಣನಿಗೆ ಏಕಾಂತದಲ್ಲಿ ಹೇಳಿದ್ದು ಹೀಗೆ;

"ನಾಳೆನೇ ಅಡಿಕೆ ಸಸಿ ನಡುತ್ತೀರಾ ?"

"ಹೂಂ"

"ಸಂಜೆಗೆ ಸ್ವಲ್ಪ ನಮ್ಮ ಮನೆಗೆ ಬರುತ್ತೀರಾ ?"

"ಆಗಲಿ ಬರ್ತೀನಿ" ಆಮೇಲೆ ಕೇಳಿದ ಅವನು

"ಯಾಕೆ ಗೀತ ?"

"ನಮ್ಮ ತಾಯಿ ನಿನ್ನ ಕರೆದುಕೊಂಡು ಬಾ ಎಂದು ಹೇಳಿದ್ದಾಳೆ."

"ಆಗಲಿ ಗೀತ."

ಹಾಗಾದರೆ ನಾನು ಹೋಗಲಾ ?"

"ನಿಮ್ಮ ತಂದೆ ಇಲ್ಲವಾ ?"

"ಇಲ್ಲ ಅವರು ಶಿವಮೊಗ್ಗಾಕ್ಕೆ ಹೋದರು."

"ಆಗಲಿ"

ಕೃಷ್ಣನನ್ನು ಹುಡುಕಿ ಸಿಗದೇ ಅವನನ್ನು ಕಂಡ ಪಟ್ಟಾಭಿ ಹೇಳಿದ.

"ಏನಂದಳು ಗೀತ ?"

ಕೃಷ್ಣ ಹೇಳಿದನು.

"ಸಂಜೆ ಅವಳ ಮನೆ ಕಾಫಿಗೆ ಬರಬೇಕಂತೆ."

"ನನ್ನ ಕರೀಲಿಲ್ಲಾ ?"

"ಹಾಗಿ ಹೇಳ್ಲೇನು ?"

"ಸದ್ಯ ಬೇಡ ಮಾರಾಯಾ, ನೀನೊಬ್ಬನೇ ಹೋಗುಪಿಯಂತೆ."

—೬—

"ಅಮ್ಮಾ ಅವನು ಈಗ ಬಂದು ಬಿಡ್ತಾನೆ"

ಗೀತ ತೆಳುವಾದ ಬಿಳಿಯ ರೇಶ್ಮೆ ಸೀರೆ ಉಟ್ಟು ಕಪ್ಪು ರೇಶ್ಮೆಯ ರವಿಕೆಯನ್ನು ಹಾಕಿಕೊಂಡ ಮೇಲೆ ಒಳಗಡೆ ತಿಂಡಿ ತಯಾರಿಸುತ್ತಿದ್ದ ತಾಯಿಯನ್ನು ಕುರಿತು ಹೇಳಿದಳು.

"ಕೃಷ್ಣ ನಮ್ಮನೆಗೆ ಹೊಸಬನೇ- ನೀನು ಅವನನ್ನು ಆಹ್ವಾನಿಸದಿದ್ದರೂ ಅವನು ನಮ್ಮನೆಗೆ ಬರುತ್ತಿದ್ದ."

ಅಂಬೊಡೆಯನ್ನು ಕುದಿಯುತ್ತಿದ್ದ ಎಣ್ಣೆ ಬಾಂಡ್ಲೆಯಿಂದ ತೆಗೆದು- ಹರಿವಾಣಕ್ಕೆ ಹಾಕುತ್ತಾ ಪದ್ಮ ಹೇಳಿದರು

"ಈಗ ಅವನಿಗೆ ಪುರುಸೊತ್ತೇ ಸಿಗೊಲ್ಲಮ್ಮ ಯಾಕಂತಿಯೊ ? ಅವನು ಈಗ ಉತ್ತಮವಾದ 'ಹೊಸತೋಟ' ಒಂದನ್ನು ಎಬ್ಬಿಸುವುದರಲ್ಲಿ ನಿರತನಾಗಿದ್ದಾನೆ."

"ಗೀತಾ ನೀ ಏನೇ ಹೇಳು, ಕೃಷ್ಣ ಈ ಊರಿಗೆ ಒಬ್ಬ ಆದರ್ಶ ಹುಡುಗ. ಅವನಂತಾ ಮಕ್ಕಳು ಇದ್ದ ತಂದೆ ತಾಯಿಗಳಿಗೆ ಏನೂ ಕೊರತೆ ಇರೊಲ್ಲ."

"ನಾನು, ಸೀತಾರಾಮು ನಿನಗೆ ಈಗ ಕೊಂಚ ಕೊಟ್ಟಿದ್ದಾದರೂ ಏನು ?"

ಗೀತ ಹೆರಳು ಶೃಂಗಾರ ಮಾಡಿಕೊಂಡ ಮೇಲೆ ಹುಸಿ ಕೋಪ ಬೀರಿ ತಾಯಿಗೆ ಆ ಮಾತು ಹೇಳಿದಳು.

"ನಿಮ್ಮನ್ನು ನಾವು ಟೀಕೆ ಮಾಡಿಲ್ಲ ಗೀತ, ಈಗ ನೋಡು. ವಿಘ್ನೇಶ್ವರಯ್ಯ, ಶಾರದಮ್ಮ, ಎಷ್ಟು ಸುಖವಾಗಿ ಕಾಶಿಯಾತ್ರೆ ಹೋಗಿದ್ದಾರೆ. ಈ ರೀತಿ ನಮ್ಮ ಕೈಲಿ ಹೋಗಲು ಸಾಧ್ಯವಿದೆಯೇ ? ಗೋಕರ್ಣಕ್ಕೆ ಹೋಗಿ ಬರಬೇಕು ಅಂತ ನಾವು ಎಷ್ಟು ವರುಷಗಳಿಂದ ಯೋಚಿಸುತ್ತಿದ್ದೇವೆ. ಆದರೆ ಸೀತಾರಾಮು, ನೀನು ಇನ್ನೂ ವ್ಯಾಸಂಗದಲ್ಲೇ ಇದ್ದೀರಿ ನಮಗೆ ಮನೆ ಬಿಡೋಕೆ ಎಲ್ಲಿ ಸಾಧ್ಯವಿದೆ ಹೇಳು"

ಕೃಷ್ಣನ ಮೇಲೆ ತಾಯಿಗಿದ್ದ ಅಭಿಮಾನ ಕಂಡಾಗ ಗೀತಳಿಗೆ ತುಂಬಾ ಆನಂದವಾಯಿತು. ಆದರೂ ಅದು ತಾಯಿಗೆ ಗೊತ್ತಾಗದಿರಲೆಂದು ಹೇಳಿದಳು.

"ಮುಂದೆ ಸೀತಾರಾಮು ಈ ಮನೆಗೆ ಬಂದು ಶಾಶ್ವತವಾಗಿ ನಿಂತ ಮೇಲೆ ನೀವು ಹೀಗೆ 'ಯಾತ್ರೆ'ಗೆ ಹೋಗಬಹುದು ಕಣೇ."

ತನಗೇನೂ ಈ ಮನೆಯಲ್ಲಿ ಹಕ್ಕಿಲ್ಲ. ತಾನು ಯಾರಾದರೊಬ್ಬರ ಮಡದಿಯಾಗಿ ಹೋಗಿ ಅಲ್ಲಿ ಆಡಳಿತ ನಡೆಸುವವಳು ತಾನೇ.

ಪದ್ಮ ಅಂಬೊಡೆ ಕೆಲಸ ಮುಗಿಸಿ ಬಾಂಡ್ಲೆ ಕೆಳ ಕ್ಕಿಡುವಾಗ ಆ ಮಾತು ಹೇಳಿದ್ದು.

ಗೀತ ತನ್ನ ಶೃಂಗಾರವೆಲ್ಲ ಮುಗಿಸಿಕೊಂಡು ಹೊರಗೆ ಬಂದು ಗುಡ್ಡದ ಕಾಲುದಾರಿ ಕಾಣುತ್ತಿದ್ದಷ್ಟು ಉದ್ದಕ್ಕೂ ನಿಂತು ನೋಡಿದಳು. ಆದರೆ ಕೃಷ್ಣ ಬರುವ ರೀತಿಯೇ ಕಾಣಿಸಲಿಲ್ಲ.

ಹಾಗೆ ಅವಳು ಕೃಷ್ಣನ ಬರವನ್ನು ಕಾಣದಾಗ ಅವಳು ತುಂಬಾ ನಿರಾಶರಾದಳು.

"ಗೀತಾ ಅದೇನು ಹಾದಿ ಹೊರಗೆ ನಿಂತುಬಿಟ್ಟೆ. ಬಾ, ತಿಂಡಿ ಕೊಡ್ತೀನಿ."

"ಊಹುಂ"

"ಅಂಬೊಡೆ ಹಾಡು ಎಂದು ಬಂದ್ಬಿಡುತ್ತೆ."

ಕೇಳಿಲ್ಲ. ಈಗ ನೀನಾದರೂ ಈ ಅವಕಾಶ ಮಾಡಿ-ಕೊಡು."

"ಹಾಡೇನು ಗೀತ?"

ಗೀತ ಮಾತನಾಡಲಿಲ್ಲ. ಆದರೆ ಅವಳಿಗೆ ಪದ್ಮರ ಮಾತಿನಿಂದ ತುಂಬಾ ಸಂತೋಷವಾಗಿತ್ತು.

"ಯಾರ ಯಾರ, ಕವಿಗಳ ಗೀತೆ ನೀನು ಕಲ್ತು ಕೊಂಡಿದ್ದೀಯಾ?"

"ನನಗೇನೂ ಬರೋಲ್ಲ ಕೃಷ್ಣ."

"ಅದು ನನರೆ ಶ್ರೀನಿವಾಸನ ಮದುವೆಯಲ್ಲಿ ರೊತ್ತಾಯ್ತಲ್ಲ."

ಕೃಷ್ಣ ತಿಂಡಿ ಮುಗಿಸಿ ಮುಂದುಗಡೆ ಬಂದು ಕುಳಿತ ಮೇಲೆ ಎಲೆ ಅಡಿಕೆ ಹಾಕುವಾಗ ಕೇಳಿದ.

ಗೀತ ಬಾಯಿ ತುಂಬುವಷ್ಟು ಎಲೆ ಅಡಿಕೆಯನ್ನು ಹಾಕಿಕೊಂಡಳು

ಅವಳು ಈಗ ತುಂಬಾ ಚೆಲುವೆಯಾಗಿ ಕೃಷ್ಣನಿಗೆ ಕಾಣಿಸಿಕೊಂಡಳು. ಅವಳ ತುಟಿಗಳು ಈಗ ತುಂಬಾ ಕೆಂಪಾಗಿದ್ದುವು.

"ಅಬ್ಬಾ ಎಷ್ಟು ಕೆಂಪಾಯ್ತು ನಿನ್ನ ತುಟಿಗಳು ಗೀತ"

"ನಿಮಗಿಂತಾ ಏನು ಹೆಚ್ಚಿಲ್ಲ ಬಿಡಿ."

"ನನ್ನದು ಕೆಂಪಾಗಿದೆಯೇನು?"

"ಪ್ರಾಯದವರು ನೀವು, ಈಗ ಎಲ್ಲವೂ ನೀವು ಮಾಡಿದ್ದು ಚೆನ್ನಾಗಿರುತ್ತೆ"

ಪದ್ಮ ಅಷ್ಟು ತಮಾಷೆ ಹೇಳಿ ಒಳಗೆ ಹೋದರು

"ಗೀತಾ ಈಗ ಗೀತೆ ಹೇಳು."

"ಹೂಂ"

ಗೀತ ಸೀರೆಯನ್ನು ಸರಿ ಮಾಡಿಕೊಂಡಳು. ಚಟಿಗೆ ಮಟ್ಟಿಗೆ ಹಾಕಿ ಕುಳಿತು ಒಂದು ಕೈಯಿಂದ ತೊಡೆಯ ಮೇಲೆ ತಾಳ ಹಾಕುತ್ತಾ ಕಣ್ಣು ಮುಚ್ಚುತ್ತಾ ಹಾಡತೊಡಗಿದಳು.

ಕೃಷ್ಣನ ಮುಖ ಗೆಲುವಿನಿಂದ ತುಂಬಿ ಹೋಯಿತು. ಗೀತಳ ಮಧುರ ದನಿ ಅವನ ಹೃದಯವನ್ನೇ ಮೋಹಗೊಳಿಸಿತು. ಪದ್ಮರಿಗೂ ಸಂತೋಷವಾಯಿತು. ತಮ್ಮ ಮಗಳು ಇಷ್ಟು ಸೊಗಸಾಗಿ ಹಾಡುತ್ತಾಳೆ ಎಂದುಕೊಂಡಿರಲಿಲ್ಲ ಅವರು.

ಕೃಷ್ಣನನ್ನು ಗೀತಾ ತೃಪ್ತಿಯಿಂದ ನೋಡಿದಳು.

"ನನಗೆ ಈ ದಿನ ತುಂಬಾ ಆನಂದವಾಗಿದೆ ಗೀತಾ"

"ಈ ಆನಂದ ನಿಮ್ಮೊಬ್ಬರದಲ್ಲ ನನ್ನದೂ ಸಹ"

ಪದ್ಮ ಮಗಳ ಜಡೆಯ ತುದಿಯನ್ನು ಸರಿ ಮಾಡುತ್ತಾ ಹೇಳಿದರು

ಕೃಷ್ಣನ ಅರಳಿದ ಮುಖ ನೋಡಿದಷ್ಟೂ ಇನ್ನಷ್ಟು ನೋಡಬೇಕು ಅಂದುಕೊಂಡಳು ಗೀತ.

"ನಾ ಬರುತ್ತೇನೆ ಗೀತ"

"ಅದೇನು ಇಷ್ಟು ಬೇಗ?"

"ಕೃಷ್ಣ ಮನೆಗೆ ಹೋದರೂ ನೀನೇ ತಾನೇ ಕೈಸುಟ್ಟುಕೊಂಡು ಅಡಿಗೆ ಮಾಡೋದು. ಅದಕ್ಕಾಗಿ ನನದೊಂದು ಸಲಹೆ ನಿನಗೆ..."

"ನಿಮ್ಮ ಸಲಹೆ ಏನೆಂದು ನನಗರ್ಥವಾಯಿತು. ಊಟ ಮುಗಿಸಿಕೊಂಡು ನಾನು ಹೋಗಬೇಕೆಂದು ತಾನೇ?"

"ಹುಂ ಕೃಷ್ಣ"

"ಬೇಡ ಬೇಡ".

ಕೃಷ್ಣನಿಗೂ ಆ ದಿನವೆಲ್ಲ ಹೇಳುವಂಥ ಬೇರೊಂದೂ ಅಗತ್ಯದ ಕೆಲಸವಿರಲಿಲ್ಲ ಅದನ್ನು ನೆನಪು ಮಾಡಿಕೊಂಡ ಮೇಲೆ ಗಂಟಲ ಮೇಲೆ ಆ ಮಾತು ಹೇಳಿದ

"ಕೃಷ್ಣನೊಡನೆ ನೀನು ಹರಟು ಗೀತ"

"ಯಾಕೆ?"

"ನಾನು ಬೇಗ ಬೇಗ ಮೈ ತೊಳೆದು ಅಡಿಗೆ ಮಾಡುತ್ತೇನೆ"

"ಆಗಲಿ"

ಪದ್ಮ ಒಳಗೆ ಹೋದವರು ಅಡಿಗೆ ಒಲೆ ಬೆಂಕಿ ದೊಡ್ಡದು ಮಾಡಿ ತೋಟದಲ್ಲಿದ್ದ ಬಚ್ಚಲಿಗೆ ಮೈ ತೊಳೆಯಲು ಹೋದರು

ಗೀತ ಕೃಷ್ಣನೊಡನೆ ನಡೆಯುತ್ತಾ ತನ್ನ ತೋಟದೊಳಗೆ ಹೋಗುವಾಗ ಹೇಳಿದಳು.

"ಈ ತೋಟ ಹೇಗಿದೆ ಕೃಷ್ಣ?"

ಕೃಷ್ಣ ಬೆಳೆದು ನಿಂತ ಬಾಳೆ ಮರ ಒಂದಕ್ಕೆ ಒರಗಿ ತೋಟವನ್ನೊಮ್ಮೆ ವೀಕ್ಷಿಸಿದ ತೋಟದುದ್ದಕ್ಕೂ ಅಡಿಕೆ ಸಸಿಗಳು ಬೆಳೆದು ಸೊಂಪು ಸೂಸಿ ನಿಂತಿದ್ದುವು. ಅದರ ಒಡದಲ್ಲಿ ರಾಶಿ ರಾಶಿ ಒಣಗಿದ ಸೊಪ್ಪು ಗೊಬ್ಬರ ಒಂದು ಅಳತೆಯಲ್ಲಿ ಶೇಖರವಾಗಿತ್ತು. ಅಡಿಕೆ ಮರದ ಜತೆಗೆ ಸಾಕಷ್ಟು ಬಾಳೆ ಸಸಿಗಳೂ ಬೆಳೆದಿದ್ದವು

ಸುಮ್ಮನೇ ನಿಂತು ಕೃಷ್ಣ ತನ್ನ ತೋಟ ನೋಡುತ್ತಿರುವುದು ಗೀತಳಿಗೆ ಆಗಲಿಲ್ಲ. ಅವಳು ಮಾತ್ರ ಕೃಷ್ಣನನ್ನೇ ಪ್ರೀತಿಯ ಕಣ್ಣುಗಳಿಂದ ನೋಡಿದಳು ಆದರೆ ಕೃಷ್ಣ ತೋಟದ ಬೆಳವಣಿಗೆಗೆ ಗೀತಳ ತಂದೆ ಮಂಜಪ್ಪಯ್ಯ ಮಾಡಿದ ಕೃಷಿಯನ್ನು ಏಕಾಗ್ರತೆಯಿಂದ ಪರೀಕ್ಷಿಸುತ್ತಿದ್ದ.

ಪಟ್ಟಾಭಿಯು ಹೇಳಿದ್ದ ಮಾತೊಂದು ಕೃಷ್ಣನಿಗೆ ಆಗ ನೆನಪಿಗೆ ಬಂತು 'ಮಂಜಪ್ಪಯ್ಯ ತಮ್ಮ ತೋಟವನ್ನು ಮಕ್ಕಳಿಗಿಂತಲೂ ಚೆನ್ನಾಗಿ ಬೆಳಸಿದ್ದಾರೆ ಕೃಷ್ಣ. ಆ ಉತ್ಸಾಹ ನಿನ್ನೊಬ್ಬನನ್ನು ಬಿಟ್ಟರೆ ನಮ್ಮೂರಲ್ಲಿ ಇನ್ಯಾರಿಗೂ ಇಲ್ಲ ಬಿಡು. ಕೆಲಸದಲ್ಲಿ 'ಅನುಭವ ಇಲ್ಲದಿದ್ದರೂ ಪಟ್ಟಾಭಿ ಒಳ್ಳೆ ವಿಮರ್ಶಕ ಮಾತ್ರ ನಿಜ ಅವನ ಮಾತು ಈಗ ಪ್ರತ್ಯಕ್ಷವಾಗಿದೆ.

ಕೃಷ್ಣ ಗೀತಳಿಗೆ ಏನೂ ಹೇಳದೇ ತೋಟದ ಉದ್ದಗಲಕ್ಕೂ ತಿರುಗಿ ಮನಸ್ಸಿಗೆ ತೃಪ್ತಿ ಆಗುವವರೆಗೂ ತೋಟದ ಬೆಳವಣಿಗೆಯನ್ನು ಗಮನಿಸಿದ

"ಕೃಷ್ಣ ನಿನಗೆ ತೋಟ ಒಂದಿದ್ದರೆ ಸಾಕೆಂತ ಕಾಣುತ್ತೆ?

ಕೃಷ್ಣ ಗೀತಳ ಮಾತು ಪೂರ್ತಿ ಕೇಳಿಸಿಕೊಂಡ ಮೇಲೆ ಸಂಪೂರ್ಣವಾಗಿ ತೃಪ್ತನಾದ ಆ ಗುಂಗಿನಲ್ಲೇ ಅವನು ಹೇಳಿದ

"ಮಂಜಪ್ಪಯ್ಯನವರು ಈ ದಿನ ಇದಿದ್ದರೆ, ಒಂದಿಷ್ಟು ಒಗ್ಗು ಹಾಕಿದ ಈ ಅಡಿಕೆ ಸಸಿಗಳನ್ನು ತೆಗೆದುಕೊಂಡು ಹೋಗಿ ನನ್ನ ಹೊಸ ತೋಟಕ್ಕೆ ನಡೆಸಬಹುದಿತ್ತು

"ಕೃಷ್ಣ ನಿನ್ನ ಹೊಸ ತೋಟದ ಹೆಸರೇನು?"

"ಅಂ"

ಇದುವರೆವಿಗೂ ತನ್ನ ಹೊಸ ತೋಟಕ್ಕೆ ಒಂದು ಹೆಸರಿಡಬೇಕೆಂದು ಅವನಿಗೆ ಅನ್ನಿಸಿರಲಿಲ್ಲ. ಈಗ ಗೀತಳ ಮಾತಿನಿಂದ ಅವನು ಆಶ್ಚರ್ಯದಿಂದ ತುಂಬಿ ಹೋದ.

"ಅಂದ ಮೇಲೆ ನಿನ್ನ ತೋಟಕ್ಕೆ ಇನ್ನೂ ಹೆಸರು ಇಟ್ಟಿಲ್ಲ ಅನ್ನು"

"ಹೌದು ಗೀತ"

"ಯಾವುದಾದರೂ ಹೆಸರಿಡಬೇಕಲ್ಲ ಕೃಷ್ಣ"?

"ಸಾಹಿತಿ ಶ್ರೀನಿವಾಸನನ್ನು ಕೇಳಿ ಒಂದು ಹೆಸರನ್ನು ನನ್ನ ಈ ಹೊಸ ತೋಟಕ್ಕೆ ಇಡಬೇಕು ಗೀತ"

"ನಾನೊಂದು ಹೆಸರು ಸೂಚಿಸಲೇ?"

"ಸೂಚಿಸಬೇಡ ಅಂದೆನೆ ನಾನು"?

"ಹಸಿರು ಪ್ರಪಂಚ"

"ನಿನ ತಲೆ ಬರಹ ಸರಿ ಇದೆ ಆದರೆ ಅದನ್ನು ಸ್ವಲ್ಪ ಬದಲು ಮಾಡಿದರೆ ಚೆನ್ನ ಅನ್ನಿಸುತ್ತೆ."

"ಅದೇನು ಬದಲು ಮಾಡುತ್ತಿ ಮಾಡು"

"ಹಸಿರು ಪ್ರವಾಹ"

"ಚೆನ್ನಾಗಿದೆ"

"ಅದರೊಳ ಶ್ರೀನಿವಾಸ ಈ ಹೆಸರು ಒಪ್ಪಬೇಕು"

"ಖಂಡಿತವಾಗಿಯೂ ಒಪ್ಪುತ್ತಾರೆ ನೋಡು''

ಕೃಷ್ಣ ಗೀತಳೊಡನೆ ಮನೆ ಸೇರಿದಾಗ ಪದ್ಮ ಅಡಿಗೆ ಮಾಡಿ ಮುಗಿಸಿದ್ದರು.

ಗೀತ ಅಡಿಗೆ ಮನೆಯನ್ನು ಪ್ರವೇಶಿಸಿದವಳೇ ಆತುರದಿಂದ ತಾಯಿಯನ್ನು ಕುರಿತು ಹೇಳಿದಳು;

"ಅಮ್ಮ ಕೃಷ್ಣ ಹೊಸ ತೋಟಕ್ಕೆ 'ಹಸಿರು ಪ್ರವಾಹ' ಅಂತ ಹೆಸರು ಇಡುತ್ತಾನಂತೆ.

"ಈ ಹೆಸರು ನನಗೆ ಸರಿ ಅನ್ನಿಸಲಿಲ್ಲ ಗೀತ''

"ಯಾಕೋ?''

"ಭೂಮಿತಾಯಿ ಅವಳ ಮೈಯಲ್ಲಿ ಬೆಳೆಯುವ ಶಕ್ತಿಗೆ ದೇವರ ಹೆಸರು ಯೋಗ್ಯ."

"ಅಂದರೆ...''

"ಸೀತಾ ವನ...'ವಿಜಯಲಕ್ಷ್ಮಿ' ಈ ರೀತಿ ಯಾವುದಾದರೂ ಒಂದು ಹೆಸರು ಚೆನ್ನ...''

ಕೃಷ್ಣ ಗೀತಳ ಹಿಂದೆ ಬಂದವನು ಪದ್ಮರ ಮಾತು ಕೇಳಿ ಹೇಳಿದ

"ನಿಮ್ಮ ಸಲಹೆ ನನಗೂ ಹಿಡಿಸಿತು. ನನ್ನ ಈ ತೋಟಕ್ಕೆ 'ವಿಜಯ ಲಕ್ಷ್ಮಿ' ಎಂದೇ ಹೆಸರು..."

"ಊಟಕ್ಕೆ ಎಲೆ ಹಾಕು ಗೀತ''

"ಹುಂ, ಆಗ್ಲಮ್ಮ''

-೨-

ಕೃಷ್ಣನಿಗೆ ಪಟ್ಟಾಭಿಯ ಕಾಗದ ಬಂದಾಗ ಸಂಭ್ರಮವು ಮುಖವೆಲ್ಲ ತುಂಬಿಹೋಯಿತು

ಗೆಳೆಯ, ಕೃಷ್ಣ

ನಿನ್ನ ಸ್ನೇಹದ ಅಮೃತ ಈಗ ನನ್ನ ಜೀವನದಲ್ಲಿ ಹರಿಯತೊಡಗಿದೆ. ನೀನು ಶ್ರಮಜೀವಿ ಆದ್ದರಿಂದಲೇ. ನನ್ನ ಸೋಮಾರಿತನ ನಿನಗೆ ಹಿಡಿಸುತ್ತಿರಲಿಲ್ಲ, ಅದಕ್ಕಾಗಿ ತಾನೆ ಈಗ ನನಗೆ ಇಷ್ಟೊಂದು. ಉತ್ತಮವಾದ ಕೆಲಸ ಕೊಡಿಸಿ ಊರಿನವರಲ್ಲಿ ನನ್ನ ಬಗ್ಗೆ ಇದ್ದ ತಪ್ಪು ಕಲ್ಪನೆ ಹೋಗಲಾಡಿಸಿದೆ ನಿನ್ನಂತೆ ಕೃಷಿ ಜಗತಿನಲ್ಲಿ ನಾನು ದುಡಿಯಲಾರೆ ಅದೇನೋ ಕೃಷಿಕಾರನ ಮಗನಾದರೂ ನಾನು ಈ ರೀತಿ ಅದರ ವಿರುದ್ಧವಾಗಿ ಬೆಳೆದನೊ? ಅದೇ ನನಗೆ ಇನ್ನೂ ಹೊಳೆದಿಲ್ಲ: ಈ ಪತ್ರಿಕಾ ಜಗತ್ತು ನನ್ನ ರಕ್ತದೊಡನೆ ಸೆರಿಕೊಂಡಿದೆ. ಇಲ್ಲ ನನಗೆ ಏನೇ ಇರಲಿ ಅದು ನನಗೆ ಸುಖವಾಗಿದೆ

ನಿನ್ನ ಹೊಸ ತೋಟಕ್ಕೆ ನಾನೀಗ ಒಂದು ತಲೆ ಬರಹ ಕೊಡುವಷ್ಟು ಬುದ್ಧಿವಂತನಾದೆ. ಹೀಗೆ ಈ ರೀತಿ ನಾನು ಬದಲಾದೆ ಎಂದು ನಿನಗೇ ಆಶ್ಚರ್ಯವಾಗಿದೆ ಅಲ್ಲವೇ? ಅದಲೆ ಇಲ್ಲಿ ನನ ಕೆಲಸ ಅದೇ ಸುದ್ದಿಗೆ ಪ್ರತಿ ದಿನ ತಲೆಬರಹ ಇಡಬೇಕು. ಅದರೊಂದಿಗೆ ಶ್ರೀನಿವಾಸನಂತಹ ಹತ್ತಾರು ಲೇಖಕರು ದಿನ ನಿತ್ಯ ಕಳಿಸುವ. ಕವನಗಳು. ಕತೆಗಳು ಲೇಖನಗಳು 'ತಲೆಬರಹ' ನೋಡಿ ನೋಡಿ ನಾನೀಗ ತಲೆಬರಹ ಸೂಚಿಸುವುದರಲ್ಲಿ ನಮ್ಮ ಸಂಪಾದಕರ ಮಂಡಲಿಯಲ್ಲಿ 'ಬುದ್ಧಿವಂತ' ಅನ್ನಿಸಿಕೊಂಡಿದ್ದೇನೆ

ಶ್ರೀನಿವಾಸನ ದಾಂಪತ್ಯ ಹೇಗಿದೆ? 'ನಾನು ಪತ್ರಿಕಾ ಸಂಪಾದಕನಾದ ಮೇಲೆ ಮೊನ್ನೆ ಒಂದು ದಿನ ರಾಧಾಳೊಡನೆ ನಮ್ಮ ಕಛೇರಿಗೆ ಭೇಟಿಕೊಟ್ಟಿದ್ದ. ಅವನು ಹೋಗುವಾಗ ಒಂದು ಮಾತು ಹೇಳಿ ಹೋಗಿದ್ದ ಅದು ನಾನು ನಿಜವೆಂದೇ ಭಾವಿಸಿದ್ದೇನೆ.

ನೀನು ಈಗ ಗೀತಳೊಡನೆ ಪ್ರಣಯ ಆರಂಭಿಸಿದ್ದೀಯಾ ಎಂದು. ಈ ಮಾತು ಸತ್ಯ. ನೀನು ಹೇಳುವುದು ಬೇಡ ಆದರೆ ಈ ನಿಮ್ಮ ವಿಶ್ವಾಸ ಕರಟದೇ ಚಿಗುರಿ, ಮದುವೆಯಲ್ಲಿ ಮುಕ್ತಾಯವಾದರೆ...!!!

ಗೀತಳ ಬಗ್ಗೆ ನನಗೆ ಒಳ್ಳೆಯ ಅಭಿಪ್ರಾಯವಿಲ್ಲ ಕಾರಣ ಅವಳಿಗೆ ಅಸಾಧ್ಯ ಜಂಭ. ಹುಡುಗಾಟಿಕೆಯಿಂದಲೂ ಅಷ್ಟೇ... ಅದರೊಡನೆ ಮಂಜಪ್ಪಯ್ಯ, ಪದ್ಮ... ಮುದ್ದಿನಿಂದ ಬೆಳೆಸಿದ್ದು ಬೇರೆ... ಇವೆಲ್ಲಕ್ಕಿಂತಲೂ ಹೆಚ್ಚು ಗೀತಳಿಗೆ ತಾನು ಅತಿ ಸುಂದರಿ ಎಂಬ ಜಂಭ

'ಈ ಜಂಭಗಾತಿಯನ್ನು ಕಟ್ಟಿಕೊಂಡು ಅದೇನು ಕೆಲಸ ಮಾಡಿಸುತ್ತೀಯೋ ಏನೊ?'

ನಾನೇಕೆ ಈ ನಿಮ್ಮ ವೈಯಕ್ತಿಕ ಜೀವನದಲ್ಲಿ ನುಗ್ಗಲಿ... ಅದು ನಿನಗೆ ಇರಲಿ... ನಿನ್ನ ಹೊಸ ತೋಟಕ್ಕೆ 'ವಿಜಯಲಕ್ಷ್ಮಿ' ಎಂದು ಹೆಸರಿಡು.

ಆ ಹೆಸರನ್ನು ನಾನು ಸೂಚಿಸಲು ಸ್ಫೂರ್ತಿ ಯಾಕೆ ಬಂತು ಗೊತ್ತಾ?...ಹೇಳುತ್ತೇನೆ ಅಲ್ಲ ಅಲ್ಲ...ಬರೆಯುತ್ತೇನೆ. ಈಗ ನೀನು ನನ್ನ ಸಲಹೆಯಂತ 'ಶಾಲೆ ಮನೆ ಕೋಗಮ್ಮ' ದರಕಾಸ್ತಿನಲ್ಲಿ ಪಡೆದೆ ಅಷ್ಟೇ ಅಲ್ಲ...ನಿನ್ನ ತಂದೆ ತಾಯಿಗಳು ಯಾತ್ರೆಯಿಂದ ಹಿಂತಿರುಗುವಾಗಲೇ, ಅದನ್ನು ತೋಟದ ರೂಪಕ್ಕೆ ತಿರುಗಿಸಿದೆ ನೋಡು. ಅದರಲ್ಲಿ ಫಲ ಇನ್ನೂ ಹತ್ತು ವರ್ಷದ ಮೇಲೆ ಬರಲಿ. ಅದೀಗ ಮುಖ್ಯವಲ್ಲ ಯಾಕಂತೀಯೋ ಕೃಷಿ ನಡೆದಂತೆ ಅದರ ಬೆಳವಣಿಗೆ. ಈ ಒಂದು ನನ್ನ ಸೂಚನೆ ನಿನ್ನ ವಿಷಯದಲ್ಲಿ ಅತ್ಯಂತ ವಿಜಯವಾಗಿ ನಡೆಯಿತು. ಆ ನಂತರ ಭಗ್ನ ಪ್ರಣಯಿ ಆಗುತ್ತಿದ್ದ ನಿನಗೆ ಈಗ ಗೀತಳ ಸ್ನೇಹ ಸಿಕ್ಕಿದೆ ಅವಳೊಮ್ಮೆ ನನ್ನ ಸಾಹಿತಿ ಶ್ರೀನಿವಾಸನ 'ಆಸೆ'ಯಂತೆ ನಿನ 'ಮಡದಿ' ಯಾಗಿ ಬಂದರೆ 'ಲಕ್ಷ್ಮೀ' ಆಗಬಲ್ಲಳು... ಅವಳ ಮತ್ತು ನಿನ ದಾಂಪತ್ಯದ ಮೊಗ್ಗಾಗಿ ಅರಳುವಾಗ ನಿನ್ನ ಹೊಸ ತೋಟ 'ಲಕ್ಷ್ಮೀ' ಆಗಿ ನಿನಗೆ ಉಳಿಯುವಳು ಅಂದರೆ ಗೊತ್ತಾಯ್ತಲ್ಲ ಅಡಿಕೆ ಫಲ ಬಂದಾಗ ಅದರ ಉತ್ಪತ್ತಿಯೇ 'ಲಕ್ಷ್ಮಿ' ಆದ್ದರಿಂದ ನಿನ್ನ ಹೊಸ ತೋಟಕ್ಕೆ 'ವಿಜಯಲಕ್ಷ್ಮಿ' ಎಂದು ಹೆಸರು ಕೊಡು

ಈ ಹೆಸರು ಪ್ರಖ್ಯಾತವಾಗಲು ಏನು ಮಾಡಬೇಕು? ಅದಕ್ಕೂ ಉತ್ತರ ಇಲ್ಲಿದೆ ನೋಡು;

ಒಂದು ದಿನ ಸರಳ ಸಮಾರಂಭ ಏರ್ಪಡಿಸು, ಹಿತ್ತಲಗಿಡ ಮದ್ದಲ್ಲಂತ ಗಾದೆ ನೆನಸಿ ನಮ್ಮೂರ ಲೇಖಕ ಶ್ರೀನಿವಾಸನಿಂದ "ವಿಜಯ ಲಕ್ಷ್ಮೀ' ತೋಟದ ಪ್ರಾರಂಭೋತ್ಸವ ಅಡಿಕೆ ಸಸಿ ನೆಡುವುದರಿಂದ ಮಾಡು. ಊರಿನವರನ್ನು ಆ ದಿನ ಕರೀ ಅವರಿಗೂ ನಿನ್ನ 'ವಿಜಯ ಲಕ್ಷ್ಮಿ' ತೋರಿಸಿದಂತಾಗುತ್ತದೆ. ನಂತರ 'ವಿಜಯ ಲಕ್ಷ್ಮಿ' ನಾಮಫಲಕ ರಸ್ತೆಯಲ್ಲಿ ನೆಡಿಸು ಅನಂತರ ನಿನ್ನ ಈ ಹೊಸ ತೋಟ ಎಲ್ಲೆಲ್ಲೂ ಮೆರೆಯುತ್ತದೆ... ...!

ಕಾರ್ಯಕ್ರಮ ಮುಗಿದ ಮೇಲೆ ಸುದ್ದಿ ಕಳಿಸುವುದು ಮರೆಯಬೇಡ ಕೃಷ್ಣ. ಆ ಸುದ್ದಿ ನನ್ನ ಪತ್ರಿಕೆಯಲ್ಲಿ ಸಾಕಷ್ಟು ಪ್ರಚಾರ ಮಾಡುತ್ತೇನೆ.

ಒಮ್ಮೆ ಶಿವಮೊಗ್ಗಕ್ಕೆ ಬಾ ಬಹಳ ಹೊತ್ತು ಕಳೆಯಬಹುದು. ಈ ದಿನ ಅಪ್ಪಯ್ಯನಿಗೆ ನನ್ನ ದುಡಿಮೆಯ ಮೊದಲ ಕಂತು ನೂರು ರೂಪಾಯಿಗಳನ್ನು ಕಳಿಸಿದ್ದೇನೆ

ನಿನ್ನ ಪಟ್ಟಾಭಿ ಗೆಳೆಯ.

ಕೃಷ್ಣನಿಗೆ ಪಟ್ಟಾಭಿ ಕಾಗದ ಓದಿ ತುಂಬಾ ಆನಂದವಾಯಿತು ತನ್ನ ತೋಟದ ಹೆಸರು 'ವಿಜಯಲಕ್ಷ್ಮಿ' ತಾನು ಬರೆಯದ ತಾನು ನಿರ್ಧರಿಸಿದ ತಲೆಬರಹ ಗೆಳೆಯ ಸೂ ಪತ್ರಿಕೋದ್ಯೋಗಿಯಾದ ಪಟ್ಟಾಭಿಯಿಂದ ಬಂದದ್ದು ಕೂಡ ತನ ಸೌಭಾಗ್ಯವೇ ಸ್ರಿ."

ಅವನು ಅದನ್ನು ನೆನಸುತ್ತಿದ್ದಂತೆಯೇ ಶ್ರೀನಿವಾಸ ಅಲ್ಲಿಗೆ ಬಂದ

ಶ್ರೀನಿವಾಸ ಬಂದವನೇ ಕೃಷ್ಣನ ಕೈಲಿದ್ದ ಪಟ್ಟಾಭಿಯ ಕಾಗದ ತೆಗೆದುಕೊಂಡು ಆತುರದಿಂದ ಓದಿದ. ಅವನು ಓದುವಾಗ ಕೃಷ್ಣನ ಮುಖದ ಬದಲಾವಣೆಯನ್ನು ಮಧ್ಯ ಮಧ್ಯ ಗಮನಿಸಿದ.

"ಪಟ್ಟಾಭಿ ಈಗ ಎಷ್ಟು ಬದಲಾಯಿಸಿದ್ದಾನೆ ಶ್ರೀನಿವಾಸ?" ಕೃಷ್ಣ ಹೇಳಿದನು

"ಹೌದು'' ಶ್ರೀನಿವಾಸ ಪಟ್ಟಾಭಿ ಕಾಗದ ಪೂರ್ತಿ ಓದುವುದರಲ್ಲಿ ಆಸಕ್ತನಾದ

"ಅವನ ಸಲಹೆ ನನಗೆ ಹಿಡಿಸಿತು ಕೃಷ್ಣ."

ಶ್ರೀನಿವಾಸ ಪಟ್ಟಾಭಿಯ ಕಾಗದ ಓದಿ ಮುಗಿಸಿದ ಮೇಲೆ ಹೇಳಿದ.

"ಅಂದರೆ ನನ್ನ ಹೊಸ ತೋಟಕ್ಕೆ 'ವಿಜಯ ಲಕ್ಷ್ಮಿ' ಎಂದು ಹೆಸರಿಡಲೇ...?''

"ಅನುಮಾನವೇಕೆ?''

"ಅದ್ರೂ ಅಪ್ಪಯ್ಯನಿಗೆ ಒಂದು ಕಾಗದ ಬರೆದು ಅವರ ಒಪ್ಪಿಗೆ ತರಿಸಬೇಕು''

"ಓಹೋ ಮರೆತಿದ್ದೆ. ವಿಶ್ವೇಶ್ವರಯ್ಯ. ಶಾರದಮ್ಮ ಬರೋದು ಯಾವಾಗ?''

"ಇನ್ನೂ ಆ ವಿಷಯ ಬರೆದಿಲ್ಲ...''

"ವರ್ಷಾನುಗಟ್ಟಲೇ ಅಲ್ಲೇ ಇರ್ತಾರೋ?''

"ಅವರಿಗೆ ಕಾಶಿ ಚೆನ್ನಾಗಿ ಒಗ್ಗಿದೆ ಆದ್ದರಿಂದಲೇ ತಿಂಗಳುಗಟ್ಟಲೆ...ಉಳಿದಿದ್ದಾರೆ. ನಾನು ಸಹಾ ಹೇಳಿ ಕಳಿಸುತ್ತಿದ್ದೇನೆ ಶ್ರೀನಿವಾಸ''

"ಅವರಿಗೂ ಒಂದು ಮಾತು ತಿಳಿಸುವುದು ಒಳ್ಳೆಯದೆ''

"ನಾಳೆನೇ ಅಪ್ಪಯ್ಯನಿಗೂ ಬರೆದು ಬಿಡುತ್ತೇನೆ

ಕೃಷ್ಣನ ಮಾತು ಪೂರ್ತಿ ಆಗುವುದರೊಳಗೆ ಗೋಪಾಲ ಭಟ್ಟರು ಬಂದರು.

"ಬನ್ನಿ ಬನ್ನಿ''

ಗೆಳೆಯರಿಬ್ಬರೂ ಅವರಿಗೆ ಸ್ವಾಗತಿಸಿದರು, ಗೋಪಾಲಭಟ್ಟರು ಅಂಗಳದಲ್ಲಿ ಮೆಟ್ಟಿಲ ಬಾಡದಲ್ಲಿ 'ಜೋಡು' ಕಳಚಿ ಮೇಲೆ ಬಂದ ಕೂಡಲೇ ಅವರು ಕೃಷ್ಣನನ್ನು ಉದ್ದೇಶಿಸಿ ಹೇಳಿದರು.

"ಕೃಷ್ಣ ಆಗಲೇ ಮನೆಗೆ ಹೋಗಿದ್ದೆ. ಈಗ ಅಲ್ಲಿಂದಲೇ ಬರ್ತಾ ಇದ್ದೀನಿ,''

"ಮನೆಗೆ ಹೋಗಿಲ್ಲವೇ?''

"ಹೂಂ''

'ಆಗಲ ಮನೆಯಲ್ಲಿ ಏನು ವಿಶೇಷ"

"ಅವಳ ತಂದೆ ವೈದೀಕವಿತ್ತು''

"ಸರಿ ಸರಿ."

ಕೃಷ್ಣ ಒಳಗಡೆ ಹೋಗಿ ಒಂದು ಲೋಟ ಕಾಫಿ ಸಿದ್ಧಪಡಿಸಿ ತಂದು ಗೋಪಾಲಭಟ್ಟರಿಗೆ ಕೊಟ್ಟ. ಕಾಫಿ ಕುಡಿದ ಮೇಲೆ ಗೋಪಾಲ ಭಟ್ಟರು ಹೇಳಿದರು:

"ಕೃಷ್ಣ ಲಾಗದ ಮನೆ ಅಡಿಗಳು ಕಾಶಿಗೆ ಹೋದವರು ನಿನ್ನೆ ತಾನೇ ಬಂದರು..."

ಕೃಷ್ಣ ಅಡಿಗಳ ಸುದ್ದಿ ಕೇಳಿ ಆತುರದಲ್ಲಿ ಕೇಳಿದ:

"ಅಪ್ಪ ಅಮ್ಮ ಅಡಿಗಳಿಗೆ ಸಿಕ್ಕಿದ್ದಾರಂತಾ?"

"ಅವರೊಡನೆ ಕಾಶಿಯಲ್ಲಿ ಅಡಿಗಳು ಇರುವಷ್ಟು ದಿನಗಳು ಕಳೆದರಂತೆ."

"ಹೇಗಿದ್ದಾರಂತೆ ಅಪ್ಪ-ಅಮ್ಮ?"

"ತುಂಬಾ ಖುಷಿಯಲ್ಲಿದ್ದಾರಂತೆ. ಇನ್ನೊಂದು ಸುದ್ದಿ ಅವರು ಈ ವಾರವೇ ಹಿಂತಿರುಗುತ್ತಾರಂತೆ."

ಕೃಷ್ಣ ಹರ್ಷದಿಂದ ಕೇಳಿದ.

"ಅದೇನಪ್ಪ?"

ಶ್ರೀನಿವಾಸ ಕುತೂಹಲದಿಂದ ಕೇಳಿದ.

"ಅವರ ಯಾತ್ರೆ ಫಲಕಾರಿಯಾಯ್ತಂತೆ."

"ಅಂದರೆ...?"

ಶ್ರೀನಿವಾಸ-ಕೃಷ್ಣ ಒಟ್ಟಿಗೆ ಆಸಕ್ತಿಯಿಂದ ಕೇಳಿದ್ದು.

"ಕೃಷ್ಣ ನಿನಗೆ ಒಬ್ಬ ತಮ್ಮನೋ, ತಂಗಿಯೋ ಬರೋದು ಇದೆ"

"ಈ ವಯಸ್ಸಿನಲ್ಲಿ ಶಾರದಮ್ಮನಿಗೆ..."

"ಅದು ಕಾಶಿ ವಿಶ್ವೇಶ್ವರನ ಅನುಗ್ರಹ ಪ್ರಾರಾಯು."

ಶ್ರೀನಿವಾಸ, ಗೋಪಾಲಭಟ್ಟರು ಹೊರಟು ಹೋದ ಮೇಲೆ ಕೃಷ್ಣ ಯೋಚಿಸಿದನು

ತಾನು ಹುಟ್ಟಿದ ಮೇಲೆ ಈ ವರೆಗೂ ತನ್ನ ತಾಯಿ ಮತ್ತೊಂದು ಮಗುವಿಗಾಗಿ ಎಷ್ಟೊಂದು ಆಸೆ ಹೊತ್ತಿದ್ದಳು.

ಹರಕೆಗಳೇನೂ ಕಮ್ಮಿ ಮಾಡಿರಲಿಲ್ಲ...ಅಶ್ವತ್ಥ ಪ್ರದಕ್ಷಿಣೆ, ನಾಗಪೂಜೆಗಳಿಲ್ಲದೇ ತಾಯಿಯು ಊಟ ಮಾಡದ್ದೇ ಇಲ್ಲ..."

ಆದರೆ ಈ ವಯಸ್ಸಿನಲ್ಲಿ ಅವಳು ಮತ್ತೆ ಬಸಿರು ಹೊರಬೇಕೆ?

ವಯಸ್ಸಾದ ಅಮ್ಮನಿಗೆ ಹೆರಿಗೆ ಆಗುವಾಗ ಹೆಚ್ಚು ಕಡಿಮೆಯಾದರೆ...

ಆ ಯೋಚನೆ ಕೃಷ್ಣ ಮಾಡಿಕೊಂಡ ಮೇಲೆ ಅವನ ಮುಖವೆಲ್ಲ ಭಯದಿಂದ ಬೆವರಲಾರಂಭಿಸಿತು

ತಾಯಿಗಿಂತಲೂ ತಂದೆಗಿಂತಲೂ ತನಗೆ ಪುಟ್ಟ ತಂಗಿ ಒಬ್ಬಳು ಬೇಕು ಈ ಆಸೆ ತಾನು ಎಷ್ಟು ಸಾರಿ ಬೆಳಸಿ ಮರೆತಿರಲಿಲ್ಲ... ಹೀಗಿದ್ದಾಗ ತನ್ನ ಆಸೆಯು ಚಿಗುರಿ ಮರವಾಗುವ ಈ ಸುದ್ದಿ ತಿಳಿದ ಕಾಲದಲ್ಲಿ ತಾನು ಯಾಕಾಗಿ ಹೆದರುತ್ತಿದ್ದೇನೆ?

ತನಗೊಬ್ಬ ಪಾಲುಗಾರನಾಗುವ ತಮ್ಮನೊಬ್ಬ ಹುಟ್ಟಬಹುದೋ ಎಂಬ ಭೀತಿಯಿಂದಲ್ಲ...ಅಲ್ಲದೇ ತಂದೆ ತಾಯಿಗಳ ಪ್ರೀತಿ ತನ್ನ ಮೇಲೆ ಕಮ್ಮಿ ಆಗಬಹುದೆಂಬ ಕಾರಣದಿಂದಲಾ...?

ಅವನು ಆಲೋಚನೆಯಲ್ಲಿಯೇ ಆ ದಿನವನ್ನೆಲ್ಲಾ ಕಳೆದನು.

× × ×

-೮-

ಕಾಶಿಯಿಂದ ವಿಘ್ನೇಶ್ವರಯ್ಯ ಶಾರದಮ್ಮ ಬಂದಿಳಿದರು. ಅನಂತರ ಕೃಷ್ಣ 'ಕಾಶಿ ಸಮಾರಾಧನೆ' ಸಿದ್ಧತೆಗಳನ್ನು ಮಾಡಲು ತೊಡಗಿದನು ಅದರೊಂದಿಗೆ ತಾಯಿಯ ಆರೋಗ್ಯದ ಕಡೆಗೆ ಗಮನ ಹರಿಸಲಾರಂಭಿಸಿದನು.

'ಕಾಶಿ ಸಮಾರಾಧನೆ' ಹಿಂದಿನ ದಿನ ಮಗನ ಶ್ರದ್ಧೆ, ಓಡಾಟ ಕಂಡು ಶಾರದಮ್ಮ ಅವನನ್ನು ಕುರಿತು ಹೇಳಿದರು

"ನೀ ಹೀಗೆ ಕೆಲಸ ಮಾಡಿ ಸುಸ್ತು ಆಗಿ ಕಾಯಿಲೆ ಬಿದ್ದರೆ ಹೇಗೋ ಕೃಷ್ಣ"

"ಹಾಗೇನೂ ಆಗೋಲ್ಲ ಅಮ್ಮ. ಆದರೆ ನೀನು ಸುಖವಾಗಿ ಹಡೆದರೆ ಅಷ್ಟೇ ಸಾಕು."

ಕೃಷ್ಣ ಮನಸ್ಸಿನಲ್ಲಿ ಕೊರಗುತ್ತಿದ್ದುದನ್ನು ತಿಳಿಸಿಬಿಟ್ಟ.

ಮಗನ ಓಡಾಟ, ಅವನು ತಮ್ಮ ಯಾತ್ರೆ ಬಗ್ಗೆ ಇಟ್ಟ ಉತ್ಸಾಹ, 'ಕಾಶಿ ಸಮಾರಾಧನೆ' ಬಗ್ಗೆ ಮಾಡಿದ ಸಿದ್ಧತೆಗಳನ್ನು ಕಂಡು ವಿಘ್ನೇಶ್ವರಯ್ಯ ತೃಪ್ತಿಪಟ್ಟರು.

ಈ ಮಧ್ಯೆ ಒಂದೆರಡು ಸಲ ಕೃಷ್ಣ ಗೀತಳನ್ನು ಸಂಧಿಸಿದ್ದ ಮಾತನಾಡಿಸಿದ್ದ, ಅವಳೊಡನೆ ತನ್ನ ತೋಟವನ್ನೆಲ್ಲ ಸುತ್ತಿ ತೃಪ್ತಿಪಟ್ಟಿದ್ದ ಅವಳು ಕಣ್ಮರೆಯಾದೊಡನೆ ಕೃಷ್ಣನಿಗೆ ಗೀತಳ ರೂಪವೇ ಅವಳ ಬಗ್ಗೆಯೇ ಯೋಚನೆಯಾಗುತ್ತಿತ್ತು

ಕಾಶಿ ಸಮಾರಾಧನೆ ಹಿಂದಿನ ದಿನ ಊರು ಮನೆಗಳಿಗೆಲ್ಲ ಹೇಳಿಕೆಗೆ ಹೋಗಿ ಒಳಕಟ್ಟೆಗೆ ಹೋದಾಗ ಗೀತಳ ಹತ್ತಿರ ತುಂಬಾ ಹೊತ್ತು ಇದ್ದು ಕಳೆದು ಬಂದಿದ್ದ.

ಕಾಶಿ ಸಮಾರಾಧನೆ ಬೆಳಿಗ್ಗೆಯೇ ಗೀತ ಪದ್ಮಳೊಡನೆ ತನ್ನ ಮನೆಗೆ ಬಂದಾಗ ಕೃಷ್ಣನ ಉತ್ಸಾಹ ಬೆಳೆದಿತ್ತು

ಗೀತ ಶಾರದಮ್ಮ ವಿಘ್ನೇಶ್ವರಯ್ಯನವರನ್ನು ಉದ್ದೇಶಿಸಿ ಕೇಳಿದಳು.

"ನೀವು ಕೃಷ್ಣನ 'ವಿಜಯ ಲಕ್ಷ್ಮಿ'ಯನ್ನು ನೋಡಿ ಬಂದಿರಾ."

"ಆಂ!!!"

ಒಂದು ಘಳಿಗೆ ಅವರು ಪೆಚ್ಚಾದರು ಅದನ್ನು ಗಮನಿಸಿದ ಕೃಷ್ಣ ಹೇಳಿದ:

"ಅದೇ ನಾ ಮಾಡಿದ ಹೊಸತೋಟದ ಬಗ್ಗೆ ಗೀತ ಹೇಳಿದ್ದು."

"ಆ ತೋಟಕ್ಕೆ 'ವಿಜಯಲಕ್ಷ್ಮಿ' ಎಂದು ಹೆಸರು ಇಟ್ಟುಬಿಟ್ಟೆಯೇನೋ ?"

"ಅವರು ಒಬ್ಬರೇ ಈ ಹೆಸರಿಟ್ಟಿದ್ದಲ್ಲ. ನಾನು, ಪಟ್ಟಾಭಿ ಮತ್ತು ಶ್ರೀನಿವಾಸ ಸಹಾ ಸೇರಿದ್ದೇವೆ."

"ಒಳ್ಳೆಯದಾಯಿತು ಗೀತ."

ಶಾರದಮ್ಮ ಕಾಫಿ ಅವಳಿಗೆ ಕೊಡುವಾಗ ಹೇಳಿದರು.

"ನೀವೆಲ್ಲ ಇಟ್ಟ ಹೆಸರು ತೋಟಕ್ಕೆ ಒಪ್ಪುತ್ತೆ. ಆ ಘಳಿಗೆಯಿಂದಾದರೂ ಕೃಷ್ಣನಿಗೆ ಒಬ್ಬಳು ತಂಗಿ ಹುಟ್ಟಿದರೆ ಸಾಕು"

"ಹಾಗೇನು ಸಮಾಚಾರ ?"

ಪದ್ಮ ಶಾರದಮ್ಮನವರನ್ನು ಗಮನಿಸಿ ಕೇಳಿದರು

"ನನಗೆ ಹೇಳ್ಲೇ ಇಲ್ವಲ್ಲ ಕೃಷ್ಣ."

ಗೀತ ಕೃಷ್ಣನನ್ನು ನೋಡುತ್ತಾ ಹೇಳಿದಳು.

"ಇದೇನು ವಿಷಯ ಅಂತ ನಿಮ್ಮ ಹತ್ರ ಹೇಳ್ತಾನೆ ಕೃಷ್ಣ."

ವಿಘ್ನೇಶ್ವರಯ್ಯ ಹೇಳಿದರು.

ಅನಂತರ 'ಕಾಶಿ ಸಮಾರಾಧನೆ' ಸಿದ್ಧತೆಗಳು. ಪುರೋಹಿತರು ಮಂತ್ರಗಳ ಪ್ರಾರಂಭ. ಅಡಿಗೆ ಭಟ್ಟರ ಅಡಿಗೆ ತಯ್ಯಾರಿ... ಊಟಕ್ಕೆ ಬರುವವರ ಧಾರಾವಾಹಿ ಆತಿಥ್ಯ.

"ಸ್ವಲ್ಪ ನಿಧಾನವಾಗಿ ಓಡಾಡು ಕೃಷ್ಣ"

ಗೀತ ಬಾಳೆಎಲೆ ಹಿಡಿದು ಉಪ್ಪರಿಗೆ ಹತ್ತುತ್ತಿದ್ದ ಕೃಷ್ಣನಿಗೆ ಹೇಳಿದಳು

"ಗೀತ ಈಗ ಕೃಷ್ಣ ಸಣ್ಣವನೇನಲ್ಲ ಆಗ ಕೂಗುವಂತೆ ಈಗಲೂ ಬಂದವರ ಮುಂದೂ ಕೂಗೋದು ನನಗೆ ಹಿಡಿಸೊಲ್ಲ."

ಮಂಜಪ್ಪಯ್ಯ ಬಂದವರು ಮಗಳನ್ನು ಉದ್ದೇಶಿಸಿ ಹೇಳಿದರು.

ಅವರಿಗೆ ಎಲ್ಲರೆದುರೂ ಕೃಷ್ಣನನ್ನು ಗೀತಾ ಏಕವಚನದಲ್ಲಿ ಕರಿಯೋದು ಹಿಡಿಸದಾಯಿತು

ಆಗಲಿ ಅಪ್ಪಯ್ಯ."

ಗೀತಳ ಮುಖ ನಾಚಿಕೆಯಿಂದ ತುಂಬಿ ಹೋಯಿತು.

ಕೃಷ್ಣ ಬಾವಿಯಿಂದ ನೀರು ಸೇದಿ ಬಚ್ಚಲ ಹಂಡೆಗೆ ತುಂಬುತ್ತಿದ್ದಾಗ ಅವನ ಸಹಾಯಕ್ಕೆ ಬಂದ ಗೀತ ಹೇಳಿದಳು.

"ನೀವು ಒಬ್ಬರೇ ಯಾಕೆ ಈ ಕೆಲಸ ಮಾಡಬೇಕು. ನಾನು ಸಹಕರಿಸಲೇ ನಿಮ್ಮೊಡನೆ?"

"ಆಗಲಿ — ಆಗಲಿ."

ಕೈಲಿದ್ದ ಕೊಡ ಗೀತಳಿಗೆ ದಾಟಿಸುವಾಗ ಕೃಷ್ಣ ಹೇಳಿದ

"ಈಗ ನಿಮಗೆ ಹೇಗೆ ಅನ್ನಿಸುತ್ತೆ ?"

"ಯಾಕಾಗಿ, ಅಲ್ಲ, ಅಲ್ಲ ಯಾತಕ್ಕಾಗಿ ?"

"ನನ್ನ ಸಂಬೋಧನೆಯಿಂದ..."

"ಮೊದಲಿಗಿಂತ ಈಗೇನೂ ಹೆಚ್ಚು ಬದಲಾವಣೆ ನನಗೆ ಆಗೇ ಇಲ್ಲ ಗೀತ"

"ನಿಮಗೆ ಆಗದೇ ಇದ್ದರೂ ನಮ್ಮ ತಂದೆಗೆ ಈ ಸಂಬೋಧನೆ ಬೇಡ ? ಹಾಗಿದ್ದಾಗ ನಾನೇಕೆ ಹಾಗೆ ಕರೆಯಬೇಕು ಹೇಳಿ ?"

"ನಿನಗೆ ಬೇಸರವಾಯ್ತೇ."

"ಖಂಡಿತ ಇಲ್ಲ"

"ಮತ್ತೆ ?"

"ಈಗ ನೀವು ನನಗೆ ಮೊದಲಿಗಿಂತಲೂ ಆತ್ಮೀಯರಾದಿರೇನೋ ಅನ್ನಿಸುತ್ತೆ"

"ಹಾಗೇನು ?"

ಕೃಷ್ಣನನ್ನು ಯಾರೋ ಕರೆದಿದ್ದರಿಂದ ಅವನು ಒಳಗೆ ಹೋದ. ಗೀತ ಒಬ್ಬಳೇ ನೀರು ಸೇದುವ ಕೆಲಸ ಮಾಡುವಾಗ ಯೋಚಿಸಿಕೊಂಡಳು

"ತಾನು ಶ್ರೀನಿವಾಸನ ಮದುವೆಯಲ್ಲಿ ಕೃಷ್ಣನನ್ನು ನೋಡಿದ ಮೇಲೆ ಅವನನ್ನು ಮೆಚ್ಚಿಕೊಂಡಿದ್ದೇನೆ ಅವನೊಡನೆ ತನ್ನ ಮದುವೆಯಾದರೆ ತನ್ನ ಬದುಕು ಸುಖದ ನೆಲೆಯಾಗುತ್ತೆ ಇನ್ನೆಷ್ಟು ಕಾಲ ತಾನು [illegible] ವ್ಯಾಸಂಗ ಮಾಡಿಯೇನು ? [illegible] ವ್ಯಾಸಂಗವಾದ ಮೇಲೂ ತಾನು

ಮದುವೆಯಾಗಿ ಮಡದಿ ಎನಿಸಿಕೊಂಡು ಮನೆ ಒಳಗೆ ಉಳಿಯಬೇಕು ತಾನೆ ?

ಕೆಲಸ ಮಾಡಿ ಸ್ವತಂತ್ರವಾಗಿರೋಣ ಎಂದರೆ ಅಪ್ಪ ಅಮ್ಮ ಖಂಡಿತವಾಗಿಯೂ ಒಪ್ಪೊಲ್ಲ. ಹಾಗೆ ಇರುವಂತಾ 'ಪರಿಸ್ಥಿತಿ'ಯೇ ತನಗೆ ಇಲ್ಲ

ಆದರೆ ತನ್ನ ಅಭಿಲಾಷೆ ಕೃಷ್ಣ ತಿಳಿದುಕೊಂಡರೆ ಸರಿ... ಒಮ್ಮೆ ಅವನಿಗೆ ಇದು ತಿಳಿಯದೇ ಹೋದರೆ...?"

"ಅಪ್ಪಯ್ಯನಾದರೂ ತನ್ನ ಬಗ್ಗೆ ಅಂದರೆ ತನ್ನ ಮದುವೆ ಬಗ್ಗೆ ವಿಶ್ವೇಶ್ವರಯ್ಯನವರ ಹತ್ತಿರ ಮಾತಾಡಬಾರದೇ ?"

ಕೃಷ್ಣನ ಬಗ್ಗೆ ಯೋಚಿಸುವಾಗ ತನ್ನಲ್ಲಿ ಒಂದು ಹೊಸ ಸಂತೋಷ ಆಗುತ್ತಿಲ್ಲ ಯಾಕಾಗಿ ?

ಅವಳು ಆ ಭಾವನೆಯನ್ನು ತಂದುಕೊಂಡ ಮೇಲೆ ಅವಳಿಗೆ ತುಂಬಾ ಸಂತೋಷವಾಯಿತು

ಕೃಷ್ಣನ ಮನೆ 'ಕಾಶಿ ಸಮಾರಾಧನೆ' ತೀರಿಸಿ ಬಂದ ರಾತ್ರಿ ಮಂಜಪ್ಪಯ್ಯನವರು ಗೀತಳನ್ನು ಉದ್ದೇಶಿಸಿ ಕೇಳಿದರು.

"ನೀನು ಯಾವಾಗ ತೀರ್ಥಹಳ್ಳಿಗೆ ಹೋಗಬೇಕು ?"

"ನನಗೆ ಇನ್ಮುಂದೆ ಓದೋದು ಬೇಡ ಅನ್ನಿಸ್ತು.

"ಹಾಗಿದ್ದ ಮೇಲೆ ವ್ಯಾಸಂಗ ನಿಲ್ಲಿಸಿಬಿಡು "

"ಹಾಗೇ ಮಾಡ್ಲೆ ಅಪ್ಪಯ್ಯ?"

"ಹುಂ"

ಗೀತಳಿಗೆ ಈಗಂತೂ ಅನ್ನಿಸಿತು, ತಾನಿನ್ನು ಕೃಷ್ಣನನ್ನು ಸದಾ ನೋಡಬಹುದು. ಅವಕಾಶ ಸಿಕ್ಕರೆ ಅವನೊಡನೆ ಕಳೆಯಲೂ ಬಹುದು.

"ಗೀತ ಓದೋದು ಬೇಡ ಅಂದದ್ದು ನನಗಂತೂ ಖುಷಿಯಾಯ್ತು"

ಪದ್ಮ ಅವರ ಮಾತು ಕೇಳಿಸಿಕೊಂಡವರು ಹೊರಗೆ ಬಂದು ಹೇಳಿದರು

"ಯಾಕೋ ?"

"ಮದುವೆಗೆ ಬೆಳೆದ ಹುಡುಗಿಯನ್ನು ತೀರ್ಥಹಳ್ಳಿಗೆ ಓದಲು ಕಳ್ಸಿದಾಗಲೇ ಈ ಊರಲ್ಲಿ ಎಲ್ಲಾ ಅಪವಾದ ಹುಟ್ಟಿ ಬೆಳೆಯಿತು ಹೇಳಿ... ."

"ಆ ಹೆದರಿಕೆಗಲ್ವಾ ನಾ ಓದು ನಿಲ್ಲಿಸಿದ್ದು ಅಪ್ಪ..."

"ಮತ್ತೇಕೊ? "

"ನನಗೆ ಓದೋದು ಬೇಡ ಅನ್ನಿಸಿತು ಅದಕ್ಕೆ."

ಅದು ಏನೇ ಇರಲಿ. ಗೀತಾಳಿಗೆ ಬೇಡವಾದ ವಿದ್ಯೆಯನ್ನು ಮುಂದುವರಿಸಲು ನಾನು ಸಿದ್ಧನಿಲ್ಲ.

"ಅದಕ್ಕಿಂತಲೂ ಮುಖ್ಯ ಗೀತಳಿಗೆ ವರ ನೋಡಿ ಬೇಗ ಮದುವೆ ಪೂರೈಸಿ ಬಿಡೋಣ "

ಗೀತಳು ತಾಯಿಯ ಮಾತಿನಿಂದ ನಾಚಿಕೊಂಡಳು. ಅದ್ದರಿಂದ ಅಲ್ಲಿಂದೆದ್ದು ಉಪ್ಪರಿಗೆಗೆ ಹೋದಳು.

ಅವಳು ಹಾಗೆ ಹೋಗುವಾಗ ಅವಳಿಗೂ ತಿಳಿದರೆ ಒಳ್ಳೆಯದೆಂದು ಮಂಜಪ್ಪಯ್ಯ ಹೇಳಿದರು

"ಗೀತಾ ಮೆಚ್ಚಿಕೊಂಡವನೊಡನೆ ನಾನು ಅವಳನ್ನು ಮದುವೆ ಮಾಡಿಕೊಡಲು ಸಿದ್ಧನಿದ್ದೇನೆ ಪದ್ಮ."

"ಅದನ್ನು ನಾನು ವಿರೋಧಿಸುವುದಿಲ್ಲ ಕಣ್ರಿ."

ಪದ್ಮ ಗಂಡನಿಗೆ ಬೆಂಬಲ ಕೊಟ್ಟರು.

ಉಪ್ಪರಿಗೆಗೆ ಹೋದಾಗ ಗೀತಳು ತಂದೆ-ತಾಯಿಗಳ ಮಾತನ್ನು ನೆನಸಿಕೊಂಡಳು. ಅದರ ಮೇಲೆ ಅವಳು ಆನಂದದಿಂದ ಕಲ್ಪಿಸಿಕೊಂಡ ಕನಸುಗಳು ಅಷ್ಟಿಷ್ಟಲ್ಲ

ಕೃಷ್ಣನ ಹೆಂಡತಿಯಾಗಿ ತಾನು ಅವನೊಡನೆ ಊರವರ ಮುಂದೆ "ವಿಜಯಲಕ್ಷ್ಮಿ"ಯಲ್ಲಿ ಓಡಾಡಿದರೆ...

ನಗುವಿನ ಅಲೆ ಅವಳ ತುಟಿಗಳಲ್ಲಿ ಒಂದರ ಮೇಲೊಂದರಂತೆ ಹುಟ್ಟಿ ಬೆಳೆದುವು

ಉಪ್ಪರಿಗೆಗೆ ಬಂದ ಮಂಜಪ್ಪಯ್ಯ ಗೀತಳ ನಗುವನ್ನು ಕಂಡು ಹೇಳಿದರು "ಕೃಷ್ಣನ ಗುಣ ನನಗಂತೂ ತುಂಬಾ ಹಿಡಿಸಿತು ಗೀತ "

ಕೆಳಗೆ ನಿಂತ ಪದ್ಮ ಹೇಳಿದರು "ಕೃಷ್ಣನಿಗೆ 'ವಿಜಯಲಕ್ಷ್ಮಿ'ಯಲ್ಲಿ ನೆಡಲು ಕೆಮನೆ ಅಂಗಳದಲ್ಲಿ ಹಾಕಿದ ಚಿಗುರು ಗೂಟದ ಸಸಿಗಳು ಬೇಕಂತೆ ಕಣ್ರಿ "

"ಹೌದಪ್ಪ ನನ್ನ ಕೈಲಿ ಕೃಷ್ಣ ಕೇಳಲು ಹೇಳಿದ 'ಕಾಶೀ ಸಮಾರಾಧನೆ'ಯಲ್ಲಿ. ನಾನು ನಿಮಗೆ ಹೇಳಲು ಮರೆತೇಬಿಟ್ಟೆ "

"ಅವನಿಗೆ ಎಷ್ಟು ಬೇಕೋ ಅಷ್ಟು ಕಿತ್ತುಕೊಂಡು ಹೋಗಲಿ."

"ಸೀತಾರಾಮು ಯಾವಾಗ ಬರ್ತಾನೆ ಅಪ್ಪ? "

"ಭಾನುವಾರ. "

"ಘಟ್ಟದ ಆಳುಗಳೊಡನೆ ನಾನು ಚಿಗುರು ಗೂಟ ಹೊರಿಸಿಕೊಂಡು ನಾಳೆ 'ವಿಜಯಲಕ್ಷ್ಮಿ'ಗೆ ಹೋಗಿ ಬರಲೆ? "

"ಧಾರಾಳವಾಗಿ ಹೋಗಿ ಬಾ ಗೀತ "

ಮಂಜಪ್ಪಯ್ಯ ಕೆಳಗೆ ಇಳಿದು ಹೋದಮೇಲೂ ಗೀತ ಅವರ ಒಪ್ಪಿಗೆ ಮಾತಿಗಾಗಿ ಹರ್ಷದಿಂದ ತುಂಬಿ ಹೋದಳು

ಚಪ್ಪರಕ್ಕೆ ಹಬ್ಬಿಸಿದ ಮಲ್ಲಿಗೆ ಬಳ್ಳಿ—ಚಪ್ಪರದ ತುಂಬಾ ಹಸಿರಿನಿಂದ ಚಿಗುರಿದೆ. ಇನ್ನು ಹೂವು ಬಿಡುವುದೊಂದೇ ಬಾಕಿ ಅದರಂತೆ ತನ್ನ ಬಳ್ಳಿ ಕೃಷ್ಣನ ಚಪ್ಪರದೊಳಗೆ ಹಬ್ಬಿಬಿಟ್ಟರೆ ......

ಅನಂತರ ಬಳ್ಳಿಯಲ್ಲಿ ಬಿಡುವ ಹೂವು...ಅರಳುವ ಮೋಜು...

ಅಪ್ಪ ಅಮ್ಮನ ಈ ರೀತಿ ಸಹಕಾರವಿದ್ದರೆ 'ವಿಜಯಲಕ್ಷ್ಮಿ'ಗೆ ತಾನು ಒಡತಿ ಆದೇ ಆಗುತ್ತೇನೆ. "

- ೯ -

ಕೃಷ್ಣ ಆ ದಿನ ಪೂರ್ತಿ 'ವಿಜಯಲಕ್ಷ್ಮಿ' ಕೃಷಿ ಬಗ್ಗೆ ಕೆಲಸ ಮಾಡಲು ಅಲ್ಲೇ ಬೆಳಗಿನಿಂದ ದುಡಿಯುತ್ತಿದ್ದ ವಿಶ್ವೇಶ್ವರಯ್ಯನವರೂ ಮಧ್ಯಾಹ್ನದ ವರೆಗೆ ತಮ್ಮ ಸಲಹೆ ಇತ್ತು, ಮನೆಗೆ ಬಂದಿದ್ದರು

ಕೃಷ್ಣ—ಶೇಷ ಮಾರ್ಗದರ್ಶನದಲ್ಲಿದ್ದ ಇಪ್ಪತ್ತು ಇಪ್ಪತ್ತೆರಡು ಘಟ್ಟದ ಆಳುಗಳಿಂದ 'ವಿಜಯಲಕ್ಷ್ಮಿ' ತೋಟದ ಉದ್ದ ಅಗಲಕ್ಕೂ ತೆಂಗಿನ ಸಸಿಗಳನ್ನು ನೆಡಿಸಲು ಹೊಂಡ ತೋಡಿಸುತ್ತಿದ್ದ

"ತೆಂಗಿನ ಸಸಿ ಬಹಳ ಕಾಲ ಬದುಕಿರೋದು ಒಡೆಯ. ಆದ್ದರಿಂದ ಅದರ ಬೇರು ವಿಶಾಲವಾಗಿ ಹಬ್ಬಲು ಆಳವಾದ 'ಹೊಂಡ' ಬೇಕೇಬೇಕು

ಶೇಷ ತನ್ನ ಅನುಭವದಿಂದ ಆ ಮಾತುಗಳನ್ನು ಕೃಷ್ಣನಿಗೆ ಹೇಳಿದನು

"ನೀನು ಹೇಳೋದು ಸರಿಯಾಗಿದೆ ಶೇಷ. ನಿನ್ನ ಅನುಭವ ನನಗಿಂತ ಹಿರಿಯದು. ಒಟ್ಟಿನಲ್ಲಿ 'ವಿಜಯಲಕ್ಷ್ಮಿ' ಈ ತಾಲ್ಲೋಕಿನಲ್ಲೇ ಉತ್ತಮವಾದ ತೋಟವಾಗಲೇಬೇಕು ನೋಡು. "

ಆ ಮಾತು ಅವನು ಮುಗಿಸುತ್ತಿದ್ದಂತೆಯೇ ಶ್ರೀನಿವಾಸ ದೊಡ್ಡದಾದ "ಬೋರ್ಡ್"ನ್ನು ಹೊರಿಸಿಕೊಂಡು ಬಂದ

"ಏನೋ ಅದು ಶ್ರೀನಿವಾಸ?"

ಕೈಲಿದ್ದ ಗುದ್ದಲಿ ಬಿಟ್ಟು ಅವನ ಹತ್ತಿರ ಬಂದು ಕೃಷ್ಣ ಆತುರದಿಂದ ಕೇಳಿದ.

"ಇದು ನಿನ್ನ ತೋಟವನ್ನು ಗುರ್ತಿಸುವುದಕ್ಕಾಗಿ ನಾನು ಬರೆಸಿದ ನಾಮಫಲಕ "

"ಇದನ್ನು ಎಲ್ಲಿ ನಿಲ್ಲಿಸಬೇಕು?"

"ಮೋಟಾರು ರಸ್ತೆಯ ಬಾಜೂನಲ್ಲಿ ನಿನ್ನ ತೋಟದ ಬಾಗಿಲಿನಲ್ಲಿ ".

"ಇದಕ್ಕೆ ಎಷ್ಟು ಬಿತ್ತು?"

"ಅದೆಲ್ಲ ನಿನಗೇಕೆ? ಆ ದಿನ 'ವಿಜಯಲಕ್ಷ್ಮಿ' ಪ್ರಾರಂಭೋತ್ಸವದಲ್ಲಿ ನನಗಿತ್ತ ಅವಕಾಶಕ್ಕೆ ಇದು ನನ್ನ ಕೊಡುಗೆ ಕೃಷ್ಣ."

ಕೃಷ್ಣ ಶೇಷನನ್ನು ಕರೆದು ನಾಮಫಲಕ ಹುಗಿಯಲು ಹೇಳಿದ

ಕೃಷ್ಣ ಶ್ರೀನಿವಾಸನೊಡನೆ ನಾಮಫಲಕದ ಹತ್ತಿರ ನಿಂತು ನೋಡಿದಾಗ ಅವನಿಗೆ ತುಂಬಾ ಹರ್ಷವಾಯಿತು.

ಶ್ರೀನಿವಾಸ ಹೇಳಿದ:

"ಇನ್ಮುಂದೆ ಹನಿಯಕ್ಕೆ ಟಿಕೇಟು ಮಾಡಿಸುವವರಿಗೆ ಅನುಕೂಲವಾಯಿತು."

"ಯಾಕೆ?"

"ಹನಿಯಕ್ಕೆ ಟಿಕೇಟು ಮಾಡಿಸಿದರೆ ದೇವಸ್ಥಾನದ ಹತ್ತಿರ ಇಳಿಸುತ್ತಿದ್ದರು ಕೆಲವು ನಮ್ಮೂರಿನವರಿಗೆ ಶಾಲೆ ಮನೆ ಹತ್ತಿರ ನಿಲ್ಲಿಸು ಎಂದು ಹೇಳಬೇಕಾಗಿತ್ತು.. ಇನ್ಮುಂದೆ 'ವಿಜಯಲಕ್ಷ್ಮಿ'ಗೇನೆ ಟಿಕೇಟು ಮಾಡಿಸಿದರಾಯಿತು "

"ಒಟ್ಟಿನಲ್ಲಿ ನೀವೆಲ್ಲ ನನ್ನ 'ವಿಜಯಲಕ್ಷ್ಮಿ'ಯನ್ನು ಪ್ರಚಾರಕ್ಕೆ ತರಬೇಕು "

"ನಿನ್ನಿಂದಲೇ 'ವಿಜಯಲಕ್ಷ್ಮಿ' ಪ್ರಚುರವಾಗಿ ಪ್ರಸಿದ್ಧಿಗೆ ಬರ್ತಾಳೆ ನೋಡು "

"ಅದಕ್ಕಿಂತಲೂ ನನಗೆ ಅವಳ ಬೆಳವಣಿಗೆ ಮುಖ್ಯ ಆ ಮೇಲೆ ಇಷ್ಟು ಶ್ರಮ ವಹಿಸಿದ್ದಕ್ಕೆ ಅವಳಿಂದ ಬರುವ ಫಲ ಮುಖ್ಯ ನನಗೆ "

"ನೀನೇನೂ ಈ ವಿಷಯದಲ್ಲಿ ಆತಂಕ ಪಡೋದು ಬೇಡ ಒಮ್ಮೆ ನಿನ್ನ ಮದುವೆ ಈ ವರ್ಷವೇ ಆಯಿತು ಅಂತ ಇಟ್ಕೊ, ನಿನ್ನ ಮಗ ಮಗಳು ಪ್ರೌಢಶಾಲೆಗೆ ಹೋಗುವಾಗ 'ವಿಜಯಲಕ್ಷ್ಮಿ' ಅಡಿಕೆ, ತೆಂಗು ಶಿವಮೊಗ್ಗಾ ಜಿಲ್ಲೆಯಲ್ಲೇ ಮಾರಾಟ ಆಗೋದು ಸತ್ಯ."

"ಅಯ್ಯಾ, ನಿಮಗೆ ಮಗ ಆದ ಮೇಲೆ 'ವಿಜಯ' ಅಂತ ಇಡಿ. ಮಗಳಿಗೆ 'ಲಕ್ಷ್ಮಿ' ಅಂತ ಇಡಿ."

"ಸುಮ್ಮನಿರ್ರೋ..."

**ಹುಸಿ ಕೋಪ ಬೀರಿ ತೆಂಗಿನ ಸಸಿ ಕೃಷಿಗಾಗಿ ಸಿದ್ಧಪಡಿಸಲು** 'ವಿಜಯಲಕ್ಷ್ಮಿ' ಒಳಗೆ ಹೋದ

ಶ್ರೀನಿವಾಸ ಅವನನ್ನು 'ತೆಂಗಿನ ಸಸಿ' ನಡುವ ಹೊಂಡದ ಹತ್ತಿರ ಕಳಿಸಿ ಅಲ್ಲಿಂದ ಹೊರಟ.

ಶ್ರೀನಿವಾಸ ಶಾಲೆಯ ಆವರಣ ದಾಟುವಾಗ 'ವಿಜಯಲಕ್ಷ್ಮಿ' ಕಡೆ ತಿರುಗಿ ನೋಡಿದ. ಕೃಷ್ಣ ಆಳುಗಳೊಂದಿಗೆ ಕೆಲಸದಲ್ಲಿ ನಿರತನಾಗಿದ್ದ.

ಕೃಷ್ಣನಿಗೆ ಕೆಲಸದ ಮೇಲಿದ್ದ ಶ್ರದ್ಧೆ ನೋಡಿ ಶ್ರೀನಿವಾಸ ಅವನನ್ನು ಮೆಚ್ಚಿಕೊಂಡ

ಅವನು ವಿಘ್ನೇಶ್ವರಯ್ಯನವರೊಂದಿಗೆ ಅದೇ ದಿನ ಸಂಜೆ ಮಾತಾಡುವಾಗ ಈ ಬಗ್ಗೆ ತನ್ನ ಪ್ರಶಂಸೆ ತಿಳಿಸಿದ.

"ಈ ಹುಚ್ಚು ಕೃಷ್ಣನಲ್ಲಿ ಸದಾ ಹಸಿರಾಗಿರಬೇಕು. ಇದು ನನ್ನ ಬಯಕೆ ಶ್ರೀನಿವಾಸ"

"ನಿಮ್ಮ ಹತ್ತಿರ ನನ್ನದೊಂದು ಗುಟ್ಟಿನಮಾತಿದೆ"

ವಿಘ್ನೇಶ್ವರಯ್ಯನವರಿಗೆ ಶ್ರೀನಿವಾಸನ ಮಾತು ಕೇಳಿ ಆಶ್ಚರ್ಯವಾಯಿತು. ಯಾವಾಗಲೂ ಅವನು ಅವರ ಹತ್ತಿರ ಈ ರೀತಿ ಮಾತನಾಡಿರಲಿಲ್ಲ.

"ಏನದು ಶ್ರೀನಿವಾಸ?"

"ಕೃಷ್ಣ ಎಲ್ಲಿದ್ದಾನೆ ಹೇಳಿ?"

"ಅವನದ್ದು ಇದೆಯಲ್ಲ 'ವಿಜಯಲಕ್ಷ್ಮಿ' ಯಲ್ಲಿ ಸುತ್ತಾಟ"

"ಈಗೇಕೆ ಹೋಗಿದ್ದಾನೆ"?

"ಕಗೇನೂ ಅವನಿಗೆ ಅಲ್ಲಿ ಕೆಲಸ ಇರೋಲ್ಲ ನಿಜ ಆದರೆ ವಿಜಯ ಲಕ್ಷ್ಮಿ ಮೇಲಿನ ಗುಡ್ಡದಲ್ಲಿ ಕುಳಿತು ಅವಳ ಚೆಲುವು ಯಾವ ರೀತಿ ಮೂಡಬಹುದು. ಆ ಬಗ್ಗೆ ತಾನು ಇನ್ನೂ ಹೆಚ್ಚಾಗಿ ಏನು ಕೃಷಿ ಮಾಡಲು ಸಾಧ್ಯವಿದೆ? ಎಂದು ಯೋಚಿಸುವುದು"

"ನಿಜವಾಗಿ ಕೃಷ್ಣ ಧನ್ಯ"

"ಹೋಗ್ಲಿ ಅವಾಗ ನೀ ಏನೋ ಗುಟ್ಟು ಅಂದಿಯಲ್ಲ ಅದೇನು ಹೇಳು ಮಾರಾಯ".

ಶಾರದಮ್ಮ ಕಾಫಿ ತಂದು ಅವನಿಗೆ ಕೊಟ್ಟಾಗ, ಗಂಡ 'ಗುಟ್ಟು' ಎಂಬ ಮಾತು ಕೇಳಿ ಅವರಿಗೂ ಆಸಕ್ತಿ ಬಂದು ಅಲ್ಲೇ ನಿಂತರು

"ಕೃಷ್ಣನಿಗೆ ಮದುವೆ ಯಾಕೆ ನೀವು ಮಾಡಬಾರ್ದು?"

"ಮಾಡೋಲ್ಲ ಅಂದವರು ಯಾರು?"

"ಹಾಗಲ್ಲ ನೀವು ಈ ಬಗ್ಗೆ ಇನ್ನೂ ಯೋಚನೆ ಮಾಡಿಲ್ಲ ಅಂತ ನನ್ನ ಅಭಿಪ್ರಾಯ. ಎಲ್ಲೂ ಅವನ ಜಾತಕ ಹೊರಡಿಸಿದ ಹಾಗೆ ಕಾಣಲಿಲ್ಲ"

"ಕಾಶಿಯಾತ್ರೆಗೆ ನಾವು ಹೋಗುವ ಮೊದಲು ಈ ಯೋಚನೆ ಇತ್ತು ಆದರೆ ಅಲ್ಲಿಂದ ಬಂದ ಮೇಲೆ ಈ ವರ್ಷ ಈ ಯೋಚನೆಯನ್ನು ನಾನು ಮಾಡುವ ಹಾಗೆಯೇ ಇಲ್ಲ

"ಯಾಕೆ?"

"ಇವಳ ಈ ಸ್ಥಿತಿಯಲ್ಲಿ......"

ಶ್ರೀನಿವಾಸ ಶಾರದಮ್ಮನವರನ್ನು ನೋಡಿದ ಮೇಲೆ ನಕ್ಕು ಹೇಳಿದ

"ಶಾರದಮ್ಮನವರಿಗೆ ತಿಂಗಳೆಷ್ಟು?"

"ಎಷ್ಟೇ?"

ವಿಘ್ನೇಶ್ವರಯ್ಯನವರು ಹೆಂಡತಿಯ ಕಡೆಗೆ ತಿರುಗಿ ಹಾಗೆ ಕೇಳಿದ ಮೇಲೆ ನಕ್ಕರು.

"ಐದು".

"ಈಗ ನೀವು ಒಂದು ಕೆಲಸ ಮಾಡಬಹುದೇನೋ?"

"ಏನದು?

"ಕೃಷ್ಣನ ಮದುವೆ ನಿಶ್ಚಯ ಮಾಡಿಬಿಟ್ಟರೆ ಮುಂದಿನ ವರ್ಷವೇ ಮಾಡಬಹುದಲ್ಲ'.

ಈಗ ಅವಸರವೇನು?"

"ಬೆಳೆದ ಯುವಕ ಕೃಷ್ಣ. ಅವನು ಒಪ್ಪಿದ ಹೆಣ್ಣು ನೀವು ಸೊಸೆಯಾಗಿ ಮಾಡಿಕೊಂಡರೆ...

ಶ್ರೀನಿವಾಸ ಮುಂದೆ ಮಾತನಾಡಲಿಲ್ಲ. ವಿಘ್ನೇಶ್ವರಯ್ಯನವರ ಮುಖ ನೋಡಿದ. ಅಲ್ಲಿ ಮೊದಲು ಅವರು ಈ ರೀತಿ ಕೃಷ್ಣ ಹೆಣ್ಣನ್ನು ಮೆಚ್ಚಿಕೊಂಡಿದ್ದಾನೆ ಎಂಬ ವಿಷಯ ತಿಳಿದಿದ್ದರೆ ತುಂಬಾ ಕೋಪ ಗೊಳ್ಳುತ್ತಿದ್ದರು...ಆದರೆ ಈಗ ಕೃಷ್ಣನ ಬಗ್ಗೆ ಅವರು ತುಂಬಾ ಒಳ್ಳೆಯ ಅಭಿಪ್ರಾಯ ಮಾಡಿಕೊಂಡಿದ್ದಾರೆ ಶ್ರೀನಿವಾಸನಿಗೆ ತುಂಬಾ ಧೈರ್ಯ ಬಂತು. ಅದರ ಗುಂಗಿನಲ್ಲಿ ಅವನು ಮಾತಾಡುವ ಮುಂಚೆ ಮುಗುಳು ನಕ್ಕ.

"ಶ್ರೀನಿವಾಸ ಕೃಷ್ಣ ಯಾವುದಾದರೂ ಹೆಣ್ಣು ಮೆಚ್ಚಿಕೊಂಡಿದ್ದಾನೊ?

"...............

ಶ್ರೀನಿವಾಸ ಮಾತನಾಡಲು ಸ್ವಲ್ಪ ಹೊತ್ತು ತನ್ನಲ್ಲೇ ಯೋಚಿಸಿದ

"ನಾವು 'ಕಾಶಿ ಯಾತ್ರೆಗೆ ಹೋದಾಗ ಏನಾದರ ಪ್ರಕರಣ ಏನಾದರೂ ಆಯಿತೆ?"

"ಹಾಗೇನಿಲ್ಲ, ಹಾಗೇನಿಲ್ಲ"

"ಮತ್ತೆ?"

ಶಾರದಮ್ಮ ಈಗ ಹೇಳಿದರು.

"ನಮಗಿಂತ ಕೃಷ್ಣನ ನಡವಳಿಕೆ ಕೃಷ್ಣನ ಮನಸ್ಸು ಶ್ರೀನಿವಾಸ- ಪ್ರಭಾ ಭಿಗೆ ಗೊತ್ತು ನಮಗಿಂತ ಹೆಚ್ಚಿನ ಸಲಿಗೆ ಕೃಷ್ಣನಿಗೆ ಇವರ ಮೇಲೆ ಇದೆ ಹಾಗಿದ್ದಾಗ ಶ್ರೀನಿವಾಸನಿಗೆ ಅವನ ಮದುವೆಯ ಬಗ್ಗೆ ಹೆಚ್ಚಿನ ಆಸಕ್ತಿ"

"ಹೌದಲ್ಲವೇ?"

ವಿಘ್ನೇಶ್ವರಯ್ಯ ತುಂಬಾ ನಗುತ್ತ ಆ ಮಾತು ಹೇಳಿದರು.

ಶ್ರೀನಿವಾಸ ಈಗ ತುಂಬಾ ಧೈರ್ಯಗೊಂಡು ಹೇಳಿದ

"ಕೃಷ್ಣ ಗೀತಳನ್ನು ಮೆಚ್ಚಿಕೊಂಡಂತಿದೆ"

"ಯಾರು ಪದ್ಮಳ ಮಗಳು ಗೀತನ್ನ?"

ಹರ್ಷದ ಕುತೂಹಲದಿಂದ ಶಾರದಮ್ಮ ಕೇಳಿದರು.

"ಮಂಜಪ್ಪಯ್ಯನ ಮಗಳು ಗೀತನ್ನ?"

ಹೆಂಡತಿಯ ಮಾತಿಗೆ ಬೆಂಬಲಿಸಿ ವಿಘ್ನೇಶ್ವರಯ್ಯ ಕೇಳಿದರು

"ಹೌದು ಅದೇ ಗೀತ"

"ಅವರಿಗಲ್ಲ ನಮ್ಮ ಕೃಷ್ಣನಿಗೆ ಅವಳನ್ನು ಕೊಡುವ ಮನಸ್ಸು ಬೇಕಲ್ಲ"

"ಸಂತೋಷದಿಂದ ಅವರು ಈ ಮದುವೆಗೆ ಒಪ್ಪಿಕೊಳ್ಳುತ್ತಾರೆ"

"ಹೇಗೆ ಹೇಳ್ತೀಯಾ?"

ವಿಘ್ನೇಶ್ವರಯ್ಯ ಅನುಮಾನದಿಂದ ಆ ಮಾತು ಹೇಳಿದರು

"ಗೀತ ಕೃಷ್ಣನನ್ನು ಮೆಚ್ಚಿದ್ದಾಳೆ. ಕೃಷ್ಣ ಗೀತಳನ್ನು ಮೆಚ್ಚಿದ್ದಾನೆ ಇದು ನನಗೆ ತಿಳಿದಿದೆ. ನನ್ನ ಮದುವೆಯಲ್ಲಿ ಈ ಪ್ರಕರಣದ ಪ್ರಾರಂಭ! 'ವಿಜಯಲಕ್ಷ್ಮಿ'ಯ ಬೆಳವಣಿಗೆಯಲ್ಲಿ ಅವರಿಬ್ಬರೂ ಹತ್ತಿರವಾಗಿದ್ದಾರೆ...

"ಆದರೂ ನಾವಾಗಿ ಅವರನ್ನು ಈ ಮದುವೆ ಬಗ್ಗೆ ಕೇಳೋದು ಸಾಧ್ಯವಿಲ್ಲದ ಮಾತು. ಯಾಕಂತೀಯಾ 'ಗೀತಳನ್ನು ಮಂಜಪ್ಪಯ್ಯ ಪ್ರೌಢ ಶಾಲಾ ಶಿಕ್ಷಣಕ್ಕಾಗಿ ತೀರ್ಥಹಳ್ಳಿಗೆ ಕಳಿಸಿದ್ದಾರೆ. ಇಷ್ಟು ಬೇಗ ಆ ಹುಡುಗಿಗೆ ಮದುವೆ ಮಾಡುವ ಮನಸ್ಸು ಅವನಿಗಿಲ್ಲ ಎಂದು ತಿಳಿಯಿತ ..."

ಗೀತ ತಮ್ಮ ಮನೆಗೆ ಸೊಸೆಯಾಗಿ ಬರೋದಾದರೆ ತಾವು ಎಷ್ಟು ಸುಖಿಗಳು. ತುಂಬಾ ಸುಂದರಿ. ಜತೆಗೆ ಅಚ್ಚುಕಟ್ಟಾಗಿ ಮನೆ ಕೆಲಸ ಮಾಡುವುದರಲ್ಲಿಯೂ ಜಾಣೆ... ಇವೆಲ್ಲಕ್ಕಿಂತಲೂ...ತಮ್ಮ ಮಗ ಕೃಷ್ಣ ಮೆಚ್ಚಿದ್ದು ಮುಖ್ಯ.

"ಅವರಾಗಿ ಕೇಳಲಿ. ಬಂದರೆ ನೀವು ಒಪ್ಪಿಕೊಳ್ಳಿ"

"ಆ ಕಾಲ ಬರಲಿ

ವಿಘ್ನೇಶ್ವರಯ್ಯ ಹೇಳಿದರು

"ನೀವು ದಯಮಾಡಿ ಕೃಷ್ಣನ ಜಾತಕ ಕೊಡಿ. ಗೀತಳ ಜಾತಕ ತೆಗೆದುಕೊಂಡು ಮೊದಲು ಪರೀಕ್ಷಿಸೋಣ"

"ನಾವಾಗಿ ಅವಳ ಜಾತಕ ಕೇಳಿದ್ದು ಎಂಬ ಅಭಿಪ್ರಾಯ ಅವರಿಗೆ ಬರಬಾರದು."

"ಅದರ ಬಗ್ಗೆ ನೀವು ನಂಬಿ."

"ಆಗಲಿ"

ವಿಘ್ನೇಶ್ವರಯ್ಯನವರು ಕಪಾಟು ಬಾಗಿಲು ತೆರೆದು ಕೃಷ್ಣನ ಜಾತಕ ತಂದು ಕೊಟ್ಟರು. ಶ್ರೀನಿವಾಸ ಹೊರಟು ಹೋದ ಮೇಲೆ ವಿಘ್ನೇಶ್ವರಯ್ಯ 'ವಿಜಯಲಕ್ಷ್ಮಿ' ಕಡೆಗೆ ಹೋದರು. ಅವರು ಅಲ್ಲಿ ನಿಂತು ಗುಡ್ಡದ ತುದಿ ನೋಡಿದಾಗ ಗೀತ ಕೃಷ್ಣ ಒಟ್ಟಿಗೆ ಹಿಂತಿರುಗುತ್ತಿರುವುದು ಕಾಣಿಸಿತು.

"ಕೃಷ್ಣ ಇಷ್ಟು ಮುಂದುವರಿದಿದ್ದಾನೆ ಎಂದು ಕೊಂಡಿರಲಿಲ್ಲ" ವಿಘ್ನೇಶ್ವರಯ್ಯ ಹಾಗೆ ಹೇಳಿಕೊಂಡ ಮೇಲೆ ಅವರಿಗೆ ಕೃಷ್ಣನ ಮೇಲೆ ತುಂಬಾ ಕೋಪ ಬಂತು.

ಆದರೆ ಅವರು ಮನೆಗೆ ಬಂದ ಮೇಲೆ ಯೋಚಿಸಿ ತಮ್ಮಲ್ಲೇ ಒಂದು ನಿರ್ಧಾರಕ್ಕೆ ಬಂದು ಹೇಳಿಕೊಂಡರು.

ಈ ತಪ್ಪು ಅವನೊಬ್ಬನದೇ ಅಲ್ಲ. ಇದರಲ್ಲಿ ತಾವೂ ಕೂಡ ಭಾಗಸ್ತರು. ಕಾಶಿಯಾತ್ರೆಗೆ ಹೋಗುವ ಮುಂಚೆ ಅವನ ಮದುವೆ ಮಾಡಬೇಕಾಗಿತ್ತು.

ಅನಂತರ ಹೆಂಡತಿಯ ಹತ್ತಿರ ಹೋಗಿ ತಾವು ನೋಡಿದ ಬಗ್ಗೆ ವರದಿ ಒಪ್ಪಿಸಿದರು.

"ಕೃಷ್ಣನ ಈ ನಡತೆಯಿಂದ ಇನ್ಮುಂದೆ ನಾವು ಈ ಊರಲ್ಲಿ ತಲೆ ಎತ್ತಿ ತಿರುಗೋ ಹಾಗಿಲ್ಲ"

ವಿಘ್ನೇಶ್ವರಯ್ಯ ಹೆಂಡತಿ ಕೋಪ ಕಂಡು ಹೇಳಿದರು.

ಕೃಷ್ಣನ ಮುಂದೆ ಏನೂ ಗೊತ್ತಿಲ್ಲದಂತೆ ಇರು"

ಹೂಂ"

"ಒಮ್ಮೆ ಪ್ರಾಯ ಬಂದ ಹುಡುಗ ಏನಾದರೂ ಮಾಡಿಕೊಂಡಾನು"

ಶಾರದಮ್ಮ ಗಂಡನ ಮಾತನ್ನು ಕೇಳಿ ಸ್ವಲ್ಪ ಯೋಚಿಸಿದರು.

"ನೀವು ಹೇಳಿದ್ದು ಸರಿ"

ಕೃಷ್ಣ ಬಂದ ಮೇಲೆ ವಿಘ್ನೇಶ್ವರಯ್ಯ ಹೇಳಿದರು

"ವಿಜಯಲಕ್ಷ್ಮಿ'ಗೆ ಗೀತ ಬಂದಿದ್ದಳೇನು?"

ಕೃಷ್ಣ ತಂದೆಯ ಮಾತು ಕೇಳಿ ಹೆದರಿದ ಆದರೂ ಸುಧಾರಿಸಿಕೊಂಡು ಹೇಳಿದ.

'ಹುಂ"

"ಯಾಕೆ?"

'ಮಂಜಪ್ಪಯ್ಯ ನಗರದಿಂದ ಬಂದರಂತೆ ಅವರ ಹತ್ತಿರ ಒಂದಿಷ್ಟು ಸುಧಾರಿತ ಅಡಿಕೆ ಸಸಿ ತರಲು ಹೇಳಿದ್ದೆ ಅದನ್ನು ಗೀತ ಆಳಿನಿಂದ ಹೊರಿಸಿಕೊಂಡು ಬಂದಳು. ಸಂಜೆ ಹೊತ್ತು. ಈ ದಿನವೇ ಅವನ್ನು 'ವಿಜಯ ಲಕ್ಷ್ಮಿ'ಯಲ್ಲಿ ನಡೆಸಿಬಿಟ್ಟೆ ಹಾಗೆ ಅವಳು ಹೋಗುವಾಗ ಒಂದಿಷ್ಟು ಮಲ್ಲಿಗೆ ಮೊಗ್ಗು ಕೊಯ್ದು ಕೊಟ್ಟೆ."

ವಿಘ್ನೇಶ್ವರಯ್ಯ ಮತ್ತೇನೂ ಮಾತನಾಡಲಿಲ್ಲ. ಸಂಧ್ಯಾವಂದನೆ ಮಾಡಲು ಒಳಗೆದ್ದು ಹೋದರು.

ಶಾರದಮ್ಮ ಮಗನನ್ನು ಕುರಿತು ಕೇಳಿದರು.

"ಗೀತಾ ಒಬ್ಬಳೇ ಒಳಕಟ್ಟೆಗೆ ಹೋದಳೇನು ಕೃಷ್ಣ ?"

"ಕಣಿವೆ ಬಾಗಿಲು ಗಡಿಯ ವರೆವಿಗೆ ಕಳಿಸಿಬಂದೆ."

"ಸಂಜೆ ಹೊತ್ತು. ಬೆಳೆದ ಹುಡುಗಿ: ಜತೆಗೆ ನೀನು ಹೀಗೆ ಹೋಗೋದು ಚೆಂದವೇನೊ ಕೃಷ್ಣ ?"

"ತಪ್ಪಾಯ್ತಮ್ಮ. ಇನ್ಮುಂದೆ ಹೀಗೆ ಮಾಡೊಲ್ಲ"

ಕೃಷ್ಣನ ನಯ ಕಂಡು ಶಾರದಮ್ಮನವರ ಅಸಮಾಧಾನವೆಲ್ಲ ಕರಗಿ ಹೋಯಿತು.

-೧೦-

ಮಾರನೆಯ ದಿನ ಕೃಷ್ಣ ಒಳಕಟ್ಟೆಗೆ ಹೋದ ಅವನು ಹೋದಾಗ ಮಂಜಪ್ಪಯ್ಯ ಮನೆಯಲ್ಲೇ ಇದ್ದರು ಅವರು ಅತ್ಯಂತ ಸಂತೋಷದಿಂದ ಅವನ್ನ ಬರಮಾಡಿಕೊಂಡರು.

"ಅಡಿಕೆ ಸಸಿ ಹಣ ಕೊಡಲು ಬಂದೆ."

"ಈಗೇನು ಅವಸರವಿತ್ತು ಕೃಷ್ಣ ?"

"ವ್ಯವಹಾರ ಯಾವಾಗಲೂ ಚೊಕ್ಕವಾಗಿಟ್ಟು ಕೊಳ್ಳೋದನ್ನ ಚಿಕ್ಕಂದಿನಿಂದಲೂ ಬೆಳಸಿಕೊಂಡು ಬಂದಿದ್ದೇನೆ."

"ಅದು ನಿನಗೆ ಬಂದದ್ದು ಸ್ವಾಭಾವಿಕವಾಗಿದೆ. ವಿಘ್ನೇಶ್ವರಯ್ಯನೂ ಅಷ್ಟೇ ನೋಡು."

ಆ ಮೇಲೆ ಮಂಜಪ್ಪಯ್ಯನವರು ಕೊಟ್ಟಿಗೆ ಕಡೆ ಹೊರಟು ಹೋದರು.

ಸೀತಾರಾಮು ಕಾಫಿ ತಂದು ಕೊಟ್ಟಾಗ ಕೃಷ್ಣ ನಿರಾಶೆಯಿಂದ ಕೇಳಿದ:

"ಗೀತ ಎಲ್ಲಿ ಸೀತಾರಾಮು ?"

"ಒಳಗಿದ್ದಾಳೆ"

"ಅದೇನು ?"

"ಅಮ್ಮನೊಂದಿಗೆ ಅವಳು ಅವಲಕ್ಕಿ ಬತ್ತ ಕುಟ್ಟುತ್ತಿದ್ದಾಳೆ"

"ಪರ್ವಾಗಿಲ್ಲ."

ಕೃಷ್ಣ ಆ ಮಾತು ಮುಗಿಸುತ್ತಿದ್ದಂತೆ ಗೀತ ಅಲ್ಲಿಗೆ ಬಂದು ನಗುತ್ತಾ ಹೇಳಿದಳು.

"ನನಗೇನು ಕೆಲಸ ಬರೊಲ್ಲ ಅಂದುಕೊಂಡಿರೇನು?"

"ನಿನಗೆ ಕೆಲಸ ಬರುತ್ತೆ ಅಂತ ನನಗೆ ಗೊತ್ತು. ಆದರೆ ಏನು ಇಷ್ಟು ಆಸಕ್ತಿ ಕೆಲಸದ ಮೇಲೆ ಇಟ್ಟಿದ್ದೀ ಎಂದು ನಾನು ತಿಳಿದಿರಲಿಲ್ಲ."

"ಅದು ಸರಿ."

ಸೀತಾರಾಮು ಅವರಿಬ್ಬರೂ ಮಾತನಾಡುತ್ತಿದ್ದಾಗ ಒಳಗೆದ್ದು ಹೋದ

"ಶ್ರೀನಿವಾಸ ಸಿಕ್ಕಿದ್ದರೇನು ?"

"ಊಹೂಂ"

"........................"

"ಯಾಕೆ ?"

"ಅವರು ಸಿಕ್ಕಿದ್ದರೂ ನನ್ನ ಹತ್ತಿರ ತಮಾಷೆಗೆ 'ಇಲ್ಲ' ಅನ್ನುತ್ತೀರೇನು ?"

"ನಿಜವಾಗಿಯೂ ಗೀತ ಅವನನ್ನು ನೋಡಲೇ ಇಲ್ಲ"

"ಅವರು ನಿಮ್ಮ ಮದುವೆಗೆ ಓಡಾಡುತ್ತಿದ್ದಾರೆ."

ಗೀತಳು ಆ ಮಾತು ಹೇಳಿ ಮುಗಿಸಿದಾಗ ಅವಳ ಮುಖವೆಲ್ಲ ಕೆಂಪಾಗಿಬಿಡ್ತು

"ಏನೇನು ?"

ಕೃಷ್ಣ ತುಂಬಾ ಉತ್ಸಾಹದಿಂದ ಅವಳನ್ನು ಕುರಿತು ಕೇಳಿದನು

"ನಿನ್ನ ಬಾಯಿಂದಲೇ ಈ ವಿಷಯ ಕೇಳಬೇಕೆಂಬ ನಿಮ್ಮ ಆಸೆ ನಾನೇಕೆ ಕಡಿಯಲಿ........."

"ಅದೇನ ವಿಷಯ ಹೇಳು ?"

"ಶ್ರೀನಿವಾಸ ನಮ್ಮ ಬಗ್ಗೆ ನಿಮ್ಮ ತಂದೆಯವರ ಹತ್ತಿರ ಪ್ರಸ್ತಾಪ ಎತ್ತಿದರು ........."

"ಅಯ್ಯೋ.........ಅಪ್ಪಯ್ಯ ಅಮ್ಮ ಏನು ಹೇಳಿದರಂತೆ ?"

ಕೃಷ್ಣನಿಗೆ ಈಗ ತುಂಬಾ ಭೀತಿಯಾಯಿತು ಅದರ ಹಿಂದೆ ವಿನೋದ ಪಾರ್ವತಿ ಪ್ರಕರಣ ನೆನಪಾಯಿತು.

"ಅವರು ಸಂತೋಷಪಟ್ಟರಂತೆ"

"ಹೌದಾ......"

ಕೃಷ್ಣ ಚೇತರಿಸಿಕೊಂಡ

"ಅಷ್ಟಕ್ಕೇ ಬಿಡದೇ ಶ್ರೀನಿವಾಸ ನಿಮ್ಮ ಜಾತಕ ಇಸಿದುಕೊಂಡರು "

"ಅಬ್ಬಾ"

" ಆ ಮೇಲೆ ಅಪ್ಪಯ್ಯನಿಗೆ ತಿಳಿಸಿ ಜಾತಕ ಕೊಟ್ಟರು "

"ಮುಂದೆ."

"ನಮ್ಮಿಬ್ಬರ ಜಾತಕ ಕೂಡಿ ಬಂತು."

"ಹುಂ ಹುಂ."

"ಇನ್ನುಮುಂದೆ ಅಪ್ಪಯ್ಯ ಮದುವೆ ಬಗ್ಗೆ 'ನಿಶ್ಚಯ'ಕ್ಕೆ ನಮ್ಮ ಮನೆಗೆ ಬರ್ತಾರೆ"

"ತುಂಬಾ ಒಳ್ಳೆ ಸುದ್ದಿ ಗೀತಾ."

ಕೃಷ್ಣ ಹರ್ಷದಿಂದ ಹೇಳಿದ

"ನಿಜವಾಗೀನಾ ?"

"ಹೂಂ."

ಕೃಷ್ಣ ಅತ್ತಿತ್ತ ನೋಡಿ ಗೀತಳನ್ನು ಹಿಡಿದುಕೊಂಡು ಹೇಳಿದ

"ಇನ್ನುಮುಂದೆ ನನ್ನ ವ್ಯಾಸಂಗ ?"

"ಅದನ್ನು ನಾನು ಸಮಾಪ್ತಿ ಮಾಡಿದ್ದೇನೆಂದು ಅಪ್ಪಯ್ಯನಿಗೆ ಹೇಳಿದ ಮೇಲೆ ಈ ಮದುವೆ ಬಗ್ಗೆ ಅಪ್ಪಯ್ಯ ಮುಂದೂರಿದಿದ್ದು "

"ಆಗಲಿ ಗೀತ "

"ಆದರೆ ನಾವು ಒಟ್ಟಿಗೆ ಇರೋದು..."

"ಮಾತು ಪೂರ್ತಿ ಮಾಡು ಗೀತ"




"ಈ ವರ್ಷ ಆಗೊಲ್ಲ"

"ಯಾಕೆ ?"

"ನಿಮ್ಮ ತಾಯಿ......"

"ಹೋ ಸರಿ ಸರಿ "

ಕೃಷ್ಣ ನಕ್ಕ.

"ಆದರೆ ನೋಡಿ ನಮ್ಮ ಮದುವೆ ನಿಷ್ಕರ್ಷೆಯಾದಕೂಡನೆ ನಾನು ಯಾರು ಏನೇ ಹೇಳಲಿ ನಿಮ್ಮ 'ವಿಜಯ ಲಕ್ಷ್ಮಿ'ಯಲ್ಲಿ ಕೆಲಸ ಮಾಡೋಳು."

"ಹಾಗೇ ಆಗಲಿ "

ಅದರ ಮಾರನೇ ವಾರವೇ ಮುಂಜಪ್ಪಯ್ಯ ವಿಶ್ವೇಶ್ವರಯ್ಯನ ಮನೆಗೆ ಹೋದರು.

ಶ್ರೀನಿವಾಸ ಅವರ ಮದುವೆ ನಿಶ್ಚಯದಲ್ಲಿ ತುಂಬಾ ಓಡಾಡಿದ

ಒಂದು ವಾರದೊಳಗೆ ಕೃಷ್ಣ ಗೀತರ ಮದುವೆ ನಿಷ್ಕರ್ಷೆ ಆಯಿತು.

ಅದಾದ ಮೇಲೆ ಗೀತ ಹಣ್ಣು ಕಾಯಿ ಮಾಡಿಸಲು ಕಾರಗಡಿ ಗಣಪತಿ ದೇವಸ್ಥಾನಕ್ಕೆ ಹೋದಾಗ ರಾಧ ಅವಳನ್ನು ಸಂದರ್ಶಿಸಿ ಹೇಳಿದಳು:

"ನಿನ್ನ ಮದುವೆಗೆ ಒಳ್ಳೆ ಗಂಡನನ್ನು ಆರಿಸಿಕೊಂಡಿರಿ."

"ನಿಮ್ಮ ಮಾತು ಸತ್ಯ ರಾಧಾ."

"ಆ ದಿನವೇ ನಾನು ಈ ಮದುವೆ 'ನಿಷ್ಕರ್ಷೆ' ಆಗುತ್ತೆ ಅಂದ್ಕೊಂಡಿದ್ದೆ."

"ಹೌದಾ ?"

ಕೃಷ್ಣ ಹೊಸನಗರದಿಂದ ಬಸ್ಸಿನಲ್ಲಿ ಬಂದವನು ಅವರನ್ನು ನೋಡಿ ಇಳಿದ.

"ಇದೇನು 'ವಿಜಯ ಲಕ್ಷ್ಮಿ'ಯನ್ನು ಬಿಟ್ಟು ಇಲ್ಲಿ ಇಳಿದಿ ವಾರಾಯ ?" ಶ್ರೀನಿವಾಸ ನಕ್ಕು ಕೇಳಿದ.

"ದೇವರಿಗೆ ಒಂದು ನಮಸ್ಕಾರ ಹೊಡೆದು ಹೋಗೋಣವೆಂತ ಇಳಿದೆ "

ರಾಧಾ ಅವನಿಗೆ ತಮಾಷೆ ಮಾಡುವ ಸಲುಗೆಯಿಂದ ಹೇಳಿದಳು.

"ಅದಕ್ಕೇನಂತೆ! ಗೀತಾಳನು ನೋಡಲು ಅವರು ಇಳಿದುಬಿದ್ದು"

"ಹೌದು ಹೌದು"

ಗೀತ ಹುಸಿ ಕೋಪ ರಾಧಾಳ ಮೇಲೆ ಬೀರಿದಳು.

ದೇವರ ಪೂಜೆ ಮುಗಿಸಿಕೊಂಡು ಅವರು ಹೊರಬಾಗ ಕೃಷ್ಣ ಗೀತಳನ್ನು ಕುರಿತು ಹೇಳಿದ.

"ನೀನು......

"ನಿಮ್ಮ ಜತೆಗೆ ಬರೋಳು."

"ಸರಿ ಹಾಗಿದ್ರೆ."

"ಸೀದಾ 'ವಿಜಯ ಲಕ್ಷ್ಮಿ'ಗೆ ಹೋಗೋಣ ಕಣ್ರಿ"

ಗೀತ ಕೃಷ್ಣನನ್ನು ಉದ್ದೇಶಿಸಿ ಹೇಳಿದಳು.

"ಹಾಗೇ ಮಾಡೋಣ."

ರಾಧಾ- ಶ್ರೀನಿವಾಸ ಅವರನ್ನು ಬೀಳ್ಕೊಟ್ಟರು.

ಕೃಷ್ಣ ಗೀತಳೊಂದಿಗೆ 'ವಿಜಯ ಲಕ್ಷ್ಮಿ' ಪ್ರವೇಶಿಸಿದಾಗ ಹೇಳಿದ:

"ನೀನು ಒಳಕಟ್ಟೆಗೆ ಹೋಗೋ ಮುಂಚೆ ಒಂದು ಭಾವಗೀತ ಹಾಡಬೇಕು"

"ಆಗಲಿ"

ಗೀತ 'ವಿಜಯ ಲಕ್ಷ್ಮಿ'ಯಲ್ಲಿ ಬೆಳೆದು ನಿಂತ ಅಡಿಕೆ ಮರಕ್ಕೆ ಒರಗಿ ನಿಂತು ಒಂದು ಭಾವಗೀತೆ ಹಾಡಲಾರಂಭಿಸಿದಳು

ಕೃಷ್ಣ ಅವಳ ಗಾನ ಸವಿಯತೊಡಗಿದ.

## -೧೧-

ಕೃಷ್ಣ ಆ ದಿನ ಬೆಳಿಗ್ಗೆನೆ - 'ವಿಜಯ ಲಕ್ಷ್ಮಿ'ಯಲ್ಲಿ ಕೆಲಸ ಮಾಡುವಾಗ ಕೆಲವು ಅಡಿಕೆ ಸಸಿಗಳು ಬೆಳೆಯುವ ರೀತಿಯಲ್ಲಿ ಬೆಳೆಯದಿದ್ದುದನ್ನು ಗಮನಿಸಿದ ಅನಂತರ ಅದರ ಬಗ್ಗೆ ತುಂಬಾ ಯೋಚಿಸಿದ. ಆದರೆ ಏನೂ ಗೊತ್ತಾಗಲಿಲ್ಲ. ಶೇಷು. ಸುಬ್ಬು. ನಾರಾಯಣ ಇತ್ಯಾದಿ ಘಟ್ಟದ ಆಳುಗಳೊಂದಿಗೆ ಗಿಡ ತೋರಿಸಿ ಚರ್ಚೆ ಮಾಡಿದ. ಆದರೆ ಏನೊಂದೂ ಉಪಯೋಗವಾಗಲಿಲ್ಲ

ಕೃಷ್ಣ ಮುಂದೆ ಈ ಬಗ್ಗೆ ತಲೆ ಕೆಡಿಸಿಕೊಳ್ಳದೇ ಸೀದಾ ಸಂಬಂಧಪಟ್ಟ ಅಧಿಕಾರಿಗಳನ್ನು ಕಂಡಾಗ. ವಿಸ್ತರಣಾ ಅಧಿಕಾರಿಗಳು ಹೇಳಿದರು.

'ವಿಜಯ ಲಕ್ಷ್ಮಿ' ಬಗ್ಗೆ ಕೇಳಿದ್ದೇನೆ. ನಿಮ್ಮಂಥ ಕೃಷಿ ಯುವಕರು ಬರೀ ಅಡಿಕೆ ತೋಟ ಎಬ್ಬಿಸುವುದು ಸರಿಯನಿಸಲಿಲ್ಲ"

"ಯಾಕೆ ಸರ್?"

"ಈಗ ನಮಗೆ ಮಾರಾಟದ ಬೆಳೆಗಿಂತಲೂ ಆಹಾರ ಬೆಳೆ ಬೇಕು"

"ಅಂದರೆ ಬತ್ತ ಬೆಳೆಯಲು ನಾನು ಪ್ರಯತ್ನಪಟ್ಟಿಲ್ಲವೆಂಬ ನಿಮ್ಮ ಸಲಹೆ ?"

"ಹೌದು - ಹೌದು."

"ಸಾರ್ ನೀವು! ನಿಮ್ಮ ಸಿಬ್ಬಂದಿ ವನ್ನೊಡನೆ 'ವಿಜಯ ಲಕ್ಷ್ಮಿ'ಗೆ ಬನ್ನಿ. ನನ್ನ ಅಡಿಕೆ ಸಸಿಗಳ ಬಲಹೀನತೆಗೆ ಕಾರಣ ತಿಳಿಸಿ. ಅನಂತರ ಬತ್ತ ಬೆಳೆಯುವ ಜಾಗ 'ವಿಜಯ ಲಕ್ಷ್ಮಿ' ಒತ್ತಿಗೆ ಇದ್ದರೆ ಭೂಗುಣ ಪರೀಕ್ಷೆ ಮಾಡಿ ತಿಳಿಸಲಿ."

"ಆಗಲಿ - ಆಗಲಿ."

"ನಿಮಗೆ ಯಾವಾಗ ಬರಲು ಸಾಧ್ಯವಾದೀತು ಸರ್ ?"

"ಈ ದಿನ ಸಂಜೆ ಇಲ್ಲಿ ಒಂದು ಸಭೆ ಇದೆ. ಆದ್ದರಿಂದ ಈಗಲೇ ಹೋಗಿ ಬರೋಣ"

"ಆಗಲಿ" ಕೃಷ್ಣ ಅಷ್ಟು ಹೇಳಿ ಎದ್ದ.

"ಯಾಕೆ ಎದ್ದುಬಿಟ್ಟಿರಿ ಕೃಷ್ಣ ?"

ಕ್ಷೇತ್ರಾಧಿಕಾರಿಗಳು ಕೃಷ್ಣನನ್ನು ಉದ್ದೇಶಿಸಿ ಕೇಳಿದರು

"ಕಾರು ಮಾಡಿಕೊಂಡು ಬರುತ್ತೇನೆ."

"ಯಾಕೆ ?"

### ಬಾಡಿಗೆಯ ಮನೆ



ಸರಿಯಾಗಿ ಪಾಠಮಾಡದ ಮಾಸ್ತರನೊಬ್ಬ
'ನಿನ್ನ ಮನೆ ಹಾಳಾಗ' ಎಂದು ಜರಿದ;
ಅದ ಕೇಳಿ ಮಾಸ್ತರನು ಹೀಗೆಂದು
ಸೇರಿಸಿದ;
ಬಾಡಿಗೆಯ ಮನೆಯದು ಹಾಳಾಗಲೆಂದ!

— ಗುಂಡ್ಮಿ ಚಂದ್ರಶೇಖರ ಐತಾಳ

"ತಮ್ಮನ್ನು. ತಮ್ಮ ಸಹಾಯಕರನ್ನು ಕರೆದುಕೊಂಡು ಹೋಗಲು."

"ಬೇಡ ಕೃಷ್ಣ. ಸರ್ಕಾರದವರು ಈ ಉದ್ದಿಶ್ಯಕ್ಕಾಗಿ 'ಜೀಪು' ನಮಗೆ ಕೊಟ್ಟಿದ್ದಾರೆ ಹೀಗಿರುವಾಗ ನೀವೇಕೆ ಈ ಉದ್ದಿಶ್ಯ ಹಣ ಖರ್ಚು ಮಾಡಬೇಕು."

ಕೃಷ್ಣನಿಗೆ ಕ್ಷೇತ್ರಾಧಿಕಾರಿಗಳ ಮಾತು ಕೇಳಿ ಸಂತೋಷವಾಯಿತು.

"ನಿಮ್ಮಂಥ ಅಧಿಕಾರಿಗಳಿದ್ದರೆ, ನಾನು ಏನು ಬೇಕಾದರೂ ಕಷ್ಟಪಟ್ಟೇನು ?"

ಆ ಮೇಲೆ ಕ್ಷೇತ್ರಾಧಿಕಾರಿಗಳ ಜೀಪಿನಲ್ಲಿ ಅವನು 'ವಿಜಯಲಕ್ಷ್ಮಿ'ಗೆ ಬಂದನು.

ಕೃಷ್ಣ ಹಾಗೂ ಅಧಿಕಾರಿಗಳ ತಂಡ 'ವಿಜಯ ಲಕ್ಷ್ಮಿ'ಯಲ್ಲಿ ಕಂಡು. ಹಸಿರು ಉಳಿದ ಆಳಿನವರೆಲ್ಲ ಒಬ್ಬೊಬ್ಬರೇ ಬಂದು 'ವಿಜಯಲಕ್ಷ್ಮಿ'ಯಲ್ಲಿ ತುಂಬಿ ಹೋದರು.

ಕೃಷ್ಣ ಪ್ರತ್ಯೇಕ ಪ್ರತ್ಯೇಕವಾಗಿ ಎಲ್ಲರಿಗೂ, ಕ್ಷೇತ್ರಾಧಿಕಾರಿಗಳಿಗೂ. ಸಂಗಡಿಗರಿಗೂ ಪರಿಚಯ ಮಾಡಿಸಿದ.

ಕ್ಷೇತ್ರಾಧಿಕಾರಿಗಳು ಎಲ್ಲರನ್ನೂ ಪ್ರಶ್ನಿಸಿ ಅವರು ಮಾಡುವ ಕೃಷಿ ಬಗ್ಗೆ ಕೇಳಿ ತೃಪ್ತಿಪಟ್ಟರು.

ಅನಂತರ ಗ್ರಾಮಸೇವಕ ಕೊಟ್ಟ ವರದಿಯನ್ನು ನೋಡಿ ಹೇಳಿದರು:

"ಕೃಷ್ಣ ಈ ಜಾಗದಲ್ಲಿ ಮಣ್ಣು ಸಾರವನ್ನು ಕಳೆದುಕೊಂಡಿದೆ. ಅದಕ್ಕಾಗಿ ಈ ಅಡಿಕೆ ಸಸಿಗಳು ಕೃಶವಾಗಿವೆ. ಕಛೇರಿಗೆ ನಿಮ್ಮ ಸಹಾಯಕ ಯಾರಾದರೊಬ್ಬರನ್ನು ಕಳಿಸಿ ಒಂದು ರಾಸಾಯನಿಕ ಗೊಬ್ಬರ ಕೊಡುತ್ತೇನೆ. ಅದನ್ನು ಸಾಧಾರಣವಾದ ಹಸಿರು ಗೊಬ್ಬರದಲ್ಲಿ ಹಾಕಿ ಸೇರಿಸಿ. ಇದರ ಬುಡಕ್ಕೆ ಹಾಕಿ, ಸರಿಯಾಗುತ್ತದೆ"

"ಆಗಲಿ ಸರ್"

—ಅಷ್ಟರಲ್ಲಿ ಉದ್ದನೆ ಬೆಳೆದ ಯುವಕನೊಬ್ಬ ಬಂದು ಕ್ಷೇತ್ರಾಧಿಕಾರಿಗಳಿಗೂ ಸಹಾಯಕ ಅಧಿಕಾರಿಗಳಿಗೂ ನಮಸ್ಕರಿಸಿದನು

"ಇವರು ವನಗದ್ದೆಯಲ್ಲಿದ್ದಾರೆ ಸರ್, ಇವರ ಹೆಸರು ಚಂದ್ರು ಭಟ್ಟರು; ಕೃಷಿಯಲ್ಲಿ ಒಳ್ಳೆ ಉತ್ಸಾಹಿಗಳು ಹಗಲು ರಾತ್ರಿ ಇದಕ್ಕಾಗಿಯೇ ಕಷ್ಟಪಡುತ್ತಾರೆ"

"ಹೌದೇನ್ರಿ ?"

"ಹಾಗೇನಿಲ್ಲ ಹಾಗೇನಿಲ್ಲ"

ಎರಡು ಕೈ ಮುಗಿದು ನಮ್ರದಿಂದ ಚಂದ್ರು ಭಟ್ಟರು ಹೇಳಿದರು.

ನಿಮ್ಮಂಥ ಕೃಷ್ಣರಂಥ ಯುವಕರಿಂದಲೇ ಭಾರತ ಸರ್ಕಾರದ ಪಂಚವಾರ್ಷಿಕ ಯೋಜನೆಗಳು ಫಲದಾಯಕವಾಗಬೇಕು."

"ಸಾರ್........."

ಚಂದ್ರು ಭಟ್ಟರು ಮಾತನ್ನು ನಿಲ್ಲಿಸಿದರು.

"ನಿಮ್ಮ ಅನುಮಾನ ಏನು ಹೇಳಿ ?"

"ಈ ಸಾರಿ ನನ್ನ ಮುಕ್ಕಿ ಗದ್ದೆಗೆ 'ಹೈಬ್ರಿಡ್' ಜೋಳ ಹಾಕಿದ್ದೆ."

"ಸಂತೋಷ"

"ಆದರೆ ಅದು ಚೆನ್ನಾಗಿ ಬೆಳೆದಿತ್ತು ಮಧ್ಯೆ ಹುಳ ಹಿಡಿದು ನಾಶವಾಯ್ತು. ಅನಂತರ ಹುಳು ಹಿಡಿಯದ ಭಾಗದಲ್ಲೂ ಬೆಳೆ ಸಹಾ ಕಮ್ಮಿ ಬಂತು"

"ಯಾಕೆ ?"

"ನಮ್ಮ ಭೂಮಿಯಲ್ಲಿ ಈ ಬಗೆ ಜೋಳ ಬೆಳೆಯೊಲ್ಲ ಇಲ್ಲಿಯ ಭೂಮಿಯೇ ಹಾಗೆ."

"ಹೌದಾ ?"

ಕೃಷ್ಣ ಹೇಳಿದ

"ನನ್ನದೊಂದು ಸಲಹೆ ಇದೆ"

"ಹೇಳಿ ಹೇಳಿ"

"ಕ್ಷೇತ್ರಾಧಿಕಾರಿಗಳಾದ ತಾವು ಪ್ರತೀ ಈ ಭಾಗದಲ್ಲಿ ಕ್ಯಾಂಪ್ ಮಾಡಿ, ಈ ಮಣ್ಣು ಯಾವ ಬೆಳೆಗೆ ಯೋಗ್ಯ ಎಂದು ಪರೀಕ್ಷಿಸಿ ಒಂದು ವರದಿ ಮಾಡಿ

 ಸರ್ವರಿಗೂ ದೀಪಾವಳಿಯು ಶುಭದಾಯಕವಾಗಲಿ! 

# ಬೆಳೆಯ ಕ್ರಾಂತಿ ಮತ್ತು ಟ್ರ್ಯಾಕ್ಟರಿನ ಟಾಯರಗಳು

ಇಡೀ ಭಾರತದಲ್ಲಿ ಟ್ರ್ಯಾಕ್ಟರ್ ಟಾಯರಗಳನ್ನು ಕೇವಲ ಫಡಕೆಯವರು ರಿಮೋಲ್ಡ್ ಮಾಡುತ್ತಾರೆ. 11, 2×28, 12, 2×28 ಮತ್ತು 14×28 ಟಾಯರ್ಸ ರಿಮೋಲ್ಡ ಮಾಡುತ್ತಾರೆ. ಅದು ತಮಗೆ ರಿಮೋಲ್ಡ್ ಅಥವಾ ಇದು ಹೊಸದು ಎಂದು ಗುರುತಿಸುವದೂ ಅಸಾಧ್ಯ

ಟಾಯರಿನ ಸಲುವಾಗಿ ೬೦ ಟಕ್ಕೆ ಟ್ರ್ಯಾಕ್ಟರುಗಳ ಕಾರ್ಯ ಸ್ಥಗಿತಗೊಂಡಿದೆ. ಆದ್ದರಿಂದ ತಮ್ಮ ಹಳೆಯ ಟ್ರ್ಯಾಕ್ಟರಗಳನ್ನು ತ್ವರೆಮಾಡಿ ನಮ್ಮ ಕಡೆಗೆ (ರಿಮೋಲ್ಡ್‌ಗೆ) ಕಳುಹಿಸಿ ಆಹಾರ ಧಾನ್ಯದ ಸಂಗ್ರಹಣೆ ಪ್ರಶ್ನೆಯನ್ನು ಬಗೆಹರಿಸಬೇಕು. ಕಳೆದ ೩೦ ವರ್ಷಗಳಿಂದ ನಾವು ಎಂದಿನಂತೆ ಕಾರ ಮತ್ತು ಟ್ರಕ್ಕಿನ ಟಾಯರುಗಳನ್ನು ನವ್ಯದಂತೆಯೇ ರಿಮೋಲ್ಡ ಮಾಡುತ್ತಿದ್ದೇವೆ. ಇದರ ಬಗ್ಗೆ ತಾವು ತೆಗೆದುಕೊಳ್ಳಬಯಸುವ ಪರೀಕ್ಷೆಗೆ ತಯಾರಿದ್ದೇವೆ.

Phone : 195



## ಮೆ॥ ಎಸ್. ಜಿ. ಫಡಕೆ & ಸನ್ಸ್

ಖಡೇ ಬಝಾರ, ಬೆಳಗಾವಿ




*Wish you all*
*A Happy Deeparali*



*MANUFACTURERS OF :*

- Roofing Tiles
- Valley Tiles
- Ventilators
- Ridges
- Sky Lights

## SOVEREIGN TILE WORKS

BOLOOR MANGALORE-3

Phone : 5086
Gram SOVEREIGN

ಒಪ್ಪುವ ಅಂದವಾದ
ಖಾದಿ ಬಟ್ಟೆಗಳು
ಹಬ್ಬಕ್ಕೆ ಮೆರುಗು



ಹಬ್ಬಗಳ ರಾಜ
ದೀಪಾವಳಿಯಂದು
ಮನಮೆಚ್ಚುವ
ಖಾದಿ ಬಟ್ಟೆಗಳಲ್ಲಿ
ಆಕರ್ಷಕವಾಗಿ
ಕಾಣಿರಿ.



ಮಹಿಳೆಯರಿಗೆ ಪುರುಷರಿಗೆ ಮತ್ತು ಮಕ್ಕಳಿಗೆ
ಮನಮೋಹಕ ಅರಳೆ, ರೇಷ್ಮೆ ಮತ್ತು ಉಣ್ಣೆ
ಖಾದಿ ಬಟ್ಟೆಗಳು ದೊರಕುತ್ತವೆ. . . .

ಮೈಸೂರು ರಾಜ್ಯ



## ಖಾದಿ-ಗ್ರಾಮೋದ್ಯೋಗ ಮಂಡಲ

ಬೆಂಗಳೂರು - ೯



ನಮ್ಮ ಗ್ರಾಹಕರಿಗೆ
ದೀಪಾವಳಿ ಮತ್ತು ನೂತನ
ವರ್ಷವು ಸುಖಮಯವಾಗಲಿ.

ದೇಶದ ಎಲ್ಲಾ ರಾಜ್ಯ ಸರಕಾರಗಳ
ಲಾಟರಿ ಟಿಕೆಟ್ಟುಗಳನ್ನು ಕೊಳ್ಳುವವರಿಗೆ
ಅತ್ಯಂತ ನಂಬಿಗಾರ್ಹ ಸಂಸ್ಥೆ



" ದೀಪಾವಳಿಯ
ಶುಭಾಶಯಗಳು "

**ಅಂಚೆ ಮೂಲಕ ಲಾಟರಿ ಟಿಕೆಟ್ಟು ಬಯಸುವವರು
ಅವಶ್ಯವಿರುವ ಟಿಕೆಟ್ಟುಗಳ ಬೆಲೆಯೊಂದಿಗೆ
ಅಂಚೆವೆಚ್ಚದ ಬಾಬ್ತು ಹೆಚ್ಚು ಹಣ ಸೇರಿಸಿ
ಮನಿಯಾರ್ಡರು ಪೋಸ್ಟಲ್ ಆರ್ಡರು
ಅಥವಾ ಬ್ಯಾಂಕ್ ಡ್ರಾಫ್ಟ್ ಮೂಲಕ
ಹಣ ಕಳುಹಿಸಿರಿ.**

ಮೈಸೂರು ಸರಕಾರದ ಲಾಟರಿಯ
ಮುಂದಿನ ಡ್ರಾ
ತಾರೀಖು : **15 - 11 - 70**

# ಮನೋರಂಜನ್ ಎಂಟರ್‌ಪ್ರೈಸಸ್

**( ಪ್ರೊ : ವಿ. ಶಿವರಾಮ್ ಹೊಳ್ಳ )**

ನಂ. ೩೦. ೫ನೇ ಮೆಯಿನ್, ಗಾಂಧಿ ನಗರ, ಬೆಂಗಳೂರು-9 **ಫೋನ್ : 74558**

 ನೂತನ ವರ್ಷಾಭಿನಂದನೆಗಳು 

| • ಫಿಲ್ಮ ಕಂಪನಿ<br>• ಗರಬಾಪಟಿ<br>• ಶಾಲೆ ಗ್ಯಾದರಿಂಗ | ನಾಟಕಗಳಿಗೆ ಬೇಕಾಗುವ<br>ಎಲ್ಲ ಸಾಮಾನುಗಳು |
|---|---|

* ನಾಟಕ ಡ್ರೆಸ್ * ಪರದೆಗಳು * ಬಾಜುಬಂದ
* ಪೌಂಚೆ * ದಾಡಿ ಮೀಶೆ * ಢಾಲು
* ರಿಮುಕ ಖಡ್ಗ
* ಸ್ತ್ರೀ ಪುರುಷರ ಟೋಪಣ
* ಎಲ್ಲ ನಮೂನೆಯ ಪಗಡಿಗಳು ಗಂಗಾವನ:

ದೇವಮಂದಿರ ಸಲುವಾಗಿ :- ವಸ್ತ್ರ
ಜರಿ ಮುಗುಟ, ಜರಿಹಾರ, ಪಗಡಿ.
ವಗೈರೆ

ಭಾರತದ ಆದ್ಯ ವೇಷ ಭೂಷಾಕಾರರು :

## ಓಧವಜಿ ಮೂಲಜಿ ಡ್ರೆಸ್‌ವಾಲಾ
## ಭುಲೇಶ್ವರ ಮುಂಬಯಿ-೨

ಗಂಗಾವನದ ಆರ್ಡರಿನೊಂದಿಗೆ ಈ ಕಟಿಂಗ್
ಕಳಿಸುವವರಿಗೆ ೬೩/೦ ಕಮೀಶನ್
ಇಂಗ್ಲೀಷ್, ಹಿಂದಿ, ಬೆಲೆ ಸೂಚಿ ಕೇಳಿರಿ. ಫೋನ್: 313359
ತಮ್ಮ ಬೇಡಿಕೆಯ ೨೫/೦ ಮುಂಗಡ ಕಳಿಸಬೇಕು

 ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ ! 

ಅಧಿಕ ಧಾನ್ಯ ಉತ್ಪಾದನೆಗಾಗಿ

## ಫೀಲ್ಡರ

ಡಿಜೇಲ ಎಂಜಿನ್ನುಗಳು ೫ಎಚ್. ಪಿ. ೧೫೦೦ ಆರ್.ಪಿ.ಎಂ.



ಮೈಸೂರು ಹಾಗೂ ಮಹಾರಾಷ್ಟ್ರ ರಾಜ್ಯ ಸರಕಾರಗಳಿಂದ ತಗಾವಿ ಸಾಲದ ಮೇಲೆ ಮಂಜೂರಾಗಿವೆ.

ಉತ್ಪಾದಕರು :—

## ನ್ಯೂ ಸ್ಟಾರ್ ಎಂಜಿನಿಯರಿಂಗ್ ಕಾರ್ಪೋರೇಶನ್

ಶಿವಾಜಿ ಉದ್ಯಮನಗರ
ಕೊಲ್ಹಾಪೂರ

Res : 1320
Phone: 1145 Tel : FIELDER

 ನಮ್ಮೆಲ್ಲ ರೈತ ಬಾಂಧವರಿಗೆ ದೀಪಾವಳಿಯು ಸುಖಸಂಪದಭಿವೃದ್ಧಿಯನ್ನೀಯಲಿ 

## ಹುಬಳಿ ಆಟೋ ವರ್ಕ್ಸ

ತಯಾರಕರು
ರೈತಬಂಧು ಟ್ರ್ಯಾಕ್ಟರ ಟ್ರೇಲ



ಗಂಗಾಧರ ಕಾಟನ್ ಪ್ರೆಸ್ ಕಂಪೌಂಡ,
ಧಾರವಾಡ ರೋಡ - ಹುಬ್ಬಳ್ಳಿ 20.

ರೈತ ಬಾಂಧವರ ಆಶ
ಆಕಾಂಕ್ಷೆಗಳನ್ನು
ಈಡೇರಿಸುವದೇ
ನಮ್ಮ ಧ್ಯೇಯ

ನಿಮ್ಮ ಸುಖ ಸಮೃದ್ಧಿಗೆ ಬೇಕಾಗುವ
ಒಕ್ಕಲುತನ ಉಪಕರಣಗಳು ಹಾಗೂ ೩ ಮತ್ತು
೫ ಟನ್ ಮತ್ತು ಇನ್ನಿತರ ಸ್ಯಾಜಿನ
'ರೈತ ಬಂಧು ಟ್ರ್ಯಾಕ್ಟರ ಟ್ರೇಲರ'ಗಳು
ಸಿಗುವ ಒಂದೇ ಒಂದು ಸ್ಥಳ

  

ದೀಪಾವಳಿಯು ಸರ್ವರಿಗೂ ಆಯುರಾರೋಗ್ಯವನ್ನೀಯಲಿ !

ಐವತ್ತು ವರ್ಷಗಳಿಗೆ ಮೇಲ್ಪಟ್ಟು ಜನತಾಸೇವೆಯಲ್ಲಿ
ತೊಡಗಿರುವ ಈ ಸಂಸ್ಥೆಯಲ್ಲಿ
ಲೋಕವಿಖ್ಯಾತಿ ಗಳಿಸಿರುವ

## ನಂಜನಗೂಡು ಟೂತ್-ಪೌಡರ್

ಅನುಭವಸಿದ್ಧ ಮತ್ತು ಅತ್ಯಂತ ಪ್ರಭಾವಶಾಲಿ

## ಆಯುರ್ವೇದಿಯ ಸಿದ್ಧೌಷಧಗಳು

ಮತ್ತು
ಚಿತ್ತಾಕರ್ಷಕ ಪರಿಮಳಯುಕ್ತವಾದ
ಅಗರಬತ್ತಿ, ಹೇರ್ ಆಯಿಲ್, ಕರವಸ್ತ್ರದ ಸೆಂಟ್ ಮುಂತಾದ

## ಸುಗಂಧ ದ್ರವ್ಯಗಳು

ಸಹ ಉತ್ತಮರೀತಿಯಲ್ಲಿ ಪ್ರತಿನಿತ್ಯವೂ ತಯಾರಾಗುತ್ತಲಿವೆ.

# ದಿ ಸದ್ವೈದ್ಯ ಶಾಲಾ (ಪ್ರೈವೇಟ್) ಲಿಮಿಟೆಡ್,

ನಂಜನಗೂಡು. ( ಮೈಸೂರು ಸ್ಟೇಟ್ )

ಶಾಖೆಗಳು : ಬೆಂಗಳೂರು, ಮಂಗಳೂರು, ಮೈಸೂರು.

ಈ ದೀಪಾವಳಿಯು ನಮ್ಮ ಮೆಂಬರರಿಗೆ
ಮಂಗಲಕಾರಕವಾಗಲಿ

# ಮೆ|| ಎರೋಸ್ ಫರ್ನಿಚರ್ಸ

ಹೆಡ್ ಆಫೀಸ : ಸ್ಟೇಶನ ರೋಡ, ಗದಗ

ಬ್ರ್ಯಾಂಚ : ೯, ಫೋರ್ಟ ರೋಡ, ಬೆಳಗಾವಿ



ನಮ್ಮಲ್ಲಿ ಆಧುನಿಕ ಮಾದರಿಯ ಎಲ್ಲ ನಮೂನೆಯ ಕುಶನ, ವುಡನ್, ಸನ್ಮೈಕಾ ಫರ್ನಿಚರ್ಸಗಳನ್ನು ಸುಲಭವಾದ ಕಂತಿನಲ್ಲಿ ಕೊಡುತ್ತೇವೆ.

ವಿ. ಸೂ :— ಆಫೀಸ, ಹಾಟೆಲ, ಮನೆಗಳಿಗೆ ಅವಶ್ಯವಿದ್ದ ಎಲ್ಲ ಪ್ರಕಾರದ ಫರ್ನಿಚರ್ಸಗಳನ್ನು ತಯಾರಿಸಿ ಕೊಡುತ್ತೇವೆ. ಹೆಚ್ಚಿನ ವಿವರ ಕುರಿತು ನಮ್ಮ ಆಧುನಿಕ ಶೋರೂಮನ್ನು ಸಂದರ್ಶಿಸಿರಿ.

ದೀಪಾವಳಿ ಮತ್ತು ನೂತನ ವರ್ಷವು ನಮ್ಮೆಲ್ಲ
ಹಿತಚಿಂತಕರಿಗೂ ವರ್ತಕರಿಗೂ ಸುಖದಾಯಕವಾಗಲಿ

ಹಸಿರು ಕ್ರಾಂತಿಯನ್ನು ಯಶಸ್ವಿಯಾಗಲು ದಾರಿದೀಪ



ಚಿಲಿ ಸ್ಪ್ರೆ, ಕಾಟನ ಸ್ಪ್ರೆ, ಗ್ರೇಪ ಸ್ಪ್ರೆ, ರೋಜ ಸ್ಪ್ರೆ,
ತಂಬಾಕು ಸ್ಪ್ರೆ, ಶುಗರ ಕೇನ ಸೆಟ್ಸ ಡೀಪ್
ಉತ್ಪಾದಕರು :

# ಕೃಷಿ ವಿಕಾಸ ಮಂಡಳ

ಸಾಂಗಲಿ
ಸ್ವಾಕಿಸ್ಟರು ಚೇತನಗಿದ್ದಾರೆ
A HULKOPKAR ENTERPRISE !

ನಮ್ಮ ಗ್ರಾಹಕರಿಗೆ ದೀಪಾವಳಿಯ ಶುಭಾಶಯಗಳು
ಫೋನ ನಂ. 1271

# ಮೋಹನಲಾಲ ಹಲವಾಯಿ

೪೦೨ ಪಾಟೀಲಗಲ್ಲಿ ಬೆಳಗಾವಿ
( ಭಗತ ಸಿಂಗ ಚೌಕ )

ಕುಂದಾ, ಪೇಢೆ, ಮೈಸೂರಪಾಕ, ಗುಲಾಬ ಜಾಮೂನ ರಸಗುಲ್ಲಾ. ಸಂತತಫೇನಿ. ಘೇವರ, ಜಿಲೇಬಿ. ಚಮಚಮ, ಬೆಣ್ಣೆಯವಡೆ ಎಲ್ಲ ಪ್ರಕಾರದ ಉಂಡಿ, ಹಲವಾ, ಬದಾಮಿ ಹಲವಾ, ಸೋಹನ ಹಲವಾ, ಮೋಹನಪಾಕ, ಬರ್ಫಿ, ಬದಾಮಬರ್ಫಿ,ಸೇವ, ಖಾರೆಬುಂದಿ, ನವರಂಗ, ಮುಂತಾದ ಎಲ್ಲ ಪ್ರಕಾರದ ಪದಾರ್ಥಗಳನ್ನು ಆರ್ಡರದಂತೆಯೇ ಮಾಡಿಕೊಡುತ್ತೇವೆ.

ವಿ. ಸೂ :— ನಮ್ಮಲ್ಲಿ ಮಧ್ಯಾಹ್ನ ತಾಜಾ ಮತ್ತು ರುಚಿಕರ ಪದಾರ್ಥಗಳು ಸಿಗುತ್ತವೆ.

ಬ್ರ್ಯಾಂಚ :- ಭಾರತ ಸ್ವೀಟ ಮಾರ್ಟ
ಖಾನಾಪೂರ ರೋಡ, ಬೆಳಗಾವಿ

is Deepavali Number of Karmaveer Weekly owned by Loka Shikshana Trust Hubli is printed by B.G. Guttal at the Samyukta Karnatak Press, Koppikar Road, Hubli and published by him at the Samyukta Karnatak Koppikar Road, Hubli-20 and 2, Residency Road, Bangalore-25.

Licence No. 38 Licensed to post without prepayment
KARMAVEER 31-10-70 Registered with the Registrar of News Papers of India under No. 3558/57 Reg. No.